# ಆಂಧ್ರ - ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ


ಸಂಶೋಧಕ

ಜೆ. ದೇವೇಂದ್ರಪ್ಪ

ಮಾರ್ಗದರ್ಶಕರು

ಡಾ. ಡಿ.ಪಾಂಡುರಂಗಬಾಬು

ಪ್ರವಾಚಕರು ಹಾಗೂ ಮುಖ್ಯಸ್ಥರು

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬






ಭಾಷಾನಿಕಾಯ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೨

# ಆಂಧ್ರ - ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ



ಸಂಶೋಧಕ

ಜೆ. ದೇವೇಂದ್ರಪ್ಪ

ಮಾರ್ಗದರ್ಶಕರು

ಡಾ. ಡಿ.ಪಾಂಡುರಂಗಬಾಬು
ಪ್ರವಾಚಕರು ಹಾಗೂ ಮುಖ್ಯಸ್ಥರು
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



ಭಾಷಾನಿಕಾಯ
ಕನ್ನಡ ಭಾಷಾಭಿವೃದ್ಧಿ ವಿಭಾ
ಕನ್ನಡ ವಿಶ್ವವಿದ್ಯಾಲಯ, ಹಂ
ವಿದ್ಯಾರಣ್ಯ - ೫೮೩ ೨೭೬

೨೦೦೨



# ದೃಢೀಕರಣ ಪತ್ರ

ಶ್ರೀ ಜೆ. ದೇವೇಂದ್ರಪ್ಪ ಇವರು 'ಆಂಧ್ರ - ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು' ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

27/12/2002

ದಿನಾಂಕ : 27 .೧೨.೨೦೦೨

ಸ್ಥಳ : ವಿದ್ಯಾರಣ್ಯ

(ಡಾ. ಡಿ. ಪಾಂಡುರಂಗಬಾಬು)
ಮಾರ್ಗದರ್ಶಕರು
ಮುಖ್ಯಸ್ಥರು ಹಾಗೂ ಪ್ರವಾಚಕರು
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

'ಆಂಧ್ರ - ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು' ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಡಿ.ಪಾಂಡುರಂಗಬಾಬು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 27 .೧೨.೨೦೦೨ (ಜೆ.ದೇವೇಂದ್ರಪ್ಪ)

ಸ್ಥಳ : ವಿದ್ಯಾರಣ್ಯ ಸಂಶೋಧಕ

# ವ್ಯಕ್ತಿನಾಮಗಳಿಗೆ ಆಭಾರಿ

ಆಂಧ್ರದ ಆಡಳಿತಕ್ಕೆ ಸೇರಿದ ಅಚ್ಚಕನ್ನಡ ಭಾಷಾದ್ವೀಪದಲ್ಲಿ ಜನಿಸಿದ ನಾನು ಕನ್ನಡ ಎಂ.ಎ. ಮುಗಿಸಿ ನನ್ನ ಗಡಿಭಾಗಕ್ಕೆ ಏನಾದರೂ ಕೊಡುಗೆ ನೀಡಬೇಕೆಂಬ ಆಸಕ್ತಿಯಲ್ಲಿದ್ದಾಗ ಪಿಎಚ್.ಡಿ. ಅಧ್ಯಯನಕ್ಕೆ ಬಂದೆ. ನನ್ನನ್ನು ಆಂತರಿಕ ವಿದ್ಯಾರ್ಥಿಯನ್ನಾಗಿ ಅಧ್ಯಯನಕ್ಕೆ ಅವಕಾಶ ನೀಡಿದ ಡಾ. ಎಂ.ಎಂ.ಕಲಬುರ್ಗಿ ಹಾಗೂ ಮಲ್ಲೇಪುರಂ ಜಿ.ವೆಂಕಟೇಶ ಅವರಿಗೆ ಹಾಗೂ ಇಂದಿನ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡರು, ಅಧ್ಯಯನಾಂಗ ನಿರ್ದೇಶಕರಾಗಿದ್ದ ಶ್ರೀ ಬಾಲಸುಬ್ರಮಣ್ಯ, ಡಾ. ಹಿ.ಚಿ.ಬೋರಲಿಂಗಯ್ಯ, ಈಗಿನ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೆ,

ಗಡಿನಾಡ ಕನ್ನಡಿಗನಾದ ನನಗೆ ಆ ಭಾಗದ ಸ್ಥಳನಾಮಗಳನ್ನು ಗಮನಿಸಬಹುದೆಂದು ವಿಷಯವನ್ನು ಸೂಚಿಸಿ, ನನ್ನ ಅನೇಕ ಪ್ರಶ್ನೆಗಳಿಗೆ ಚರ್ಚೆಯ ಮೂಲಕ ಓದಲು ಪ್ರೇರೇಪಿಸಿದ ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ,

ಮೂರು ವರ್ಷಗಳ ಕಾಲ ನನ್ನ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ, ಅಕ್ಷರ ಅಕ್ಷರವನ್ನು ಗಮನಿಸಿ ಮಾರ್ಗದರ್ಶನ ಮಾಡಿದ್ದಲ್ಲದೆ, ವೈಯಕ್ತಿಕ ಬದುಕಿನ ಬಗೆಗೆ ಕಾಳಜಿವಹಿಸಿದ ಗುರುಗಳಾದ ಡಾ. ಡಿ. ಪಾಂಡುರಂಗಬಾಬು ಅವರಿಗೆ,

ಭಾಷಾಭಿವೃದ್ಧಿ ವಿಭಾಗದ ಡಾ. ಅಶೋಕಕುಮಾರ, ಡಾ. ಸಾಂಬಮೂರ್ತಿ, ಡಾ. ಪಿ.ಮಹಾದೇವಯ್ಯ ಅವರು ನನ್ನ ಅಧ್ಯಯನಕ್ಕೆ ನೆರವು ನೀಡಿದ್ದಾರೆ ಮತ್ತು ಪ್ರೀತಿಯಿಂದ ಕಾಣುವ ಕೃಪಾಶಂಕರ, ಬಿ.ವೆಂಕಟೇಶ, ನಾಗರಾಜ ಅವರಿಗೆ,

ನನ್ನ ವಿಷಯಕ್ಕೆ ಮಾಹಿತಿ ನೀಡಿ ಸಹಕರಿಸಿದ ಆಂಧ್ರ ಕರ್ನಾಟಕ ಗಡಿಭಾಗದ ಸಮಸ್ತ ವಕ್ತೃಗಳಿಗೆ,

ಅಧ್ಯಯನದ ಬಗ್ಗೆ ಕಾಳಜಿವಹಿಸಿ ಸದಾ ನನ್ನ ಏಳ್ಗೆಯನ್ನು ಬಯಸುವ ಗುರುಗಳಾದ ಮಾನಕರಿ ಶ್ರೀನಿವಾಸಾಚಾರ್ಯ, ಡಾ. ಮೃತ್ಯುಂಜಯ ಹೊರಕೇರಿ, ಡಾ. ಶಾಂತಿನಾಥ ದಿಬ್ಬದ, ಡಾ. ಮಲ್ಲಿಕಾ ಘಂಟಿ, ಡಾ. ಸಿ.ನಾಗಭೂಷಣ, ಕೆ.ಶಾರದ ಅವರಿಗೆ,

ನನ್ನ ಪ್ರತಿಯೊಂದು ಚಟುವಟಿಕೆಗಳನ್ನು ಗಮನಿಸಿ, ವೈಯಕ್ತಿಕ ಮತ್ತು ಶೈಕ್ಷಣಿಕ ಬದುಕಿನ ಬಗ್ಗೆ ಕಾಳಜಿವಹಿಸುವ ಡಾ. ಬಸವರಾಜ ಮಲಶೆಟ್ಟಿ, ಡಾ. ಕೆ.ರವೀಂದ್ರನಾಥ, ಡಾ. ಎಫ್.ಟಿ.ಹಳ್ಳಿಕೇರಿ, ಡಾ. ಮೃತ್ಯುಂಜಯ ರುಮಾಲೆ, ಡಾ. ಕೇಶವನ್ ಪ್ರಸಾದ್, ಪ್ರೊ. ಹನುಮಣ್ಣನಾಯಕ ದೊರೆ ಅವರಿಗೆ,

ಅಧ್ಯಯನದ ಬಗ್ಗೆ ಚರ್ಚೆ ಮಾಡುತ್ತಾ ಸಲಹೆ ನೀಡುವ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ರಹಮತ್ ತರೀಕೆರೆ, ಡಾ. ಸುಬ್ಬಣ್ಣ ರೈ, ಡಾ. ವಿಠಲರಾವ್ ಗಾಯಕ್ವಾಡ್, ಶ್ರೀ ಮೊಗಳ್ಳಿ ಗಣೇಶ್, ಡಾ. ಅಮರೇಶ ನುಗಡೋಣಿ, ಡಾ. ಮಾಧವ ಪೆರಾಜೆ, ಡಾ. ಮಲ್ಲಿಕಾರ್ಜುನಗೌಡ ವಣೆನೂರು, ಶ್ರೀ ಎ.ಎಸ್.ಪ್ರಭಾಕರ, ಶ್ರೀ ಜೆ.ಆರ್.ರಾಮಮೂರ್ತಿ, ಹಾಗೂ ವಿಶ್ವವಿದ್ಯಾಲಯದ ಎಲ್ಲ ವಿದ್ವಾಂಸರಿಗೆ,

ಭೇಟಿಯಾದಾಗಲೆಲ್ಲ ವಿಷಯವನ್ನು ಕುರಿತು ಚರ್ಚಿಸಿ, ಪತ್ರಮುಖೇನ ಉತ್ತರಿಸುವ ಡಾ. ಆರ್.ಶೇಷಶಾಸ್ತ್ರಿ, ಡಾ. ಕೆ.ಎಂ.ವೀರಭದ್ರಶರ್ಮ, ಪ್ರೊ. ಕಿ.ರಂ.ನಾಗರಾಜ, ಡಾ. ದುರ್ಗಾದಾಸ್, ಡಾ. ಸಂಗಮೇಶ ಸವದತ್ತಿಮಠ, ಡಾ. ಬಿ.ಆರ್.ಹಿರೇಮಠ, ಡಾ. ಸಿದ್ಧಲಿಂಗಯ್ಯ, ನಟರಾಜ ಹುಳಿಯಾರ್, ಪ್ರೊ. ಉಮಾ, ನನ್ನ ಪ್ರೀತಿಯ ತೆಲುಗು ಮಾಸ್ತರು ಶ್ರೀ ವೆಂಕಟೇಶುಲು, ಶ್ರೀ ಸುಧಾಕರ ಭಟ್ಟ ಅವರಿಗೆ,

ಗ್ರಂಥಾಲಯದ ಶ್ರೀ ಸ್ಟ್ಯಾನ್ಲೆ, ಶ್ರೀಮತಿ ಎಚ್.ನಾಗವೇಣಿ, ಶ್ರೀ ಸುಹಾಸ, ಶ್ರೀ ಯು. ಮಲ್ಲಿಕಾರ್ಜುನ, ಶ್ರೀ ಗುಡಿಮನಿ, ಶ್ರೀ ನೆರಗಲ್ಲಪ್ಪ ಹಾಗೂ ಸಿಬ್ಬಂದಿಗೆ,

ಹಿರಿಯ ಮಿತ್ರರಾದ ಸಂ.ಬಾ.ಚಂದ್ರಶೇಖರ, ಡಾ. ಎಂ.ನಾಗರಾಜ, ಡಾ. ವಿ.ಸಿ.ಮಾರುತಿ, ಡಾ. ನಿಂಗಪ್ಪ ಮುದೇನೂರು, ಡಾ. ಎ.ಚೆನ್ನಪ್ಪ, ಡಾ. ವೆಂಕಟಗಿರಿ ದಳವಾಯಿ, ಡಾ. ನಾಗಭೂಷಣ ಪಾಟೀಲ, ಡಾ. ಜಿ. ಉಮೇಶ್, ಡಾ. ಗೋವಿಂದ, ಡಾ. ಸುಚೇತ, ಡಾ. ಅಕ್ಕಮಹಾದೇವಿ, ರಾಜಶೇಖರ ನುಗಡೋಣಿ, ಎರ್ರಿಸ್ವಾಮಿ, ಕೆ.ಆರ್.ಜಿ. ರಾಜಕುಮಾರ್, ಕೇಶವಮೂರ್ತಿ ಅವರಿಗೆ,

ನನ್ನನ್ನು ಪ್ರೀತಿಯಿಂದ ಕಂಡು ಧೈರ್ಯ ತುಂಬುವ ಹಿರಿಯ ಮಿತ್ರರಾದ ಡಾ. ಎಂ.ಭಾಗ್ಯಲಕ್ಷ್ಮಿ, ಡಾ. ನಿಡುವಗಂಟಿ ರತ್ನಕುಮಾರಿ, ಅಕ್ಕಿ ಸುಜಾತ, ಸರ್ವಮಂಗಳ, ರೇಣುಕ, ಗುರುಬಸಮ್ಮ, ಡಾ. ಎಸ್.ಎಂ.ಸಾವಿತ್ರಿ ಅವರಿಗೆ,

ಗೆಳೆಯರಾದ ಸಣ್ಣಪಾಪಯ್ಯ ದೇವರಹಟ್ಟಿ, ಕೆ.ಮಹೇಶ, ಬದ್ರಿ, ಯು. ಜಯಣ್ಣ, ಕೃಷ್ಣಮೂರ್ತಿ ತುಮಕೂರು, ಅನುಸೂಯಾ ಕದಂ, ಎಸ್.ಎಂ.ಕವಿತಾರಾಣಿ, ಎ.ಎಂ.ಭಾರತಿ, ಜಿ.ಕೆ.ವೀರಮ್ಮ, ಜಿ.ಕೆ.ವೀರೇಶ, ಬೋರಪ್ಪ, ತಿಪ್ಪೇಸ್ವಾಮಿ, ಕುಮಾರ್, ಶಿವರಾಮ, ವೆಂಕಟೇಶ, ರೇವಣ್ಣ, ರಮೇಶ ಕುಮಾರ ವಾಲ್ಮೀಕಿ, ಸೋಮೇಶ್ ಉಪ್ಪಾರ್, ಓಂಪ್ರಕಾಶ, ಆಂಜನೇಯ, ಸುದರ್ಶನ, ಚಂದ್ರಪ್ಪ ಉಪ್ಪಾರ, ವಾಣಿ ಅವರಿಗೆ,

ದೂರದಿಂದಲೇ ನನ್ನನ್ನು ಪ್ರೋತ್ಸಾಹಿಸುವ ಗೆಳೆಯರಾದ ಕಿರಣ್, ಕೆ.ಎನ್. ಪುಷ್ಪಲತ, ದೀಪಾ ಬಿಸಲಹಳ್ಳಿ, ಸಾವಿತ್ರಿ, ನಳಿನ, ಪಂಕಜ, ಅಮೃತ, ಹನುಮಂತಪ್ಪ ಅನಂತಶಯನಗುಡಿ, ಡಾ. ಶಿವರಾಜು, ಶ್ರಾವಣಿ, ವಿಕ್ರಮ ವಿಸಾಜಿ, ಜಿ. ಪವನ್ ಕುಮಾರ್, ಸತೀಶ ಪಾಟೀಲ ಅವರಿಗೆ,

ಸದಾ ನನ್ನ ಶೈಕ್ಷಣಿಕ, ವೈಯಕ್ತಿಕ ಬದುಕಿನ ಬಗೆಗೆ ಕಾಳಜಿ ವಹಿಸಿ ತನ್ನನ್ನೇ ಮರೆತುಹೋದ ಅನುಗಾಲದ ಗೆಳತಿ ಸುಪ್ರಿಯಾ ಹಾಗೂ ಶ್ಯಾಮಲಾ ಅವರಿಗೆ,

ನನ್ನ ಓದಿಗೆ ಬೆನ್ನೆಲುಬಾಗಿ ನಿಂತ ತಂದೆ ಚೆನ್ನಬಸಪ್ಪ, ತಾಯಿ ನೀಲಮ್ಮ, ಅಜ್ಜಿ ಉದ್ದಾನಮ್ಮ, ತಮ್ಮ ರಘು, ಅಕ್ಕ ಶಕುಂತಲಾ, ಮಾವ ಎರ್ರಿಗೌಡ, ಪುಟಾಣಿಗಳಾದ ಶಾರದ, ಜಲಜ, ಉಮಾಶಂಕರ, ಸೌಮ್ಯ, ಸುಷ್ಮಾ ಹಾಗೂ ಜಾಜಿ ವೀರೇಶ, ಸಾವಿತ್ರಿ, ಪ್ರಭಾಕರ, ರಾಜೇಶ್ವರಿ ಅವರಿಗೆ,

ನನ್ನ ಇಕ್ಕಟ್ಟಿನ ದಿನಗಳಲ್ಲಿ ಆಶ್ರಯ ನೀಡಿ, ಅನ್ನ ನೀಡಿದ ಜಗದ್ಗುರು ಕೊಟ್ಟೂರು ಸ್ವಾಮಿ ಮಠ ಹೊಸಪೇಟೆಯ ಪೂಜ್ಯ ಶ್ರೀಗಳಾದ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು ಹಾಗೂ ಸಂಡೂರು ವಿರಕ್ತಮಠದ ಜಗದ್ಗುರು ಪ್ರಭು ಮಹಾಸ್ವಾಮಿಗಳು ಮತ್ತು ಅಲ್ಲಿನ ಅಪಾರ ಶಿಷ್ಯಮಿತ್ರರು ಮತ್ತು ಹಿತೈಷಿಗಳಿಗೆ,

ಅಂದವಾಗಿ ಅಕ್ಷರ ಜೋಡಿಸಿ, ಪ್ರೀತಿಯಿಂದ ಕಂಡ ಸೋಮನಾಥ ಕುಡಿತಿನಿ, ರಚನಾ ಗ್ರಾಫಿಕ್ಸ್‌ನ ಅಕ್ಕ ರೂಪ ಅವರಿಗೆ,

ನನ್ನನ್ನು ಸದಾ ಅಭಿಮಾನದಿಂದ ಕಾಣುವ ನನ್ನೂರಿನ ಸಮಸ್ತ ಬಾಂಧವರಿಗೆ,

ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಧ್ಯಯನಕ್ಕೆ ನೆರವಾದ ಎಲ್ಲ ವಿದ್ವಾಂಸರು ಮತ್ತು ಮಿತ್ರರಿಗೆ

. ನಾನು ಆಭಾರಿಯಾಗಿದ್ದೇನೆ

ಜಾಜಿ ದೇವೇಂದ್ರಪ್ಪ

# ಪರಿವಿಡಿ





## ಸಂಕ್ಷೇಪಗಳು

೧. ಕ ಕ ಇ ನಿ - ಕನ್ನಡ ಕನ್ನಡ ಇಂಗ್ಲಿಶ್ ನಿಘಂಟು

೨. ಕ ರ ಕೋ - ಕನ್ನಡ ರತ್ನಕೋಶ

೩. ಕ ಕ ಕೋ - ಕನ್ನಡ ಕನ್ನಡ ರತ್ನಕೋಶ

೪. ಕ ನಿ - ಕನ್ನಡ ನಿಘಂಟು

೫. ಚಾ ನ ತಾ ಸ್ಥ - ಚಾಮರಾಮನಗರ ತಾಲ್ಲೂಕಿನ ಸ್ಥಳನಾಮಗಳು

೬. ಬೇ.ಗ್ರಾ. - ಬೇಚರಾಕ್ ಗ್ರಾಮ

೭. ಸಂ ಕ ನಿ - ಸಂಕ್ಷಿಪ್ತ ಕನ್ನಡ ನಿಘಂಟು

೮. ಸಿ ಅ - ಸಿರಿಗನ್ನಡ ಅರ್ಥಕೋಶ

೯. ALR - ಆಲೂರು

೧೦. ADN - ಆದವಾನಿ

೧೧. BLR - ಬಳ್ಳಾರಿ

೧೨. DED - Dravidien etymological dictionary

೧೩. GTY - ಗುತ್ತಿ

೧೪. HPT - ಹೊಸಪೇಟೆ

೧೫. HPR - ಹಿಂದೂಪುರ

೧೬. HBH - ಹಗರಿಬೊಮ್ಮನಹಳ್ಳಿ

೧೭. KLD - ಕಲ್ಯಾಣದುರ್ಗ

೧೮. KUR - ಕರ್ನೂಲು

೧೯. MDK - ಮಡಕಶಿರ

೨೦. SRP - ಸಿರುಗುಪ್ಪ

೨೧. SIPN - Studies in Indian place names.

೨೨. SND - ಸಂಡೂರು


1845 ರಲ್ಲಿ ಮೆಡೋಸ್ ಟೇಲರ್ ರೀತ್ಯ ಕನ್ನಡ ಮಾತನಾಡುವ ಭೂಪ್ರದೇಶ
ಬೀದರ್
ಗುಲ್ಬರ್ಗ
ರತ್ನಾಗಿರಿ
ಬಿಜಾಪುರ
ರಾಯಚೂರ್
ಬೆಳಗಾಂ
ಧಾರವಾಡ
ಆದೋನಿ
ಬಳ್ಳಾರಿ
ಗುಂತಕಲ್ಲು
ಕಾರವಾರ
ರಾಯದುರ್ಗ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಮಗಳೂರು
ತುಮಕೂರು
ಕೋಲಾರ
ಬೆಂಗಳೂರು
ಮಂಗಳೂರು
ಹಾಸನ
ಮಂಡ್ಯ
ಮಡಿಕೇರಿ
ಮೈಸೂರು


ಬಳ್ಳಾರಿ ಜಿಲ್ಲೆ
ಸಂಡೂರು
ಹರಪನಹಳ್ಳಿ
ತಾಲ್ಲೂಕುಗಳು
ಬಳ್ಳಾರಿ
ಸಂಡೂರು
ಕೂಡಲಗಿ
ಹರಪನಹಳ್ಳಿ
ಹೂವಿನಹಡಗಲಿ
ಹಗರಿಬೊಮ್ಮನಹಳ್ಳಿ
ಹೊಸಪೇಟೆ
ಸಿರಗುಪ್ಪ
ನದಿಗಳು
ತುಂಗಭದ್ರ
ಹಗರಿ
ಚಿನ್ನಹಗರಿ



## ಬಳ್ಳಾರಿ ತಾಲ್ಲೂಕು



## ಸಿರುಗುಪ್ಪ ತಾಲ್ಲೂಕು





కర్నూలు జిల్లా
మహబూబ్‌నగరం జిల్లా
ఆదోని
ఎమ్మిగనూరు
కోడుమూరు
కర్నూలు
నందికొట్కూరు
ఆత్మకూరు
ఆలూరు
పత్తికొండ
ద్రోణాచలం
నంద్యాల
బనగానపల్లి
కోయిలకుంట్ల
ఆళ్లగడ్డ
అనంతపురం జిల్లా
కడప జిల్లా
నదులు
రైలుమార్గం
జాతీయరహదారి

## ಆಂಧ್ರ - ಕರ್ನಾಟಕ ಗಡಿ ರೇಖೆ

(ಬಳ್ಳಾರಿ, ಕರ್ನೂಲು)



# ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧. ಪ್ರವೇಶ

ಅಲೆಮಾರಿ ಜೀವನದಿಂದ ಆರಂಭವಾದ ಮಾನವರ ಬದುಕು ಕ್ರಮೇಣ ಒಂದೆಡೆ ನಿಲ್ಲುವಂತಾಯಿತು. ಅಲೆಮಾರಿ ಸಮುದಾಯಗಳು ಭೌಗೋಳಿಕ ಪರಿಸರದ ಗವಿ, ಬಂಡೆಯ ಗೂಡು, ಬೆಟ್ಟದ ಅಂಚಿನಲ್ಲಿ ತಂಗುತ್ತಿದ್ದರು. ತರುವಾಯ ನಾಗರೀಕರಾದರು. ಕೆಲವು ಹಂತಗಳಲ್ಲಿ ಅಲೆಮಾರಿತನವನ್ನು ತೊರೆದು ಒಂದೆಡೆ ನೆಲೆಸಲು ಆರಂಭಿಸಿದರು. ಈ ನೆಲೆಸುವಿಕೆಯು ಪ್ರಾಥಮಿಕವಾಗಿ ಒಂದೊಂದು ಗುಂಪಿನ ಮಾದರಿಯಲ್ಲಿತ್ತು. ಮುಂದೆ ಕೆಲವಾರು ಗುಂಪುಗಳು ಒಟ್ಟಿಗೆ ಬದುಕುವುದನ್ನು ಆರಂಭಿಸಿದವು. ಈ ಹಂತವನ್ನು ಸಮುದಾಯಗಳು ನೆಲೆಸುವಿಕೆಯ ಗ್ರಾಮ ಕಲ್ಪನೆಯ ಪೂರ್ವ ಸ್ಥಿತಿಯೆಂದು ತಿಳಿಯಬಹುದು. ಅದರಂತೆ ಆಯಾ ಭೌಗೋಳಿಕ ಪರಿಸರದಲ್ಲಿ ವಾಸಿಸುವ ಗುಂಪುಗಳ ನೆಲೆಗಳು ಆರಂಭವಾದವು. ಈ ನೆಲೆಗಳಿಗೆ ಗುರುತು ಹೇಳುವ ಸಲುವಾಗಿ ಒಂದು ಹೆಸರಿನ ಅಗತ್ಯ ತೋರಿಬಂದಿತು. ಈ ಅಗತ್ಯವೇ ನೆಲೆಗಳಿಗೆ ಹೆಸರಿಸುವ, ಗ್ರಾಮ, ಸ್ಥಳನಾಮಗಳ ಆರಂಭವಾದುದರ ಕುರುಹು ಎನ್ನಬಹುದು. ಆಯಾ ಪ್ರಾದೇಶಿಕ ಮಟ್ಟದಲ್ಲಿ ನೆಲೆಸುವ ಸಮುದಾಯಗಳು ಆರಂಭದಲ್ಲಿ ಪ್ರಾಕೃತಿಕ ಪರಿಸರದ ಚಹರೆಯೊಂದಿಗೆ ತಮ್ಮ ನೆಲೆಗಳಿಗೆ ಹೆಸರುಗಳನ್ನು ಕರೆದುಕೊಂಡರು. ಬೆಟ್ಟ, ಗುಡ್ಡ, ಗಿಡ, ಮರ, ಕಲ್ಲು, ಮಣ್ಣು ಇವುಗಳ ಗಾಢ ಸಂಬಂಧವು ಹೆಸರುಗಳಿಗೆ ಪ್ರೇರೇಪಿಸಿರಬೇಕು. ಹೆಚ್ಚಾಗಿ ಸಮುದಾಯಗಳು ವಾಸಿಸುತ್ತಿದ್ದುದು ಬೆಟ್ಟಗಳ ಅಂಚಿನಲ್ಲಿ, ದಿನ್ನೆ ಪ್ರದೇಶಗಳಲ್ಲಿ ಮತ್ತು ತಮಗೆ ಅಗತ್ಯವಾಗಿ ಬೇಕಾದಂತಹ ನೀರಿನ ತಾಣಗಳಲ್ಲಿ. ಜಗತ್ತಿನ ಬಹುತೇಕ ಪ್ರಾಚೀನ ನಾಗರೀಕತೆಗಳು ಆರಂಭವಾದದ್ದು ನದಿದಂಡೆಯ ಮೇಲೆ ಎಂಬುದನ್ನು ಗಮನಿಸಿದರೆ ಸಮುದಾಯಗಳ ನೆಲೆಸುವಿಕೆಯ ಆಯ್ಕೆಯು ಸ್ಪಷ್ಟವಾಗಿ ಗೋಚರಿಸುತ್ತದೆ. ಅಂತೆಯೇ ಪಶುಪಾಲನೆ ಮತ್ತು ಕುರಿಸಾಕಾಣಿಕೆಯು ಬೆಟ್ಟಗಳಲ್ಲಿ, ಬೆಟ್ಟದ ಬದಿಯಲ್ಲಿ ಅನುಕೂಲಕರವಾಗಿತ್ತು. ಆ ವೃತ್ತಿಯೊಂದಿಗೆ ತಮ್ಮ ವಾಸದ ನೆಲೆಗಳನ್ನು ಅಲ್ಲಲ್ಲಿಯೆ ನಿರ್ಮಿಸಿಕೊಂಡರು. ಈ ಕಾರಣದಿಂದಾಗಿ ಪ್ರಕೃತಿಯ ಗಾಢ ಸಂಬಂಧದೊಂದಿಗೆ

ತಳುಕುಹಾಕಿಕೊಂಡ ಮಾನವರು ಆರಂಭಿಕ ಹಂತದಲ್ಲಿ ಪ್ರಕೃತಿನಿಷ್ಠ ಗ್ರಾಮನಾಮಗಳ ಉದಯಕ್ಕೆ ನಾಂದಿಯಾದರು. ಹೀಗೆ ಗ್ರಾಮಸಮಾಜಗಳು ಆರಂಭಗೊಂಡವು.

ಪ್ರಕೃತಿ ನಿಷ್ಠ ಗ್ರಾಮಸಮಾಜಗಳ ಎರಡನೇ ಹಂತವು ಭೌಗೋಳಿಕ ಚಹರೆಗಳಿಂದ ಭಿನ್ನವಾಗಿ, ಸಮುದಾಯ ನಿಷ್ಠವಾಗಿರುವುದು ತಿಳಿದುಬರುತ್ತದೆ. ಅಂದರೆ ಗ್ರಾಮಗಳಿಗೆ, ಸ್ಥಳಗಳಿಗೆ ಹೆಸರಿಡುವಾಗ ತಮ್ಮ ಜನಾಂಗದ, ಅಥವಾ ತಮ್ಮ ಜನಾಂಗದ ವ್ಯಕ್ತಿಗಳ, ಚಾರಿತ್ರಿಕ ವ್ಯಕ್ತಿಗಳ, ಧಾರ್ಮಿಕ ವ್ಯಕ್ತಿಗಳ ಹೆಸರುಗಳನ್ನು ಕೊಡಲು ಮುಂದಾದದ್ದು ಗ್ರಾಮನಾಮಗಳ ಇತಿಹಾಸದಿಂದ ತಿಳಿಯುತ್ತದೆ. ಮುಂದೆ ಅದು ಕಾಲಾಂತರದ ಬದಲಾವಣೆ, ಆಯಾ ಕಾಲದ ಸಮಕಾಲೀನ ಸಾಮಾಜಿಕ ಜೀವನವನ್ನು ಅವಲಂಬಿಸಿ 'ಹೆಸರಿಡುವಿಕೆಯು' ಸ್ಥಿತ್ಯಂತರಕ್ಕೊಳಗಾಯಿತು. ಗ್ರಾಮಸಮುದಾಯಗಳು ಆರಂಭದಲ್ಲಿ ನಿಸರ್ಗವಾಚಿಯೊಂದಿಗೆ ಹೆಸರುಗಳನ್ನು ಕರೆದುಕೊಂಡು ಕ್ರಮೇಣ ಜನಾಂಗವಾಚಿ - ವ್ಯಕ್ತಿವಾಚಿಗೆ ಮುಂದಾದವು. ಈ ಮೂರು ಕಾಲಘಟ್ಟದಲ್ಲಿ ಒಂದು ಸ್ಥಳಕ್ಕೆ ಹೆಸರಿಡುವ ಕ್ರಮದಲ್ಲಿ ಅನೇಕ ಬಗೆಯ ಬದಲಾವಣೆಗಳಾದವು. ಈ ಬದಲಾವಣೆಯ ನಡುವಿನ ಅಂತರದಲ್ಲಿ ಸಂಸ್ಕೃತಿಗಳ, ಸಮುದಾಯಗಳ ವಿಕಾಸದ ಹಾದಿಯನ್ನು ಕಂಡುಕೊಳ್ಳಬಹುದು. ಒಂದೊಂದು ಗ್ರಾಮ ಒಂದೊಂದು ಸಂಸ್ಕೃತಿಯನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತದೆ. ಅಂತೆಯೇ ಆ ಗ್ರಾಮಗಳಿಗಿರುವ ಹೆಸರು ಆ ಸಂಸ್ಕೃತಿಯ ಅರಿಯುವಿಕೆಯ ಮೂಲಧಾತುವಾಗಿರುತ್ತದೆ. ಒಂದು ಗ್ರಾಮಸಮಾಜದ ಒಟ್ಟು ಸಂಸ್ಕೃತಿಯನ್ನು ಒಂದು ರೂಪುರೇಷೆಯ ಮಾದರಿಯಲ್ಲಿ 'ಹೆಸರುಗಳು' ಒಳಗು ಮಾಡಿಕೊಂಡು ಪ್ರತಿನಿಧಿಸುತ್ತಿರುತ್ತವೆ. ಈ ಕಾರಣದಿಂದ ಸಂಸ್ಕೃತಿಯ ಅಧ್ಯಯನದಲ್ಲಿ ಸ್ಥಳನಾಮಗಳು ಮಹತ್ವದ ಪಾತ್ರ ಪಡೆದುಕೊಳ್ಳುತ್ತವೆ.

ಸ್ಥಳನಾಮಗಳು ಸಂಸ್ಕೃತಿಯ ಅಧ್ಯಯನದ ಪ್ರಮುಖ ಆಕರಗಳಲ್ಲಿ ಒಂದು. ಒಂದು ಹೆಸರಿನಲ್ಲಿ ಒಂದು ಜೀವನ ಕ್ರಮದ ಚರಿತ್ರೆಯಿರುತ್ತದೆಂಬುದನ್ನು ಗಮನಿಸಬೇಕು. ಅಂದರೆ ನೇರವಾಗಿ ಜೀವನಕ್ರಮದ ಸಂಗತಿಗಳನ್ನು ಹೇಳುವುದಿಲ್ಲವಾದರೂ, ಅದರ ಒಟ್ಟಂದವನ್ನು ಪರೋಕ್ಷ ನೆಲೆಯಲ್ಲಿ ತೆರೆದು ತೋರಿಸುವ ಮೂಲಾಧಾರಗಳಾಗಿ ನಾಮಗಳು ಮಹತ್ವದ ಪಾತ್ರವಹಿಸುತ್ತವೆ. ಅದರಲ್ಲಿಯೂ ಸಂಸ್ಕೃತಿಯ ವೈವಿಧ್ಯತೆಗಳನ್ನು ಪ್ರಾದೇಶಿಕವಾಗಿ ಯಥಾಸ್ಥಿತಿಯಲ್ಲಿ ಹೇಳಲು ಅಧ್ಯಯನಕ್ಕೆ ತೊಡಗಿದಾಗ ಸ್ಥಳನಾಮಗಳನ್ನು ಉದಾಸೀನಗೊಳಿಸಲಾಗುತ್ತದೆ. ಈ ಬಗೆಯ ಮೂಲಾಧಾರಗಳ ಆಯ್ಕೆಯ ಮಿತಿಯಿಂದ ಸಂಸ್ಕೃತಿಯನ್ನು ಮತ್ತೊಮ್ಮೆ ಪುನಾರಚಿಸುವ ಅಗತ್ಯ ತೋರಿಬರುತ್ತದೆ. ನಮ್ಮ ಅತ್ಯಂತ ನಿಕಟ ಸಂಬಂಧವನ್ನೊಂದಿದ ಗ್ರಾಮನಾಮ, ಸ್ಥಳನಾಮಗಳಿಂದ ವಿಭಿನ್ನ ಬಗೆಯ ಸಾಂಸ್ಕೃತಿಕ ಚಹರೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಕಾರಣ ಪ್ರಾಮಾಣಿಕ ಸಾಂಸ್ಕೃತಿಕ ಪ್ರಜ್ಞೆಯುಳ್ಳ ವ್ಯಕ್ತಿಗಳು ಹಾಗೂ ಸಮಾಜ, ಸ್ಥಳನಾಮಗಳನ್ನು ಪ್ರಮುಖ ಆಕರಗಳೆಂದು ಭಾವಿಸಿದಲ್ಲಿ ವಾಸ್ತವತೆಯ ತಳಹದಿಯಿಂದ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಲು ಸಾಧ್ಯವಾಗುತ್ತದೆ.

ಮುಖ್ಯವಾಗಿ ಕನ್ನಡದಲ್ಲಿ ನಡೆದಂತಹ ಸ್ಥಳನಾಮ ಅಧ್ಯಯನಗಳು ಸಂಸ್ಕೃತಿ ನಿಷ್ಠ ಮಾದರಿಯಲ್ಲಿ ಬರಲಿಲ್ಲ. ಸ್ಥಳನಾಮಗಳು ಭಾಷಿಕ ಘಟಕಗಳೆಂದು ಅಧ್ಯಯನ ಮಾಡಲಾಯಿತು. ನಾಮಗಳು ಭಾಷಿಕ ಘಟಕಗಳೇ. ಆದರೂ ಒಂದು ಭಾಷೆಯಲ್ಲಿ, ಒಂದು ಸಂಸ್ಕೃತಿಯು ಅಡಗಿರುವುದನ್ನು ಹಿಂದಿನ ಅಧ್ಯಯನಗಳು ಗೌಣಗೊಳಿಸಿದವು.

೧೮ನೇ ಶತಮಾನದಲ್ಲಿ ಪಾಶ್ಚಾತ್ಯರಲ್ಲಿ ಆರಂಭವಾದ ಸ್ಥಳನಾಮ ಅಧ್ಯಯನವು ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಕನ್ನಡನಾಡಿನಲ್ಲಿಯೂ ಆರಂಭವಾಯಿತು. ಮೊದಲು ಪಾಶ್ಚಾತ್ಯ ವಿದ್ವಾಂಸರು ಸ್ಥಳನಾಮಗಳನ್ನು ಭಾಷಿಕ ಘಟಕಗಳಿಂದಲೇ ವರ್ಣನಾತ್ಮಕ ಮಾದರಿಯಲ್ಲಿ ಪ್ರಯೋಗಕ್ಕೆ ಒಳಪಡಿಸಿದರು. ನಂತರದಲ್ಲಿ ಸಾಮಾಜಿಕ ಸಂಗತಿಗಳ ಕಡೆ ಗಮನಹರಿಸಿದರು. ಅಂತೆಯೇ ೧೯೪೦ರಲ್ಲಿ ಶಂಬಾ ಜೋಶಿಯವರು ತಮ್ಮ ಸಂಸ್ಕೃತಿಯ ಅಧ್ಯಯನದಲ್ಲಿ ಬಹುಮುಖ್ಯವಾದ ಆಕರಗಳನ್ನಾಗಿ ಸ್ಥಳನಾಮಗಳನ್ನು ಬಳಸಿಕೊಂಡಿದ್ದಾರೆ. ಕನ್ನಡ ನಾಡಿನ ಭೌಗೋಳಿಕ ಎಲ್ಲೆಯನ್ನು ಗುರುತಿಸಲು ತೊಡಗಿದ ಶಂಬಾ ಅವರು, ಈ ನಾಡಿನ ಮೂಲ ಜನಾಂಗದ, ಈ ನಾಡಿನ ಸಂಸ್ಕೃತಿಯ ಚಹರೆಗಳನ್ನು ಗುರುತಿಸಲು ತೊಡಗಿದರು. ಆರಂಭಕಾಲದ ಹಟ್ಟಿ, ಹಾಡಿ, ಬಾಡ, ಹಾಳ್ ಈ ನಾಡಿನ ಗೋವಳರು, ಕುರುಂಬರು, ಹಟ್ಟಿಕಾರರ, ಗೌಡರ ಮೂಲ ನೆಲೆಗಳೆಂದು ಶಂಬಾ ಅಭಿಪ್ರಾಯಪಡುತ್ತಾರೆ. ಭೌಗೋಳಿಕ ಮೇರೆಗಳನ್ನು ಗುರುತಿಸಲು ಹೊರಟ ಅವರು ಉತ್ತರ ಭಾರತದಲ್ಲಿಯೂ ಕನ್ನಡಿಗರ ನೆಲೆಯನ್ನು ಗ್ರಾಮನಾಮಗಳ ಮುಖೇನ ಶೋಧಿಸುತ್ತಾರೆ. ಆ ಮೂಲಕ ತಮ್ಮೆಲ್ಲ ಚಿಂತನೆಗಳನ್ನು ಹೆಸರುಗಳಿಂದಲೇ ಗುರುತಿಸಿ, ಸಂಸ್ಕೃತಿಯ ರೂಪುರೇಶೆಯನ್ನು ಕಟ್ಟಿಕೊಟ್ಟಿದ್ದಾರೆ.

೧೯೪೦ರ ದಶಕದ ತರುವಾಯ ಸ್ಥಳನಾಮಗಳನ್ನು ಅಧ್ಯಯನ ಮಾಡುವ ಶಿಸ್ತು ಬದಲಾವಣೆಯಾಯಿತು. ಶಂಬಾ ಅವರು 'ಎಡೆಗಳು ಹೇಳುವ ಕಂನಾಡ ಕತೆ'ಯ ಮೂಲಕ ಸಂಸ್ಕೃತಿಯ ಶೋಧಕ್ಕೆ ಒಳಪಡಿಸಿದ ಮಾದರಿಯನ್ನು ಕನ್ನಡ ಅಧ್ಯಯನಕಾರರು ಗಂಭೀರವಾಗಿ ಚರ್ಚೆಗೆ ಎತ್ತಿಕೊಳ್ಳಲಿಲ್ಲವೆನ್ನಬಹುದು. ಭಾಷಾಶಾಸ್ತ್ರದ ನೆಲೆಯಲ್ಲಿ ಈ ಅಧ್ಯಯನ ಮುಂದುವರೆಯಿತು. ಕನ್ನಡ ಸ್ಥಳನಾಮಗಳು ಸಂಶೋಧನೆಯ ವಿಷಯಗಳಾಗಿ ವಿಶ್ವವಿದ್ಯಾಲಯಗಳ ಮಟ್ಟಕ್ಕೆ ಬಂದವು. ಆರಂಭದಲ್ಲಿ ತುಳುನಾಡಿನ ಸ್ಥಳನಾಮಗಳ ಮೇಲೆ ಕೆಮ್ಮೂರು ರಘುಪತಿಭಟ್ಟ ಅವರು ಪ್ರಬಂಧವನ್ನು ಸಿದ್ಧಪಡಿಸಿದರು. ಇವರು ಭಾಷಿಕ ನೆಲೆಯಲ್ಲಿ ಸ್ಥಳನಾಮಗಳ ರಚನೆ, ಅರ್ಥನಿಷ್ಪತ್ತಿ, ಪೂರ್ವ ಮತ್ತು ಉತ್ತರಪದದ ಅರ್ಥ, ವರ್ಗೀಕರಣ, ಭಾಷಿಕ ಅಂಶಗಳ ಅಭಿವ್ಯಕ್ತಿ ಈ ಮಾದರಿ ಯಲ್ಲಿ ಸೈದ್ಧಾಂತಿಕ ನೆಲೆಯಲ್ಲಿ ಚರ್ಚಿಸಿದರು. ಬಹುತೇಕ ಈ ಮಾದರಿಯೇ ಇಂದಿನವರೆಗೂ ಚಾಲ್ತಿಯಲ್ಲಿದೆ. ಈವರೆಗೆ ಕನ್ನಡದಲ್ಲಿ ಬಂದ ಗ್ರಾಮ, ಸ್ಥಳನಾಮಗಳ ಚರ್ಚೆಯನ್ನು ಗಮನಿಸಿದರೆ ವರ್ಣನಾತ್ಮಕ ಮಾದರಿಯಲ್ಲಿದ್ದು, ಕೊನೆಗೆ ಒಂದು ನಿಷ್ಪತ್ತಿಯ ಕೋಶವನ್ನು ನೀಡಿರುವುದು ತಿಳಿಯುತ್ತದೆ. ಅಲ್ಲಲ್ಲಿ ಪ್ರಾಸ್ತಾವಿಕವೆಂಬಂತೆ ಅವುಗಳ ಚಾರಿತ್ರಿಕ, ಜಾನಪದ ಮತ್ತು ಸಾಮಾಜಿಕ ಅಂಶಗಳನ್ನು ಹೇಳಲಾಗಿದೆ. ಅಲ್ಲದೇ ಸ್ಥಳನಾಮ ಅಧ್ಯಯನ ಕರ್ನಾಟಕದ ಒಳಾವರಣದಲ್ಲಿಯೇ ನಡೆದಿರುವುದನ್ನು ಗಮನಿಸಬಹುದು. ಪ್ರಾಸಂಗಿಕವಾಗಿ ಅನ್ಯಭಾಷೆಯ ಪ್ರಭಾವವನ್ನು ಹೇಳಲಾಗಿದೆ. ಈ ಹಿನ್ನೆಲೆಯೊಂದಿಗೆ ಅಧ್ಯಯನದ ಮುಖ್ಯ ಉದ್ದೇಶಗಳನ್ನು ಹೀಗೆ ಪಟ್ಟಿ ಮಾಡಬಹುದು.

### ೧.೨. ಉದ್ದೇಶ

'ಆಂಧ್ರ ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು' ಎಂಬುದು ಈ ನಿಬಂಧದ ಶೀರ್ಷಿಕೆ. ಕನ್ನಡದಲ್ಲಿ ಸ್ಥಳನಾಮ ಅಧ್ಯಯನಗಳು ಎಂಭತ್ತರ ದಶಕದಿಂದ ವ್ಯಾಪಕವಾಗಿ ನಡೆಯುತ್ತಿವೆ. ವಿಶ್ವವಿದ್ಯಾಲಯಗಳಲ್ಲಿ ತಾಲ್ಲೂಕುವಾರು, ಜಿಲ್ಲಾವಾರು ಕೆಲವು ಅಧ್ಯಯನಗಳಾಗಿವೆ. ಆದರೆ ಕರ್ನಾಟಕದ ಗಡಿಭಾಗದಲ್ಲಿರುವ ಆಂಧ್ರ,

ಮಹಾರಾಷ್ಟ್ರಗಳ ಗಡಿಯ ಸ್ಥಳನಾಮಗಳ ಚರ್ಚೆಯು ವ್ಯಾಪಕವಾಗಿ ನಡೆದಿಲ್ಲ. ಗುಲಬರ್ಗ, ಬಳ್ಳಾರಿ, ಬೀದರ ಜಿಲ್ಲೆ ಹಾಗೂ ತುಳುನಾಡಿನ ಗ್ರಾಮನಾಮಗಳನ್ನು ಅಧ್ಯಯನ ಮಾಡಿದ ವಿದ್ವಾಂಸರು ಸಾಂದರ್ಭಿಕವಾಗಿ ಕನ್ನಡ ಸ್ಥಳನಾಮಗಳ ಮೇಲೆ ತೆಲುಗು, ಉರ್ದು, ಮರಾಠಿ ಭಾಷೆಗಳ ಪ್ರಭಾವವನ್ನು ಗುರುತಿಸಿದ್ದಾರೆ. ಆದರೆ ಎರಡೂ ಗಡಿಯನ್ನು ಅನುಲಕ್ಷಿಸಿದ ಅಧ್ಯಯನಗಳು ಗಮನಕ್ಕೆ ಬಂದಿಲ್ಲ. ಇದನ್ನು ಗಮನದಲ್ಲಿಟ್ಟುಕೊಂಡು ಗಡಿಭಾಗದ ಸ್ಥಳನಾಮಗಳ ಅಧ್ಯಯನದ ಕೊರತೆಯನ್ನು ಆದಷ್ಟು ತುಂಬಲು ಹಾಗೂ ಈ ಬಗೆಯ ಚರ್ಚೆಯ ಅವಶ್ಯಕತೆಯನ್ನು ಪ್ರಸ್ತುತಗೊಳಿಸಲು ಪ್ರಕೃತ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದೇನೆ.

ಭಾಷಾವಾರು ಪ್ರಾಂತ ರಚನೆಗೆ ಮೊದಲು ಕರ್ನೂಲು ಜಿಲ್ಲೆಯ ಆಲೂರು, ಆದವಾನಿ ತಾಲ್ಲೂಕುಗಳು ಕನ್ನಡದ ಆಡಳಿತಕ್ಕೆ ಒಳಪಟ್ಟಿದ್ದವು. ಭಾಷಾವಾರು ಪ್ರಾಂತದ ರಚನೋತ್ತರ ಅವಧಿಯಲ್ಲಿ ಆಂಧ್ರದ ಆಡಳಿತಕ್ಕೆ ಒಳಪಡಬೇಕಾಯಿತು. ಕಾರಣ ಆ ಎರಡೂ ತಾಲ್ಲೂಕುಗಳಲ್ಲಿ ಮೂಲತಃ ಕನ್ನಡದ ಸ್ಥಳನಾಮಗಳಿವೆ. ಭಾಷಾವಾರು ರಾಜಕೀಯ ಗಡಿ ಏರ್ಪಟ್ಟ ನಂತರ ಈ ಸ್ಥಳನಾಮಗಳ ಮೇಲೆ ತೆಲುಗು ಭಾಷೆ ಸಾಕಷ್ಟು ಪ್ರಭಾವವನ್ನು ಬೀರಿದೆ. ಅಂತೆಯೇ ಬಳ್ಳಾರಿ ತಾಲ್ಲೂಕು ಹಾಗೂ ಸಿರುಗುಪ್ಪ ತಾಲ್ಲೂಕುಗಳಲ್ಲಿ ಕನ್ನಡ ಸ್ಥಳನಾಮಗಳನ್ನು ತೆಲುಗು ಭಾಷೆಯು ಕೆಲವಾರು ಕಡೆ ಪ್ರಭಾವಿಸಿದೆ. ಈ ದೃಷ್ಟಿಯಿಂದ ದ್ವಿಭಾಷಿಕ ಪರಿಸರದ ಸ್ಥಳನಾಮಗಳ ಅಧ್ಯಯನದ ಅಗತ್ಯವಿದೆ.

ಅಧ್ಯಯನಕ್ಕೆ ತೊಡಗಿದಾಗ ದ್ವಿಭಾಷಿಕ ಪರಿಸರಕ್ಕೆ ಸಂಬಂಧಿಸಿದ ಯಾವೊಂದು ಮಾದರಿಗಳು ಎದುರಿಗಿರಲಿಲ್ಲ. ಇದರಿಂದ ಅಧ್ಯಯನದ ರೂಪುರೇಶೆಗೆ ಕೊಂಚ ಹೊಸ ಆಯಾಮ ನೀಡುವ ಸಾಧ್ಯತೆಗಳು ಕಂಡು ಬಂದವು. ಕಾರಣ ಈವರೆಗೆ ಕನ್ನಡ ಸ್ಥಳನಾಮ ಅಧ್ಯಯನಕಾರರ ಉಪಲಬ್ದ ಗ್ರಂಥಗಳು, ಬಿಡಿಲೇಖನಗಳ ಜೊತೆಗೆ ಕೆಲವು ಇಂಗ್ಲಿಶ್, ತೆಲುಗು ಕೃತಿಗಳನ್ನು ಕೂಲಂಕುಶವಾಗಿ ಅಧ್ಯಯನ ಮಾಡಿ, ಅಲ್ಲಿ ರೂಪಿಸಿದ ಕೆಲವು ಮಾದರಿಗಳನ್ನು ಗಮನಿಸಲಾಯಿತು. ಈ ಮಾದರಿಗಳಲ್ಲಿ ಮುಖ್ಯವಾಗಿ ಕಂಡು ಬಂದದ್ದು ಭಾಷಿಕ ಹಿನ್ನೆಲೆಯಲ್ಲಿ ವರ್ಣನಾತ್ಮಕ ಮಾದರಿಯ ಅಧ್ಯಯನ, ಜೊತೆಗೆ ಪ್ರಾಸಂಗಿಕವಾಗಿ ಜಾನಪದ, ಚರಿತ್ರೆಯ ಸಂಗತಿಗಳನ್ನು ಹೇಳಲಾಗಿದೆ. ಈ ಎಲ್ಲ ಗ್ರಹಿಕೆಯೊಂದಿಗೆ ಗಡಿಭಾಗವನ್ನು ಲಕ್ಷಿಸಿದ ಈ ಅಧ್ಯಯನದಿಂದ ಕೆಲವು ವಿಭಿನ್ನ ನೆಲೆಗಳನ್ನು ಗುರುತಿಸಬಹುದೆಂದು ತೋರಿಬಂತು. ಅದರ ಒಂದು ಪ್ರಯತ್ನವೇ ಪ್ರಸ್ತುತ **ಆಂಧ್ರ ಕರ್ನಾಟಕ ಗಡಿಭಾಗದ ಸ್ಥಳನಾಮಗಳು** ಎಂಬ ಈ ನಿಬಂಧ. ಈ ನಿಬಂಧ ರಚನೆಗೆ ಮುನ್ನ ಎತ್ತಿಕೊಂಡ ಕೆಲವು ಸವಾಲುಗಳು ಇಂತಿವೆ.

೧. ಕನ್ನಡದಲ್ಲಿ ಈವರೆಗೆ ನಡೆದ ಉಪಲಬ್ದ ಅಧ್ಯಯನಗಳನ್ನು ಒಂದೆಡೆ ಸೇರಿಸಿ ಸಮೀಕ್ಷಿಸುವುದು. ಅಲ್ಲದೆ ಸಾಂದರ್ಭಿಕ ತೆಲುಗು ಮತ್ತು ಇಂಗ್ಲಿಶ್ ಅಧ್ಯಯನಗಳನ್ನು ಸಮೀಕ್ಷೆಗೆ ಒಳಪಡಿಸುವುದು.

೨. ಸ್ಥಳನಾಮಗಳ ವರ್ಗೀಕರಣವನ್ನು ಭೌಗೋಳಿಕ ಪರಿಸರಕ್ಕನುಗುಣವಾಗಿ ವರ್ಗೀಕರಿಸುವುದು ಮತ್ತು ವರ್ಗೀಕರಣಗಳನ್ನು ಅತಿವ್ಯಾಪ್ತಿದೋಷದಿಂದ ಮುಕ್ತಗೊಳಿಸುವುದು.

೩. ಸ್ಥಳನಾಮಗಳನ್ನು ವರ್ಣನಾತ್ಮಕ ಅಧ್ಯಯನದ ಮಾದರಿಯಿಂದ ಆದಷ್ಟು ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಗಮನಿಸುವುದು. ಸಿದ್ಧ ವ್ಯಾಕರಣ ಘಟಕಗಳ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ನೋಡದೆ, ಸಮುದಾಯಗಳ ಭಾಷಿಕ ಪ್ರಕ್ರಿಯೆಗಳಾದ ಬರೆಹ, ಉಚ್ಚಾರಣೆಗಳನ್ನು ಸಾಮಾಜಿಕ ವರ್ಗದ ನೆಲೆಯಲ್ಲಿ

ನೋಡುವುದು. ಅಲ್ಲದೆ ದ್ವಿಭಾಷಿಕ ವಲಯದಯಲ್ಲಿ ಕಂಡು ಬರುವ ಭಾಷಿಕ ಕೊಡುಪಡೆಯನ್ನು ಚರ್ಚಿಸುವುದರೊಂದಿಗೆ ಸ್ಥಳನಾಮುಗಳನ್ನು ಸಾಮಾಜಿಕ, ಭಾಷಿಕ ನಿಯಮುಗಳಿಗೆ ತಕ್ಕಂತೆ ವಿಶ್ಲೇಷಿಸುವುದು.

೪. ಮೌಖಿಕ ಪರಂಪರೆಯ ಗಾದೆ, ಒಗಟು, ಒಡಪು, ಹಾಡುಗಳು, ಕಥೆಗಳ ಮುಖೇನ ಸ್ಥಳನಾಮಗಳನ್ನು ಅಧ್ಯಯನ ಮಾಡುವುದು ಅಲ್ಲದೇ ಈ ಜಾನಪದ ಪ್ರಕಾರಗಳ ಮೂಲಕ ಸ್ಥಳನಾಮಗಳ ಭಾಷಿಕ ಕ್ರಿಯೆ, ಮೂಲ ನಿಷ್ಪತ್ತಿ ಮುಂತಾದುವನ್ನು ಕಂಡುಕೊಳ್ಳುವುದು. ಮುಂದುವರೆದು ಜಾನಪದ ರಂಗಭೂಮಿಯ ಬಯಲಾಟದ ಮುದ್ರಿಕೆಗಳ ಮೂಲಕ ಈ ಅಧ್ಯಯನವನ್ನು ಮಾದರಿಯನ್ನಾಗಿ ರೂಪಿಸುವುದು.

೫. ಚರಿತ್ರೆಯೊಂದಿಗೆ ಸ್ಥಳನಾಮಗಳ ಅಧ್ಯಯನವನ್ನು ಮಾಡುವಾಗ ಈವರೆಗಿನ ಅಧ್ಯಯನಗಳ ಮಾದರಿಯಲ್ಲಿ ಶಾಸನೋಕ್ತ ಹೆಸರುಗಳು, ದತ್ತಿದಾನ ನೀಡಿದ ಗ್ರಾಮಗಳು, ಆಡಳಿತ ವಿಭಾಗಗಳ ಹೆಸರನ್ನು ನೋಡದೇ ಶಾಸನೋಕ್ತ ಹೆಸರುಗಳ ಮೂಲಕ ಭಾಷಿಕ ಅವಸ್ಥಾಂತರದ ಕುರುಹುಗಳನ್ನು ಗುರುತಿಸುವುದು. ಅಲ್ಲದೇ ಕೈಫಿಯತ್ತುಗಳಲ್ಲಿ ಉಕ್ತವಾದ ಸ್ಥಳನಾಮಗಳೊಂದಿಗೆ ಭಾಷಿಕ ಪ್ರಕ್ರಿಯೆ ಗಳನ್ನು ನೋಡುವುದು. ಮಾಸ್ತಿ, ವೀರಗಲ್ಲುಗಳ ಮುಖೇನ ಈ ಅಧ್ಯಯನದ ಹೊಸ ಸಾಧ್ಯತೆಗಳನ್ನು ಗುರುತಿಸುವುದು.

೬. ಗಡಿಭಾಗದ ಸ್ಥಳನಾಮಗಳನ್ನು ಸಂಪೂರ್ಣ ಸಾಮಾಜಿಕ ಚೌಕಟ್ಟಿಗೆ ಒಳಪಡಿಸಿ ಅಧ್ಯಯನ ಮಾಡುವುದು. ಆ ಮೂಲಕ ಸಾಮಾಜಿಕ ಸಂಗತಿಗಳಾದ ವ್ಯಕ್ತಿ, ಜಾತಿ, ವರ್ಗ, ವೃತ್ತಿ, ಭಾಷೆ, ಭಾಷಿಕ ಆಯಾಮಗಳು, ಉಚ್ಚಾರಣೆ ಮತ್ತು ಬರೆಹ, ವಲಸೆ, ವಲಸೆಯಿಂದುಂಟಾದ ಪ್ರಭಾವಗಳು, ಸಂಸ್ಕೃತಾನುಕರಣ, ದೇಶ್ಯೀಕರಣ, ಆಧುನಿಕತೆಯ ಪ್ರಭಾವಗಳಾದ ಇಂಗ್ಲೀಷೀಕರಣ, ಕೈಗಾರಿಕೀಕರಣ, ಜಾಗತೀಕರಣ ಮತ್ತು ಸಮಕಾಲೀನ ರಾಜಕಾರಣಗಳನ್ನು ನಾಮಾಧ್ಯಯನದ ಮುಖ್ಯ ಅಂಗಗಳಾಗಿ ತೆಗೆದುಕೊಂಡು, ಅದರಿಂದ ರೂಪಿಸಬಹುದಾದ ಸಾಮಾಜಿಕ ಆಯಾಮಗಳನ್ನು ಚರ್ಚಿಸುವುದು.

೭. ಸ್ಥಳನಾಮಗಳು ಕೇವಲ ನಿಘಂಟು ಅಧ್ಯಯನಗಳಾಗುವ ಮಿತಿಗಳಿಂದ ದೂರವಿರಿಸುವುದು.

ಮೇಲಿನ ಅಂಶಗಳು ಈ ಅಧ್ಯಯನದ ಮುಖ್ಯ ಉದ್ದೇಶಗಳಾಗಿವೆ. ಈ ಮುಖ್ಯ ಅಂಶಗಳನ್ನಿಟ್ಟುಕೊಂಡು ಆಯಾ ಅಧ್ಯಾಯಗಳಡಿಯಲ್ಲಿ ಚರ್ಚೆಯನ್ನು ಮಾಡಲಾಗಿದೆ.

ಈ ಎಲ್ಲ ಕಾರಣಗಳಿಂದ ಆಂಧ್ರ - ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು ಎಂಬ ಈ ನಿಬಂಧದಲ್ಲಿ ಮೊದಲಬಾರಿಗೆ ಆಂಧ್ರ ಕರ್ನಾಟಕದ ಗಡಿಭಾಗವನ್ನು ಅನುಲಕ್ಷಿಸಿ ಅಧ್ಯಯನಕ್ಕೆ ಒಳಗುಮಾಡಲಾಗಿದೆ. ಈವರೆಗೆ ಕೇವಲ ಒಳಾವರಣದಲ್ಲಿ ಚರ್ಚೆಯನ್ನು ಮಾಡಲಾಗಿತ್ತು. ಕಾರಣ ಈ ನಿಬಂಧದಲ್ಲಿ ಗಡಿಭಾಗದ ಆಂಧ್ರದ ಹೊರಾವರಣವನ್ನೂ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಅಲ್ಲದೆ ಈವರೆಗಿನ ವರ್ಣನಾತ್ಮಕ ಮಾದರಿಯನ್ನು

ಗಮನದಲ್ಲಿಟ್ಟುಕೊಂಡು, ಒಟ್ಟು ಈ ಅಧ್ಯಯನವನ್ನು ಮೌಖಿಕ ಪರಂಪರೆ, ಚರಿತ್ರೆ, ಭಾಷೆ, ಸಮಾಜ ಈ ಅಂಶಗಳ ಮುಖೇನ ಸಂಸ್ಕೃತಿಯ ವಿಭಿನ್ನ ಮುಖಗಳ ಕಡೆಗೆ ಗಮನಹರಿಸಲಾಗಿದೆ.

### ೧.೩. ವ್ಯಾಪ್ತಿ

'ಆಂಧ್ರ - ಕರ್ನಾಟಕ ಗಡಿಪ್ರದೇಶ ಸ್ಥಳನಾಮಗಳು' ಎಂಬ ಈ ನಿಬಂಧದಲ್ಲಿ ಕೋಲಾರದಿಂದ ಚಿತ್ರದುರ್ಗದವರೆಗಿರುವ ಗಡಿ ಪ್ರದೇಶವನ್ನು ಆಯ್ದುಕೊಂಡಿಲ್ಲ. ಮಾದರಿಗಾಗಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಿರುಗುಪ್ಪ ತಾಲ್ಲೂಕುಗಳು ಹಾಗೂ ಆಂಧ್ರದ ಕರ್ನೂಲು ಜಿಲ್ಲೆಯ ಆಲೂರು, ಆದವಾನಿ ತಾಲ್ಲೂಕುಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಒಂದೊಮ್ಮೆ ರಾಜಕೀಯಗಡಿಗಳನ್ನು ಮೀರಿ, ಭಾಷಿಕ ಭೌಗೋಳಿಕ ವ್ಯಾಪ್ತಿಯನ್ನು ಗಮನಿಸಲಾಗಿದೆ. ಅಂದರೆ ಕೆಲವು ಮಾದರಿ ಉದಾಹರಣೆಗಳಿಗಾಗಿ, ಅನಂತಪುರ, ರಾಯಚೂರು ಜಿಲ್ಲೆಯ ಗಡಿಗಳನ್ನು, ದಕ್ಷಿಣ ಕರ್ನಾಟಕದ ಕೆಲವು ಸ್ಥಳನಾಮಗಳನ್ನು ಆಯ್ದುಕೊಳ್ಳಲಾಗಿದೆ.

ಅಧ್ಯಯನದ ಉದ್ದಕ್ಕೂ ಬಳಸಿರುವ 'ಗಡಿಪ್ರದೇಶ' ಎಂಬುದು ಬಳ್ಳಾರಿ - ಕರ್ನೂಲು ಜಿಲ್ಲೆಯನ್ನು ಹೇಳುತ್ತದೆ. ಬಳ್ಳಾರಿ ಜಿಲ್ಲೆಯ ೧೯೨ ಗ್ರಾಮಗಳನ್ನು, ಕರ್ನೂಲು ಜಿಲ್ಲೆಯ ೨೧೭ ಗ್ರಾಮಗಳನ್ನು, ಅಲ್ಲದೇ ಎರಡೂ ಜಿಲ್ಲೆಯ ಗಡಿಭಾಗದ ಕೆಲವು ನಿರ್ವಸಿತ, ನಿರ್ವಸತಿ ಸ್ಥಳನಾಮಗಳನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಆಲೂರು, ಆದವಾನಿ, ಬಳ್ಳಾರಿ, ಸಿರುಗುಪ್ಪ ನಾಲ್ಕು ತಾಲ್ಲೂಕುಗಳ ಭಾಷೆ, ಭೌಗೋಳಿಕ ಪರಿಸರ, ಜನಜೀವನ ವಿಧಾನ, ಚರಿತ್ರೆ, ಸಂಸ್ಕೃತಿ ಈ ಎಲ್ಲವನ್ನು ಅಧ್ಯಯನದಲ್ಲಿ ಒಳಗು ಮಾಡಿಕೊಂಡು ಸ್ಥಳನಾಮಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೧.೪. ಅಧ್ಯಯನದ ಮಿತಿಗಳು

'ಆಂಧ್ರ, ಕರ್ನಾಟಕದ ಗಡಿಪ್ರದೇಶದ ಸ್ಥಳನಾಮಗಳು' ಎಂಬ ಈ ನಿಬಂಧವನ್ನು ಮುಖ್ಯವಾಗಿ ಈವರೆಗೆ ಕನ್ನಡದಲ್ಲಿ ಬಂದ ಕೆಲವು ಮಾದರಿಗಳಿಗಿಂತ ಭಿನ್ನವಾಗಿ ಚರ್ಚೆಗೆ ಒಳಪಡಿಸಲಾಗಿದೆ. ಭಾಷೆ, ಚರಿತ್ರೆ, ಮೌಖಿಕ ಪರಂಪರೆ, ಸಮಾಜ ಈ ಅಂಶಗಳನ್ನು ಅತ್ಯಂತ ಮುಖ್ಯವೆಂದು ಪರಿಗಣಿಸಿ ಸಾಧ್ಯವಾದಷ್ಟು ಅವುಗಳ ವಿಭಿನ್ನ ಆಯಾಮಗಳನ್ನು ಒಂದು ಮಾದರಿಯೆಂಬಂತೆ ಚರ್ಚಿಸಲಾಗಿದೆ. ಕೆಲವೊಮ್ಮೆ ಸ್ಥಳನಾಮಕ್ಕೂ ಇಲ್ಲಿ ಚರ್ಚಿಸಿದ ವಿಷಯಕ್ಕೂ ನೇರ ಸಂಬಂಧವಿಲ್ಲವೆಂದೆನಿಸಿದರೂ, ತಕ್ಕಷ್ಟು ಅಂತಹ ಅಂಶಗಳನ್ನು ನಾಮಾಧ್ಯಯನದ ಅನಿವಾರ್ಯ ಸಾಧ್ಯತೆಗಳೇ ಎಂಬಂತೆ ವಿವರಿಸಲಾಗಿದೆ.

ಆಂಧ್ರ ಕರ್ನಾಟಕದ ಸಮಗ್ರ ಗಡಿಪ್ರದೇಶದಿಂದ ಅಧ್ಯಯನವನ್ನು ಮತ್ತಷ್ಟು ವ್ಯಾಪಕಗೊಳಿಸಿ, ಇನ್ನೂ ಕೆಲವು ಒಳನೋಟಗಳನ್ನು ನೀಡಬಹುದಾಗಿತ್ತು. ಆದರೆ ಸಮಯ ಮತ್ತು ಭೌಗೋಳಿಕ ವಲಯದ ಅತಿವ್ಯಾಪ್ತಿ ಯಿಂದಾಗಿ ಅಧ್ಯಯನವನ್ನು ಎರಡು ಜಿಲ್ಲೆಯ, ನಾಲ್ಕು ತಾಲ್ಲೂಕುಗಳ ಗಡಿಪ್ರದೇಶಕ್ಕೆ ಸೀಮಿತಗೊಳಿಸಲಾಗಿದೆ.

ಮುಖ್ಯವಾಗಿ ಈ ನಿಬಂಧದಲ್ಲಿ ಸ್ಥಳನಾಮಗಳ ನಿಷ್ಪತ್ತಿಕೋಶವನ್ನು ಉದ್ದೇಶಪೂರ್ವಕವಾಗಿಯೇ ಚರ್ಚಿಸಿಲ್ಲ. ನಿಷ್ಪತ್ತಿಯ ವಿವರಗಳು ಸ್ವರೂಪ ಮತ್ತು ವರ್ಗೀಕರಣ ಹಾಗೂ ಭಾಷಿಕ, ಸಾಮಾಜಿಕ ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಚರ್ಚೆಯಾಗಿವೆ. ಕಾರಣ ಪುನರಾವರ್ತನೆಯ ದೃಷ್ಟಿಯಿಂದ ಅದನ್ನು ಗಮನಿಸಲಾಗಿಲ್ಲ.

೧.೫. ವಿಧಾನ

'ಆಂಧ್ರ - ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು' ಎಂಬ ಈ ಅಧ್ಯಯನವು ಕ್ಷೇತ್ರಕಾರ್ಯ ಮತ್ತು ಕೆಲವು ಸಂದರ್ಭಗ್ರಂಥಗಳ ಅಧ್ಯಯನದಿಂದ ರೂಪುಗೊಂಡಿದೆ. ಮುಖ್ಯವಾಗಿ ಕ್ಷೇತ್ರ ಮಾಹಿತಿಯೇ ಈ ನಿಬಂಧಕ್ಕೆ ಹೂರಣ. ಪ್ರಶ್ನಾವಳಿಯ ಮೂಲಕ ಗ್ರಾಮನಾಮಗಳನ್ನು, ಅವುಗಳ ವಿವಿಧ ಹೆಸರುಗಳು, ಚಾರಿತ್ರಿಕ, ಸಾಮಾಜಿಕ, ಭಾಷಿಕ ಅಂಶಗಳನ್ನು ಪಡೆಯಲಾಗಿದೆ. ಗಡಿಪ್ರದೇಶದ ದ್ವಿಭಾಷಿಕ ವಲಯದಲ್ಲಿ ತೆಲುಗು ಮತ್ತು ಕನ್ನಡ ಮಾತೃಭಾಷಿಕರ ಭಾಷಿಕ ಚಹರೆಗಳನ್ನು ಗಮನಿಸಿಕೊಳ್ಳಲಾಗಿದೆ. ಈ ಮೂಲಕ ಗ್ರಾಮನಾಮಗಳ ಬರೆಹ ಮತ್ತು ಬಳಕೆಯಲ್ಲಿ ಅವರ ಉಚ್ಚಾರಣೆಯ ಸಂಗತಿಗಳನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಆಂಧ್ರದ ಗಡಿಪ್ರದೇಶದಲ್ಲಿ ತೆಲುಗು ಮಾತೃಭಾಷಿಕರನ್ನು ಸಂದರ್ಶಿಸಿ ಅವರು ಕನ್ನಡ ಗ್ರಾಮನಾಮಗಳನ್ನು ಉಚ್ಚರಿಸುವ ಬಗೆಯನ್ನು ತಿಳಿಯಲಾಗಿದೆ. ಅಲ್ಲದೇ ಕರ್ನಾಟಕದ ಗಡಿಭಾಗದಲ್ಲಿರುವ ತೆಲುಗು ಮೂಲದ ವಲಸೆ ಸಮುದಾಯಗಳನ್ನು ಸಂದರ್ಶಿಸಿ ಅವರು ಸ್ಥಳನಾಮಗಳನ್ನು ಉಚ್ಚರಿಸುವ ಬಗೆಯನ್ನು ಗಮನಿಸಿಕೊಂಡು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಅಲ್ಲದೇ ಆಯಾ ಗ್ರಾಮಗಳನ್ನು ಸಂದರ್ಶಿಸುವಾಗ ಬ್ರಾಹ್ಮಣ, ಲಿಂಗಾಯತ/ರೆಡ್ಡಿ, ಕುರುಬ, ಮಾದಿಗ, ಮುಸ್ಲಿಂ ಸಮುದಾಯದ ಒಬ್ಬೊಬ್ಬ ಪುರುಷ ಮತ್ತು ಮಹಿಳೆಯನ್ನು ವಕ್ತೃಗಳನ್ನಾಗಿ ಆಯ್ಕೆ ಮಾಡಿಕೊಂಡು ಗ್ರಾಮನಾಮಗಳ ಮಾಹಿತಿಯನ್ನು ಪಡೆಯಲಾಗಿದೆ.

ಸಂದರ್ಶಿಸಿದ ಒಟ್ಟು ಹಳ್ಳಿಗಳಲ್ಲಿ ಆಯಾ ಗ್ರಾಮದ ಸುತ್ತಮುತ್ತಣ ಇರುವ ಭೂಮಿಯ ಗುಣ, ಬೆಟ್ಟ, ಗುಡ್ಡಗಳು, ಹಳ್ಳ, ನದಿ, ಕೆರೆ ಮುಂತಾದ ಜಲಮೂಲಗಳು, ಆ ಊರಿನಲ್ಲಿರುವ ಸಮುದಾಯಗಳು, ಅಲ್ಲಿನ ಚರಿತ್ರೆ, ದೇವಾಲಯಗಳು, ಶಾಸನಗಳು, ಮಾತೃಭಾಷೆ, ಶಿಕ್ಷಣದಮಟ್ಟ, ಸಾಮಾಜಿಕ ಜೀವನವಿಧಾನ, ಆರ್ಥಿಕ ಸಂಪನ್ಮೂಲಗಳು, ಹಬ್ಬ ಆಚರಣೆಗಳು ಆ ಊರಿನ ವಿಶಿಷ್ಟ ಸಂಸ್ಕೃತಿ, ಮುಂತಾದ ವಿವರಗಳನ್ನು ಸಾಂದರ್ಭಿಕವಾಗಿ ಗಮನಿಸಲಾಗಿದೆ. ಇದರಿಂದಾಗಿ ಗ್ರಾಮನಾಮಗಳ ಭೌಗೋಳಿಕ, ಸಾಂಸ್ಕೃತಿಕ, ಭಾಷಿಕ ಆಯಾಮಗಳನ್ನು ಕಟ್ಟಿಕೊಡಲು ನೆರವಾಗಿದೆ.

ಸ್ಥಳನಾಮಗಳ ಉಚ್ಚಾರಣೆಯ ಸಂದರ್ಭಗಳನ್ನು ಗಮನಿಸಲು ಕೆಳಸಮುದಾಯದ ಅಕ್ಷರಸ್ಥ ಮತ್ತು ಅನಕ್ಷರಸ್ಥ, ಮೇಲ್ ಸಮುದಾಯದ ಅಕ್ಷರಸ್ಥ ಮತ್ತು ಅನಕ್ಷರಸ್ಥರನ್ನು ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ. ಅಲ್ಲದೇ ವ್ಯಾವಹಾರಿಕ ಸಂದರ್ಭದಲ್ಲಿ ಸ್ಥಳನಾಮಗಳ ಬಳಕೆಯನ್ನು ಹೊರಾವರಣಗಳಾದ ಬಸ್ಸಿನ ಪ್ರಯಾಣ, ಮಾರ್ಕೆಟ್, ಹೊಟೇಲುಗಳಲ್ಲಿ ಸಾಂದರ್ಭಿಕವಾಗಿ ಗಮನಿಸಲಾಗಿದೆ. ಮೌಖಿಕ ಪರಂಪರೆ ಮತ್ತು ಸ್ಥಳನಾಮಗಳು ಎಂಬ ಅಧ್ಯಾಯಕ್ಕೆ ಮಾಹಿತಿಯನ್ನು ಹೆಚ್ಚಾಗಿ ಹೆಂಗಸರೇ ನೀಡಿದ್ದಾರೆ.

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿಯೊಂದಿಗೆ, ಕನ್ನಡ, ತೆಲುಗು, ಇಂಗ್ಲಿಶ್‌ನಲ್ಲಿ ಬಂದ ಕೆಲವು ಅಧ್ಯಯನಗಳನ್ನು ಗಮನಿಸಿಕೊಂಡು ಪ್ರಸ್ತುತ ನಿಬಂಧವನ್ನು ಕೊಂಚ ಭಿನ್ನ ಮಾದರಿಯಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

### ೧.೬. ಕ್ಷೇತ್ರಕಾರ್ಯದ ಅನುಭವ

ತಮ್ಮ ಊರಿನ ಬಗೆಗೆ ಜನತೆಗೆ ವಿಶೇಷವಾದ ಅಭಿಮಾನವಿರುತ್ತದೆ. ಆ ಊರಿನ ಶ್ರೇಷ್ಠತೆಯನ್ನು ಹೇಳಿಕೊಳ್ಳುವುದು ಅವರಿಗೆ ಮೋಜಿನ, ಹೆಮ್ಮೆಯ ಸಂಗತಿಯೆನಿಸಿದೆ. ಕನ್ನಡನಾಡಿನ ಗಡಿಭಾಗ ಮತ್ತು ತೆಲುಗುನಾಡಿನ ಗಡಿಭಾಗದ ಗುಂಟ ಬಡತನ, ನಿರಕ್ಷರತೆ, ವಾತಾವರಣದ ಪ್ರತಿಕೂಲತೆ, ಜಾತಿಯ ಜಾಡ್ಯದಂತಹ ಹಲವಾರು ಸಂಕಷ್ಟಗಳಿದ್ದರೂ, ಅವರು ಜಾಣಾಕ್ಷರಾಗಿದ್ದಾರೆ. ಅವರಿಗೆ ಜ್ಞಾನದ ಹಂಬಲವಿದೆ. ತಮ್ಮ ಸುತ್ತಣ ಭೌಗೋಳಿಕ ಪರಿಸರದ ಬಗೆಗೆ ವಿಶೇಷ ಕಾಳಜಿಯಿದೆ. ಕುಡಿಯಲು ನೀರು ದೊರೆಯದಿದ್ದರೂ, ಕೃತಕ ಕೆರೆ, ಬಾವಿಗಳನ್ನು ನಿರ್ಮಿಸಿಕೊಂಡು ಸಾಗರ, ಸಮುದ್ರವೆಂದು ಕರೆದುಕೊಳ್ಳುತ್ತಾರೆ. ಅದರಂತೆ ಅವರ ಸಂಸ್ಕೃತಿಯ ಬಗೆಗೆ ವಿಶೇಷ ಒಲವು ಈ ಭಾಗದ ಜನತೆಯಲ್ಲಿ ಕಂಡು ಬರುತ್ತದೆ. ಅಷ್ಟೇ ಒಲವು ಮತ್ತೊಂದು ಸಂಸ್ಕೃತಿಯ ಬಗೆಗೂ ಇದೆ. ಈ ಕಾರಣದಿಂದಲೇ ತೆಲುಗು ಕನ್ನಡ ಎರಡು ಭಾಷೆಯನ್ನಾಡುವ ಸಮುದಾಯಗಳು ಪರಸ್ಪರ ಹಬ್ಬ, ಆಚರಣೆ, ಜೀವನ ವಿಧಾನದಲ್ಲಿ ಕೊಡು ಪಡೆದಿದ್ದಾರೆ. ಈ ಎಲ್ಲದರ ಸಾಧನೆಯನ್ನು ಹೇಳಿಕೊಳ್ಳುವಲ್ಲಿ ಅವರಿಗೆ ಉತ್ಸುಕತೆಯಿದೆ. ಆದರೆ ಅವರವರ ಊರ ಹೆಸರಿನ ಬಗೆಗೆ ಕೇಳಿದಾಗ ಅವರು ಹೇಳಲು ಮುಜುಗರ ಪಡುತ್ತಾರೆ. ಆ ಕುರಿತು ಅವರಿಗೆ ಮಾಹಿತಿಯಿಲ್ಲ. ಅಲ್ಲಿಯವರೆಗೂ ತಮ್ಮ ವಾಸದ ನೆಲೆಗಳ ಹೆಸರಿನ ಬಗೆಗೆ ಅವರು ಗಮನವೇ ಹರಿಸಿಲ್ಲದಿರುವುದು ಕಂಡುಬರುತ್ತದೆ. ಆದರೆ ಹೆಸರು ಕೇಳಿದ ತಕ್ಷಣ ತಿಳಿಯುವ ಹಂಬಲವನ್ನು ಆಶ್ಚರ್ಯ, ದುಗುಡಗಳಿಂದ ವ್ಯಕ್ತಪಡಿಸುತ್ತಾರೆ. ತಿಳಿದುಕೊಳ್ಳುವ ಕುತೂಹಲ ಅವರಲ್ಲಿ ಇಮ್ಮಡಿಯಾಗುತ್ತದೆ. ಹಳ್ಳಿಗಳನ್ನು ಸಂದರ್ಶಿಸಿದಾಗ ಮಾಹಿತಿಯು ದೊರೆಯುವುದು ಅತ್ಯಂತ ಕಷ್ಟ. ಕೆಲವು ಅಕ್ಷರಸ್ಥರು ಈ ಬಗ್ಗೆ ಉದಾಸೀನತೆಯನ್ನು ತೋರಿಸುತ್ತಾರೆ. ಇನ್ನೂ ಕೆಲವರು ಮೌನವಾಗುತ್ತಾರೆ. ಆದರೆ ಅನಕ್ಷರಸ್ಥ ಕುಟುಂಬಗಳನ್ನು ಸಂದರ್ಶಿಸಿದಾಗ, ತಮಗೆ ತಿಳಿದ ವಿಚಾರಗಳನ್ನು ಮಂಡಿಸುತ್ತಾರೆ. ಒಂದು ವೇಳೆ ತಿಳಿಯದಿದ್ದರೂ ಒಂದು ಐತಿಹ್ಯ, ಕಥೆ, ಹೇಳಿ ಆ ಊರಿನ ಹೆಸರನ್ನು ಸಂಸ್ಕೃತೀಕರಿಸಿ ಹೇಳುವ ಜಾಣ್ಮೆಯೂ ಇವರಲ್ಲಿರುವುದು ಕಂಡು ಬಂದಿತು. ಇದರಿಂದ ಸ್ಥಳನಾಮ ಸಂಶೋಧಕ ಈ ಕ್ಷೇತ್ರದಲ್ಲಿ ಅನೇಕ ಅಡೆ, ತಡೆ ಎದುರಿಸಬೇಕಾಗಿ ಬರುತ್ತದೆ.

"ಈ ಹಿಂದೆ ಮೈಸೂರು ಜಿಲ್ಲೆಯ ಊರುಗಳ ಅಧ್ಯಯನ ಕೈಗೊಂಡ ದೇಜಗೌ ಅವರು ತಮ್ಮ ಅಧ್ಯಯನವನ್ನು ಹಠಾತ್ತನೆ ಕೈಬಿಟ್ಟರು. ಏಕೆಂದರೆ ಬಹುತೇಕ ಜನರಿಗೆ ಅವರವರ ಊರಿನ ಹೆಸರಿನ ಬಗ್ಗೆ ತಿಳಿದಿರಲಿಲ್ಲ. ಜೊತೆಗೆ ಈ ಹೆಸರುಗಳ ಕನಿಷ್ಠ ಜ್ಞಾನವೂ, ವಿದ್ಯಾವಂತರಾದವರಿಗೂ ಇರಲಿಲ್ಲ. ಇನ್ನೂ ಹೇಳಬೇಕೆಂದರೆ ಹೆಸರಿನ ಬಗೆಗೆ ಅವರಿಗೆ ಆಸಕ್ತಿಯೇ ಇರಲಿಲ್ಲ" (ಪಾಟೀಲ ಪುಟ್ಟಪ್ಪ - ದಶಮಾನೋತ್ಸವ - ೨೬.೧೨.೨೦೦೧. ಕರ್ನಾಟಕ ಮತ್ತು ಜಾಗತೀಕರಣ, ವಿಚಾರ ಸಂಕಿರಣ ಅಧ್ಯಕ್ಷೀಯ ಭಾಷಣ, ಕ.ವಿ.ವಿ. ಹಂಪಿ) ಎಂಬುದನ್ನು ವ್ಯಕ್ತಪಡಿಸಿದ್ದಾರೆ. ಇದು ಸತ್ಯ. ಆಧುನಿಕತೆಯತ್ತ ತಮ್ಮ ಸಾಮಾಜಿಕ ಜೀವನವನ್ನು ಕೊಂಡೊಯ್ಯಲು ಪ್ರಯತ್ನಿಸುತ್ತಿರುವ ಇಂದಿನ ಗ್ರಾಮಸಮಾಜಗಳು ತಮ್ಮ ಸಂಸ್ಕೃತಿಯ ಕಡೆ ಅಷ್ಟಾಗಿ ಗಮನ ಹರಿಸುತ್ತಿಲ್ಲವೆಂಬುದು ತಿಳಿಯುತ್ತದೆ. ಆದರೂ ಕೆಲವು ಗ್ರಾಮಗಳಲ್ಲಿ ಅತ್ಯಂತ ಉತ್ಸಾಹದಿಂದ ತಮ್ಮ ನೆಲೆಯ ಹೆಸರುಗಳನ್ನೂ ಹೇಳುತ್ತಾರೆ. ಈ ಗಡಿಭಾಗದ ಗ್ರಾಮಗಳಲ್ಲಿ ಜಾನಪದ ಸಾಹಿತ್ಯ ಮಡುವಾಗಿ ನಿಂತಿದೆ. ಈ ಸಾಹಿತ್ಯದಲ್ಲಿ ಗ್ರಾಮನಾಮಗಳು ಅಡಗಿಕೊಂಡಿರುವುದನ್ನು ಕೆಲವು ಮಾದರಿಗಳ ಮೂಲಕ ಈ ಅಧ್ಯಯನದಲ್ಲಿ ಕಾಣಿಸಲಾಗಿದೆ.

ಸ್ಥಳನಾಮಗಳು, ಗ್ರಾಮನಾಮಗಳು ನಮ್ಮ ಸಂಸ್ಕೃತಿಯ ಪಳೆಯುಳಿಕೆಗಳು. ಈ ಬಗ್ಗೆ ನಮ್ಮ ನಾಡವರಿಗೆ ಕನಿಷ್ಠ ಜ್ಞಾನವಾದರೂ ಅಗತ್ಯವಾಗಿ ಬೇಕಾಗುತ್ತದೆ. ಕಾರಣ ಆಯಾ ಗ್ರಾಮದ ಅಕ್ಷರಸ್ಥರು ಆಸಕ್ತಿಯಿಂದ ಜನರಿಗೆ ಈ ಕುರಿತು ಮಾರ್ಗದರ್ಶನ ಮಾಡಬೇಕು. ಅಲ್ಲದೇ ಹಿರಿಯ ತಲೆಮಾರಿನ ಜನರಲ್ಲಿ ಅಡಗಿದ ಇಂತಹ ಮಾಹಿತಿಯನ್ನೂ ದಾಖಲು ಮಾಡಬೇಕು. ಶಾಸನೋಕ್ತ ಹೆಸರು, ಊರಿಗೆ ಇರುವ ಐತಿಹ್ಯ, ಕಥೆ, ಹಾಡು, ಚರಿತ್ರೆ, ಭೌಗೋಳಿಕ ಪರಿಸರ ಹೀಗೆ ಹಲವಾರು ವಸ್ತು ವಿಷಯಗಳನ್ನು ಕನ್ನಡನಾಡಿನಾದ್ಯಂತ ಹಳ್ಳಿ, ನಗರಗಳು ದಾಖಲು ಮಾಡುವ ಅಗತ್ಯವಿದೆ. ಶಾಲಾ - ಕಾಲೇಜುಗಳ ವಿದ್ಯಾರ್ಥಿಗಳಿಗೆ ಇದೊಂದು ಚಟುವಟಿಕೆಯೆಂಬಂತೆ ರೂಪಿಸಿ ಆಯಾ ಗ್ರಾಮಗಳ ಹೆಸರುಗಳ ಚರಿತ್ರೆಯನ್ನು ದಾಖಲು ಮಾಡಿಸಬೇಕು. ಅಲ್ಲದೇ ಸರಕಾರವೂ ಈ ಬಗ್ಗೆ ಎಚ್ಚರವಹಿಸಿ, ಈ ಮುಂಚೆ ಬಂದ ಗ್ರಾಮಸೂಚಿಯನ್ನು ಪರಿಷ್ಕರಿಸಿ, ಅದರೊಂದಿಗೆ ಮೂಲ ಹೆಸರು, ಚಾರಿತ್ರಿಕ ಹೆಸರು, ಹ್ರಸ್ವೀಕರಣ, ಮುಂತಾದ ಮಾಹಿತಿಯನ್ನು ನೀಡಬೇಕು. ಅಲ್ಲದೇ ಇವುಗಳ ವಿಸ್ತೃತವಾದ ಮಾಹಿತಿಗೆ ತಾಲ್ಲೂಕುವಾರು ಗ್ರಾಮನಾಮಗಳ ಐತಿಹ್ಯ, ಕಥೆ, ಹಾಡು, ಪುರಾಣ, ಭಾಷೆ, ಚರಿತ್ರೆಯೊಂದಿಗೆ ಸಮಗ್ರ ಬರೆಹದ ಯೋಜನೆಯನ್ನು ರೂಪಿಸಬೇಕು. ಹೀಗಾದಲ್ಲಿ ಈ ನಾಡವರಿಗೆ ತಮ್ಮ ನೆಲೆಗಳ ಬಗ್ಗೆ ಕನಿಷ್ಟ ಪಕ್ಷ ಜ್ಞಾನವಿರುತ್ತದೆ. ಇದರಿಂದ ಸಂಸ್ಕೃತಿಯ ಪಳೆಯುಳಿಕೆಗಳ ರಕ್ಷಣೆಯು ಸಾಧ್ಯವಾಗುತ್ತದೆ.

❑❑

೨

# ಕನ್ನಡ ಸ್ಥಳನಾಮ ಅಧ್ಯಯನಗಳ ವಿಷಯಾವಲೋಕನ

## ೨. ಪ್ರವೇಶ

'ಸ್ಥಳನಾಮಶಾಸ್ತ್ರ' ಎಂದು ಕರೆಯಲಾಗುವ ನಾಮಶಾಸ್ತ್ರ ಪ್ರಕಾರದಲ್ಲಿ ಗ್ರಾಮನಾಮಶಾಸ್ತ್ರ ಹಾಗೂ ಸ್ಥಳನಾಮಶಾಸ್ತ್ರ ಎಂಬ ಎರಡು ಕವಲುಗಳಿವೆ. ಸ್ಥಳನಾಮ, ನಾಮ ಪ್ರಕಾರದ ಸಮಗ್ರ ರೂಪವಾದರೆ, 'ಗ್ರಾಮನಾಮ'ವೆಂಬುದು ಅದರ ಸಂಕ್ಷಿಪ್ತ ವ್ಯಾಪ್ತಿಯ ರೂಪ. ಹಾಗೆಂದು ಇವೆರಡು ಪ್ರತ್ಯೇಕವೆಂದಾಗಲಿ, ಅಥವ ಒಂದೇ ಎಂದಾಗಲಿ ಭಾವಿಸುವಂತಿಲ್ಲ. ತಮ್ಮದೇ ಆದ ವಿಶಿಷ್ಟತೆಯಿಂದ ಏಕಕಾಲಕ್ಕೆ ಅಭಿನ್ನವೂ, ಭಿನ್ನವೂ ಆಗಿಬಿಡುವ ಸಾಧ್ಯತೆಯಿದೆ. ಅವೆರಡರ ವಿಸ್ತೃತವಾದ ಅಧ್ಯಯನದ ಮೂಲಕವೇ ನಾಮಾಧ್ಯಯನದ ಇಡಿಯಾದ ರೂಪವೊಂದರ ಗ್ರಹಿಕೆಯಾಗಲು ಸಾಧ್ಯವಿದೆ.

ಗ್ರಾಮನಾಮದ ಪರಿಧಿ ಮಾನವ ನಿರ್ಮಿತ ಸಂಸ್ಕೃತಿಯೊಂದರ ನೆಲೆಸುವಿಕೆಗೆ ಮಾತ್ರ ವ್ಯಾಪಿಸಿಕೊಂಡಿರುತ್ತದೆ. ಹಾಗೆ ನೋಡಿದರೆ ಇದು ಸ್ಥಳನಾಮ'ವೆಂಬ ಸಮಗ್ರತೆಯಲ್ಲಿ ಒಂದಾಗಿಯೇ ಇರುವುದು ಗಮನಿಸಬಹುದು. ಭೌಗೋಳಿಕ ಸೃಷ್ಟಿಯ ಬೆಟ್ಟ, ಗುಡ್ಡ, ತೊರೆ, ನದಿ, ಹೊಲ, ಗದ್ದೆ ಮುಂತಾದುವು ಅಲ್ಲದೆ ಕೆರೆ, ಕಾಲುವೆ, ಕುಂಟೆ ಎಂಬ ಕೆಲವು ಮಾನವ ನಿರ್ಮಿತ ಸ್ಥಳಗಳು ಸಮಗ್ರತೆಯಲ್ಲಿ ಒಳಗಾಗುತ್ತವೆ. ಈ ಕಾರಣದಿಂದಲೇ ಸ್ಥಳ ಮತ್ತು ಗ್ರಾಮನಾಮಗಳು ಏಕಕಾಲಕ್ಕೆ ಅಭಿನ್ನವಾಗುತ್ತವೆ. ಸ್ಥಳನಾಮಗಳ ಹೆಸರಿನ ಅಡಿಯಲ್ಲಿ ಗ್ರಾಮನಾಮಗಳನ್ನು ಗ್ರಾಮನಾಮಗಳು ಎಂಬ ಹೆಸರಿನಡಿಯಲ್ಲಿ ನಿರ್ವಸತಿ, ನಿರ್ವಸಿತ, ವಸತಿ ಸ್ಥಳನಾಮಗಳ ಅಧ್ಯಯನಗಳು ನಡೆದುಕೊಂಡು ಬಂದಿವೆ.

ಈ ಅಧ್ಯಾಯದಲ್ಲಿ ಈವರೆಗೆ ಸ್ಥಳನಾಮ ಅಧ್ಯಯನ ನಡೆದು ಬಂದ ದಾರಿಯ ಸಂಕ್ಷಿಪ್ತ ವಿವರಣೆಯನ್ನು ನೀಡಲಾಗುತ್ತದೆ. ಅಂತೆಯೇ ಕನ್ನಡದಲ್ಲಿ ನಾಮಾಧ್ಯಯನ ಹೇಗೆ ಮುಂದುವರೆಯಿತು, ನಡೆದ ಅಧ್ಯಯನಗಳಲ್ಲಿ ಅನುಸರಿಸಲಾದ ಸಂಶೋಧನಾ ವಿಧಿ, ವಿಧಾನಗಳು, ಕಂಡುಕೊಂಡ ಮಾದರಿಗಳು ಹಾಗೆಯೇ ಸ್ಥಳನಾಮಶಾಸ್ತ್ರ

ಬೆಳೆದಂತೆಲ್ಲಾ ಅಧ್ಯಯನ ಕ್ರಮದಲ್ಲಾದ ಬದಲಾವಣೆ, ಅನುಸರಿಸಿದ ಮಾದರಿಗಳನ್ನು ನೋಡುವ ಪ್ರಯತ್ನವಿದೆ. ಕನ್ನಡದಲ್ಲಿ ಬಂದಂತಹ ಸ್ಥಳನಾಮಾಧ್ಯಯನ ಕೃತಿಗಳ ವಿಷಯಾವಲೋಕನವನ್ನು ಮಾಡಲಾಗಿದೆ. ಅಂತೆಯೇ ಇಂಗ್ಲಿಷ್, ತೆಲುಗು ಭಾಷೆಯ ಕೆಲವು ಕೃತಿಗಳನ್ನು ಸಾಂದರ್ಭಿಕವಾಗಿ ವಿಷಯಾವಲೋಕನಕ್ಕೆ ಒಳಪಡಿಸಲಾಗಿದೆ. ಕೊನೆಯಲ್ಲಿ ಲೇಖನಗಳ ಪಟ್ಟಿಯನ್ನು ನೀಡಲಾಗಿದೆ.

ಮುಖ್ಯವಾಗಿ ಕನ್ನಡದಲ್ಲಿ ಬಂದಂತಹ ಸ್ಥಳನಾಮ ಅಧ್ಯಯನಕ್ಕೆ ಸಂಬಂಧಿಸಿದ ಕೃತಿಗಳ ಅವಲೋಕನದಿಂದ ಕಂಡುಕೊಂಡ ಮಾದರಿ ಅಧ್ಯಯನ ವಿಧಿ ವಿಧಾನಗಳ ಪಟ್ಟಿಯನ್ನು ಮೊದಲೇ ಕೊಟ್ಟುಕೊಂಡು ನಂತರ ಅವುಗಳ ಅವಲೋಕನವನ್ನು ಮಾಡಲಾಗಿದೆ.

## ೨.೧. ಸ್ಥಳನಾಮ ಅಧ್ಯಯನದ ಸಂಕ್ಷಿಪ್ತ ಇತಿಹಾಸ

ಸ್ಥಳನಾಮಗಳ ನಿರ್ದೇಶನ ಹಾಗೂ ಅದರ ಕುರಿತಾಗಿ ನಡೆದ ಅಧ್ಯಯನವೇ ಸ್ಥಳನಾಮಚರಿತ್ರೆ. ಸ್ಥಳನಾಮಶಾಸ್ತ್ರಕ್ಕೆ ಎರಡು ಶತಮಾನಗಳ ಚರಿತ್ರೆಯಿದೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಅದೊಂದು ಶಾಸ್ತ್ರವಾಗಿ ಭದ್ರವಾದ ತಳಹದಿಯನ್ನು ಪಡೆದದ್ದು ಒಂದು ಶತಮಾನದಷ್ಟು ಹಿಂದೆಯೆನ್ನಬಹುದು. ಸ್ಥಳದ ಹೆಸರಿನ ಮೂಲಕ ಒಂದು ಭೌಗೋಳಿಕ ಪರಿಸರದ ಸಂಸ್ಕೃತಿಯನ್ನು ಬಿಂಬಿಸುವ ಈ ಪ್ರಕಾರ ಒಂದು ವಿಜ್ಞಾನವಾಗಿಯೂ ಬೆಳೆದು ಬಂದಿತು. ಪಾಶ್ಚಾತ್ಯರಲ್ಲಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಈ ಶಾಸ್ತ್ರದ ವೈಜ್ಞಾನಿಕ ಅಧ್ಯಯನ ಆರಂಭವಾಯಿತು.

೧೭೬೬ರಲ್ಲಿ ಜರ್ಮನಿಯ ಗಾಟ್‌ಫ್ರೀಡ್ ವಿಲ್‌ಹೆಲ್ಮ್ ಲೀಬ್ನಿಜ್ ಆಂಗ್ಲ ಸ್ಥಳನಾಮಗಳ ಬಗೆಗೆ ಅಧ್ಯಯನ ನಡೆಸಿದ ಮೊದಲ ವಿದ್ವಾಂಸ. ಲೀಬ್ನಿಜ್ ಸ್ಥಳನಾಮಗಳ ರಚನೆ ಮತ್ತು ಸನ್ನಿವೇಶಗಳ ಮಹತ್ವವನ್ನು ಇಡೀ ಯುರೋಪ್ ಖಂಡಕ್ಕೆ ಪರಿಚಯಿಸಿದ. ಜೊತೆಗೆ ಆ ಶಾಸ್ತ್ರ ಪ್ರಕಾರಕ್ಕೆ ಒಂದು ತತ್ವಬದ್ಧವಾದಂತಹ ವಿಧಿ ವಿಧಾನಗಳನ್ನು ರೂಪಿಸಿದ. ಸ್ಥಳನಾಮಗಳಿಂದ ಒಂದು ಸಂಸ್ಕೃತಿಯ ಅನಾವರಣ ಸಾಧ್ಯವೆಂಬ ಸತ್ಯವನ್ನು ಲೀಬ್ನಿಜ್ ಘೋಷಿಸಿದ. ಮುಂದೆ ಸ್ಥಳನಾಮಶಾಸ್ತ್ರದ ಭದ್ರ ಬುನಾದಿಯನ್ನು ಹಾಕಿದವನು ಇಂಗ್ಲೆಂಡಿನ ಸ್ಕೀಟ್ ಎಂಬ ಸ್ಥಳನಾಮ ಶಾಸ್ತ್ರಜ್ಞ. ಅದರಂತೆ ಎ.ಎಚ್.ಸ್ಮಿತ್, ಇಕ್ವಾಲ್, ಗಾರ್ಡಿನರ್, ಅಟ್ಲಿ, ಸ್ಲೂಟನ್, ಡೌಜತ್, ಅಡಾಲ್ಫ್‌ಬ್ಯಾಚ್ ಮುಂತಾದ ವಿದ್ವಾಂಸರು ಈ ಅಧ್ಯಯನಕ್ಕೆ ತಾತ್ವಿಕ ಚೌಕಟ್ಟನ್ನು ನೀಡಿದರು. ಜರ್ಮನಿಯ ಫಾರ್‌ಸ್ಟೀಮನ್, ಫ್ರಾನ್ಸ್‌ನ ಲಾಂಗ್ನನ್, ನಾರ್ವೆಯ ರೈ, ಸ್ವೀಡನ್ನಿನ ನೋರಿನ್ ಈ ಕ್ಷೇತ್ರಕ್ಕೆ ತಮ್ಮ ಕೊಡುಗೆಯನ್ನು ಸಲ್ಲಿಸುವ ಮೂಲಕ ಬೆಳೆಸಿದ್ದಾರೆ. ಜರ್ಮನಿಯ ಈ ತಜ್ಞರು ಸ್ಥಳನಾಮಗಳನ್ನು ಐತಿಹಾಸಿಕ ಆಕರಗಳಾಗಿಯೂ, ಭೌಗೋಳಿಕ ಆಕರಗಳಾಗಿಯೂ ಪರಿಗಣಿಸಿ ಅಧ್ಯಯನಕ್ಕೆ ಒಳಪಡಿಸಿದರು. ಅಲ್ಲದೆ ಸಾಂಸ್ಕೃತಿಕ, ಸಾಮಾಜಿಕ ಆಯಾಮಗಳ ಮುಖಾಂತರವೂ ನಾಮಶಾಸ್ತ್ರದ ಪ್ರಸ್ತುತತೆಯನ್ನು ಖಚಿತಪಡಿಸಿದರು. ಬೆಲ್ಜಿಯಂನ ಲೂವೈನಿನಲ್ಲಿ ೧೯೨೧ರಲ್ಲಿ ಸ್ಥಾಪನೆಗೊಂಡ ಆಂಗ್ಲ ಸ್ಥಳನಾಮ ಸಂಶೋಧನ ಮಂಡಳಿ, ಸ್ಥಳನಾಮ ವಿಜ್ಞಾನದಲ್ಲಿ ಪ್ರಮುಖವಾದ ಮೈಲಿಗಲ್ಲಾಗಿದೆ. ಪುರಾತತ್ವಶಾಸ್ತ್ರಜ್ಞರ, ಭಾಷಾವಿಜ್ಞಾನಿಗಳ, ಇತಿಹಾಸಕಾರರ, ಇನ್ನಿತರ ಮಾನವಿಕ ಶಾಸ್ತ್ರಜ್ಞರ

ನೆರವಿನಿಂದ ಸ್ಥಳನಾಮ ಅಧ್ಯಯನಕ್ಕೆ ಈ ಸಂಸ್ಥೆಯು ವೈಜ್ಞಾನಿಕ ಸ್ವರೂಪವನ್ನು ನೀಡಿತು. ಸಾಂಸ್ಕೃತಿಕ ಚರಿತ್ರೆಯ ರಚನೆಗೆ ಸ್ಥಳನಾಮ ಅಧ್ಯಯನ ಅನಿವಾರ್ಯ ಹಾಗೂ ಅದರ ಮಹತ್ವವೇನೆಂಬ ಬಗ್ಗೆ ಖಚಿತವಾಗಿ ಸ್ಪಷ್ಟಪಡಿಸುವಲ್ಲಿ ಗಣನೀಯ ಸೇವೆಯನ್ನು ಮಾಡಿತು. ಪ್ರಾದೇಶಿಕವಾರು ಸ್ಥಳನಾಮಗಳ ಅಧ್ಯಯನದಿಂದ, ಸ್ಥಳೀಯ ಭಾಷೆ, ಸಮಾಜ, ಸಂಸ್ಕೃತಿಯ ತಿಳುವಳಿಕೆಗೆ ಪ್ರಮುಖ ಆಕರ ಸಿಗುತ್ತದೆಂಬ ಮಾಹಿತಿಯನ್ನು ಪ್ರಚಾರಮಾಡುವ ಮೂಲಕ ಈ ಸಂಸ್ಥೆ ನಾಮಾಧ್ಯಯನಕ್ಕೆ ಮೀಸಲಾಗಿ ನಿಂತಿತು. ಈ ಸಂಸ್ಥೆಯಿಂದ ಆಂಗ್ಲ ಸ್ಥಳನಾಮ ನಿಘಂಟು ರಚನೆಗೊಂಡಿತು. ಇದು ಅತ್ಯಂತ ಪ್ರಯೋಜನಕಾರಿ ಕೋಶವಾಗಿದೆ.

ಎಫ್.ಎಂ.ಸ್ಟೆಂಟಾನ್, ಪಿ.ಎಚ್.ರಿನಿ, ಎ.ಎಚ್.ಸ್ಮಿತ್ ಸ್ಥಳನಾಮ ಕ್ಷೇತ್ರದಲ್ಲಿ ಅಪಾರ ಕೆಲಸಮಾಡಿ ಜಗತ್ತಿನಲ್ಲಿ ನಾಮಾಧ್ಯಯನದ ಪ್ರಸ್ತುತತೆಯನ್ನು ಸಾರಿದರು.

ಇತರ ಯುರೋಪಿಯನ್ ರಾಷ್ಟ್ರಗಳಾದ ಜರ್ಮನಿ, ಡೆನ್ಮಾರ್ಕ್, ಫ್ರಾನ್ಸ್ , ನಾರ್ವೆಗಳಲ್ಲಿ ಸ್ಥಳನಾಮಾಧ್ಯಯನ ಪ್ರಖರವಾಗಿ ನಡೆಯಿತು. ಆದರೆ ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಆಗಿರುವ ಕೆಲಸವನ್ನು ಗಮನಿಸಿದರೆ ವಿಸ್ಮಯವಾಗುತ್ತದೆ. ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಜಾನ್ ಹೆಕ್ ವೆಲ್ಡರ್, ಹೆನ್ರಿ ಸ್ಕೂಲ್ ಕ್ರಾಫ್ಟ್, ಇ.ಸಾಲ್ವರ್ತೆ ಮುಂತಾದವರು ಆ ದೇಶದ ಪ್ರಾಚೀನ ಜನಜೀವನದ ಸಾಂಸ್ಕೃತಿಕ, ಐತಿಹಾಸಿಕ ಮಾಹಿತಿಯನ್ನು ಪಡೆಯಲು ಹೆಸರುಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಂಡು ಆ ಮೂಲಕ ಮಹತ್ವದ ಕೃತಿಗಳನ್ನು ಬರೆದರು. ಈ ಶತಮಾನದ ಪೂರ್ವಾರ್ಧದಲ್ಲಿ ವಾರನ್‌ಅಪ್‌ಹ್ಯಾಮ್, ಲೂಯಿಸ್ ಪೌಂಡ್ ಮೊದಲಾದವರ ಮಾರ್ಗದರ್ಶನದಿಂದ ಸ್ಥಳನಾಮಾಧ್ಯಯನ ವಿಶ್ವವಿದ್ಯಾಲಯದ ಮಟ್ಟಕ್ಕೆ ಬರುವಂತಾಯಿತು. ೧೯೨೮ರಲ್ಲಿ ಲಿಲಿಯನ್ ಲಿಂಡರ್ ಫಿಟ್ಜ್ ಪ್ಯಾಟ್ರಿಕ್ ಎನ್ನುವವರು ಡಾಕ್ಟರೇಟ್ ಪದವಿಗಾಗಿ ನೆಬ್ರೆಸ್ಕಾ ಸ್ಥಳನಾಮಗಳ ಬಗೆಗೆ ಸಂಶೋಧನೆ ಮಾಡಿದರು. ಅನಂತರ ಅಯೋವಾ, ಅಲೆನ್‌ವಾಕರ್ ರೀಡ್, ಮಿಸ್ಸೋರಿ, ರಾಬರ್ಟ್ ಎಲಾ ರ್‍ಯಾಮಸೇ ಮುಂದುವರೆಸಿದರು. ೧೯೩೮ರಲ್ಲಿ ಹ್ಯಾರಿಮೋರ್ಗನ್ ಆಯರ್ಸ್ ಅವರ ನೇತೃತ್ವದಲ್ಲಿ ಅಮೇರಿಕಾ ಸ್ಥಳನಾಮಸಂಸ್ಥೆಯು ಸ್ಟೀವರ್ಟ್, ಎಹ್ರಾನ್ .ಸ್ಟೆರ್ಗರ್, ಜೆ.ಟಿ.ಲಿಂಕ್, ಬರ್ಡ್ ಗ್ರಾಂಗರ್, ಇ.ವಾಲೇಸ್, ಮ್ಯಾಕ್ ಮುಲನ್ ಮುಂತಾದ ತಜ್ಞರಿಂದ ಈ ಕ್ಷೇತ್ರದ ನಿರಂತರ ಕೃಷಿಯನ್ನು ಮಾಡಲು ಪ್ರೇರೇಪಿಸಿತು. ಈ ಸಂಸ್ಥೆಯು ಅನೇಕ ವಿದ್ವಾಂಸರನ್ನೊಳಗೊಂಡು ಪತ್ರಿಕೆಯನ್ನು ಬಿಡುಗಡೆಗೊಳಿಸಿ, ಆ ಮೂಲಕ ಅತ್ಯಮೂಲ್ಯ ಬರೆಹಗಳನ್ನು ನೀಡಿತು. ೧೮೮೫ರ ಹೊತ್ತಿಗೆ ಸ್ಥಳನಾಮ ಅಧ್ಯಯನದ ಪ್ರಯೋಜನ, ರೂಪ ಸ್ವರೂಪಗಳ ಬಗ್ಗೆ ಮಹತ್ವದ ನಿರ್ಣಯಗಳನ್ನು ಮಂಡಿಸಿತು.

ಸ್ಥಳನಾಮಾಧ್ಯಯನ ಮೊದಲು ಆರಂಭವಾದದ್ದು ಪಾಶ್ಚಾತ್ಯ ರಾಷ್ಟ್ರದಲ್ಲಿಯೆಂಬುದಂತೂ ಖಚಿತ ಸಂಗತಿ. ಭಾರತದಲ್ಲಿಯೂ ಈ ಅಧ್ಯಯನ ಆರಂಭವಾಯಿತು. ಅಧಿಕೃತವಾಗಿ ಅಧ್ಯಯನದ ಆರಂಭಕ್ಕೆ ಮುಂಚೆ ದೇಶೀಯ ವಿದ್ವಾಂಸರು ಅಲ್ಲಲ್ಲಿ ದಾಖಲಿಸಿದ ಮಾಹಿತಿಗಳೂ ಮುಖ್ಯವೆಂದೆನಿಸಿವೆ.

ಅಪ್ಪಯ್ಯದೀಕ್ಷಿತನ 'ನಾಮಸಂಗ್ರಹಮಾಲ'ದಲ್ಲಿ ಅನೇಕ ಹೆಸರುಗಳ ವಿವರಣೆಯಿದೆ. ಅಲ್ಲದೇ ಗ್ರಾಮಗಳಲ್ಲಿ ದೊರೆಯುವ ಸ್ಥಳಪುರಾಣ ಕೃತಿಗಳಲ್ಲಿ ಈ ರೀತಿಯ ಉಲ್ಲೇಖಗಳಿರುವುದು ಗಮನೀಯ ಅಂಶ. ಪಾಣಿನಿಯು

ಭಾಷಾ ವ್ಯಾಖ್ಯಾನದ ಮೂಲಕ ಸ್ಥಳಗಳಿಗೆ ವ್ಯಾಖ್ಯಾನವನ್ನು ನೀಡಿದ್ದುಂಟು. ಈಚೆಗೆ ಎಚ್.ಬಾಲಲೋಚನ ೧೮೨೩ ರಲ್ಲಿ 'Contribution of place names to the geography and history of Bengal' ಎಂಬ ಲೇಖನದಲ್ಲಿ ಸ್ಥಳನಾಮಾಧ್ಯಯನದ ಸಾಧ್ಯತೆಗಳನ್ನು ತಿಳಿಸಿದ್ದಾರೆ. ರಾಮ್ ಕೋಮಲ್ ಸೇನ್ ೧೮೩೪ರಲ್ಲಿ 'Dictionary in English and Bengali' ಎಂಬ ಸ್ಥಳನಾಮಕೋಶವನ್ನು ಸಿದ್ಧಪಡಿಸಿದ್ದಾರೆ. ೧೮೭೭ರ ಅವಧಿಯಲ್ಲಿ ಗುಂಡರ್ಟ್ ಕೇರಳದ ಸ್ಥಳನಾಮಗಳನ್ನು ಮಲೆಯಾಳಿ ನಿಘಂಟಿನಲ್ಲಿ ದಾಖಲಿಸಿದ್ದಾರೆ.

Asiatic society of Bengali and Bombay, Mythic society of India, Indian Antiqeuary and anuals of oriental research' ನವರು ನಾಮಗಳಿಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಅಲ್ಲದೇ ಆರ್.ಪಿ.ಬ್ರಾನ್‌ಪಿಲ್, ಆರ್.ಎಸ್.ವೈಟ್ ವೆಯ್ಸ (೧೮೯೬), ಪದ್ಮನಾಭ ಮೆನನ್ (೧೯೦೨), ಜೆ.ಎಫ್, ಫ್ಲೀಟ್, ರೆವರೆಂಡ್ ಪೆರಾರ್ಡ್‌ಹಾಹಾನ್, ಹಯವದನರಾವ್, ಎಸ್.ಕೆ.ಚಟರ್ಜಿ, ಎನ್.ಕೆ.ಬೋಸ್, ಹಿರಲಾಲ್, ಸಿ.ನಾರಾಯಣರಾವ್, ಸೇತುಪಿಳ್ಳೈ, ನಾರಾಯಣರೆಡ್ಡಿ, ತ್ಯಾಗರಾಜು ಮುಂತಾದವರು ಸ್ಥಳನಾಮಗಳ ಅಧ್ಯಯನವನ್ನು ಆರಂಭಿಸಿದರು. ದ್ರಾವಿಡ ಸ್ಥಳನಾಮಗಳ ನಿಘಂಟು ಶಾಸನೋಕ್ತ ನಾಮಗಳು, ಭೌಗೋಳಿಕ ಮಹತ್ವ ಹೀಗೆ ಹಲವಾರು ದೃಷ್ಟಿಯಿಂದ ಅಧ್ಯಯನಕ್ಕೆ ಮಾರ್ಗಹಾಕಿದರು.

ಭಾರತದಲ್ಲಿ ಎಸ್.ಡಿ.ಸಂಕಾಲಿಯಾ ಸ್ಥಳನಾಮ ಅಧ್ಯಯನಕ್ಕೆ ಭದ್ರವಾದಂತಹ ಬುನಾದಿಯನ್ನು ನಿರ್ಮಿಸಿದರು. ಸ್ಥಳನಾಮಗಳ ಪೂರ್ವಾಪರ ಪ್ರತ್ಯಯಗಳನ್ನು ಸ್ಥೂಲವಾಗಿ ಅಧ್ಯಯನಮಾಡಿ, ಧಾರ್ಮಿಕ, ಭೌಗೋಳಿಕ, ಸಾಂಸ್ಕೃತಿಕ, ಭಾಷಿಕ ಅಂಶಗಳ ಮೂಲಕ ವಿವರಿಸಬಹುದೆಂದು ಮಾದರಿಯನ್ನು ರೂಪಿಸಿಕೊಟ್ಟರು. ಸಂಕಾಲಿಯಾ ಅವರು ಈ ಕ್ಷೇತ್ರದಲ್ಲಿ ಸೂಕ್ಷ್ಮವಾದ ಅಧ್ಯಯನ ಕೈಗೊಂಡು ಮಹತ್ತರವಾದಂತಹ ರೂಪುರೇಶೆಗಳನ್ನು ಮುಂದಿನ ಅಧ್ಯಯನಕಾರರಿಗೆ ತೋರಿಸಿಕೊಟ್ಟರು. ಭಾರತದಲ್ಲಿ ಸ್ಥಳನಾಮ ಅಧ್ಯಯನ ಅತ್ಯಂತ ಪ್ರಗತಿದಾಯಕವಾಗಿ ನಡೆದದ್ದು ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳಲ್ಲಿ. ನಾಚಿಮುತ್ತು, ಸೇತುಪಿಳ್ಳೈ, ನಾರಾಯಣರೆಡ್ಡಿ, ಗಂಗಾಧರರಾವ್ ಮುಂತಾದ ವಿದ್ವಾಂಸರು ವಿಶ್ವವಿದ್ಯಾಲಯದಲ್ಲಿ ಸ್ಥಳನಾಮ ಕುರಿತು ಸಂಶೋಧನೆಯನ್ನು ಕೈಗೊಂಡು ಆ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಆಂಧ್ರಪ್ರದೇಶದಲ್ಲಿ ಜಿಲ್ಲಾವಾರು ಗ್ರಾಮನಾಮಗಳ ಅಧ್ಯಯನದಿಂದ ಸಂಶೋಧನಾ ನಿಬಂಧಗಳನ್ನು ರಚಿಸಲಾಯಿತು.

ಕನ್ನಡದಲ್ಲಿ ಸ್ಥಳನಾಮಗಳ ಬಗೆಗೆ ಆರಂಭದಲ್ಲಿ ಹೆಚ್ಚಾಗಿ ಅಧ್ಯಯನ ನಡೆಯಲಿಲ್ಲ. ಕಿಟೆಲ್ ನಿಘಂಟು ಕೆಲವು ಊರುಗಳ ಹೆಸರುಗಳನ್ನು ಗುರುತಿಸುತ್ತದೆಯೇ ಹೊರತು, ಅವುಗಳ ನಿಷ್ಪತ್ತಿಯ ಬಗ್ಗೆ ತಟಸ್ಥವಾಗಿದೆ. ಹಯವದನರಾಯರು ಮೈಸೂರು ಗೆಝುಟಿಯರ್‌ನಲ್ಲಿ ಕೆಲವು ನಾಮಗಳನ್ನು ಕುರಿತು ನಡೆಸಿರುವ ವಿಶ್ಲೇಷಣೆ ಅಧ್ಯಯನಕಾರರಿಗೆ ಮಾರ್ಗಸೂಚಿಯಾಗಿವೆ. ಮಾಸ್ತಿ (ಊರಹೆಸರುಗಳು) ದೇಜಗೌ, ಆರ್.ಸಿ.ಹಿರೇಮಠ ಮುಂತಾದವರು ಕೆಲವು ಲೇಖನಗಳ ಮೂಲಕ ಸ್ಥಳನಾಮ ಶಾಸ್ತ್ರದ ನಿರ್ದಿಷ್ಟ ಮಾಹಿತಿಯನ್ನು ನೀಡಿದರು.

ಸ್ಥಳನಾಮಗಳ ಮೇಲೆ ಅತ್ಯಂತ ಮಹತ್ವದ ಕೆಲಸ ಮಾಡಿದ ಶಂಬಾಜೋಶಿಯವರು 'ಎಡೆಗಳು ಹೇಳುವ ಕಂನಾಡ ಕಥೆ' ಕೃತಿಯ ಹಿನ್ನೆಲೆಯಲ್ಲಿ ಕನ್ನಡ ಸಂಸ್ಕೃತಿಯ ಭೌಗೋಳಿಕ ಎಲ್ಲೆಯನ್ನು ಹುಡುಕುತ್ತಾ ಹೊರಟು

ಇತಿಹಾಸ, ಪುರಾಣ, ಜಾನಪದ, ಧರ್ಮ, ಜನಾಂಗವನ್ನು ಸ್ಥಳನಾಮಗಳ ಮುಖೇನ ಗುರುತಿಸುವಂತಹ ಮಹತ್ವದ ಅಧ್ಯಯನ ಮಾಡಿದರು. ಕನ್ನಡ ಸಂಸ್ಕೃತಿಯನ್ನು ಉತ್ತರಭಾರತದಲ್ಲಿಯೂ ಹುಡುಕ ಹೊರಡುವ ಶಂಬಾ ಮೂಲತಃ ಸ್ಥಳನಾಮಗಳನ್ನೇ ಪ್ರಮುಖ ಆಕರಗಳನ್ನಾಗಿ ಬಳಸುತ್ತಾರೆ. ಸ್ಥಳನಾಮಗಳ ವರ್ಗೀಕರಣ, ಸಾಂಸ್ಕೃತಿಕ ಮಹತ್ವವನ್ನು ಅವರು ಎತ್ತಿ ಹೇಳಿದರು. ಅಂತೆಯೇ ಎಂ.ಎಂ.ಕಲ್ಬುರ್ಗಿ, ಎಂ.ಚಿದಾನಂದಮೂರ್ತಿ, ಆರ್.ಸಿ.ಹಿರೇಮಠ, ಹಂಪನಾ, ಎಂ.ಬಿ.ನೇಗಿನಹಾಳ್, ವಿ.ಗೋಪಾಲಕೃಷ್ಣ, ಕೆಮ್ತೂರು ರಘುಪತಿಭಟ್ಟ, ಪಂಜೆ, ಸೇಡಿಯಾಪು ಕೃಷ್ಣಭಟ್ಟ ದೇಜಗೌ, ಮುಂತಾದ ವಿದ್ವಾಂಸರು ಸ್ಥಳನಾಮಕ್ಷೇತ್ರಕ್ಕೆ ತಾತ್ವಿಕ ರೂಪುರೇಶೆಯನ್ನು ನೀಡಿದರು.

ಕೆಮ್ತೂರು ರಘುಪತಿಭಟ್ಟ ಅವರು 'ತುಳುನಾಡಿನ ಸ್ಥಳನಾಮಗಳು' ಎಂಬ ಪ್ರಬಂಧವನ್ನು ಸಿದ್ಧಪಡಿಸಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದರು. ಇದು ಕನ್ನಡದ ಸ್ಥಳನಾಮ ಕುರಿತಾದ ಸಂಶೋಧನಾ ನಿಬಂಧವಾಗಿದೆ. ಚಿದಾನಂದಮೂರ್ತಿ, ಎಂ.ಎಂ.ಕಲ್ಬುರ್ಗಿಯವರ ಲೇಖನಗಳು, ಕೃತಿಗಳು ಅತ್ಯಂತ ಮಹತ್ವದ ಅಂಶಗಳನ್ನು ಈ ಕ್ಷೇತ್ರದ ಕುರಿತಾಗಿ ಹೇಳಿವೆ. ಮುಂದೆ ಸ್ಥಳನಾಮ ಅಧ್ಯಯನಕಾರರಿಗೆ ಸೇಡಿಯಾಪು, ಆರ್ಕೆಮಣಿಪಾಲ, ಚಿದಾನಂದಮೂರ್ತಿ, ಎಂ.ಎಂ.ಕಲ್ಬುರ್ಗಿ, ಆರ್.ಸಿ.ಹಿರೇಮಠ ಅವರು ಆ ಕ್ಷೇತ್ರದಲ್ಲಿ ಮಾಡಬಹುದಾದ ಕೆಲಸಗಳು, ಪಾಲಿಸಬಹುದಾದ ವಿಧಿವಿಧಾನಗಳನ್ನು ಹೇಳಿದರು.

ಮೈಸೂರಿನಲ್ಲಿ ೧೯೭೮ರಲ್ಲಿ Place name society of India ಎಂಬ ಸ್ಥಳನಾಮ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ದೇಜಗೌ ಅವರು ಭಾರತದಾದ್ಯಂತ ಸ್ಥಳನಾಮ ಸಂಶೋಧನೆಗೆ ಗಮನಹರಿಸಿದರು. ಭೌಗೋಳಿಕ ಹಿನ್ನೆಲೆಯಲ್ಲಿ ಆಯಾ ಪ್ರಾದೇಶಿಕ ವೈಶಿಷ್ಟ್ಯದೊಂದಿಗೆ ಸ್ಥಳನಾಮಗಳ ಕುರಿತು ಈ ಸಂಸ್ಥೆ ಅನೇಕ ಲೇಖನಗಳನ್ನು ಪ್ರಕಟಿಸುತ್ತಿರುವುದು ಗಮನಾರ್ಹ ಅಂಶವಾಗಿದೆ. ವಾರ್ಷಿಕ ಅಧಿವೇಶನಗಳನ್ನು ಈ ಸಂಸ್ಥೆ ಏರ್ಪಡಿಸಿ ಸ್ಥಳನಾಮಗಳ ವಿಚಾರಗೋಷ್ಠಿಯನ್ನು ನಡೆಸುತ್ತದೆ.

ಈಚೆಗೆ ಕರ್ನಾಟಕದಲ್ಲಿ ಸ್ಥಳನಾಮ ಅಧ್ಯಯನವು ವ್ಯಾಪಕವಾಗಿ ನಡೆಯುತ್ತಿದೆ. ೮೦ರ ದಶಕದಿಂದೀಚೆಗೆ ಜಿಲ್ಲಾವಾರು ಅಧ್ಯಯನಗಳೇ ಅಲ್ಲದೆ ತಾಲ್ಲೂಕುವಾರು ಸ್ಥಳನಾಮಗಳನ್ನು ಅಧ್ಯಯಕ್ಕೊಳಪಡಿಸಿ ವಿಶ್ವವಿದ್ಯಾಲಯಗಳಿಗೆ ಸಂಶೋಧನಾ ಪ್ರಬಂಧಗಳನ್ನು ಸಲ್ಲಿಸಲಾಗಿದೆ. ಸಂಸ್ಕೃತಿಯ, ಸಮಾಜದ, ಭಾಷಿಕ, ಐತಿಹಾಸಿಕ, ರಾಜಕೀಯ, ಭೌಗೋಳಿಕ ನೆಲೆಯಲ್ಲಿ ಇನ್ನೂ ವ್ಯಾಪಕವಾದಂತಹ ಅಧ್ಯಯನ ಆಗಬೇಕಾಗಿದೆ.

ಈವರೆಗಿನ ಕನ್ನಡದ ಸ್ಥಳನಾಮಗಳ ಕುರಿತ ಅಧ್ಯಯನವನ್ನು ನಕ್ಷೆಯ ಮೂಲಕ ಹೀಗೆ ಗುರುತಿಸಬಹುದು. (ಇದು ಸಮಗ್ರವಲ್ಲ, ಉಪಲಬ್ಧ ಮಾಹಿತಿಯನ್ನರಿತು ಪಟ್ಟಿ ಮಾಡಲಾಗಿದೆ)

# ಸ್ಥಳನಾಮ ಅಧ್ಯಯನ

## ಸ್ಥಳನಾಮ ಸಿದ್ಧಾಂತ ಕುರಿತಾದ ಬರೆಹ

೧. ಆರಂಭದಲ್ಲಿ ಸ್ಥಳನಾಮಕ್ಷೇತ್ರದ ಪರಿಚಯ, ವಿಧಿ ವಿಧಾನಗಳು, ಆ ಶಾಸ್ತ್ರದ ಪ್ರಸ್ತುತತೆಯ ಬರೆಹ

೨. ಸಂಸ್ಕೃತಿಯ ಆಕರಗಳಾಗಿ ಸ್ಥಳನಾಮಗಳು (ಉದಾ: ಶಂಬಾಜೋಶಿಯವರ ಅಧ್ಯಯನಗಳು)

೩. ಭಾಷಿಕ ಘಟಕಗಳಾಗಿ ಸ್ಥಳನಾಮಗಳು
   - ವರ್ಣಾತ್ಮಕ ಮಾದರಿ — ನಿಷ್ಪತ್ತಿಗೆ ಹೆಚ್ಚು ಮಹತ್ವ
   - ಕೊಂಚ ಸಾಮಾಜಿಕ ಅಧ್ಯಯನ — ಹೆಸರಿನ ಸಾಮಾಜಿಕ ಹಿನ್ನೆಲೆಗೆ ಮಹತ್ವ

   (ಸೇಡಿಯಾಪು, ಗೋವಿಂದಪೈ, ಆರ್.ಸಿ.ಹಿರೇಮಠ, ಚಿದಾನಂದಮೂರ್ತಿ, ಕಲ್ಬುರ್ಗಿಯವರ ಅಧ್ಯಯನಗಳು)

೪. ಮೌಖಿಕ ಆಕರಗಳಾಗಿ ಸ್ಥಳನಾಮಗಳು
   - ಐತಿಹ್ಯ
   - ಸ್ಥಳಪುರಾಣ
   - ಕಥೆ
   - ಪವಾಡಗಳು
   - ಇತರೆ

   (ಜಾನಪದ ಅಧ್ಯಯನಕಾರರು ಈ ನೆಲೆಯಲ್ಲೇ ನಾಮಗಳನ್ನು ನೋಡಿದರು)

೫. ಐತಿಹಾಸಿಕ ಆಕರಗಳಾಗಿ ಸ್ಥಳನಾಮಗಳು
   - ಪುರಾತತ್ವಕ್ಕೆ ಸಂಬಂಧಿಸಿ — ನಿಷ್ಪತ್ತಿಗೆ ಮಹತ್ವವಿಲ್ಲ — ನಿರ್ವಸಿತ ಸ್ಥಳನಾಮಗಳಿಗೆ ಮಹತ್ವ (ಬೂದಿದಿಬ್ಬ, ಕಣವೆ, ಕೈಗಾರಿಕೆ,ನೆಲೆಗಳು)
   - ಚರಿತ್ರೆಗೆ ಸಂಬಂಧಿಸಿ — ನಿಷ್ಪತ್ತಿಗೆ ಮಹತ್ವವಿಲ್ಲ — ಶಾಸನೋಕ್ತ ಹೆಸರುಗಳಿಗೆ ಮಹತ್ವ, (ವಿಷಯ,ನಾಡು,ಗ್ರಾಮ,ಆಡಳಿತವಿಭಾಗಗಳು)

   (ಕೆ.ವಿ.ರಮೇಶ, ನರಸಿಂಹಮೂರ್ತಿ, ಸೂರ್ಯನಾಥ್ ಕಾಮತ್ ಮುಂತಾದವರ ಅಧ್ಯಯನಗಳು)

೬. ಭೌಗೋಳಿಕ ಅಧ್ಯಯನ (ಸ್ಥಳನಾಮಗಳ ಮೂಲಕ ಈ ಅಧ್ಯಯನ ಭಾರತದಲ್ಲಿ ಅಷ್ಟಾಗಿ ನಡೆಯಲಿಲ್ಲ)

೭. ಈಚಿನ ಅಧ್ಯಯನಗಳಲ್ಲಿ ಸ್ಥಳನಾಮಗಳ ಆಧುನಿಕ ಸಂದರ್ಭದ ಪ್ರಸ್ತಾಪ. (ನಗರ, ಬೀದಿ, ಪೇಟೆಗಳ ಹೆಸರುಗಳ ಅಧ್ಯಯನ, ಇಂಗ್ಲಿಷಿನ ಪ್ರಭಾವ ಕುರಿತು)

೮. ಗ್ರಾಮ, ನಿರ್ವಸಿತ, ನಿರ್ವಸತಿ ನಾಮಗಳಿಗೆ ಮಹತ್ವ

## ಸಂಶೋಧನಾ ಅಧ್ಯಯನಗಳು

- ಎಂ.ಫಿಲ್ ಅಧ್ಯಯನಗಳು
- ಪಿಎಚ್.ಡಿ ಅಧ್ಯಯನಗಳು

೧. ಆರಂಭಿಕ ಅಧ್ಯಯನಗಳಲ್ಲಿ ಈ ಕ್ಷೇತ್ರದ ಸಮಗ್ರ ಪರಿಚಯ

೨. ಜಿಲ್ಲೆ, ತಾಲ್ಲೂಕುವಾರು ಸ್ಥಳನಾಮಗಳ ಅಧ್ಯಯನ

೩. ಸಾಂಸ್ಕೃತಿಕ, ಸಾಮಾಜಿಕ, ಭಾಷಿಕ, ಐತಿಹಾಸಿಕ, ಜಾನಪದೀಯ ಅಂಶಗಳನ್ನು ಸಂಕ್ಷಿಪ್ತವಾಗಿ ನೋಡಲಾಗಿದೆ.

೪. ಆರಂಭಿಕ ಅಧ್ಯಯನಗಳು
   a. ವರ್ಣಾತ್ಮಕ ಭಾಷಿಕ ಅಧ್ಯಯನಕ್ಕೆ ಮಹತ್ವ ನೀಡಿದವು
   b. ಸ್ಥಳನಾಮಗಳ ಸಾಮಾಜಿಕ, ಭಾಷಿಕ ನೆಲೆಯಲ್ಲಿ ಈವರೆಗೆ ಅಧ್ಯಯನ ನಡೆದುದು ಕಡಿಮೆ
   c. ನಿಷ್ಪತ್ತಿಯ ವಿವರಗಳಿಗೆ ಹೆಚ್ಚು ಮಹತ್ವ
   d. ಸಾಂಸ್ಕೃತಿಕ, ಸಾಮಾಜಿಕ, ಮೌಖಿಕ, ಐತಿಹಾಸಿಕ ಅಂಶಗಳನ್ನು ಕೇವಲ ಪ್ರಾಸ್ತಾವಿಕವೆಂಬಂತೆ ಸಂಕ್ಷಿಪ್ತವಾಗಿ ನೋಡಲಾಗಿದೆ.
   e. ಅಧ್ಯಯನದ ಕೊನೆಗೆ ಸ್ಥಳನಾಮ ನಿಷ್ಪತ್ತಿಯ ಕೋಶದ ಬಗ್ಗೆ ಒತ್ತಿ ಹೇಳಲಾಗಿದೆ.

೫. ಕ್ಷೇತ್ರಕಾರ್ಯಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ.

೬. ಭೌಗೋಳಿಕ ವರ್ಗೀಕರಣ ಅಲ್ಲಲ್ಲಿಯೇ ಕೊಡಲಾಗಿದೆ.

೭. ನಿಷ್ಪತ್ತಿಯ ವಿವರಗಳು ಇಂದಿಗೂ ಮುಂದುವರೆದಿದೆ.

೮. ನಿರ್ವಸಿತ, ನಿರ್ವಸತಿ ನಾಮಗಳಿಗೆ ಅಷ್ಟಾಗಿ ಮಹತ್ವ ನೀಡಿಲ್ಲದಿರುವುದು.

೯. ಸ್ಥಳನಾಮಗಳ ಆಧುನಿಕ ಸಂದರ್ಭವನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ.

೨.೨. ಎಡೆಗಳು ಹೇಳುವ ಕಂನಾಡ ಕತೆ - ಡಾ. ಶಂ.ಬಾ. ಜೋಶಿ - ೧೯೪೭

ಎಡೆಗಳು ಹೇಳುವ ಕಂನಾಡ ಕತೆ' ಶಂ.ಬಾ ಅವರ ಮಹತ್ವದ ಕೃತಿ. ಸ್ಥಳನಾಮಗಳನ್ನೇ ಪ್ರಧಾನವಾಗಿ ಅಭ್ಯಸಿಸಿ ಅವುಗಳಲ್ಲಿ ಅಂತರ್ಗವಾಗಿರುವ ಅಮೂಲ್ಯವಾದ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಯ ಪಡಿಸುವ ನೆಲೆಯಲ್ಲಿ ಈ ಸಂಶೋಧನೆ ಕ್ರಿಯಾತ್ಮಕವಾಗಿದೆ. "ಎಡೆಗಳ ಹೆಸರಿನ ಹಿನ್ನೆಲೆಯಲ್ಲಿ ನಮ್ಮ ನಾಡಿನ ರೂಢಿ, ಸಂಪ್ರದಾಯ ಮತ್ತು ಪೂರ್ವ ಪರಂಪರೆಗಳನ್ನು ಮಾನವಸಮಾಜ ವಿಕಾಸಶಾಸ್ತ್ರದ ಬೆಂಬಲದಿಂದ ಹೊಂದಿಸಿ ಹೇಳುವುದೇ ಈ ಕೃತಿಯ ವಿಶಿಷ್ಟತೆ.

ಈ ಕೃತಿಯ ವೈಶಿಷ್ಟ್ಯ ಅದರ ಅಧ್ಯಯನ ಸ್ವರೂಪದಲ್ಲಿದೆ. ೧೯೪೭ರ ವೇಳೆಗೆ ಕನ್ನಡದಲ್ಲಿ ಸ್ಥಳನಾಮಗಳ ಅಧ್ಯಯನದಿಂದ ಕರ್ನಾಟಕದ ಸಂಸ್ಕೃತಿಯನ್ನು ರೂಪಿಸುವ ಪ್ರಯತ್ನವೊಂದು ನಡಿದಿತ್ತೆನ್ನುವುದು ಮುಖ್ಯವೆನಿಸುತ್ತದೆ. ನಾಡಿನ ಭವ್ಯ ಪರಂಪರೆಯನ್ನು ನಾಡವರಿಗೆ ತಿಳಿಸಿಕೊಡುವುದು ಅಂದು ಮೌಲ್ಯವೆನಿಸಿತ್ತು. ಆದ್ದರಿಂದ ಶಂಬಾ ಈ ಕಾರ್ಯವನ್ನು ಶ್ರದ್ಧೆ ಹಾಗೂ ಉತ್ಸಾಹದಿಂದ ಮಾಡಿದರು. ಸ್ಥಳನಾಮಗಳ ಅಧ್ಯಯನ ಈಗಿನಷ್ಟು ವೈಜ್ಞಾನಿಕವಾಗಿ ಅಲ್ಲದಿದ್ದರೂ, ದೊರೆಯುವಷ್ಟು ಮಾಹಿತಿಗಳ ಮೂಲಕ ಪ್ರಾಮಾಣಿಕವಾಗಿ ನಡೆದಿದ್ದಿತು. ಇದು ಮೆಚ್ಚಬೇಕಾದ ಅಂಶ.

ಶಂಬಾ ಅವರು ಸ್ಥಳನಾಮ ವರ್ಗೀಕರಣವನ್ನು ೧. ಪ್ರಾಣಿಗಳಿಂದ ೨. ಗಿಡಗಳಿಂದ ೩. ದೇಹದ ಅಂಗಾಂಗಗಳಿಂದ ೪. ಮನೆಗಳಿಂದ ೫. ಗ್ರಹಾದಿಗಳಿಂದ ೬. ಬೇಸಾಯದಿಂದ ೭. ದೇವತಾದಿಗಳಿಂದ ೮. ವ್ಯಕ್ತಿಗಳಿಂದ ೯. ಕಾಲದಿಂದ ಬಂದ ಹೆಸರುಗಳೆಂದು ಮುಂತಾಗಿ ೨೩ ರೀತಿಯ ವಿಭಜನೆಯನ್ನು ಮಾಡಿದ್ದಾರೆ. ಇದು ಅತಿವ್ಯಾಪ್ತಿಯಾದರೂ ಗುರುತಿಸುವ ಉಪಕ್ರಮ ಮಾದರಿಯಾಗಿ ನಿಲ್ಲುತ್ತದೆ. ಶಂಬಾ ಅವರ ಈ ಅಧ್ಯಯನಕ್ಕೆ ಕ್ಷೇತ್ರಕಾರ್ಯದ ಕೊರತೆಯಿರುವುದರಿಂದ ಊಹಾತ್ಮಕವಾದ ನಿಲುವುಗಳು ವರ್ಗೀಕರಣದಲ್ಲಿ ಸೇರಿಕೊಂಡಿವೆ. ವರ್ಗೀಕರಣಕ್ಕೆ ಹೇರಳವಾದ ಉದಾಹರಣೆಗಳನ್ನು ದಾಖಲಿಸಿದ್ದಾರೆ.

ಗ್ರಾಮ, ಊರು, ಪುರ ಎಂಬವು ಅಷ್ಟು ಪುರಾತನವಲ್ಲವೆನ್ನುವ ಶಂಬಾ ಅವರು ಮಾನವನು ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಚಯನಕ್ಕಾಗಿ ಅಲೆಮಾರಿಯಾಗಿದ್ದು ಅವನ ವಸತಿಸೂಚಕವಾದ ಹೆಸರು 'ಹಟ್ಟಿ' ಎಂದು ಊಹಿಸುವರು. ಈ ಶಬ್ದವು ದನಗಾರಿಕೆಯ ಬಾಳಿನ ದ್ಯೋತಕವಾಗಿದೆ. ಹಟ್ಟಿಗಳೇ ನಮ್ಮನಾಡಿನ ಆರಂಭಕಾಲದ ವಸತಿಗಳೆಂದು ಊಹಿಸುವರು. ಹಟ್ಟಿಯ ಮೂಲರೂಪ ಪಟ್ಟಿ ಎಂದೂ, ಇದಕ್ಕೆ ತಮಿಳಿನಲ್ಲಿ ಮನೆ, ಹಳ್ಳಿ ಎಂಬ ಅರ್ಥವಿದೆಯೆಂದು ವಾದಿಸುತ್ತಾರೆ.

ಕುಂತಲ - ಕರ್ನಾಟಕದ ಬಗ್ಗೆಯೂ ಚರ್ಚಿಸುತ್ತಾರೆ. ಭಾರತದಲ್ಲಿ ಆರ್ಯರು ಮತ್ತು ದ್ರಾವಿಡರಿಗಿಂತಲೂ ಮೊದಲು ವಾಸವಿದ್ದ ಜನ ಕೋಲರು ಮತ್ತು ಮುಂಡರು, ಕೋಲರು ಮತ್ತು ಮುಂಡರ ಹೆಸರಿನ ಸ್ಥಳಗಳು ಕಂನಾಡಿನಲ್ಲಿ ವಿಶೇಷವಾಗಿವೆ ಎಂದು ತಿಳಿಸಿಕೊಡುತ್ತಾರೆ. ಕರ್ನಾಟಕ ಮತ್ತು ಮಹಾರಾಷ್ಟ್ರದ ಸಂಬಂಧವನ್ನು, ಕನ್ನಡ ಮತ್ತು ಮರಾಠಿಯ ಮೂಲಕ ಭಾಷಿಕ, ಧಾರ್ಮಿಕ, ಸಾಮಾಜಿಕ ನಡವಳಿ, ಸಂಪ್ರದಾಯ ಮುಂತಾದವುಗಳೊಂದಿಗೆ ಸ್ಥಳನಾಮಗಳ ಮೂಲಕ ಅಂತರ್ ಸಂಬಂಧವನ್ನು ಬೆಸೆಯುತ್ತಾರೆ.

ಸ್ಥಳನಾಮಗಳು, ಸಾಮಾಜಿಕ ಇತಿಹಾಸದಲ್ಲಿ ಮನುಷ್ಯನನ್ನು ತಿಳಿಯಲು ಹೇಗೆ ಮಹತ್ವವಾಗಿವೆಯೆಂಬುದನ್ನು ವಿವರಿಸುತ್ತಾರೆ. ಪಟ್ಟಿ, ಪಾಡಿ, ವಾಡ - ಹಟ್ಟಿ ಮೊದಲಾದುವು ಗ್ರಾಮನಾಮದ ರೂಪಗಳು ಜನಾಂಗದ ವಾಸಸ್ಥಾನ ಸೂಚಕಗಳು ಎಂದು ಶಂಬಾ ತರ್ಕಿಸುತ್ತಾರೆ.

ಹೀಗೆ ಕನ್ನಡನಾಡಿನಲ್ಲಿ ಸ್ಥಳನಾಮಾಧ್ಯಯನದ ಬುನಾದಿಯನ್ನು ಹಾಕಿದ ಶಂಬಾ ಜೋಶಿಯವರು, ಆ ಮೂಲಕ ಕನ್ನಡ ಸಂಸ್ಕೃತಿಯನ್ನು ಉತ್ತರ ಭಾರತದಲ್ಲಿಯೂ ಕಂಡುಕೊಳ್ಳುವ ಪ್ರಯತ್ನ ಮಾಡಿದರು. ನಾಮಾಧ್ಯಯನಕ್ಕೆ 'ಎಡೆಗಳು ಹೇಳುವ ಕಂನಾಡ ಕತೆ' ಮೊದಲ ಆಕರ ಗ್ರಂಥವಾಗಿದೆ.

ಅದರಂತೆ 'ಕಣ್ಮರೆಯಾದ ಕನ್ನಡ ಮತ್ತು ಕನ್ನಡದ ನೆಲೆ', 'ಮಹಾರಾಷ್ಟ್ರದ ಮೂಲ', 'ಕಂನುಡಿಯ ಹುಟ್ಟು ಹಾಗೂ ಕನ್ನಡ ನುಡಿಯ ಜೀವಾಳ', 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಎಂಬ ಕೃತಿಗಳಲ್ಲಿಯೂ ಸ್ಥಳನಾಮಗಳ ಮೂಲಕ ಕನ್ನಡ ಭಾಷೆ, ಸಂಸ್ಕೃತಿ, ಭೌಗೋಳಿಕ ಎಲ್ಲೆಯನ್ನು ಗುರುತಿಸುವ ಚರ್ಚೆ ಮಾಡಿದ್ದಾರೆ. ಈ ದೃಷ್ಟಿಯಿಂದ ನಾಮಾಧ್ಯಯನಕ್ಕೆ ಜೋಶಿಯವರ ಈ ಎಲ್ಲ ಕೃತಿಗಳು ಬಹುಮುಖ್ಯವಾದ ಆಕರಗಳೆಂದು ಹೇಳಬಹುದು.

**೨.೩. ಚಿತ್ರದುರ್ಗದ ಬಖೈರು - ಸಂಗ್ರಹ - ಹುಲ್ಲೂರು ಶ್ರೀನಿವಾಸ ಜೋಯಿಸ - ೧೯೬೪**

ಈ ಕೃತಿಯಲ್ಲಿ ಚಿತ್ರದುರ್ಗ ಎಂಬ ಹೆಸರು ಬಂದಿದ್ದು' ಎಂಬ ಚಿಕ್ಕ ಲೇಖನವಿದೆ. ಕಾಮಗೇರೆ ವಂಶಸ್ಥ ಚಿತ್ರನಾಯ್ಕನು ಇಲ್ಲಿನ ಕಿಲ್ಲೆಯನ್ನು ಕಟ್ಟಿಸಿದ್ದರಿಂದ ಈ ಊರಿಗೆ ಚಿತ್ರದುರ್ಗವೆಂದಾಯಿತೆಂಬ ಪ್ರಸ್ತಾಪ ಬಖೈರಿನಿಂದ ಉಕ್ತವಾಗಿದೆ.

**೨.೪. ಸಂಶೋಧನ ತರಂಗ - ಸಂಪುಟ - ೨ - ಡಾ.ಎಂ.ಚಿದಾನಂದಮೂರ್ತಿ - ೧೯೭೦**

ಹರಿಹರ ಕ್ಷೇತ್ರ ಮತ್ತು ಹರಿಹರ ಕವಿಯ ಕಾಲ' ಎಂಬ ಲೇಖನದಲ್ಲಿ ಪ್ರಾಸ್ತಾವಿಕವೆಂಬಂತೆ ಹರಿಹರ ಸ್ಥಳನಾಮದ ಬಗ್ಗೆ ಬರೆದಿದ್ದಾರೆ. ಇದು ದಾವಣಗೆರೆಯ ತುಂಗಭದ್ರೆಯ ದಡದ ಮೇಲಿನ ಹರಿಹರ ನಗರವೇ ಆಗಿದ್ದು, ಹರಿ + ಹರ ಎಂಬುದು ಧರ್ಮಸಾಮರಸ್ಯದ ಸಂಕೇತ ಎಂದು ಶಾಸನಗಳ ಉಲ್ಲೇಖದಿಂದ ವಿವರಿಸಿದ್ದಾರೆ.

**೨.೫. ಕೆಲವು ದೇಶನಾಮಗಳು - ಸೇಡಿಯಾಪು ಕೃಷ್ಣಭಟ್ಟ - ೧೯೭೫**

ಸೇಡಿಯಾಪು ಅವರ ಈ ಕೃತಿ ಶಬ್ದಾರ್ಥ ವಿಶ್ಲೇಷಣೆಗೆ ಸಂಬಂಧಿಸಿದೆ. ನೇರವಾಗಿ ಸ್ಥಳನಾಮಾಧ್ಯಯನ ಹೇಳುವುದಿಲ್ಲವಾದರೂ, 'ತುಳುಶಬ್ದಾರ್ಥ ಮತ್ತು ಚೇರ, ಕೊಂಕಣ' ಹಾಗೂ 'ಪಾಂಡಿ ಮತ್ತು ಪಾಂಡ್ಯ' ಎಂಬ ಎರಡು ಲೇಖನಗಳಲ್ಲಿ ಐದು ಶಬ್ದಗಳ ವ್ಯುತ್ಪತ್ತಿ ವಿವೇಚನೆಯನ್ನು ವ್ಯಾಕರಣ, ಭಾಷಾಶಾಸ್ತ್ರ, ಉಪಭಾಷಾವಿವೇಚನೆ, ಸ್ಥಳನಾಮಗಳನ್ನು ಈ ಪುಸ್ತಕದಲ್ಲಿ ಹೇಳಲಾಗಿದೆ. ಅಳುಪ: ಕೊಂಕ: ಕೊಡಿಯಾಲ: ಪಾಂಡಿಚೇರಿ: ಭೂತಾಳ ಪಾಂಡ್ಯ: ಮೊದಲಾದ ಶಬ್ದಗಳನ್ನು ವಿವರಿಸುವಾಗ ತಮ್ಮ ವಾದಕ್ಕೆ ಸ್ಥಳನಾಮಗಳನ್ನು ಪೂರಕವಾಗಿ ಬಳಸಿಕೊಂಡಿದ್ದಾರೆ.

ನಾಮಾಧ್ಯಯನ ಕ್ಷೇತ್ರಕ್ಕೆ ಸೇಡಿಯಾಪು ಅವರ ಕೊಡುಗೆ ಗಮನೀಯವಾದುದು. ಶಂಬಾ ಅವರಂತೆ ಸಂಸ್ಕೃತಿಯ ಕಟ್ಟುವಿಕೆಯಲ್ಲಿ ಈ ಅಧ್ಯಯನದ ಮಹತ್ವವನ್ನು ಎತ್ತಿಹಿಡಿದರು.

**೨.೬. ಶ್ರವಣ ಬೆಳ್ಗೊಳ - ಡಾ.ಬಿ.ವಿ.ಶಿರೂರು - ೧೯೭೬**

ಇದು ಪಿಎಚ್.ಡಿ ನಿಬಂಧ. ಒಂದನೇ ಅಧ್ಯಾಯದಲ್ಲಿ ಶ್ರವಣಬೆಳ್ಗೊಳ ನಾಮವಿವೇಚನೆ ಎಂಬ ಉಪಾಧ್ಯಾಯದಲ್ಲಿ ಬೆಳ್ಗೊಳವನ್ನು ಕಟವಪ್ರಗಿರಿ: ಕಟ್ಪಪ್ಪಿನ್ದುರ್ಗ ಕಟ್ಬಪ್ಪು: ರಿಷಿಗಿರಿ: ತೀರ್ಥಗಿರಿ: ಚಂದ್ರಗಿರಿ: ಧವಳ ಸರೋವರ: ಸಿತತಟಾಕ: ಜಿನಗಿರಿ: ಅಭಿನವಪೌದನಪುರ: ಎಂಬ ಮುಂತಾದ ಹೆಸರುಗಳಿದ್ದವು. ಎಂದು ಶಾಸನ, ಕಾವ್ಯ: ಐತಿಹ್ಯ, ಸಂಸ್ಕೃತೀಕರಣ ಮುಂತಾದ ಆಧಾರಗಳನ್ನು ಒದಗಿಸಿ ಹೇಳಿದ್ದಾರೆ.

**೨.೭. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು**

**ಸಂ - ಲಕ್ಷ್ಮಣ ತೆಲಗಾವಿ. ಎಂ.ವಿ.ಶ್ರೀನಿವಾಸ - ೧೯೭೬**

ಜೋಯಿಸರು ಸಾಂದರ್ಭಿಕವಾಗಿ ಆಗಾಗ ಬರೆದ ನಲವತ್ತೇಳು ಲೇಖನಗಳ ಸಂಗ್ರಹವಿದು. ಐತಿಹಾಸಿಕ ಮಹತ್ವದ ಘಟನೆಗಳಿಗೆ ಕಾರಣವಾದ ಅನೇಕ ಸಂಗತಿಗಳನ್ನು ಬರೆಯುವಾಗ ಅಷ್ಟೇ ಮಹತ್ವಪಡೆದ ಸ್ಥಳನಾಮಗಳನ್ನು ಇವರು ಪ್ರಸ್ತಾಪಿಸಿದ್ದಾರೆ. ಉಚ್ಚಂಗಿ: ಮಧುರಾಪುರಿ: ರಾಮಗಿರಿ ಆಶ್ರಮ: ಬಳ್ಳಾರಿ: ಮಂತ್ರಾಲಯ: ಆದವಾನಿ: ಆಲೂರು: ಉಜ್ಜಯಿನಿ: ಇಂಗಳದಾಳು: ಮುಂತಾದ ಊರುಗಳ ಚರಿತ್ರೆಯನ್ನು ಹೇಳುವುದರೊಂದಿಗೆ, ಆ ಸ್ಥಳಕ್ಕಿರುವ ಐತಿಹ್ಯ, ಕಥೆ, ಭೌಗೋಳಿಕ ವಿವರಗಳನ್ನೂ ಕೊಡುತ್ತಾರೆ. ಈ ಎಲ್ಲವನ್ನು ಸಮೀಕ್ಷಿಸುವ ಮೂಲಕ ಚಾರಿತ್ರಿಕ ಆಧಾರ ನೀಡುತ್ತಾರೆ. ಕನ್ನಡನಾಡಿನ ಊರುಗಳು' ಎಂಬ ಲೇಖನದಲ್ಲಿ ಕುಂತಲನಾಡು ಅದರ ವಿಸ್ತಾರ, ಭೌಗೋಳಿಕ ಎಲ್ಲೆಯನ್ನು ಗುರುತಿಸುವ ಪ್ರಯತ್ನದೊಂದಿಗೆ ಶೆಟ್ಟಿಯಕೆರೆ, ಹುಳಿಯೂರು, ಅನಂತಪುರ, ನಗರ, ಸಂತೇ ಬೆನ್ನೂರು, ಬೆಲಗೂರು, ಹಂಪೆ ಮುಂತಾದ ಸ್ಥಳಗಳ ಚಾರಿತ್ರಿಕ ಮಹತ್ವ, ನಿಷ್ಪತ್ತಿ, ಶಾಸನೋಕ್ತ ಹೆಸರು ಹೀಗೆ ರಾಶಿರಾಶಿ ಆಧಾರ ನೀಡಿದ್ದಾರೆ. ಒಂದು ಕಾಲಕ್ಕೆ ಕನ್ನಡನಾಡಿನ ಭೌಗೋಳಿಕ ಭಾಗಗಳಾಗಿದ್ದ, ಮಂತ್ರಾಲಯ, ಅನಂತಪುರ, ರಾಯದುರ್ಗ, ಆದವಾನಿ, ಆಲೂರುಗಳ ಬಗ್ಗೆಯೂ ಬರೆದಿರುವುದರಿಂದ ಇಂದು ತೆಲುಗು ಪ್ರದೇಶದೊಂದಿಗೆ ತಾಕಲಾಡುತ್ತಿರುವ ಗಡಿಭಾಗದ ಸ್ಥಳನಾಮಾಧ್ಯಯನಕ್ಕೆ ಪ್ರಮುಖ ಮಾಹಿತಿ ಒದಗಿಸುತ್ತದೆ. ಜೋಯಿಸರು ಕೆಲವು ಕಡೆ ಭಾವುಕರಾಗಿ ಬರೆದಿರುವುದರಿಂದ ನಿಷ್ಪತ್ತಿಗೆ ಕುಂದೂ ಬಂದಿದೆ. ಚಾರಿತ್ರಿಕ ನೆಲೆಯಲ್ಲಿ ನೋಡುವವರಿಗೆ ಈ ಕೃತಿ ಸಾಕಷ್ಟು ಮಾಹಿತಿ ನೀಡುತ್ತದೆ.

**೨.೮. ಕನ್ನಡ ಐತಿಹ್ಯಗಳು - ಜಿ.ವಿ.ಡಿ. - ೧೯೭೮**

ಸ್ಥಳೀಯ ಐತಿಹ್ಯಗಳು ಎಂಬ ಶೀರ್ಷಿಕೆಯಡಿ ಜಿ.ವಿ.ಡಿ.ಯವರು ದೇವರು - ಬೆಟ್ಟ - ಕಲ್ಲುಗಳು, ಪ್ರಮುಖ ಸ್ಥಳ, ವ್ಯಕ್ತಿ, ಕೆರೆ, ಹೊಳೆಗಳ ಬಗೆಗೆ ಇರುವ ಐತಿಹ್ಯಗಳನ್ನು ಪ್ರಸ್ತಾಪಿಸುತ್ತ, ಸ್ಥಳನಾಮಗಳ ಬಗ್ಗೆ ಜನಪದರು ನಿರೂಪಿಸುವ ಐತಿಹ್ಯಗಳನ್ನು ವಿವರಿಸಿದ್ದಾರೆ. ಗುತ್ತಲು: ಮೊಳೂರು: ದಶವಾರು: ಕೆರೆಗೋಡು: ಗೆಜ್ಜಲಗೆರೆ: ಹನಕೆರೆ: ಕಚ್ಚಿಗೆರೆ: ತುಂಕೆರೆ: ಕುರಿಕೆಂಪನದೊಡ್ಡಿ: ಮಳವಳ್ಳಿ ಮುಂತಾದ ಊರುಗಳಿಗೆ ಇರುವ ಐತಿಹ್ಯಗಳನ್ನು ಸಂಗ್ರಹಿಸಿ ನಿರೂಪಿಸಿದ್ದಾರೆ.

೨.೯. ತುಳುನಾಡಿನ ಸ್ಥಳನಾಮಗಳು - ಕೆಮ್ಮೂರು ರಘುಪತಿ ಭಟ್ಟ - ೧೯೭೯

ಈ ಕೃತಿಯು ಸ್ಥಳನಾಮ ವಿಜ್ಞಾನದಲ್ಲಿ ಸಂಶೋಧನಾ ಪದವಿಗೆಂದು ಸಿದ್ಧ ಪಡಿಸಿದ ಸಂಶೋಧನಾ ಪೂರ್ವ ಪ್ರಬಂಧ (Pre-doctoral dissertation) ಭಟ್ಟರು ಮುಂದೆ ಪಿಎಚ್.ಡಿ. ಸಂಶೋಧನೆಯನ್ನೂ ಇದೇ ವಿಷಯದ ಮೇಲೆ ಮುಂದುವರೆಸಿದರು. ಎಪ್ಪತ್ತರ ದಶಕದ ಅತ್ಯಂತ ಮಹತ್ವದ ಸಂಶೋಧನೆಯಿದು. ಕನ್ನಡದಲ್ಲಿ ಮೊದಲ ಸಂಶೋಧನಾ ಕೃತಿಯೂ ಆಗಿದೆ.

ಈ ಕೃತಿಯನ್ನು ಭಟ್ಟರು ತುಳುನಾಡಿಗೆ ಸೀಮಿತ ಪಡಿಸಿ, ಜೊತೆಗೆ ಸಾರ್ವತ್ರಿಕ ಎನ್ನಬಹುದಾದ ಅನೇಕ ನಿಯಮಗಳನ್ನು ವಿಶ್ಲೇಷಿಸುತ್ತಾ ಹೋಗುತ್ತಾರೆ. ಒಂಭತ್ತು ವಿಭಾಗ ಮಾಡಿಕೊಂಡು ಪ್ರವೇಶ ಭಾಗದಲ್ಲಿ ಸ್ಥಳನಾಮದ ಇತಿಹಾಸವನ್ನೂ ಸಂಕ್ಷಿಪ್ತವಾಗಿ ಹೇಳಿದ್ದಾರೆ. ಸ್ಥಳನಾಮ ಸ್ವರೂಪದಲ್ಲಿ ವಾರ್ಗಿಕ, ನಿರ್ದಿಷ್ಟಗಳ ಸ್ಥಾನ ಮತ್ತು ಸ್ಥಳನಾಮಗಳ ವರ್ಗೀಕರಣವನ್ನು ಹೇಳುತ್ತಾ ಸ್ವಾಭಾವಿಕ ಸ್ಥಳನಾಮಗಳು ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಸ್ಥಳನಾಮಗಳೆಂದು ವರ್ಗೀಕರಿಸುತ್ತಾರೆ. ಜೊತೆಗೆ ಸಂಸ್ಕೃತೀಕರಣ, ಹೆಸರಿನ ಬದಲಾವಣೆ ಮುಂತಾದ ವಿಷಯಗಳನ್ನು ಚರ್ಚಿಸುತ್ತಾರೆ. ತುಳುನಾಡಿನ ಒಟ್ಟು ಸ್ಥಳನಾಮ ಘಟಕಗಳನ್ನು ಮೂರನೇ ವಿಭಾಗದಲ್ಲಿ ಪಟ್ಟಿಮಾಡಿದ್ದಾರೆ. ಜಲವಾಚಕ ಸ್ಥಳನಾಮಗಳು ಎಂಬಲ್ಲಿ ಭಟ್ಟರು ತುಳುನಾಡಿನ ನಿರ್ದಿಷ್ಟ, ವಾರ್ಗಿಕ ಭಾಗಗಳಿಂದ ಹೇಗೆ ಜಲವಾಚಿ ಮತ್ತು ಸಂಬಂಧವಾಚಿಗಳಾಗುತ್ತವೆಂದು ಹೇಳಿದ್ದಾರೆ. ಭೂ ಸ್ಥಿತಿವಾಚಕ ಸ್ಥಳನಾಮಗಳೊಂದಿಗೆ ತುಳುನಾಡಿನ ಭೌಗೋಳಿಕ ವೈಶಿಷ್ಟ್ಯತೆಯನ್ನು ಹೇಳಿದ್ದಾರೆ. ಇತರ ಸ್ಥಳವಾಚಕಗಳಲ್ಲಿ ಶಿಲಾವಾಚಿ - ಸಸ್ಯವಾಚಿ - ಕ್ಷೇತ್ರವಾಚಕ - ದಿಗ್ವಾಚಕ - ಸಾಂಸ್ಕೃತಿಕ - ಎಂದು ಪರಿಚಯಿಸಿದ್ದಾರೆ. ವ್ಯಂಜನಾಂತ - ಸ್ವರಾಂತ - ಸೌಲಭ್ಯಾಕಾಂಕ್ಷೆ - ಧ್ವನಿ ವ್ಯತ್ಯಾಸ - ಮುಂತಾದವನ್ನು ನಾಮಗಳ ಭಾಷಾ ವೈಜ್ಞಾನಿಕ ಅಧ್ಯಯನದಲ್ಲಿ ಹೇಳಿದ್ದಾರೆ. ತರುವಾಯ ಸ್ಥಳನಾಮಗಳ ಪ್ರಯೋಜನ ವಿವರಿಸಿದ್ದಾರೆ. ಕೊನೆಯಲ್ಲಿ ತುಳು ಶಬ್ದ ಕುರಿತಾದ ದೀರ್ಘಚರ್ಚೆ, ಪ್ರತಿನಾಮಕರಣ ಈವರೆಗೆ ನಡೆದ ತುಳುನಾಡಿನ ನಾಮಾಧ್ಯಯನದ ಪ್ರಯತ್ನ ಹೇಳಿದ್ದಾರೆ.

ಹೀಗೆ ಇಂದಿಗೂ ಪ್ರಸ್ತುತವೆನಿಸುವ ಇವರ ತಾತ್ವಿಕ ನಿಲುವುಗಳು ಸಂಶೋಧನಾ ವಿಧಿವಿಧಾನದಲ್ಲಿ ವರ್ಣನಾತ್ಮಕತೆಯನ್ನು ಬಿಂಬಿಸುತ್ತವೆ. ಸಾಂಸ್ಕೃತಿಕ ಅಂಶಗಳನ್ನು ಹೇಳುತ್ತಲೇ ಅನೇಕ ಹೊಸ ಸಾಧ್ಯತೆಗಳ ಕಡೆ ಈ ಕೃತಿ ಸುಳಿವನ್ನು ನೀಡುತ್ತದೆ.

೨.೧೦. ಚಿತ್ತೂರು ಜಿಲ್ಲಾ ಗ್ರಾಮನಾಮಾಲು - ಭಾಷಾ ಸಾಮಾಜಿಕ ಪರಿಶೀಲನ - ಡಿ.ಚೆಂಗಾರೆಡ್ಡಿ - ೧೯೮೧

ತಿರುಪತಿ ವೆಂಕಟೇಶ್ವರ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ತೆಲುಗು ಪಿಎಚ್.ಡಿ. ನಿಬಂಧವಿದು. ಚಿತ್ತೂರು ಜಿಲ್ಲೆಯ ಗ್ರಾಮನಾಮಗಳ ಭಾಷಾ ಸಾಮಾಜಿಕ ಅಧ್ಯಯನ ಜಿಲ್ಲೆಯ ಗಡಿಪ್ರದೇಶದ ಭೌಗೋಳಿಕ ವಿಶೇಷತೆ, ಗ್ರಾಮನಾಮಗಳ ಕನ್ನಡ ನಿರ್ಮಾಣ ಪ್ರಭಾವ ಮುಂತಾದ ಅಂಶಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಚಿತ್ತೂರು ಜಿಲ್ಲೆಯ ಐತಿಹಾಸಿಕ ವಿಶೇಷತೆಗಳು, ಭಾಷಾ ನೆಲೆಯಲ್ಲಿ ಸಂಧಿ ಪರಿಶೀಲನೆ, ಸಮಾಸ, ರೂಪನಿರ್ಮಾಣ, ವರ್ಣಸಮಾಮ್ನಯ, ನಿಘಂಟು ಮುಂತಾಗಿ ಬರೆಯಲಾಗಿದೆ. ವರ್ಣನಾತ್ಮಕ ನೆಲೆಯಲ್ಲಿಯೇ ಹೆಚ್ಚಾಗಿ

ಗಮನಿಸಲಾಗಿದೆ. ಚಿತ್ತೂರು ಜಿಲ್ಲೆಯ ಬೀದಿಗಳ ಹೆಸರುಗಳು: ಗ್ರಾಮನಾಮಗಳ ಜಾನಪದ ಗೀತೆಗಳು: ಮುಂತಾಗಿ ಅನುಬಂಧದಲ್ಲಿ ನೀಡಲಾಗಿದೆ.

**೨.೧೧. ವಾಗರ್ಥ - ಡಾ.ಎಂ.ಚಿದಾನಂದಮೂರ್ತಿ - ೧೯೮೧**

ಸ್ಥಳನಾಮ ಅಧ್ಯಯನ ಕ್ಷೇತ್ರಕ್ಕೆ ಮುಖ್ಯವಾದ ಆಕರಗ್ರಂಥವಿದು. ಇದರಲ್ಲಿ ಸ್ಥಳನಾಮಕ್ಕೆ ಸಂಬಂಧಿಸಿದ ಐದು ಲೇಖನಗಳಿವೆ. ಕರ್ನಾಟಕದ ಸ್ಥಳನಾಮಗಳು ಎಂಬಲ್ಲಿ ಅಧ್ಯಯನದ ಇತಿಹಾಸ, ವಾರ್ಗಿಕ, ನಿರ್ದಿಷ್ಟಗಳ ವೈಜ್ಞಾನಿಕ ವರ್ಗೀಕರಣ, ಸ್ಥಳನಾಮಗಳ ಸಾಮಾಜಿಕ - ಸಾಂಸ್ಕೃತಿಕ, ಭಾಷಿಕ ಮಹತ್ವ ಮುಂತಾದ ಬಗ್ಗೆ ವಿವರಿಸಿದ್ದಾರೆ. ವರ, ವಾರ ಎಂದು ಕೊನೆಯಾಗುವ ಊರ ಹೆಸರುಗಳು ಎಂಬಲ್ಲಿ ಶಾಸನಾಧಾರಗಳಿಂದ ಉದಾಹರಿಸುತ್ತ ಪುರ'ದಿಂದ ವರ, ವಾರ ಬಂದಿದೆಯೆನ್ನುತ್ತಾರೆ. ಆದರೆ ಕಲ್ಬುರ್ಗಿಯವರು ಪುರದಿಂದ ವರ, ವಾರ ಬಂದದ್ದನ್ನು ತಳ್ಳಿಹಾಕಿದ್ದಾರೆ. ಊರುಗಳಿಗೆ ಎರಡೆರಡು ಹೆಸರುಗಳು' ಎಂಬ ಲೇಖನದಲ್ಲಿ ಲಂಬಾಣಿಗರ ವಾಸದ ನೆಲೆಗಳಿಗೆ ಎರಡು ಹೆಸರು ಇರುವುದನ್ನು ಸವಿವರವಾಗಿ ಹೇಳುತ್ತಾರೆ. ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಊರ ಹೆಸರುಗಳ ಸೂಚಕಾಂಶಗಳು' ಎಂಬಲ್ಲಿ ಬ್ರಾಹ್ಮಣ: ಅಗ್ರಹಾರ: ಮಂಗಲ: ಆಲ: ಬೊಮ್ಮ: ಶ್ರೋತ್ರೀಯ: ಮಹಾಜನ: ಹಾರೋ: ಮುಂತಾದ ಪದಗಳು ಪದಾದಿ ಅಥವಾ ಪದಾಂತ್ಯದಲ್ಲಿದ್ದರೆ, ಅವು ಬ್ರಾಹ್ಮಣರಿಗೆ ದಾನವಾಗಿ ನೀಡಿದ ಊರುಗಳು ಎಂದಿದ್ದಾರೆ. ದೇಕಬ್ಬೆ ಶಾಸನದ ಸ್ಥಳನಾಮಗಳನ್ನು ಕುರಿತು' ಎಂಬ ಲೇಖನದಲ್ಲಿ ಕೆಲವು ಶಾಸನೋಕ್ತ ಐತಿಹಾಸಿಕ ಪ್ರಸಿದ್ಧ ನಾಡುಗಳ ಉಲ್ಲೇಖವಿದೆ.

ವಾಗರ್ಥ ಉತ್ತಮ ಆಕರಗ್ರಂಥವೆಂಬುದರಲ್ಲಿ ಅನುಮಾನವಿಲ್ಲ. ಈ ಕೃತಿಯ ಐದು ಲೇಖನಗಳು ಸ್ಥಳನಾಮ ವಿಜ್ಞಾನದ ಪ್ರತಿಯೊಂದು ಅಂಶವನ್ನು ಸಂಕ್ಷಿಪ್ತದಲ್ಲಿ ವಿವರಿಸುತ್ತವೆ. ಈ ದೃಷ್ಟಿಯಿಂದ ಇದೊಂದು ಮಹತ್ವದ ಕೃತಿ.

**೨.೧೨. ಅನಂತಪುರಂ ಜಿಲ್ಲಾ ಗ್ರಾಮನಾಮಾಲು - ಭಾಷಾ ಸಾಮಾಜಿಕ ಪರಿಶೀಲನ**
**ಯಂ. ಗೋವಿಂದಸ್ವಾಮಿ ನಾಯುಡು - ೧೯೮೨**

ತಿರುಪತಿ ವೆಂಕಟೇಶ್ವರ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ತೆಲುಗು ಪಿಎಚ್.ಡಿ. ನಿಬಂಧವಿದು. ಆಂಧ್ರ - ಕರ್ನಾಟಕ ಎರಡೂ ಭಾಷೆ ಹಾಗೂ ಸಾಂಸ್ಕೃತಿಕ ವಲಯದಲ್ಲಿರುವ ಅನಂತಪುರ ಜಿಲ್ಲೆಯ ಸ್ಥಳನಾಮಗಳನ್ನು ಸಂಶೋಧಿಸಿರುವ ೬೬೪ ಪುಟಗಳ ಬೃಹತ್ ಕೃತಿಯಲ್ಲಿ, ಸ್ಥಳನಾಮಗಳ ಕನ್ನಡ ಭಾಷಾ ವ್ಯಾಪ್ತಿ ಎಂಬ ಉಪಾಧ್ಯಾಯದಲ್ಲಿ ಬಳ್ಳಾರಿ - ಚಿತ್ರದುರ್ಗ ಗಡಿಪ್ರದೇಶದಲ್ಲಿ ಕಂಡು ಬರುವ, ಆಂಧ್ರದ ರಾಜಕೀಯ ಗಡಿಯಲ್ಲಿರುವ ಅನೇಕ ಸ್ಥಳನಾಮಗಳು ಕನ್ನಡದ ಎಡೆಗಳೇ ಎಂದು ಗುರುತಿಸಿದ್ದಾರೆ. ಇಂತಹ ಹಲವು ಭಾಷಾ ವಿಶೇಷತೆಗಳನ್ನು ಸ್ಥಳನಾಮಗಳಲ್ಲಿ ಗುರುತಿಸಿ ಸಾಮಾಜಿಕ ಆಯಾಮಗಳಲ್ಲಿ ಸಂಸ್ಕೃತಿಯನ್ನು ಬಿಂಬಿಸುವ ಬಗೆಯನ್ನು ಗೋವಿಂದಸ್ವಾಮಿ ನಾಯುಡು ಅವರು ಇಲ್ಲಿ ಗುರುತಿಸಿದ್ದಾರೆ. ಆದರೂ ವರ್ಣನಾತ್ಮಕ ಅಧ್ಯಯನವೇ ಇಲ್ಲಿಯೂ ಕಂಡು ಬರುತ್ತದೆ.

**೨.೧೩. ಆಸ್ವಾದ - ಪ್ರೊ. ಎಂ.ವಿ.ಸೀತಾರಾಮಯ್ಯ ಅಭಿನಂದನ ಗ್ರಂಥ - ೧೯೮೩**

'ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿ ಜಲಸೂಚಕ ಅಂಶಗಳು' ಎಂಬಲ್ಲಿ ಕೋಲಾರದ ೪೦೦೦ ಸ್ಥಳನಾಮಗಳಲ್ಲಿ ಸುಮಾರು ೪೦೦ ಜಲಸೂಚಿ ನಾಮಗಳನ್ನು ಗುರುತಿಸಿದ್ದಾರೆ. ಕನ್ನಡದ ಜೊತೆಯಲ್ಲಿ ಚೆರುವು: ಚೆರ್ಲ ಮುಂತಾದ ತೆಲುಗಿನ ಜಲಸೂಚಿ ಅಂಶಗಳನ್ನು ಪಟ್ಟಿ ಮಾಡುವ ಮೂಲಕ ದ್ವಿಭಾಷಿಕ ಪರಿಸರದ ಪ್ರಭಾವವನ್ನೂ ತಿಳಿಯಬಹುದು. ಗೋಪಾಲಕೃಷ್ಣ ಅವರು ತಮ್ಮ ಸಂಶೋಧನಾ ನಿಬಂಧದಲ್ಲಿಯೂ ಈ ಬಗೆಯ ಅಂಶಗಳನ್ನು ತಾರ್ಕಿಕವಾಗಿ ವಿಶ್ಲೇಷಿಸಿದ್ದಾರೆ.

**೨.೧೪. ಮಲೆನಾಡು ಜಾನಪದ - ಸಂ. ಎಚ್ .ಜೆ.ಲಕ್ಕಪ್ಪಗೌಡ - ೧೯೮೩**

ಇದರಲ್ಲಿ ಎಸ್ .ಕುಮಾರಸ್ವಾಮಿ ಅವರ 'ಸ್ಥಳನಾಮಗಳು' ಎಂಬ ಲೇಖನವಿದೆ. ೨೦ನೇ ಶತಮಾನದಲ್ಲಿ ನಾಮಾಧ್ಯಯನದ ಪ್ರಸ್ತುತತೆಯನ್ನು ಹೇಳುತ್ತಾ, ಸಂಸ್ಕೃತಿಯನ್ನು ನಿರ್ವಚಿಸಲು ನಾಮಗಳ ಮಹತ್ವ ಏನೆಂಬುದನ್ನು ವಾರ್ಗಿಕಗಳ ಪಟ್ಟಿ ಹಾಗೂ ಅವುಗಳ ಪ್ರಾಚೀನತೆಯ ಮೂಲಕ ವಿವರಿಸಿದ್ದಾರೆ. ಹೆಸರಿನ ಬದಲಾವಣೆ ದೇಸೀಯತೆ ಹೇಳುತ್ತಲೇ, ಜಾನಪದರು ಒಂದು ಗ್ರಾಮನಾಮವನ್ನು ತಮ್ಮ ಹಾಡು, ಗಾದೆಗಳ ಮೂಲಕ ಯಾವ ರೀತಿಯಾಗಿ ಬಳಸಿಕೊಂಡು ಪರಂಪರೆಯನ್ನು ಹೊತ್ತು ಸಾಗಿಸುತ್ತಾರೆಂಬುದನ್ನು ವಿವರಿಸಿದ್ದಾರೆ.

**೨.೧೫. ಕರ್ನಾಟಕ ಗ್ರಾಮಸೂಚಿ - ೧೯೮೫**

ಕರ್ನಾಟಕ ರಾಜ್ಯದ ಗ್ರಾಮಗಳ ಜಿಲ್ಲಾ ಹಾಗೂ ತಾಲೂಕುವಾರು ವರ್ಣಾನುಕ್ರಮ ಪಟ್ಟಿಯು ಇಲ್ಲಿದೆ. ಇಲ್ಲಿ ಮುಖ್ಯವಾಗಿ ಸಂಶೋಧಕರಿಗೆ, ಆಸಕ್ತರಿಗೆ ಒಂದೆಡೆ ಗ್ರಾಮನಾಮಗಳು ದೊರೆಯುತ್ತವೆ. ಇದೊಂದು ಶ್ರಮಸಾಧ್ಯ ಕೆಲಸವಾದರೂ, ಅಚ್ಚುಕಟ್ಟಾಗಿ ಜೋಡಿಸಿಕೊಟ್ಟಿದ್ದಾರೆ. ಬೇಚರಾಕ್ ಗ್ರಾಮಗಳನ್ನು ಇಲ್ಲಿ ಸೇರಿಸಲಾಗಿಲ್ಲ. ಹಾಗೂ ಪ್ರಾಚೀನ ನಾಮಗಳನ್ನು ಉಲ್ಲೇಖಿಸಿಲ್ಲ. ೧೯೮೫ ರಿಂದ ಈಚೆಗೆ ನಿರ್ಮಾಣವಾದ ಗ್ರಾಮನಾಮಗಳ ಪಟ್ಟಿ ಇದರಲ್ಲಿ ಸೇರಿಸಿಲ್ಲ. ಕಾರಣ ಈ ಕೃತಿಯು ಮತ್ತೊಂದು ಮುದ್ರಣವಾಗುವ ಅವಶ್ಯಕತೆಯಿದೆ. ಇದೊಂದು ಅತ್ಯುಪಯುಕ್ತ ಗ್ರಂಥ.

**೨.೧೬. ಬೆಂಗಳೂರಿನ ಇತಿಹಾಸ - ಬ.ನ. ಸುಂದರರಾವ್ - ೧೯೮೫**

ಬೆಂಗಳೂರು ಹೆಸರನ್ನು ಕುರಿತು' ಎಂಬ ಒಂದು ಅಧ್ಯಾಯದಲ್ಲಿ ಸುಂದರರಾವ್ ಅವರು ಬೆಂಗಳೂರಿನ ಇತಿಹಾಸವನ್ನು ಹೇಳುತ್ತಾ, ಹೆಸರಿನ ಬಗ್ಗೆ ಬೆಂದಕಾಳಿನ ಐತಿಹ್ಯ ಬೆಣಚುಕಲ್ಲಿನ ಭೌಗೋಳಿಕ ಆಧಾರ, ಶಾಸನ ಮುಂತಾದ ಉಲ್ಲೇಖಗಳನ್ನು ನೀಡುತ್ತಾ ಚರ್ಚಿಸಿದ್ದಾರೆ.

**೨.೧೭. ಬಸವಣ್ಣನವರ ಹೆಸರಿರುವ ಊರುಗಳು - ಹೀ.ಚಿ.ಶಾಂತವೀರಯ್ಯ**

ಹೀ.ಚಿ.ಶಾಂತವೀರಯ್ಯನವರು ಕರ್ನಾಟಕದ ವಿವಿಧ ಜಿಲ್ಲೆಯಲ್ಲಿರುವ ಸುಮಾರು ಒಂದುನೂರಾ ಮೂವತ್ತಾರು ಸ್ಥಳನಾಮಗಳನ್ನು ಪಟ್ಟಿಮಾಡಿದ್ದಾರೆ. ಇವೆಲ್ಲವೂ ೧೨ನೇ ಶತಮಾನದ ವಚನಸಾಹಿತ್ಯದ

ಬಸವಣ್ಣನಿಂದ ನಿರ್ದೇಶನಗೊಂಡ ಸ್ಥಳನಾಮಗಳು ಎಂದಿದ್ದಾರೆ. ಬಸವನಹಳ್ಳಿ: ಬಸವಪುರ: ಬಸವಾಪಟ್ಟಣ: ಬಸಾಪುರ ಎಂಬ ಉದಾಹರಣೆಗಳೊಂದಿಗೆ, ಬಸೆಟ್ಟಿಹಳ್ಳಿ: ಬಸವನಾಯಕನಹಳ್ಳಿ ಎಂಬ ಉದಾಹರಣೆಗಳನ್ನು ನೀಡಿದ್ದಾರೆ. ಇದನ್ನು ಒಪ್ಪಲು ಕಷ್ಟವಾಗುತ್ತದೆ. 'ಬಸವ' ಎಂಬ ಪದದಿಂದ ಆರಂಭವಾಗುವ ಎಲ್ಲ ಸ್ಥಳನಾಮಗಳನ್ನು ಬಸವಣ್ಣನಿಂದ ಬಂದಿವೆ ಎಂಬುದನ್ನು ತಿಳಿಯಲು ವ್ಯಾಪಕ ಕ್ಷೇತ್ರಕಾರ್ಯ ಮಾಡಬೇಕಾಗುತ್ತದೆ.

**೨.೧೮. ಶರಣ ಸಾಹಿತ್ಯದಲ್ಲಿ ಪಂಪಾಕ್ಷೇತ್ರದ ವರ್ಣನೆ - ಕೆ. ಶ್ರೀಕಂಠಯ್ಯ - ೧೯೮೬**

ತುಂಗಭದ್ರಾ ನದೀ ತೀರದ ವಿಜಯನಗರ ಸಾಮ್ರಾಜ್ಯದ ಪಂಪಾಕ್ಷೇತ್ರದ ವಿವಿಧ ಹೆಸರುಗಳನ್ನು, ಅಲ್ಲಿರುವ ಅನೇಕ ನಿರ್ವಸಿತ ಸ್ಥಳನಾಮಗಳನ್ನು ಕಾವ್ಯ, ಶಾಸನ ಮುಂತಾದ ಆಧಾರಗಳಿಂದ ಇಲ್ಲಿ ಹೇಳಲಾಗಿದೆ. ಆನೆಗೊಂದಿ: ಪಂಪಾಪುರಿ: ಪಂಪಾಕ್ಷೇತ್ರ: ವಿದ್ಯಾನಗರಿ: ವಿಜಯನಗರ: ಭಾಸ್ಕರಕ್ಷೇತ್ರ ಎಂಬ ಹೆಸರುಗಳಿದ್ದ ಬಗ್ಗೆ ತಿಳಿಸಿದ್ದಾರೆ. ಜೊತೆಗೆ ಅನೇಕ ತೀರ್ಥಗಳ ಹೆಸರನ್ನೂ ಉಲ್ಲೇಖಿಸಿದ್ದಾರೆ. ಇದೊಂದು ಉತ್ತಮ ಲೇಖನ.

**೨.೧೯. ಸ್ಥಳನಾಮ ಅಧ್ಯಯನಗಳು - ವಿ.ಗೋಪಾಲಕೃಷ್ಣ - ೧೯೮೭**

ಈ ಕೃತಿಯಲ್ಲಿ ಎಂಟು ಲೇಖನಗಳಿವೆ. ಸ್ಥಳನಾಮ ಅಧ್ಯಯನ ಸಮಸ್ಯೆಗಳು ಹಾಗೂ ನಿವಾರಣೆ ಎಂಬಲ್ಲಿ ಅಧ್ಯಯನದ ರೀತಿ, ಸ್ಥಳನಾಮ ಆಕರಗಳ ಶೇಖರಣೆ ಮುಂತಾದ ಬಗ್ಗೆ ಹೇಳಿದ್ದಾರೆ. ಕೋಲಾರದ ಸ್ಥಳನಾಮಗಳ ಸಮೀಕ್ಷೆಯನ್ನು ಮಾಡುತ್ತಾ ಸ್ಥಳನಾಮಗಳ ವರ್ಗೀಕರಣ ಮಾಡಿದ್ದಾರೆ. ಪುನರ್ನಾಮಕರಣದಲ್ಲಿ ಸಂಸ್ಕೃತದ ಪ್ರಭಾವ ಇತ್ಯಾದಿ ವಿಷಯವಿದೆ. ಕೋಲಾರ ಜಿಲ್ಲೆಯ ಸ್ಥಳನಾಮಗಳು ಕೆಲವು ಸ್ವಾರಸ್ಯ ಎಂಬಲ್ಲಿ ತೆಲುಗಿನ ಪ್ರಭಾವ, ಐತಿಹ್ಯದ ಮಾದರಿ ಮುಂತಾದ ವಿಷಯಗಳಿವೆ. ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿ ಜಲಸೂಚಿ ಅಂಶಗಳೆಂಬುದು ಉತ್ತಮಲೇಖನ. ಕೋಲಾರದ ಸ್ಥಳನಾಮಗಳಲ್ಲಿ ಜನಾಂಗಿಕ ಅಂಶಗಳನ್ನು ಸವಿವರವಾಗಿ, ತೆಲುಗು - ಕನ್ನಡದ ಸಮುದಾಯದಿಂದ ಗುರುತಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಸ್ಥಳನಾಮಗಳ ಅವಲೋಕನವನ್ನು ಮಾಡಿದ್ದಾರೆ. ಕೊನೆಯಲ್ಲಿ ಸ್ಥಳನಾಮಗಳ ಸಂಸ್ಕೃತೀಕರಣ ಪ್ರಕ್ರಿಯೆಯನ್ನು ಹೇಳಿದ್ದಾರೆ. ಇದೊಂದು ಉಪಯುಕ್ತ ಮತ್ತು ಉತ್ತಮ ಆಕರಗ್ರಂಥವಾಗಿದೆ.

**೨.೨೦. ಹರತಿಸಿರಿ - ಸಂ - ಲಕ್ಷ್ಮಣ ತೆಲಗಾವಿ - ೧೯೮೭**

ಈ ಕೃತಿಯಲ್ಲಿ ಸ್ಥಳನಾಮಕ್ಕೆ ಸಂಬಂಧಿಸಿ ಮೂರು ಲೇಖನಗಳಿವೆ. 'ಸ್ಥಳನಾಮಾಧ್ಯಯನದ ಇತ್ತೀಚಿನ ಒಲವುಗಳು: ಒಂದು ಸ್ಥೂಲಚಿತ್ರ' ಎಂಬಲ್ಲಿ ಕೆಮ್ತೂರು ರಘುಪತಿ ಅವರು ಸ್ಥಳನಾಮಗಳ ಇತಿಹಾಸ, ಮಹತ್ವ, ಸಾಧನೆ, ಭವಿಷ್ಯದಲ್ಲಿ ಅವುಗಳ ಪಾತ್ರ ಮುಂತಾದ ಬಗ್ಗೆ ಚರ್ಚಿಸಿದ್ದಾರೆ. 'ಚಿತ್ರದುರ್ಗ ಜಿಲ್ಲೆಯ ಸ್ಥಳನಾಮಗಳು ಒಂದು ಅವಲೋಕನ' ಎಂಬಲ್ಲಿ ಗೋಪಾಲಕೃಷ್ಣ ಅವರು ಪಾಳೆಯಗಾರರ ಪ್ರಭಾವದಿಂದಾಗಿ ಈ ಪ್ರದೇಶದಲ್ಲಿ ನಾಗತಿಯರ ಹೆಸರಿನ ಮೇಲೆ ಗ್ರಾಮನಾಮಗಳು ಸೃಷ್ಟಿಯಾದವು. ಹಾಗೆಯೇ ಐತಿಹಾಸಿಕ ಹೆಸರುಗಳು ಇಲ್ಲಿ ಹೆಚ್ಚು ಎಂಬುದನ್ನು ತಿಳಿಸಿದ್ದಾರೆ. 'ಯಳನಾಡು ಗ್ರಾಮನಾಮ ವಿವೇಚನೆ' ಎಂಬಲ್ಲಿ ಟಿ.ಹನುಮಂತರಾಯರು ಆ ಗ್ರಾಮದ ಪ್ರಾಚೀನತೆ ಆ ಹೆಸರಿಗಿರುವ ಜಾನಪದ ನಿಷ್ಪತ್ತಿ ಮುಂತಾದ ಬಗ್ಗೆ ಬರೆದಿದ್ದಾರೆ.

೨.೨೧. ಕೋಲಾರ ಜಿಲ್ಲೆಯ ಸ್ಥಳನಾಮಗಳು ಸಾಮಾಜಿಕ ಭಾಷಾಶಾಸ್ತ್ರ ಅಧ್ಯಯನ

ವಿ.ಗೋಪಾಲಕೃಷ್ಣ - ೧೯೮೮. ಪಿಎಚ್.ಡಿ. ಅ.ಪ್ರ.

ಈ ನಿಬಂಧ ಮುಖ್ಯವಾಗಿ ಎರಡು ಭಾಗಗಳನ್ನೊಳಗೊಂಡಿದೆ. ಒಂದು ಕೋಲಾರ ಜಿಲ್ಲೆಯ ಸ್ಥಳನಾಮಗಳ ವರ್ಣನಾತ್ಮಕ ವ್ಯಾಕರಣ. ಇಲ್ಲಿ ಈವರೆಗೆ ಪಾಶ್ಚಾತ್ಯರಲ್ಲಿ ನಡೆದ ಅಧ್ಯಯನದ ಪರಿವೀಕ್ಷಣೆ ಮತ್ತು ಕೋಲಾರ ಜಿಲ್ಲೆಯ ಸ್ಥಳನಾಮಗಳ ಸಂಗ್ರಹಣೆ, ಅಧ್ಯಯನ ವಿಧಾನ, ಸ್ಥಳನಾಮಗಳ ವರ್ಣಸಮಾಮ್ನಯ, ಆಕೃತಿಮಾ ರಚನೆಯ ಪರಿಶೀಲನೆ, ಸುದೀರ್ಘವಾದ ಸಂಧಿ ಪರಿಶೀಲನೆ, ಅರ್ಥ ಪರಿಶೀಲನೆ ಹಾಗೂ ವಾರ್ಗಿಕಗಳ ವರ್ಗೀಕರಣ, ನೈಸರ್ಗಿಕ - ಸಾಂಸ್ಕೃತಿಕ ಹಾಗೂ ಚಾರಿತ್ರಿಕ ವಿಶೇಷಗಳೊಂದಿಗೆ ಜಿಲ್ಲೆಯ ಸ್ಥಳನಾಮಗಳನ್ನು ಸೂಕ್ಷ್ಮವಾಗಿ ತೆರೆದಿಡಲಾಗಿದೆ.

ಅನುಬಂಧದ ಎರಡನೇ ಭಾಗದಲ್ಲಿ ಕೋಲಾರ ಜಿಲ್ಲೆಯ ಸ್ಥಳನಾಮಗಳ ನಿಘಂಟು ಇದೆ. ಇಲ್ಲಿ ಅನೇಕ ತರ್ಕಬದ್ಧವಾದ ಮೂಲ ನಿಷ್ಪತ್ತಿಯನ್ನು ಸಂಶೋಧಕರು ನೀಡಿದ್ದಾರೆ. ಅನುಬಂಧದಲ್ಲಿ ಸ್ಥಳನಾಮ ದ್ವಿತೀಯಾಂಶಗಳ ಅಕಾರಾದಿಯಿದೆ. ಮುಖ್ಯವಾಗಿ ಸಾಮಾಜಿಕ ಭಾಷಾಶಾಸ್ತ್ರ ಅಧ್ಯಯನವೆಂದು ಶೀರ್ಷಿಕೆ ಹೊತ್ತುಕೊಂಡ ಈ ನಿಬಂಧ, ಸಂಪೂರ್ಣ ವರ್ಣನಾತ್ಮಕ ವಿಶ್ಲೇಷಣೆಯ ಕಡೆಗೆ ತನ್ನ ಮಿತಿಯನ್ನು ಒಳಗುಮಾಡಿಕೊಂಡಿದೆ. ಎಂಭತ್ತರ ದಶಕದಲ್ಲಿ ಬಂದ ಇಂಥಾ ಅಧ್ಯಯನಗಳು ಮುಂದಿನ ಅಧ್ಯಯನಕಾರರಿಗೆ ಸಹಾಯಕವಾಗಿ ನಿಂತಿವೆ.

೨.೨೨. A Glossary of place name elements in tulu and kannada - Raghupathi kemtoor -1989

ತುಳುನಾಡನ್ನು ಗಮನದಲ್ಲಿಟ್ಟುಕೊಂಡು ರಚಿಸಿದ ಗ್ರಾಮನಾಮಗಳ ಗ್ಲೋಸರಿಯಿದು. ಈ ತೆರನಾದ ಕೃತಿಗಳು ಕನ್ನಡನಾಮಾಧ್ಯಯನ ಕ್ಷೇತ್ರಕ್ಕೆ ಅತ್ಯಗತ್ಯ. ಸುಮಾರು ಒಂದುಸಾವಿರ ಗ್ರಾಮನಾಮಗಳನ್ನು ಆಧರಿಸಿ, ಅವುಗಳ ವಾರ್ಗಿಕಗಳನ್ನು ನಿಷ್ಪತ್ತಿಯ ಮೂಲಕ ವಿವಿಧ ಅರ್ಥ, ಪ್ರಾದೇಶಿಕ ವೈಶಿಷ್ಟ್ಯ, ಬಳಕೆಯ ವಿಧಾನ, ಕನ್ನಡ ಪರಿಸರದ ಸ್ಥಳನಾಮಗಳಿಗೆ ಅಂತಹ ವಾರ್ಗಿಕ ಮತ್ತು ನಿರ್ದಿಷ್ಟಗಳ ಅಳವಡಿಕೆ, ಪ್ರಯೋಜನ ಹೀಗೆ ಹಲವಾರು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಜೊತೆಗೆ ಕೃತಿಯ ಆರಂಭದಲ್ಲಿ ಉಪಯುಕ್ತವಾದ ಗ್ರಂಥಸೂಚಿಯನ್ನು ನೀಡಿದ್ದಾರೆ. ಭಾಷಾವಿಜ್ಞಾನ, ನಾಮವಿಜ್ಞಾನ, ಇತರ ಭಾಷೆಯ ಗ್ರಂಥಗಳನ್ನು ಪಟ್ಟಿಮಾಡಿದ್ದಾರೆ. ಈ ಬಗೆಯ ನಿಷ್ಪತ್ತಿ ಕುರಿತಾದ ಕೃತಿಗಳು ಆಯಾ ಪ್ರಾದೇಶಿಕವಾರು ರಚನೆಯಾಗುವ ಅಗತ್ಯವಿದೆ. ಅಂತಹ ಒಂದು ಮಾರ್ಗವನ್ನು ಕೆಮ್ತೂರು ಅವರು ತೋರಿಸಿದ್ದಾರೆ.

೨.೨೩. ಕನ್ನಡ ನಾಮವಿಜ್ಞಾನ - ಡಾ.ಎಂ.ಎಂ.ಕಲ್ಬುರ್ಗಿ - ೧೯೮೯

ಕನ್ನಡ ನಾಮಾಧ್ಯಯನ ಕ್ಷೇತ್ರಕ್ಕೆ ಎಂ.ಎಂ.ಕಲ್ಬುರ್ಗಿಯವರ ಈ ಕೃತಿ ವೈಜ್ಞಾನಿಕವಾಗಿ ಮೂಡಿಬಂದಿದೆ. ಅಧ್ಯಯನದ ಇತಿಹಾಸವನ್ನು ಹೇಳುತ್ತಾ, ಈ ಕ್ಷೇತ್ರಕ್ಕೆ ಕಾಲಿಡುವವರಿಗೆ ಶಾಸನ, ಕೈಫಿಯತ್ತು, ಸ್ಥಳಪುರಾಣಗಳು, ಭೌಗೋಳಿಕ ಪರಿಸರ, ಜಾನಪದ ಪರಂಪರೆಯ ಜ್ಞಾನ ಬಹುಮುಖ್ಯವೆಂದು ಹೇಳಿದ್ದಾರೆ. ಸ್ಥಳನಾಮಗಳ ನಿಷ್ಪತ್ತಿಯನ್ನು ಪಾಮರ ನಿಷ್ಪತ್ತಿ, ಪಂಡಿತ ನಿಷ್ಪತ್ತಿ, ನಿಜ ನಿಷ್ಪತ್ತಿ ಎಂದು ಮೂರು ಬಗೆಯಲ್ಲಿ ವಿವರಿಸಿಕೊಂಡಲ್ಲಿ

ಪ್ರಾಮಾಣಿಕ ಅಧ್ಯಯನ ಸಾಧ್ಯವೆಂದು ಕಲ್ಬುರ್ಗಿಯವರು ಅಭಿಪ್ರಾಯ ಪಡುತ್ತಾರೆ. ಗ್ರಾಮದ ಸೃಷ್ಟಿ ರಚನೆಯು ಅಲೆಮಾರಿ ಮಾನವನಿಂದ ಇಂದಿನ ನಾಗರಿಕನವರೆಗೆ ಬೆಳೆದ ಬಗೆಯನ್ನು ಗುರುತಿಸಿ ಸೃಷ್ಟಿ ಘಟ್ಟ ಮೊದಲಹಂತ. ಇದನ್ನು ದಾಟಿದ ರಚನೆಯ ಘಟ್ಟಕ್ಕೆ ಗ್ರಾಮದ ರೂಪು ಚಲಿಸಿತು. ಈ ರಚನೆಯ ಕಾಲಾವಧಿಯಲ್ಲಿ ನಾಮಕರಣ ಪದ್ಧತಿಯು ಆರಂಭವಾಯಿತು. ತನ್ನೊಂದಿಗೆ ಇರುವ ಭೌಗೋಳಿಕ ವಾತಾವರಣದಿಂದ ಮೊದ ಮೊದಲು ಸ್ಥಳನಾಮಗಳು ನಿರ್ದೇಶಿಸಲ್ಪಟ್ಟವು. ಮುಂದೆ ನಿಸರ್ಗವಾಚಿಗೆ ಬದಲಾಗಿ ಜನಾಂಗವಾಚಿ, ವ್ಯಕ್ತಿವಾಚಿ ಇತ್ಯಾದಿಯಾಗಿ ಹೆಸರು ನೀಡುವ ಪದ್ಧತಿ ಆರಂಭವಾಯಿತು ಎಂದು ತಿಳಿಸಿದ್ದಾರೆ.

ನಾಮದ ರಾಚನಿಕ ಸ್ವರೂಪದಲ್ಲಿ, ನಾಮದ ಅರ್ಥಸ್ವರೂಪ, ವಾರ್ಗಿಕಗಳ ಅರ್ಥಸ್ವರೂಪ ಅವುಗಳ ವೈಜ್ಞಾನಿಕ ವರ್ಗೀಕರಣ, ನಾಮವ್ಯತ್ಯಾಸ, ರೂಪಾಂತರ, ಭಾಷಾಂತರ, ನಾಮಾಂತರ, ಸಂಸ್ಕೃತೀಕರಣ ಮುಂತಾದ ವಿಷಯಗಳನ್ನು ಬಹು ಖಚಿತವಾಗಿ ನಿರೂಪಿಸಿದ್ದಾರೆ.

ಕಲ್ಬುರ್ಗಿಯವರ 'ನಾಮವಿಜ್ಞಾನ' ಕೃತಿಯು ಸಂಶೋಧಕರಿಗೆ ಅನೇಕ ಹೊಸ ಹೊಳಹುಗಳ ಕಡೆಗೆ ಕರೆದೊಯ್ಯುತ್ತದೆ. ಇಂತಹ ಎಳೆಗಳಿಂದಲೇ ಮುಂದಿನ ಅಧ್ಯಯನಕ್ಕೆ ಹೆದ್ದಾರಿಯನ್ನು ನಿರ್ಮಿಸುವಂತೆ ಪ್ರೇರೇಪಿಸಿದ್ದಾರೆ. ಜೊತೆಗೆ ವ್ಯಕ್ತಿನಾಮ ಅಧ್ಯಯನವನ್ನು ಈ ಕೃತಿ ಒಳಗೊಂಡಿದೆ. ಹೆಚ್ಚಾಗಿ ವರ್ಣನಾತ್ಮಕ, ವ್ಯಾಕರಣಾತ್ಮಕ ಮಾದರಿಯಿಂದ ದೂರವಿದೆ. ಸ್ಥಳನಾಮಗಳ ಸಮಗ್ರ ಕೋಶ ಅಗತ್ಯವೆಂಬುದನ್ನು ವಿಶದ ಪಡಿಸಿದ್ದಾರೆ. ಹಾಗೆಯೇ ಜನಾಂಗಿಕ ಸ್ಥಳನಾಮಗಳನ್ನು ಹೇಳುವಾಗ ಮುಂಡರು: ಕೋಲರು: ಹಂದರು: ಕಾತರು: ಎಂಬಂತಹ ಸಮುದಾಯಗಳು ನಾಡಿನಲ್ಲಿ ಹಿಂದೆ ಇದ್ದರು. ಇವರ ಹೆಸರಿಂದಲೇ ಮುಂಡರಗಿ, ಹಂದ್ರಾಳ, ಕಾತರಕಿ ಬಂದಿವೆಯೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಈ ಜನಾಂಗಗಳ ಅಸ್ತಿತ್ವ ಮತ್ತು ಇರುವಿಕೆಯನ್ನು ಇನ್ನೂ ಖಚಿತಪಡಿಸಿಕೊಳ್ಳಬೇಕಿದೆ. ಏನೇ ಇದ್ದರೂ ಕನ್ನಡಕ್ಕೆ ಇದೊಂದು ಅಗತ್ಯವಾಗಿ ಬೇಕಾಗುವ ಕೃತಿಯಾಗಿದೆ.

**೨.೨೪. ತೆಲುಗು ಮೀದ ಕನ್ನಡ ಭಾಷಾ ಪ್ರಭಾವಂ - ಡಾ.ಆದವಾನಿ ಹನುಮಂತಪ್ಪ - ೧೯೮೯**

ಇದು ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ನಿಬಂಧ. ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿ ಪರಸ್ಪರ ತೆಲುಗು - ಕನ್ನಡ ಎರಡು ಭಾಷೆಗಳು ಒಂದಲ್ಲ ಒಂದು ರೀತಿಯಲ್ಲಿ ಸ್ಪಂದಿಸಿ ಕೊಡುಕೊಳೆಯಲ್ಲಿ ಸಂಘರ್ಷವನ್ನು ಉಂಟು ಮಾಡಿವೆ. ಇಂತಹ ದ್ವಿಭಾಷಿಕ ಪರಿಸರದಲ್ಲಿ ಹನುಮಂತಪ್ಪ ಅವರು ತೆಲುಗಿನ ಮೇಲೆ ಕನ್ನಡದ ಪ್ರಭಾವವನ್ನು ಶಬ್ದ, ಪದ, ವಾಕ್ಯ, ಸಂಧಿ, ಸಮಾಸ ಮುಂತಾದ ವ್ಯಾಕರಣಾಂಶಗಳಲ್ಲಿ ಗುರುತಿಸುತ್ತಾ, ಸ್ಥಳನಾಮ ಹಾಗೂ ವ್ಯಕ್ತಿನಾಮಗಳನ್ನು ಚರ್ಚಿಸುತ್ತಾರೆ. ಅನಂತಪುರ ಜಿಲ್ಲೆಯನ್ನು ಕೇಂದ್ರವಾಗಿಟ್ಟುಕೊಂಡು ಗ್ರಾಮನಾಮಗಳ ಕನ್ನಡ ನಿರ್ಮಾಣ ಪ್ರಭಾವವನ್ನು ಗುರುತಿಸಿದ್ದಾರೆ. ಕನ್ನಡ ಸಂಬಂಧಸೂಚಕ, ಪರಿಮಾಣ, ವರ್ಣ, ಜಲ, ಭೌಗೋಳಿಕ, ವೃಕ್ಷ, ಜಂತು, ಧಾನ್ಯ, ಆಭರಣ ಸೂಚಕಗಳಲ್ಲಿ ಹಾಗೂ ಶೈವಮತದ ಪ್ರಭಾವವನ್ನು ಗ್ರಾಮನಾಮಗಳ ಮೂಲಕ ತೋರಿಸಿದ್ದಾರೆ. ಅನೇಕ ವಾರ್ಗಿಕಗಳನ್ನು (ಕನ್ನಡಕ್ಕೆ ಸಂಬಂಧಿಸಿ) ಪಟ್ಟಿಮಾಡಿ ಕನ್ನಡದ ಪ್ರಭಾವ ಹೇಳುತ್ತಾರೆ. ಬಹುಮುಖ್ಯವಾಗಿ ರಾಜಕೀಯಗಡಿಯನ್ನು ಮೀರಿ

ಭೌಗೋಳಿಕವಾಗಿ ಏಕ ಪರಿಸರ ಹೊಂದಿದ್ದ ಕಾಲದಲ್ಲಿ ಅನಂತಪುರ ಜಿಲ್ಲೆಯು ಕನ್ನಡನಾಡಿನಲ್ಲಿತ್ತು. ಈ ಕಾರಣದಿಂದಾಗಿ ಹನುಮಂತಪ್ಪನವರು ಗುರುತಿಸಿದ ಇಲ್ಲಿನ ಪ್ರಭಾವವನ್ನು ಇತ್ತೀಚಿನ ಬೆಳವಣಿಗೆಯೆಂದು ಭಾವಿಸಬಹುದು.

೨.೨೫. ಹೆಸರಿನಲ್ಲೇನಿದೆ? ಡಾ.ಆರ್ಕೆ ಮಣಿಪಾಲ - ೧೯೮೯

ಈ ಸಂಕಲನದಲ್ಲಿ ನಾಮ ವಿಜ್ಞಾನಕ್ಕೆ - ಅದರಲ್ಲೂ ಸ್ಥಳನಾಮ - ವ್ಯಕ್ತಿನಾಮಗಳಿಗೆ ಸಂಬಂಧಿಸಿದ ಒಟ್ಟು ಒಂಭತ್ತು ಸಂಪ್ರಬಂಧಗಳಿವೆ. ಕೆಮ್ತೂರು ರಘುಪತಿಯವರು ಈ ಕ್ಷೇತ್ರಕ್ಕೆ ಅಪಾರ ಕೊಡುಗೆಯನ್ನಿತ್ತಿದ್ದಾರೆ. ಈಗಾಗಲೇ ತುಳುನಾಡಿನ ಸ್ಥಳನಾಮಗಳು ಎಂಬ ವಿಷಯದ ಮೇಲೆ ಪಿಎಚ್.ಡಿ. ಮಾಡಿದ್ದಾರೆ. ಇದು ಮುಂದುವರೆದ ಅಧ್ಯಯನವಾಗಿದೆ. ಸಂಸ್ಕೃತಿ - ಚರಿತ್ರೆಯ ಆಕರಗಳಾಗಿ ನಿಲ್ಲುವ ನಾಮಗಳ ಸಾಧ್ಯತೆ ಮತ್ತು ಸಾಧನೆಯ ಕುರಿತು ಚರ್ಚಿಸಿ, ರೂಪವನ್ನು ನಿರ್ಧರಿಸುವಾಗ ವಹಿಸಬೇಕಾದ ಜಾಗರೂಕತೆ, ಸಂಸ್ಕೃತೀಕರಣ ಮಾಡುವಾಗ ರಾಜಕೀಯದಂತಹ ಕೈವಾಡ ತಪ್ಪಿಸಿ ಮೂಲ ನಿಷ್ಪತ್ತಿಯನ್ನು ಕಾಪಾಡುವುದು ಸ್ಥಳನಾಮಗಳ ಮಹತ್ವ ಮುಂತಾದುವನ್ನು ಚರ್ಚಿಸುತ್ತಾರೆ. ಉಡುಪಿ ತಾಲ್ಲೂಕಿಗೆ ಸೀಮಿತಗೊಳಿಸಿ ಅಲ್ಲಿನ ಸ್ಥಳನಾಮಗಳ ಸ್ವರೂಪ, ಸಮಸ್ಯೆ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಎತ್ತಿತೋರುತ್ತಾರೆ. ಭೌಗೋಳಿಕವಾಗಿ ಕರ್ನಾಟಕದ ಇತರೆ ಪ್ರದೇಶಗಳಿಂದ ಈ ತಾಲ್ಲೂಕು ಹೇಗೆ ವಿಶಿಷ್ಟತೆಯನ್ನು ಹೊಂದಿದೆ ಎಂಬ ಬಗ್ಗೆ ಬರೆಯುತ್ತಾರೆ. ಹಾಗೆಯೇ ಈ ಪ್ರದೇಶದ ಸ್ಥಳನಾಮಗಳ ಭಾಷಾ ವೈಜ್ಞಾನಿಕ ಪರಿಶೀಲನೆಯನ್ನು ಮಾಡಿಕೊಟ್ಟಿದ್ದಾರೆ. ಇದು ವರ್ಣನಾತ್ಮಕ ಮಾದರಿಯಾಗಿದ್ದು, ಇಲ್ಲಿನ ಹೆಸರುಗಳಲ್ಲಿ ಕಾಣಿಸಿಕೊಳ್ಳುವ ಸ್ವರ ಮತ್ತು ವ್ಯಂಜನ ಗುಚ್ಛ ಎಂದು ಪ್ರತಿ ಅಕ್ಷರಕ್ಕೂ ಉದಾಹರಣೆ ಕೊಡುತ್ತಾರೆ. ಇಲ್ಲಿನ ಸ್ಥಳನಾಮಗಳು ಮೂಲದ್ರಾವಿಡ - ತುಳು - ಅನ್ಯದೇಶೀಯ ಭಾಷಿಕ ನಿಯಮಕ್ಕೆ ಒಳಪಟ್ಟಿವೆ ಎನ್ನುತ್ತಾರೆ.

ಸ್ಥಳನಾಮ, ವ್ಯಕ್ತಿನಾಮಗಳ ರಾಚನಿಕ ಅಧ್ಯಯನ ಅಷ್ಟೊಂದು ಸಮಗ್ರವಾಗಿಲ್ಲದಿದ್ದರೂ ಮಾದರಿಯಾಗಿದೆ. ಸ್ಥಳನಾಮಗಳ ದೇಶ್ಯೀಕರಣ ಪ್ರಕ್ರಿಯೆ ಎಂಬುದು ಉತ್ತಮವಾದ ಲೇಖನ. ಸಂಸ್ಕೃತೀಕರಣದಿಂದ ಜಾನಪದರು ಹೇಗೆ ಭಿನ್ನವೆಂಬುದು ಇಲ್ಲಿ ಅಭಿವ್ಯಕ್ತಿಸಿದ್ದಾರೆ. ತುಳುನಾಡಿನ ಸ್ಥಳನಾಮಗಳ ಘಟಕಗಳಲ್ಲಿ ವೈಜ್ಞಾನಿಕವಾಗಿ ವಿಭಾಗ ಮಾಡಿದ್ದಾರೆ. ಕೊನೆಗೆ ಈ ನಾಡಿನ ನಾಮಕ್ಷೇತ್ರಕ್ಕೆ ಗುರುರಾಜಭಟ್ಟರ ಕೊಡುಗೆ ಹಾಗೂ ದಕ್ಷಿಣ ಭಾರತದ ಸ್ಥಳನಾಮಗಳ ಸಮೀಕ್ಷೆಯನ್ನು ಮಾಡಲಾಗಿದೆ. ಎಂಭತ್ತರ ದಶಕದಲ್ಲಿ ಇದೂ ಕೂಡ ಅತ್ಯಂತ ಉಪಯುಕ್ತ ಕೃತಿ.

೨.೨೬. ಗಡಿನಾಡಿನ ಕಿಡಿ - ಪ್ರ.ಸಂ. - ವೈ.ಎಸ್.ವಿ.ಭಟ್ಟ - ೧೯೯೦

ಈ ಕೃತಿಯಲ್ಲಿ 'ಕಾಸರಗೋಡು - ಶಬ್ದೋತ್ಪತ್ತಿ ವಿಚಾರ' ಎಂಬ ಒಂದು ಲೇಖನವಿದೆ. ಕೆ.ಸುಬ್ರಹ್ಮಣ್ಯಭಟ್ಟ ಅವರು, ಪ್ರವಾಸಕಥನ, ಸಾಹಿತ್ಯಗ್ರಂಥ ಇನ್ನಿತರ ಆಕರಗಳನ್ನು ಬಳಸಿಕೊಂಡು ಕಾಸರಗೋಡು ಸ್ಥಳನಾಮದ ಬಗೆಗೆ ಚರ್ಚಿಸಿದ್ದಾರೆ.

**೨.೨೭. ಜಾನಪದ ಸಿರಿ - ಡಾ.ಬಸವರಾಜ ಪೋಲೀಸ ಪಾಟೀಲ - ೧೯೯೦**

ಇದರಲ್ಲಿ 'ಸ್ಥಳೀಯ ಐತಿಹ್ಯಗಳು' ಎಂಬ ಸಂಪ್ರಬಂಧವಿದೆ. ಸ್ಥಳೀಯ ಐತಿಹ್ಯಗಳು ಹೆಚ್ಚಾಗಿ ಗುಪ್ತನಿಧಿ, ಬಲಿ, ದೆವ್ವ, ದೈವ ಮುಂತಾದ ಬಗ್ಗೆ ಪ್ರಸ್ತಾಪಿಸುತ್ತವೆ. ಅಂತೆಯೇ ಕೆಲವು ಸ್ಥಳನಾಮ ಕುರಿತು ಹೇಳುತ್ತವೆ ಎಂದು ಚರ್ಚಿಸಿದ್ದಾರೆ.

**೨.೨೮. ಬೀದರ ಜಿಲ್ಲೆಯ ಸ್ಥಳನಾಮಗಳು - ಭಂಡೆ ವೈಜನಾಥ - ೧೯೯೦ (ಅ.ಪ್ರ.)**

ಇದು ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ಸಂಶೋಧನ ನಿಬಂಧ. ಹದಿನಾರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡ ಈ ನಿಬಂಧದಲ್ಲಿ ಮೂರು ಭಾಗಗಳನ್ನು ಮಾಡಿಕೊಂಡು ಸ್ಥಳನಾಮವಿಜ್ಞಾನದ ಇತಿಹಾಸ: ಸ್ವರೂಪವಿವೇಚನೆ: ಬೀದರ ಜಿಲ್ಲೆಯ ಪರಿಚಯ: ಸ್ಥಳನಾಮ ದಾಖಲಾತಿ ಮತ್ತು ನೋಂದಾವಣಿ: ಸ್ಥಳನಾಮಗಳ ಭಾಷಿಕ ಹಿನ್ನೆಲೆ: ಇದರಲ್ಲಿ ಪದಧ್ವನಿಮಾ ವ್ಯವಸ್ಥೆ, ಸಂಧಿ ಮತ್ತು ಆಕೃತಿ ಧ್ವನಿಮಾ ವ್ಯವಸ್ಥೆ: ಧ್ವನಿವ್ಯತ್ಯಯಗಳು: ಆಕೃತಿಮಾ ವ್ಯವಸ್ಥೆ ಹಾಗೂ ಆವರ್ತನೆ: ಸ್ಥಳನಾಮ ಪ್ರಕ್ರಿಯೆಗಳು ಅದರಂತೆ ಭಾಗ ಎರಡರಲ್ಲಿ ಸ್ಥಳನಾಮಗಳ ಸಾಂಸ್ಕೃತಿಕ ಅಧ್ಯಯನ ಮತ್ತು ವರ್ಗೀಕರಣ ಜಾನಪದದಲ್ಲಿ ಸ್ಥಳನಾಮಗಳು: ಸ್ಥಳನಾಮ ಪ್ರಕಟಣೆ: ಕೊನೆಗೆ ಉಪಸಂಹಾರವನ್ನೊಳಗೊಂಡಿದೆ.

ಈ ಕೃತಿಯು ಎಲ್ಲಿಯೂ ಬೀದರ ಜಿಲ್ಲೆಯ ಸ್ಥಳನಾಮಗಳಿಗೆ ನೇರವಾಗಿ ಚರ್ಚೆಗೆ ಪ್ರವೇಶಿಸದೇ, ಅನಗತ್ಯವಾದ ಇತಿಹಾಸ, ಭೌಗೋಳಿಕ ಪರಿಚಯ: ಭಾಷಾ ವಿಜ್ಞಾನದ ಸಿದ್ಧಾಂತಗಳ ಪರಿಚಯ ಬೀದರಿನ ಉಪಭಾಷೆಯ ವಿಶ್ಲೇಷಣೆ ಮುಂತಾಗಿ ಸಂಬಂಧವೇ ಇಲ್ಲದ ವಿಷಯವನ್ನು ಪ್ರಸ್ತಾಪಿಸುತ್ತದೆ. ಒಟ್ಟಾರೆ ಕೃತಿಯು ಯಾವುದೋ ಒಂದು ಭಾಷಿಕ ಸಿದ್ಧಾಂತದ ಅಧ್ಯಯನದಂತಿದ್ದು, ಸಂಪೂರ್ಣ ವರ್ಣನಾತ್ಮಕ ಮಾದರಿಯನ್ನು ಅನುಸರಿಸಿದೆ. ಜೊತೆಗೆ ಸ್ಥಳನಾಮ ನಿಷ್ಪತ್ತಿಯ ಕಡೆಗೆ ಗಮನಹರಿಸಿಲ್ಲ. ಐದುನೂರು ಪುಟಕ್ಕೆ ಮೀರಿ ವ್ಯಾಪಿಸಿದ ಈ ನಿಬಂಧ ಸ್ಥಳನಾಮಾಧ್ಯಯನಕ್ಕೆ ನೇರವಾಗಿ ಅಲ್ಲದಿದ್ದರೂ, ಪರೋಕ್ಷವಾಗಿ ಮಾದರಿಯಾಗಬಹುದಾದ ಕೆಲವು ವಿಷಯಗಳನ್ನು ಪ್ರಸ್ತಾಪಿಸುತ್ತದೆ.

**೨.೨೯. ಸ್ಥಳನಾಮ ವ್ಯಾಸಂಗ - ದೇಜಗೌ - ೧೯೯೦**

ಸ್ಥಳನಾಮಗಳಿಗೆ ಸಂಬಂಧಿಸಿದ ಹತ್ತು ಲೇಖನಗಳು ಈ ಕೃತಿಯಲ್ಲಿವೆ. ಸ್ಥಳನಾಮಗಳ ಉಗಮ, ಸ್ಥಳನಾಮ ವಿಜ್ಞಾನದ ವ್ಯಾಪ್ತಿ: ಪ್ರಭಾವ, ಇತಿಹಾಸ: ಸಂಶೋಧನಾ ವಿಧಾನ, ವರ್ಗೀಕರಣ, ಸ್ಥಳನಾಮಗಳ ಜಾಯಮಾನ ಹಾಗೂ ಬದಲಾವಣೆ, ಕ್ಷೇತ್ರಕಾರ್ಯ: ಗ್ರಾಮನಾಮ ಜಾನಪದ ಹಾಗೂ ಮೈಸೂರುನಗರದ ಬೀದಿಯ ಹೆಸರುಗಳು ಮುಂತಾದುವನ್ನು ವೈಜ್ಞಾನಿಕವಾಗಿ ಸ್ಥಳನಾಮ ವಿಜ್ಞಾನಿಗಳಾದ ದೇಜಗೌ ವಿವರಿಸಿದ್ದಾರೆ. ಸ್ಥಳನಾಮ ಸಂಶೋಧಕರಿಗೆ ಈ ಕೃತಿಯು ಸಂಶೋಧನೆಯ ವಿದಿ ವಿಧಾನಗಳನ್ನು ಹೇಳಿಕೊಡುತ್ತದೆ. ಪ್ರಶ್ನಾವಳಿಯೂ ಈ ಪುಸ್ತಕದಲ್ಲಿರುವುದು ವಿಶೇಷ. ಪುಸ್ತಕದ ಕೊನೆಯಲ್ಲಿ ಅನುಬಂಧವನ್ನು ನೀಡಿದ್ದು ಇಲ್ಲಿ ಕೊಡವರ ಕುಟುಂಬ ನಾಮಗಳು, ರಾಷ್ಟ್ರೀಯ ಸ್ಥಳನಾಮ ನಿಘಂಟಿನ ಅಗತ್ಯತೆ, ಹೆಸರು ಬದಲಾವಣೆಗೊಂದು ಟಿಪ್ಪಣಿ ಎಂಬ ಲೇಖನಗಳು ನಾಮಾಧ್ಯಯನ

ಹಾಗೂ ಆ ಶಾಸ್ತ್ರದ ತಾತ್ವಿಕ ಅಂಶಗಳಿಂದ ಚರ್ಚಿಸಿದ್ದಾರೆ. ಇದು ಸ್ಥಳನಾಮ ಸಂಶೋಧನೆಯಲ್ಲಿ ಅತ್ಯಂತ ಮಹತ್ವದ ಮಾರ್ಗದರ್ಶಿ ಕೃತಿಯಾಗಿದೆ.

**೨.೩೦. ಚಿತ್ರದುರ್ಗ ಜಿಲ್ಲಾದರ್ಶಿನಿ - ಟಿ.ಗಿರಿಜ: ೧೯೯೧**

ಚಿತ್ರದುರ್ಗ ಜಿಲ್ಲೆಯ ಒಂಭತ್ತು ತಾಲ್ಲೂಕುಗಳ ಐತಿಹಾಸಿಕ, ಭೌಗೋಳಿಕ ಇತ್ಯಾದಿ ವಿವರ ನೀಡುವ ಈ ಕೃತಿಯಲ್ಲಿ ಆಯಾ ಗ್ರಾಮಗಳ ವಿವರ ನೀಡುವಾಗ ಸಾಂದರ್ಭಿಕವಾಗಿ ಕೆಲವು ಊರುಗಳ ಸ್ಥಳಾನಾಮ ನಿಷ್ಪತ್ತಿಯನ್ನು ವೈಜ್ಞಾನಿಕವಾಗಿಯಲ್ಲದಿದ್ದರೂ ದೊರೆತ ಮಾಹಿತಿಯಿಂದ ವಿವರಿಸಿದ್ದಾರೆ. ಚಿತ್ರದುರ್ಗದ ಸ್ಥಳಪುರಾಣ: ಚಿತ್ರದುರ್ಗದ ನಾಮಾವಳಿ ಎಂಬಲ್ಲಿ ದುರ್ಗಕ್ಕೆ ಇದ್ದ ಚಿಂಚನಕಲ್ಲು: ಚಿತ್ರಕಲುದುರ್ಗ: ಚಿಮ್ಮತ್ತನೂರುದುರ್ಗ: ಶಿಂಗನಗಿರಿದುರ್ಗ: ಚಿಂನನಗಿರಿದುರ್ಗ: ಚಿಂತಲಕಲದುರ್ಗ: ವುತ್ರಕಲ್ ದುರ್ಗ: ಚಿಮಟದುರ್ಗ: ಚಿನ್ಮೂಲಗಿರಿದುರ್ಗ: ಪೆರುಮಾಳೆಪುರ: ಬ್ರಹ್ಮಪುರಿ: ಸೂಳ್ಗಲ್ಲು: ಬೆಮ್ಮತ್ತನೂರು ಪಟ್ಟಣ: ಚಂದವಳ್ಳಿ: ಚಿಟಲುಡ್ರುಗ್ : ಎಂಬ ವಿವಿಧ ಹೆಸರುಗಳನ್ನು ಶಾಸನ, ಪುರಾಣ - ಬಖೈರು - ಐತಿಹ್ಯ ಮುಂತಾದ ಆಧಾರದಿಂದ ಹೇಳಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಸ್ಥಳನಾಮ ಶೋಧನೆಗೆ ಈ ಕೃತಿ ಸಹಾಯವಾಗುತ್ತದೆ.

**೨.೩೧. ಸಂಶೋಧನ - ಸಂ - ಲಕ್ಷ್ಮಣ ತೆಲಗಾವಿ - ೧೯೯೧**

ಇಲ್ಲಿ ಎರಡು ಲೇಖನಗಳಿವೆ. 'ಸ್ಥಳನಾಮಶಾಸ್ತ್ರ' ಎಂಬಲ್ಲಿ ಕೆ.ವಿ. ರಮೇಶ ಅವರು ಸ್ಥಳನಾಮಶಾಸ್ತ್ರದ ಮಹತ್ವ, ಮೂಲ ಆಕರಗಳು, ವರ್ಗೀಕರಣದ ವಿಧಾನ ಹಾಗೂ ನಿಘಂಟಿನ ಅಗತ್ಯವನ್ನು ಹೇಳಿದ್ದಾರೆ. 'ಸ್ಥಳನಾಮ ಅಧ್ಯಯನದಲ್ಲಿ ಶಾಸನಗಳ ಉಪಯೋಗ' ಎಂಬಲ್ಲಿ ವಿ.ಗೋಪಾಲಕೃಷ್ಣ ಅವರು ಶಾಸನೋಕ್ತ ನಾಮಗಳನ್ನು ಪ್ರಸ್ತಾಪಿಸಿ ಅವುಗಳ ಉಪಯೋಗವನ್ನು ವಿವರಿಸಿದ್ದಾರೆ.

**೨.೩೨. ಸ್ಥಳನಾಮ ಐತಿಹ್ಯಗಳು - ಡಾ.ಎಂ.ಬೈರೇಗೌಡ, ಕೆ.ಪಿ.ದೊಡ್ಡಿ - ೧೯೯೧**

ಈ ಲೇಖನದಲ್ಲಿ ಬೈರೇಗೌಡ ಅವರು, ಆನೇಕಲ್ಲು: ಕನಕಪುರ: ರಾಮನಗರ ತಾಲ್ಲೂಕುಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿನ ಸ್ಥಳನಾಮಗಳನ್ನು ವಿಶ್ಲೇಷಿಸಿದ್ದಾರೆ. ಬೂದೊಟ್ಟಿ ಮೌನೇಶ್ವರ: ತಣಿಗೆಸೊಣೆ: ಬಟ್ಟಲುಗುಂಡೇಶ್ವರ: ಕೊಂಬಿನಕಲ್ಲು ಮುಂತಾದ ನಿರ್ವಸಿತ ಸ್ಥಳನಾಮಗಳನ್ನು ಮಾತ್ರ ಆಯ್ದು, ಆ ಹೆಸರಿನ ಐತಿಹ್ಯ, ಪುರಾಣ, ನಂಬಿಕೆ, ನಿಷ್ಪತ್ತಿ ಮುಂತಾದುವನ್ನು ಕ್ಷೇತ್ರಮಾಹಿತಿಯಿಂದ ವಿಶದಪಡಿಸಿದ್ದಾರೆ.

**೨.೩೩. ಜಾನಪದ ಸ್ಪಂದನ - ಪ್ರೊ.ಸಿ.ಕೆ.ನಾವಲಗಿ - ೧೯೯೨**

ಈ ಕೃತಿಯಲ್ಲಿ ಕೊಣ್ಣೂರು ಒಂದು ಜೈನ ಐತಿಹ್ಯ ಎಂಬ ಲೇಖನದಲ್ಲಿ ಕೊಣ್ಣೂರು ಸ್ಥಳನಾಮದ ಜನಪದ ನಿರುಕ್ತಿಯ ಬಗ್ಗೆ ಪ್ರಸ್ತಾಪಿಸುತ್ತಾ, ಐತಿಹ್ಯ, ಶಾಸನಾತ್ಮಕ ಹೆಸರು, ಆಡುನುಡಿಯಲ್ಲಿ ಅದರ ರೂಪ, ಅದರ ಸಾಂಸ್ಕೃತಿಕ ಪರಿಸರ ಹಾಗೂ ಜೈನ ಕಥೆಗಳಲ್ಲಿ ಉಲ್ಲೇಖವಾದ ಬಗೆಗೆ ವಿವರಿಸಿದ್ದಾರೆ.

**೨.೩೪. ಶಿಕ್ಷಣ ಸಂಪದ - ಪ್ರೊ.ವಿ.ಜಿ.ಮಾರಿಹಾಳ ಅವರ ಅಭಿನಂದನ ಗ್ರಂಥ - ೧೯೯೨**

'ಬೆಳಗಾವಿ ಜಿಲ್ಲೆಯ ಸ್ಥಳನಾಮಗಳು' ಎಂಬಲ್ಲಿ ಪ್ರೊ.ಪಿ.ಜಿ.ಕೆಂಪಣ್ಣನವರು ಸಂಕ್ಷಿಪ್ತವಾಗಿ ಸ್ಥಳನಾಮ ಚರಿತ್ರೆಯನ್ನು ಹೇಳಿ, ಬೆಳಗಾವಿಯ ಗ್ರಾಮನಾಮಗಳನ್ನು ವ್ಯಕ್ತಿ, ಕುಲ, ವೃತ್ತಿ, ಜಲ, ಶಿಲಾ, ದೈವ, ಮೃಗ, ಸಸ್ಯ ಮುಂತಾದ ಹಿನ್ನೆಲೆಯಲ್ಲಿ ವರ್ಗೀಕರಿಸುತ್ತಾರೆ. ಜೊತೆಗೆ ಮರಾಠಿಯ ಪ್ರಭಾವವನ್ನು ಗುರುತಿಸಿದ್ದಾರೆ. ಅನ್ಯ ಭಾಷೆಯ ಪ್ರಭಾವದಿಂದ ಸ್ಥಳನಾಮಗಳಿಗೆ ಆಗುವ ಆತಂಕವನ್ನು ವ್ಯಕ್ತಪಡಿಸಿದ್ದಾರೆ.

**೨.೩೫. ಜಾನಪದ - ೧೯೯೧ - ಸಂ - ಜಿ.ಎಸ್.ಭಟ್ಟ - ೧೯೯೩**

ನಮ್ಮ ಸುತ್ತಿನ ಕೆಲವು ಸ್ಥಳನಾಮಗಳು' ಎಂಬ ಲೇಖನದಲ್ಲಿ ಶ್ರೀ ಕುರುವ ಬಸವರಾಜ ಅವರು ಸ್ಥಳನಾಮಗಳ ನಿರ್ದೇಶನದ ಹಿಂದಿನ ಕಾರಣಗಳನ್ನು ಪ್ರಾಕೃತಿಕ: ಚಾರಿತ್ರಿಕ: ವ್ಯಕ್ತಿಗತ: ಜನಾಂಗಿಕ: ಕಸುಬಿನ ಹಿನ್ನೆಲೆಯಿಂದ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ.

**೨.೩೬. ಹೊಸತು ಹೊಸತು - ಡಾ.ಎಂ.ಚಿದಾನಂದಮೂರ್ತಿ - ೧೯೯೩**

ಶ್ರವಣಬೆಳ್ಗೊಳಕ್ಕೆ ಮೂಲ 'ಹಳೆಯ ಬೆಳ್ಗೊಳ' ಎಂಬ ಲೇಖನದಲ್ಲಿ ಚಿದಾನಂದಮೂರ್ತಿಯವರು ಬಿಳಿಯಕೊಳಯಾವುದು, ಶ್ರವಣಬೆಳ್ಗೊಳ ಊರು ಈಚಿನದು, ಶಾಸನಗಳಲ್ಲಿ ಉಲ್ಲೇಖವಾದ 'ಬೆಳ್ಗೊಳ'ವೇ ಹಳೆಯ ಬೆಳ್ಗೊಳ ಅಲ್ಲಿರುವ ಬಸದಿ, ಆ ಗ್ರಾಮದವಾಸ್ತು, ಇದಕ್ಕೆ ಜಾನಪದಶಾಸ್ತ್ರದ ಆಧಾರಗಳು, ಅಲ್ಲಿರುವ ಬೆಳ್ಗೊಳ ಅದ್ರಿ, ಬೆಳ್ಗೊಳ ತೀರ್ಥ ಮುಂತಾದ ಬಗ್ಗೆ ವಿವರಿಸಿದ್ದಾರೆ. ಕಟ್ಟಪ್ಪುನಾಡು ಬೆಳ್ಗೊಳವಾದ ಬಗೆಗೆ ಚರ್ಚಿಸಿದ್ದಾರೆ. ಈ ಹಿಂದೆ ಸಂಶೋಧನ ತರಂಗ (೧೯೬೬) ದಲ್ಲಿ ಇದೇ ಗ್ರಾಮದ ಹೆಸರಿನ ಜಿಜ್ಞಾಸೆಯನ್ನು ಮೂರ್ತಿಯವರು ಎತ್ತಿದ್ದರು.

**೨.೩೭. ಜನಪ್ರಿಯ ೩೦೦ ಸ್ಥಳನಾಮಗಳು - ಬೇ.ಗೋ.ರಮೇಶ - ೧೯೯೪**

ಈ ಕೃತಿಯಲ್ಲಿ ಬೇ.ಗೋ.ರಮೇಶ ಅವರು ಕರ್ನಾಟಕದ ಜಿಲ್ಲಾ ಕೇಂದ್ರಗಳು ಹಾಗೂ ಐತಿಹಾಸಿಕ, ಪ್ರಮುಖ ಪುಣ್ಯಕ್ಷೇತ್ರಗಳ ಸ್ಥಳನಾಮಗಳನ್ನು ವಿವರಿಸಿದ್ದಾರೆ. ಈ ಸ್ಥಳನಾಮಗಳ ಐತಿಹಾಸಿಕ ಮಹತ್ವ, ನಿಷ್ಪತ್ತಿ, ಪುರಾಣಗಳ ವ್ಯಾಖ್ಯಾನ, ಜಾನಪದ ಐತಿಹ್ಯ, ಮೌಖಿಕ ಪರಂಪರೆಯ ನಿರುಕ್ತ ಹೀಗೆ ಹಲವಾರು ವೈವಿಧ್ಯದ ವಿಷಯಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಕ್ಷೇತ್ರಕಾರ್ಯದಿಂದ ದೂರವಿರುವ ಈ ಅಧ್ಯಯನದಲ್ಲಿ ಕೆಲವು ಊಹಾತ್ಮಕ ವಿವರಣೆಗಳಿವೆ. ಆದರೂ ಬೇ.ಗೋ.ರಮೇಶ ಅವರ ಈ ಕೃತಿ ಸಂಗ್ರಹ ಯೋಗ್ಯವಾದುದು. ಗಂಭೀರ ಅಧ್ಯಯನ ಇದರಲ್ಲಿ ಇಲ್ಲವಾದರೂ, ಸ್ಥಳನಾಮ ತಿಳುವಳಿಕೆಗೆ ಒಂದು ರೂಪಿಕೆಯನ್ನು ನೀಡುತ್ತದೆ.

**೨.೩೮. ಅಮೃತವರ್ಷ - ಸಂ - ಎಚ್ .ಕೆ.ರಾಜೇಗೌಡ. ಡಿ.ಕೆ.ರಾಜೇಂದ್ರ - ೧೯೯೫**

ಈ ಕೃತಿಯು ಸ್ಥಳನಾಮ ಅಧ್ಯಯನಕ್ಕೆ ದೇಜಗೌ ಅವರ ಕೊಡುಗೆ - ಮುತ್ತುರಾಜ ಹಾಗೂ ಸ್ಥಳನಾಮ ವ್ಯಾಸಂಗ - ಬಿ.ಜಿ.ಕನಕೇಶಮೂರ್ತಿ. ಎಂಬ ಎರಡು ಲೇಖನಗಳನ್ನು ಒಳಗೊಂಡಿದೆ. ಇವೆರಡೂ, ದೇಜಗೌ ಅವರು ಸ್ಥಳನಾಮ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯನ್ನು ನಿರೂಪಿಸುತ್ತವೆ.

**೨.೩೯. ಐತಿಹಾಸಿಕ - ಡಾ.ಎಂ.ಎಂ.ಕಲ್ಬುರ್ಗಿ - ೧೯೯೫**

ಬನವಾಸಿ: ಸ್ಥಳನಾಮ ವಿವೇಚನೆ ಎಂಬ ಲೇಖನದಲ್ಲಿ ಬನವಾಸಿಯ ಉತ್ತರಪದ ಅಸಿ, ಆಸೆಯ ಬಗ್ಗೆ ಸರಿಯಾದ ಮಾಹಿತಿಗಳಿಲ್ಲ. ಬಹುಶಃ ಇದು ಇತ್ತೀಚಿನ ಪದ. ಇದರ ಪ್ರಾಚೀನ ರೂಪ ಕೆಯ್ = (ಸ್ಥಳ ಎಂಬರ್ಥ) ಎಂದಾಗಿರಬಹುದೆಂದು ವಿವರಿಸಲಾಗಿದೆ.

**೨.೪೦. ಕನ್ನಡ ಸಾಹಿತ್ಯ ಸಂಬಂಧ - ಡಾ.ವಿ.ಜಿ.ಪೂಜಾರ - ೧೯೯೫**

ಈ ಕೃತಿಯಲ್ಲಿ 'ಗುಲಬರ್ಗಾ ತಾಲ್ಲೂಕಿನ ಸ್ಥಳನಾಮಗಳು': ಭಾಷಿಕ ಸಾಂಸ್ಕೃತಿಕ ಅಧ್ಯಯನ' ಎಂಬ ಒಂದು ಲೇಖನವಿದೆ. ಭೌಗೋಳಿಕ - ಭಾಷಿಕ - ಸಾಂಸ್ಕೃತಿಕ ಮಹತ್ವವನ್ನು ಸ್ಥಳನಾಮಗಳ ಮೂಲಕ ಗುರುತಿಸುತ್ತಾ, ಮುಸ್ಲಿಂ ಆಡಳಿತದ ಪ್ರಭಾವದಿಂದ ಗುಲಬರ್ಗ ತಾಲ್ಲೂಕಿನ ಸ್ಥಳನಾಮಗಳ ಮೇಲಾದ ಉರ್ದುವಿನ ಪ್ರಭಾವವನ್ನು ಅಬಾದ್ - ಗಾಂವ್ - ಖೇಡ - ಎಂಬ ವಾರ್ಗಿಕಗಳು: ಪಿರೋಜ್ : ಸುಲ್ತಾನ: ಅಹ್ಮದ್ : ಮುಂತಾದ ವ್ಯಕ್ತ್ಯಂಶದ ನಿರ್ದಿಷ್ಟಗಳಿಂದ ಗುರುತಿಸುತ್ತಾರೆ. ಈ ತಾಲ್ಲೂಕಿನ ಬಯಲು ಭೂ ಪರಿಸರ, ಸಂಸ್ಕೃತಿ - ಸ್ಥಳನಾಮಗಳ ಮೇಲೆ ಉಂಟುಮಾಡಿದ ಪ್ರಭಾವವನ್ನು ಗುರುತಿಸಿದ್ದಾರೆ. ಹೈದ್ರಾಬಾದ್ ಕರ್ನಾಟಕದ ನಾಮಾಧ್ಯಯನಕ್ಕೆ ಸಹಾಯಕ ಸಂಪ್ರಬಂಧವಿದು.

**೨.೪೧. ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳ ಅಧ್ಯಯನ - ಜಗದೀಶ ಮಠದ - ೧೯೯೫ - ಎಂ.ಫಿಲ್. ಅ.ಪ್ರ.**

ಕೈಫಿಯತ್ತುಗಳ ಮೂಲಕ ಸ್ಥಳನಾಮಗಳ ಅಧ್ಯಯನ ಮಾಡಿದ ಮೊದಲ ನಿಬಂಧವಿದು. ಸಾಧ್ಯವಾದಷ್ಟು ಈ ಅಧ್ಯಯನ ತಾತ್ವಿಕವಾಗಿ ಮಂಡಿಸಲ್ಪಟ್ಟಿದೆ. ಐತಿಹ್ಯ, ವಿವರಣೆ, ವ್ಯಕ್ತಿ, ಸ್ಥಳ, ಘಟನಾ ಪ್ರಧಾನ ಸ್ಥಳನಾಮಗಳು ಅವುಗಳ ವರ್ಗೀಕರಣ, ಪ್ರತಿನಾಮ, ಸಾಮಾಜಿಕತೆ ಹಾಗೂ ಸ್ಥಳನಾಮ ಕುರಿತಾದ ಕೈಫಿಯತ್ತಿನ ಪಠ್ಯಗಳನ್ನು ನಿರೂಪಿಸಲಾಗಿದೆ.

**೨.೪೨. ಗೋವಿಂದ ಪೈ ಸಂಶೋಧನ ಸಂಪುಟ - ಸಂ - ಹೆರಂಜೆ ಕೃಷ್ಣಭಟ್ಟ. ಮುರಳೀಧರ ಉಪಾಧ್ಯ - ೧೯೯೫**

ಶ್ರೀ ಗೋವಿಂದ ಪೈ ಅವರು ತುಳುನಾಡಿನ ಇತಿಹಾಸ ಬರೆಯುವಾಗ ಸ್ಥಳನಾಮಗಳನ್ನು ಸಾಂದರ್ಭಿಕವಾಗಿ ಅಲ್ಲಲ್ಲಿ ಚರ್ಚಿಸಿದ್ದಾರೆ. ತುಳು, ಭೂತಾಳ ಪಾಂಡ್ಯ ಶಬ್ದಗಳ ವಿವೇಚನೆ, ಮಂಗಳೂರು, ಕಾಸರಗೋಡು, ಪುತ್ತೂರು, ಕಾರ್ಕಳ ಮುಂತಾದ ಊರುಗಳ ನಿಷ್ಪತ್ತಿಯನ್ನು ಹೇಳಿದ್ದಾರೆ. ಹಾಗೆಯೇ 'ದಕ್ಷಿಣ ಕನ್ನಡ ಜಿಲ್ಲೆಯ ಹಳೆಯ ಹೆಸರುಗಳು' ಎಂಬ ಒಂದು ಲೇಖನದಲ್ಲಿ ಶಾಂತಿಕ, ಆಲುವ, ತುಳು ಮುಂತಾದ ಪದಗಳ ಚರ್ಚೆಯನ್ನು ಬರೆದಿದ್ದಾರೆ. ಪೈ ಅವರ ಎಲ್ಲ ಲೇಖನಗಳಲ್ಲಿಯೂ ಅಲ್ಲಲ್ಲಿ ಪದ ನಿಷ್ಪತ್ತಿಯ ಬಗ್ಗೆ ಮಾತಾಡಿದ್ದಾರೆ. ಆ ಮೂಲಕ ಸ್ಥಳನಾಮಾಧ್ಯಯನ ಕ್ಷೇತ್ರವನ್ನು ವಿಸ್ತರಿಸಿದ್ದಾರೆ.

**೨.೪೩. ಮಾರ್ಗ - ೨ : ಡಾ.ಎಂ.ಎಂ.ಕಲ್ಬುರ್ಗಿ - ೧೯೯೫**

ಈ ಲೇಖನ ಸಂಪುಟದಲ್ಲಿ ಚಿತ್ರದುರ್ಗದ ಪ್ರಾಚೀನ ಹೆಸರು: ಬನವಾಸಿ ಸ್ಥಳನಾಮ ವಿವೇಚನೆ: ಊರ ಹೆಸರುಗಳ ಕೊನೆಯ - ವರ - ವಾರ: ಧಾರವಾಡ ಗ್ರಾಮನಾಮ ವಿವೇಚನೆ: ಎಂಬ ವಿಷಯಗಳನ್ನು ಕಲ್ಬುರ್ಗಿಯವರು

ಚರ್ಚಿಸಿದ್ದಾರೆ. ಈ ಲೇಖನಗಳು ಬಿಡಿಯಾಗಿ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪ್ರಾಚೀನ ನಿಷ್ಪತ್ತಿಯ ನಿರ್ಧಾರ ಈ ನಾಲ್ಕು ಸಂಪ್ರಬಂಧಗಳಲ್ಲಿ ಬರೆಯಲಾಗಿದೆ.

**೨.೪೪. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು - ೧೯೯೫**

**ಸಂ - ಲಕ್ಷ್ಮಣ ತೆಲಗಾವಿ. ಎಂ.ವಿ.ಶ್ರೀನಿವಾಸನ್**

ಜೋಯಿಸರು ಚರಿತ್ರಪುರ ಚಿತ್ರದುರ್ಗ' ಎಂಬ ಲೇಖನದಲ್ಲಿ ಚಿತ್ರದುರ್ಗದ ಪ್ರಾಚೀನ ಹೆಸರುಗಳನ್ನು ಕುರಿತು ಹೇಳಿದ್ದಾರೆ. ಹಿಡಿಂಬಪಟ್ಟಣ: ಚಂದ್ರವಳ್ಳಿ: ಸೂಳ್ಗಲ್ಲು: ಬೆಮ್ಮತ್ತನೂರು: ಪೆರುಮಾಳೆಪುರ: ಮಲ್ಲರಾಯನದುರ್ಗ: ಚಿಂತರಕಲ್ಲು: ಫರೂಕಾಬಾದ್ ಎಂಬ ಹೆಸರುಗಳು ಹಾಗೂ ಅವುಗಳ ನಿಷ್ಪತ್ತಿ, ಕಾಲಾಂತರದ ಬದಲಾವಣೆಯನ್ನು ಅನೇಕ ಆಧಾರಗಳ ಮೂಲಕ ಹೇಳಿದ್ದಾರೆ.

**೨.೪೫. ಜಾನಪದ ಜಗತ್ತು - ಸಂ- ಪ್ರೊ.ಡಿ.ಲಿಂಗಯ್ಯ. ಡಾ.ಚಕ್ಕರೆ ಶಿವಶಂಕರ - ೧೯೯೬**

**(ಸ್ಥಳನಾಮ ಅಧ್ಯಯನ ವಿಶೇಷ ಸಂಚಿಕೆ)**

ಈ ಪುಸ್ತಕದಲ್ಲಿ ಹದಿನಾರು ಲೇಖನಗಳಿವೆ. ವಿವಿಧ ಲೇಖಕರಿಂದ ಬರೆಯಲ್ಪಟ್ಟ ಸ್ಥಳನಾಮಕ್ಕೆ ಸಂಬಂಧಿಸಿದ ಈ ಪ್ರಬಂಧಗಳು ಹೆಚ್ಚಾಗಿ ಜಾನಪದ ಹಿನ್ನೆಲೆಯಲ್ಲಿವೆ. ಕರ್ನಾಟಕದ ವಿವಿಧ ಪ್ರದೇಶಕ್ಕೆ ವ್ಯಾಪಿಸಿಕೊಂಡ ಇಲ್ಲಿನ ಲೇಖನಗಳು ಸ್ಥಳನಾಮಾಧ್ಯಯನ ನಡೆದು ಬಂದ ದಾರಿ, ಕನ್ನಡನಾಡಿನಲ್ಲಿ ಅದರ ಬೆಳವಣಿಗೆ, ಅಧ್ಯಯನದ ರೂಪು - ರೇಶೆಗಳು, ಸಮಸ್ಯೆ ನಿವಾರಣೆಗಳು; ಪ್ರಯೋಜನ - ಮಹತ್ವ; ಕನ್ನಡ ಗ್ರಾಮನಾಮಗಳ ಮೇಲೆ ತೆಲುಗು - ಮರಾಠಿ ಮುಂತಾದ ಅನ್ಯ ಭಾಷೆಯ ಪ್ರಭಾವ, ಭಾಷಾವೈಜ್ಞಾನಿಕ ಚರ್ಚೆ, ನಮ್ಮ ನಾಡಿನ ಮೂಲ ಸೆಲೆಯಾದ ಜಾನಪದದ ನೆಲೆಯಲ್ಲಿ ಸ್ಥಳನಾಮಗಳಿಗೆ ಅಂಟಿಕೊಂಡ ಪುರಾಣ, ಐತಿಹ್ಯ, ಕಾವ್ಯ, ಲಾವಣಿ, ಮತ್ತವುಗಳ ಸೊಗಸು, ಶಿಷ್ಟ ಜನರಿಂದಾದ ಸಂಸ್ಕೃತೀಕರಣದ ಛಾಯೆಗಳು, ಜಾನಪದ ನಿಷ್ಪತ್ತಿಗೇ ಹಿಂದಿರುಗುವ ಗ್ರಾಮೀಣ ಜನತೆಯ ಪರಂಪರೆಯ ನಿಷ್ಠೆ, ಒಂದೊಂದು ಊರು ಕಥೆಯಿಂದಲೇ ಆರಂಭವಾಗುವ ಬಗೆ, ಒಂದು ಊರಿನ ಹೆಸರು ಹೇಗೆ ಬಂತು ಎಂಬುದಕ್ಕೆ ಜಾನಪದರು ಒಂದು ಸಂಪೂರ್ಣ ಲಾವಣಿಯನ್ನು ಕಟ್ಟಿ ಹಾಡುವ ರೀತಿ, ಹೈದ್ರಾಬಾದ್ ಕರ್ನಾಟಕದಂತಹ ಗಡಿ ಪ್ರದೇಶದಲ್ಲಿ ಸ್ಥಳನಾಮಗಳ ಮೇಲೆ ಆದ ತೆಲುಗು ಮತ್ತು ಉರ್ದುವಿನ ಪ್ರಭಾವದಿಂದ ಕನ್ನಡದ ಗ್ರಾಮನಾಮಗಳ ಮೇಲಾದ ವಿಶಿಷ್ಟ ಪ್ರಭಾವ, ಪ್ರೇರಣೆ, ಭಾಷಿಕ ಕ್ರಿಯೆಗಳು ಮುಂತಾದ ಬಗೆಗೆ ಇಲ್ಲಿನ ಲೇಖನಗಳು ವಿಶೇಷ ಮಾಹಿತಿಯನ್ನು ನೀಡುತ್ತವೆ. ವಿವಿಧ ಆಯಾಮಗಳಲ್ಲಿ ಬರೆಯಲ್ಪಟ್ಟ ಈ ವಿಶೇಷ ಲೇಖನಗಳು ತುಂಬಾ ಮಹತ್ವವನ್ನೊಂದಿವೆ.

**೨.೪೬. ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು - ಡಾ.ಕೆ.ಎಂ.ವೀರಭದ್ರಶರ್ಮ - ೧೯೯೬**

ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳ ಅಧ್ಯಯನ ಮಾಡಿದ ಅಪ್ರಕಟಿತ ಕೃತಿಯಿದು. ನಿಬಂಧದಲ್ಲಿ ಹತ್ತು ಅಧ್ಯಾಯಗಳಿವೆ. ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಸರದ ಸ್ವರೂಪವನ್ನು ಮತ್ತು ಆ ಜಿಲ್ಲೆಯನ್ನಾಳಿದ ವಿವಿಧ ರಾಜವಂಶಗಳನ್ನು ಹೇಳಿದ್ದಾರೆ. ನಂತರ ಗ್ರಾಮನಾಮಗಳನ್ನು ಭೌಗೋಳಿಕ, ಸಾಂಸ್ಕೃತಿಕ, ಜನಾಂಗಿಕ ಎಂದು

ವರ್ಗೀಕರಿಸಿದ್ದಾರೆ. ಸ್ಥಳನಾಮಗಳ ಹಿನ್ನೆಲೆಯಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ ಮುಂತಾಗಿ ತರ್ಕಬದ್ಧವಾದ ವಿಚಾರಗಳನ್ನು ಮಂಡಿಸುವ ಮೂಲಕ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಹೇಳಿದ್ದಾರೆ. ಕೃತಿಯು ಸ್ಥಳನಾಮಗಳ ಶಬ್ದ ಕೋಶವನ್ನು ಒಳಗೊಂಡಿದೆ. ಸ್ಥಳನಾಮಗಳ ದಾಖಲಾತಿಗಾಗಿ ಶಾಸನ ಮತ್ತಿತರ ಹಳೆಯ ದಾಖಲೆಗಳನ್ನು ದೀರ್ಘವಾಗಿ ನೀಡಲಾಗಿದೆ. ಭಾಷಿಕ ಹಿನ್ನೆಲೆಯಲ್ಲಿ ಸ್ಥಳನಾಮವನ್ನು ನೋಡುವಾಗ ಬಳ್ಳಾರಿಯ ಉಪಭಾಷೆಯನ್ನು ಚರ್ಚಿಸಿ, ತೆಲುಗಿನ ಪ್ರಭಾವವನ್ನು ಕೆಲವುಕಡೆ ಗಮನಿಸಿದ್ದಾರೆ. ಧ್ವನಿಮಾ, ಆಕೃತಿಮಾ ಮಟ್ಟದಲ್ಲಿ ನಾಮದ ಮಹತ್ವ ಮತ್ತು ಸ್ಥಳನಾಮಗಳಿಂದ ಸಂಧಿ ಪರಿಶೀಲನೆ ಮಾಡಲಾಗಿದೆ. ಕೊನೆಯಲ್ಲಿ ಬಳ್ಳಾರಿ ಜಿಲ್ಲೆಯ ಕೆಲವು ವಿಶಿಷ್ಟ ಸ್ಥಳನಾಮ ಅವುಗಳ ಕೊಡುಗೆ ಹಾಗೂ ಮಹತ್ವವನ್ನು ಕೃತಿ ಒಳಗೊಂಡಿದೆ.

ಈ ನಿಬಂಧದಲ್ಲಿ ವಾರ್ಗಿಕಗಳನ್ನು ಹೆಚ್ಚಾಗಿ ಗಮನಿಸಿಲ್ಲ. ಭಾಷಿಕ ಅಧ್ಯಯನದಲ್ಲಿ ಹೆಚ್ಚು ಬಳ್ಳಾರಿಯ ಉಪಭಾಷೆಯ ಬಗೆಗೆ ವಿವರಿಸುವ ಮೂಲಕ ನೇರವಾಗಿ ಗ್ರಾಮನಾಮಗಳಿಗೆ ತಳುಕು ಹಾಕುವುದಿಲ್ಲ. ಹೈದ್ರಾಬಾದ್ ಕರ್ನಾಟಕದ ಸ್ಥಳನಾಮ ಅಧ್ಯಯನಕಾರರಿಗೆ ಸಹಾಯಕ ನಿಬಂಧವಿದು.

**೨.೪೭. ಸಕಲೇಶಪುರ ಪರಿಸರದ ಸ್ಥಳನಾಮಗಳು - ಡಾ.ವಿಶ್ವನಾಥ - ೧೯೯೬**

ಈ ಕೃತಿಯು ಮೈಸೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗೆಂದು ಒಪ್ಪಿಸಿದ್ದು. ಮುಖ್ಯವಾಗಿ ಎಂಟು ಅಧ್ಯಾಯಗಳನ್ನೊಳಗೊಂಡಿದೆ. ಉದ್ದೇಶ ವ್ಯಾಪ್ತಿಯನ್ನು ಹೇಳುತ್ತಾ, ಸ್ಥಳನಾಮಗಳ ಸ್ವರೂಪ, ಉಗಮ, ಅಧ್ಯಯನದ ಇತಿಹಾಸ ವರ್ಗೀಕರಣ ಹೇಳಿದ್ದಾರೆ. ಕೃತಿಯ ಮೂರನೇ ಅಧ್ಯಾಯದಲ್ಲಿ ಸ್ಥಳನಾಮಾಧ್ಯಯನದ ಪ್ರಯೋಜನ, ಐತಿಹಾಸಿಕ, ಸಾಂಸ್ಕೃತಿಕ, ಸಾಮಾಜಿಕ, ಜಾನಪದ ಅಂಶಗಳನ್ನು ಹೇಳಲಾಗಿದೆ. ಸಾಮಾಜಿಕ ಅಂಶವನ್ನು ಹೇಳುವಲ್ಲಿ ಬೌದ್ಧರಿಗೆ ಸಂಬಂಧಿಸಿ ಬೂದಿಹಾಳು, ಬೂದಿಪಡಗ ಎಂಬ ಉದಾಹರಣೆ ನೀಡಲಾಗಿದೆ. ಇದು ಅಸಂಬದ್ಧ. ಇವು ಮೂಲತ: ಪುರಾತತ್ವ ನೆಲೆಗಳೆಂಬುದನ್ನು ಗಮನಿಸಬೇಕು. ಅದರಂತೆ ಸಿಖ್ ಧರ್ಮಕ್ಕೆ ಸಂಬಂಧಿಸಿ ಸಿಕಂದರಾಬಾದ್' ಎಂಬುದನ್ನು ಉದಾಹರಿಸಿರುವುದೂ ಸತ್ಯದಿಂದ ದೂರವಾದದ್ದು, ಇದು ಮುಸ್ಲಿಂ ದೊರೆ ಸಿಕಂದರಲೂದಿಯ ಹೆಸರಿನಲ್ಲಿದೆ. ಇಂತಹ ಅನೇಕ ಲೋಪಗಳು ನಿಬಂಧದಲ್ಲಿ ಅಲ್ಲಲ್ಲಿ ದೊರೆಯುತ್ತವೆ. ಸಕಲೇಶಪುರವನ್ನು ಕೇಂದ್ರವಾಗಿಟ್ಟುಕೊಂಡ ಈ ಸಂಶೋಧನೆಯಲ್ಲಿ ಆ ತಾಲ್ಲೂಕಿನ ಸ್ವರೂಪ, ವರ್ಗೀಕರಣವಿದೆ. ಅಧ್ಯಾಯ ಆರರಲ್ಲಿ ಭಾಷಿಕ ವಿಶ್ಲೇಷಣೆ ವರ್ಣನಾತ್ಮಕ ಮಾದರಿಯನ್ನು ಅನುಸರಿಸಿದೆ. ಅಧ್ಯಾಯ ಏಳರಲ್ಲಿ ಸ್ಥಳನಾಮಗಳ ನಿಷ್ಪತ್ತಿಯನ್ನು ಶಾಸ್ತ್ರೀಯವಾಗಿ ಹೇಳಲಾಗಿದೆ. ಉಪಸಂಹಾರ ಯಾವುದೇ ಫಲಿತಾಂಶವನ್ನು ವಿಶೇಷವಾಗಿ ಹೇಳದೇ ಅಧ್ಯಯನದ ಉದ್ದೇಶ, ಸ್ವರೂಪವನ್ನೇ ಮರು ಪರಿಶೀಲಿಸಲಾಗಿದೆ.

**೨.೪೮. ಸ್ಥಳನಾಮಗಳು - ಡಾ.ವಿಶ್ವನಾಥ - ೧೯೯೬**

ಇದರಲ್ಲಿ ಏಳು ಸಂಪ್ರಬಂಧಗಳಿವೆ. ಸ್ಥಳನಾಮಗಳ ಸ್ವರೂಪ, ವರ್ಗೀಕರಣ, ಅಧ್ಯಯನದ ಇತಿಹಾಸ, ಪ್ರಯೋಜನ, ನಾಮಗಳ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಜಾನಪದೀಯ ಅಂಶಗಳನ್ನು ವಿವರಿಸಿದ್ದಾರೆ. ಇಲ್ಲಿ ಹಿಂದೂಧರ್ಮದಲ್ಲಿ ಬರುವ ಸ್ಥಳನಾಮ ಎಂದು ವಿವರಿಸುವಾಗ ಶೈವರಿಗೆ ಸಂಬಂಧಿಸಿ ಉಡುತಡಿ: ಸೊನ್ನಲಿಗೆ

ಎಂಬ ಊರುಗಳ ಉದಾಹರಣೆ ನೀಡುತ್ತಾರೆ. ಅಕ್ಕಮಹಾದೇವಿಯಿಂದ ಉಡುತಡಿ: ಸಿದ್ಧರಾಮನಿಂದ ಸೊನ್ನಲಿಗೆ ಬಂದಿದೆಯೇ? ಒಪ್ಪಲು ಕಷ್ಟವಾಗುತ್ತದೆ. ಅದರಂತೆ ಬೌದ್ಧರಿಗೆ ಸಂಬಂಧಿಸಿ; ಬೂದಿಹಾಳು ಬೂದಿಪಡಗ: ಸಿಖ್ಖರಿಗೆ - ಸಿಕಂದರಬಾದ್ ಎಂಬ ಉದಾಹರಣೆಗಳೂ ಸಮಂಜಸವಲ್ಲ. ಈ ಎಲ್ಲ ಅಂಶಗಳು ಅವರ ಸಂಶೋಧನ ಕೃತಿ (ಸಕಲೇಶಪುರ ಪರಿಸರದ ಸ್ಥಳನಾಮಗಳು)ಯಲ್ಲಿ ಮುಂದುವರೆದಿವೆ. ಕೊನೆಯಲ್ಲಿ ಕೆಲವು ಜಿಲ್ಲಾ ಕೇಂದ್ರಗಳ ಸ್ಥಳನಾಮಗಳ ನಿಷ್ಪತ್ತಿಯನ್ನು ಕೊಟ್ಟಿದ್ದಾರೆ.

**೨.೪೯. ಕನ್ನಡ ಸಂಸ್ಕೃತಿ: ಶಂಬಾ ಜೋಶಿಯವರ ಆಲೋಚನೆಗಳು: ಜಿ.ವಿ.ರಾಜಣ್ಣ - ೧೯೯೭**

ಈ ನಿಬಂಧದಲ್ಲಿ 'ಭಾಷಿಕ ಪ್ರಮಾಣ ಮತ್ತು ಸ್ಥಳನಾಮಗಳ ಮೂಲಕ ಕಂನಾಡಿನ ವ್ಯಾಪ್ತಿ' ಎಂಬ ಉಪಾಧ್ಯಾಯವಿದೆ. ಇಲ್ಲಿ ಭಾಷಿಕ ಪ್ರಮಾಣಗಳನ್ನು ಸ್ಥಳನಾಮಗಳ ಮೂಲಕ ಸಂಸ್ಕೃತಿಯನ್ನು ಅರಿತು, ಕಂನಾಡಿನ ಮೇರೆಯನ್ನು ಗುರುತಿಸುವಲ್ಲಿ ಶಂಬಾ ಮಾಡಿರುವ ಪ್ರಯತ್ನವನ್ನು ಹೇಳಲಾಗಿದೆ.

**೨.೫೦. Kannada Onamastics- Dr.M.M.Kalburgi -1997**

ಡಾ.ಎಂ.ಎಂ.ಕಲ್ಬುರ್ಗಿಯವರು ಬರೆದ 'ನಾಮವಿಜ್ಞಾನ' ಎಂಬ ಪುಸ್ತಕವನ್ನು ಇಂಗ್ಲೀಷಿಗೆ ಅನುವಾದಿಸಿದ ಕೃತಿಯಿದು. ಶ್ರೀ ಸದಾನಂದ ಕನವಳ್ಳಿಯವರು ಸಮರ್ಥ ಅನುವಾದದ ಮೂಲಕ ಕನ್ನಡ ನಾಮವಿಜ್ಞಾನ ಕ್ಷೇತ್ರವನ್ನು ಇಂಗ್ಲಿಶ್‌ನ ಮೂಲಕ ಪರಿಚಯ ಮಾಡಿದ್ದಾರೆ. ಮೂಲಕೃತಿಯಲ್ಲಿನ ಯಾವುದೇ ವಿಷಯಕ್ಕೆ ಭಂಗ ತಾರದಂತೆ ಯಥಾವತ್ತಾಗಿ ಅನುವಾದಿಸುವ ಮೂಲಕ ಸ್ಥಳನಾಮ ವಿಜ್ಞಾನದ ಮಹತ್ವ, ಪ್ರಯೋಜನ, ಇತಿಹಾಸ ಅದರ ಹೊಸ ಹೊಸ ಆಯಾಮಗಳ ಕುರಿತಾದ ಸಮರ್ಥ ಅಧ್ಯಯನವನ್ನು ಸಾರ್ವತ್ರಿಕವಾಗಿಸಿ, ಎಲ್ಲರಿಗೂ ತಲುಪಿಸುವ ಪ್ರಯತ್ನವನ್ನು ಕನವಳ್ಳಿಯವರು ಮಾಡಿದ್ದಾರೆ.

**೨.೫೧. ಚಂದ್ರಕೊಡೆ - ಹಂಪ ನಾಗರಾಜಯ್ಯ - ೧೯೯೭**

ಈ ಪುಸ್ತಕದಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದ ಮೂರು ಲೇಖನಗಳಿವೆ. 'ಶಾಸನಗಳಲ್ಲಿ ಊರಹೆಸರುಗಳು - ಜೈನ ಪಳಯುಳಿಕೆ' ಎಂಬ ಲೇಖನದಲ್ಲಿ ಕರ್ನಾಟಕದಲ್ಲಿ ಜೈನರಿಗೆ ಸಂಬಂಧಿಸಿದ ಶಾಸನೋಕ್ತ ಸ್ಥಳನಾಮಗಳನ್ನು ಹೇಳಿದ್ದಾರೆ. ಶ್ರವಣನಹಳ್ಳಿ: ಮುಕ್ಕೊಡೆಹಳ್ಳಿ: ಬಸ್ತಿಹಳ್ಳಿ: ಜಿನಹಳ್ಳಿ: ಸವಣದತ್ತಿ (ಸವದತ್ತಿ) ಮುಂತಾದ ಉದಾಹರಣೆ ನೀಡಿದ್ದಾರೆ. ಇಂದು ಬದಲಾಗಿರುವ ಸ್ಥಳನಾಮಗಳ ಮೂಲ ನಿಷ್ಪತ್ತಿಯನ್ನು ಹಂಪನಾ ಅವರು ಹೇಳಿದ್ದಾರೆ.

ಶಾಸನಗಳಲ್ಲಿ ಜೈನ ತೀರ್ಥಗಳು: ಎಂಬ ಲೇಖನದಲ್ಲಿ 'ತೀರ್ಥ' ಎಂಬ ವಾರ್ಗಿಕವನ್ನು ಪುಣ್ಯಕ್ಷೇತ್ರಗಳಿಗೆ ಸೇರಿಸುವ ಪ್ರವೃತ್ತಿ ಹಾಗೂ ಜೈನರಲ್ಲಿ 'ತೀರ್ಥದ' ಮಹತ್ವ: ಶಾಸನೋಕ್ತ ಮೂವತ್ತುಮೂರು ತೀರ್ಥಗಳು ಮತ್ತು ಅವುಗಳ ವಿವರಣೆ ತುಂಬಾ ಸೊಗಸಾಗಿ ಬರೆದಿದ್ದಾರೆ. 'ಶಾಸನಗಳಲ್ಲಿ ಬಸದಿಗಳು' ಎಂಬ ಲೇಖನದಲ್ಲಿ ಜೈನರ ಬಸದಿಗಳು, ಆಚಾರ್ಯರ, ಕುಲಗುರುಗಳ, ತೀರ್ಥಂಕರರ, ವ್ಯಕ್ತಿಗಳ ಸ್ತ್ರೀಯರು ಮುಂತಾದವರಿಂದ ನಾಮನಿರ್ದೇಶನಗೊಂಡಿರುವುದನ್ನು ಸವಿವರವಾಗಿ ಶಾಸನಗಳ ಮೂಲಕ ವಿವರಿಸಿದ್ದಾರೆ. ಈ ಮೂರೂ ಲೇಖನಗಳು ಜೈನರ ಸ್ಥಳನಾಮಗಳ ಅಧ್ಯಯನದಲ್ಲಿ ಬಹುಮುಖ್ಯ ಆಕರಗಳೆಂದು ತಿಳಿಯಬೇಕು.

**೨.೫೨. ಮಹಾಮಾರ್ಗ - ಸಂ - ಸದಾನಂದ ಕನವಳ್ಳಿ - ವೀರಣ್ಣರಾಜೂರು - ೧೯೯೮**

ಕನ್ನಡನಾಮ ವಿಜ್ಞಾನ' ಎಂಬ ಲೇಖನದಲ್ಲಿ ಆರ್ಕೆ ಮಣಿಪಾಲ ಅವರು ಒಟ್ಟು ಸ್ಥಳನಾಮ, ವ್ಯಕ್ತಿನಾಮ ಕುರಿತು ಸಮಗ್ರ ವಿಷಯವನ್ನು ಮಂಡಿಸಿದ್ದಾರೆ. ನಾಮಾಧ್ಯಯನದ ಇತಿಹಾಸ, ಪ್ರಸ್ತುತತೆ, ಮಹತ್ವ, ಪ್ರಯೋಜನ, ವರ್ಗೀಕರಣ, ಭಾಷಿಕ, ಸಾಂಸ್ಕೃತಿಕ ಅಂಶಗಳು, ಸಂಸ್ಕೃತೀಕರಣದ ಪ್ರಭಾವ, ಜನಪದ - ಶಿಷ್ಟರಲ್ಲಿ ಸ್ಥಳನಾಮ ನಿಷ್ಪತ್ತಿ ಮುಂತಾದ ವಿಷಯಗಳನ್ನು ತಾರ್ಕಿಕವಾಗಿ ಹೇಳಿದ್ದಾರೆ. ಸ್ಥಳನಾಮಗಳಲ್ಲಿ ಗ್ರಾಮನಾಮಗಳಿಗಿಂತ ಕ್ಷೇತ್ರನಾಮಗಳು (ಹೊಲ: ಗದ್ದೆ: ಮನೆ: ಬೀದಿ: ಇತ್ಯಾದಿ) ಸೂಕ್ಷ್ಮ ವಿಷಯಗಳನ್ನು ಪೂರೈಸುತ್ತವೆಂಬ ಅಭಿಪ್ರಾಯ ನೀಡಿದ್ದಾರೆ.

**೨.೫೩. ಅಭ್ಯಾಸ - ವಸಂತಕುಮಾರ ಪೆರ್ಲ - ೧೯೯೧**

'ಸ್ಥಳನಾಮಗಳ ಮೂಲಕ ಜಾತಿ ನಿರ್ದೇಶ' ಎಂಬ ಲೇಖನದಲ್ಲಿ ಪೆರ್ಲ ಅವರು ಸ್ಥಳ ಸಂಬಂಧವಾಗಿ ಬಳಕೆಯಾಗುವ ಉಪನಾಮಗಳು ಆಧುನಿಕ ಕಾಲದಲ್ಲಿ ಜಾತಿ ನಿರ್ದೇಶಕವಾಗಿರುವುದಿಲ್ಲ. ಹಾಗೂ ತುಳುನಾಡಿನ ಬ್ರಾಹ್ಮಣರ ಕೆಲವು ಉಪನಾಮಗಳಿಂದ ಸ್ಥಳನಾಮಗಳನ್ನು ಪರಿಶೀಲಿಸಿದ್ದಾರೆ. ತುಳುನಾಡಿನ ಸ್ಥಳಗಳ ವಾರ್ಗಿಕ ಮತ್ತು ನಿರ್ದಿಷ್ಟಗಳಲ್ಲಿನ ವಿಶೇಷತೆಯನ್ನು ಗುರುತಿಸಿದ್ದಾರೆ. ಸಾಮಾಜಿಕ ಅಧ್ಯಯನಕ್ಕೆ ಸಹಾಯಕವಾಗುವ ಸಂಪ್ರಬಂಧವಿದು.

**೨.೫೪. ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ - ಡಾ.ಸಿ.ನಾಗಭೂಷಣ - ೧೯೯೯**

ದೇವಾಲಯಗಳ ಹೆಸರುಗಳು' ಎಂಬ ಒಂದು ಲೇಖನದಲ್ಲಿ ಶಾಸನ ಮತ್ತು ಸಾಹಿತ್ಯ ಉಲ್ಲೇಖದಿಂದ ಪ್ರಸಿದ್ಧ ದೇವರ ಹೆಸರಿನಲ್ಲಿ ದೇವಾಲಯಗಳ ನಿರ್ಮಾಣ ಮತ್ತು ನಾಮನಿರ್ದೇಶನ, ಪುಣ್ಯಕ್ಷೇತ್ರಗಳ ಹೆಸರಿನಲ್ಲಿ; ಗುರುಗಳ ಹೆಸರಿನಲ್ಲಿ; ವ್ಯಕ್ತಿಗಳ ಹೆಸರಿನಲ್ಲಿ; ತಂದೆ - ತಾಯಿಯರ ಹೆಸರಿನಲ್ಲಿ; ರಾಜಮನೆತನದವರ ಹೆಸರಿನಲ್ಲಿ; ಗಾವುಂಡರ; ದಂಡನಾಯಕರ; ವಣಿಕರ; ಸಾಮಾನ್ಯ ಜನರು; ಗ್ರಾಮದೇವತೆಗಳ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿ, ಅವರವರಿಗೆ ಸಂಬಂಧಿಸಿದ ನಾಮಗಳನ್ನು ನಿರ್ದೇಶನ ಮಾಡಿದ ಬಗೆಯನ್ನು ನಾಗಭೂಷಣ ಅವರು ವಿಶದಪಡಿಸುತ್ತಾರೆ.

**೨.೫೫. ನೇಗಿನಹಾಳ ಪ್ರಬಂಧಗಳು - ಎಂ.ಬಿ.ನೇಗಿನಹಾಳ - ೧೯೯೯**

ಈ ಕೃತಿಯಲ್ಲಿ 'ಸ್ಥಳವಾಚಕಗಳ - ವರ ಮತ್ತು ವಾರ ಹಾಗೂ ಕರ್ನಾಟಕದ ಸ್ಥಳನಾಮ, ವ್ಯಕ್ತಿನಾಮಗಳ ಅಧ್ಯಯನ ಎಂಬ ಎರಡು ಸಂಪ್ರಬಂಧಗಳಿವೆ. ಮೊದಲ ಲೇಖನದಲ್ಲಿ ಚಿದಾನಂದಮೂರ್ತಿ ಹಾಗೂ ಎಂ.ಎಂ.ಕಲ್ಬುರ್ಗಿಯವರು ಚರ್ಚಿಸಿದ ವರ, ವಾರದ ಬಗ್ಗೆ ಪ್ರಸ್ತಾಪವೆತ್ತಿ, ಕಲ್ಬುರ್ಗಿಯವರ ವಾದವನ್ನು ಒಪ್ಪುತ್ತಾ, ಆಹಾರದಿಂದ ಬಂದ ವರ, ವಾರಗಳ ಶಾಸನೋಕ್ತ ಉದಾಹರಣೆಗಳನ್ನು ನೀಡಿದ್ದಾರೆ.

ಈವರೆಗೆ ಕನ್ನಡದಲ್ಲಿ ನಾಮಾಧ್ಯಯನಕ್ಕೆ ಕಾಲಿಟ್ಟವರ ಬಗ್ಗೆ ವಿವರಿಸುತ್ತಾ, ಕರ್ನಾಟಕ ಸಂಸ್ಕೃತಿಗೆ ಸ್ಥಳನಾಮ, ವ್ಯಕ್ತಿನಾಮಗಳ ಮಹತ್ವವನ್ನು ಹೇಳಿದ್ದಾರೆ. ಪ್ರಾಕೃತ - ಸಂಸ್ಕೃತದಿಂದ ಕನ್ನಡ ಸ್ಥಳನಾಮಗಳ ಮೇಲೆ ಆದ

ಪ್ರಭಾವವನ್ನೂ ಹೇಳಿದ್ದಾರೆ. ಇವೆರಡೂ ಲೇಖನಗಳು ಯಾವುದೇ ವಿಶೇಷ ಹೊಳಹುಗಳನ್ನೇನು ನೀಡಲಾರವು. ಆದರೂ ಶಾಸನಗಳನ್ನು ಆಧರಿಸಿದ ಇಂಥಾ ಅಧ್ಯಯನ ಅಗತ್ಯ.

**೨.೫೬. ಭಾಷಾಲೇಖ - ಡಾ.ಸಂಗಮೇಶ ಸವದತ್ತಿಮಠ - ೧೯೯೯**

ಭಾಷಾಲೇಖ' ಸಂಶೋಧನಾ ಲೇಖನಗಳನ್ನು ಒಳಗೊಂಡ ಕೃತಿ. ಇದರಲ್ಲಿ ಅಂಕಿತನಾಮಗಳು: ಭಾಷಾವೈಜ್ಞಾನಿಕ ಚಿಂತನೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಸ್ಥಳನಾಮ ಕುರಿತು ಎರಡು ಲೇಖನಗಳಿವೆ. ಊರ ಹೆಸರುಗಳು ಒಂದು ವಿವೇಚನೆ' ಎಂಬ ಮೊದಲ ಲೇಖನದಲ್ಲಿ ಆದಿಮಾನವನಿಂದ ಆರಂಭವಾದ ವಾಸ ಹಾಗೂ ಅವರ ನೆಲೆ, ಅವುಗಳ ಹೆಸರಿನ ಆರಂಭ ಹಾಗೂ ವಾರ್ಗಿಕಗಳಿಂದ ತಿಳಿಯಬಹುದಾದ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಹೇಳಿದ್ದಾರೆ. ಈ ಲೇಖನ ಈಗಾಗಲೇ ಕನ್ನಡದಲ್ಲಿ ಬಂದ ಹಳೆಯ ವಿಷಯ ಹೊಂದಿದ್ದು, ಹೊಸತನ್ನೇನು ಹೇಳುವುದಿಲ್ಲ. ಹೈದ್ರಾಬಾದ್ ಕರ್ನಾಟಕದ ಸ್ಥಳನಾಮಗಳು ಒಂದು ನೋಟ ಎಂಬ ಇನ್ನೊಂದು ಲೇಖನದಲ್ಲಿ ಸ್ಥಳನಾಮದ ಸಂಕ್ಷಿಪ್ತ ಇತಿಹಾಸವಿದೆ. ಕವಿರಾಜಮಾರ್ಗದಲ್ಲಿ ಉಲ್ಲೇಖವಾದ 'ವಸುಧಾವಲಯ ವಿಷಯ...' ವಿಷಯ ಎಂಬ ಪದ ಗ್ರಾಮಸಮೂಹವನ್ನು ಸೂಚಿಸುತ್ತದೆ ಎನ್ನುತ್ತಾರೆ. ಗುಲಬರ್ಗಾ ಜಿಲ್ಲೆಗೆ ಸೀಮಿತವಾದ ಈ ಸಂಪ್ರಬಂಧದಲ್ಲಿ ಉರ್ದುಪ್ರಭಾವದ ಸ್ಥಳನಾಮಗಳೇ ಹೆಚ್ಚು. ನಂತರ ತೆಲುಗಿನ ಪ್ರಭಾವವಿರುವ ಸ್ಥಳನಾಮಗಳನ್ನು ಬಳ್ಳಾರಿ - ರಾಯಚೂರು - ಗಡಿಭಾಗದಲ್ಲಿ ಗುರುತಿಸಿದ್ದಾರೆ. ಕಲ್ಯಾಣ ಕರ್ನಾಟಕದ ಮೇಲೆ ಬೆಳಕು ಚೆಲ್ಲುವ ಸಂಕ್ಷಿಪ್ತ ಪ್ರಯತ್ನವಿದೆನ್ನಬಹುದು.

**೨.೫೭. ಮಿಶನರಿಗಳ ದ್ವಿಭಾಷಿಕ ನಿಘಂಟುಗಳು ತೌಲನಿಕ ಅಧ್ಯಯನ - ಎಸ್.ಎಸ್.ಅಂಗಡಿ - ೧೯೯೯, ಪಿಎಚ್.ಡಿ. ಅ.ಪ್ರ.**

ಮಿಶನರಿಗಳು ಕೋಶಸಿದ್ಧತೆಗಾಗಿ ನಾಡಿನಾದ್ಯಂತ ಸುತ್ತಾಡಿದವರು. ಆ ಸಂದರ್ಭದಲ್ಲಿ ಅವರಿಗೆ ಅನೇಕ ಸ್ಥಳದ, ವ್ಯಕ್ತಿಗಳ ಹಾಗೂ ವೃತ್ತಿಗಳ ಹೆಸರುಗಳು ದೊರೆತಿವೆ. ಅವುಗಳನ್ನು ತಮ್ಮಕೋಶದಲ್ಲಿ ದಾಖಲಿಸಿದ್ದಾರೆ. ಕನ್ನಡಿಗರ ಜನಜೀವನವನ್ನು ತಿಳಿದುಕೊಳ್ಳುವುದು ಮಿಶನರಿಗಳ ಉದ್ದೇಶವಾದ್ದರಿಂದ ನಾಮಗಳನ್ನು ಸೇರ್ಪಡಿಸುವುದು ಅವರಿಗೆ ಅನಿವಾರ್ಯ ಆಗಿತ್ತು. ಅಂತಹ ಅನೇಕ ಸ್ಥಳನಾಮಗಳ ವಿವರವನ್ನು ಅಂಗಡಿಯವರು ಒಂದು ಉಪ ಅಧ್ಯಾಯದ ಮೂಲಕ ವಿವರಿಸಿದ್ದಾರೆ. ಸ್ಥಳನಾಮಗಳ ಮೂಲ ಹೆಸರು, ಬದಲಾದ ಹೆಸರು ಹಾಗೂ ಅನೇಕ ವಾರ್ಗಿಕಗಳಿಗೆ ಅರ್ಥವನ್ನು ನೀಡಿದ ಕಿಟ್ಟೆಲ್‌ನ ವಾದವನ್ನು ದಾಖಲಿಸಿದ್ದಾರೆ. ಜೊತೆಗೆ ಕೋಶಗಳಲ್ಲಿ ಉಲ್ಲೇಖವಾದ ವ್ಯಕ್ತಿನಾಮಗಳನ್ನೂ ಪ್ರಸ್ತಾಪಿಸಿದ್ದಾರೆ. ಮಿಶನರಿಗಳು ತಮ್ಮ ಕೋಶಗಳಲ್ಲಿ ಸ್ಥಳನಾಮ, ವ್ಯಕ್ತಿನಾಮ, ಕುಲನಾಮ ಘಟಕಗಳನ್ನು ಸಂಗ್ರಹಿಸಿದ್ದಾರೆ. ಒಂದೊಂದು ನಮೂದುಗಳಿಗೆ ಸಂಬಂಧಿಸಿದಂತೆ ಶಬ್ದಭೇದಗಳನ್ನು, ಸಮಾನಾರ್ಥಕಗಳನ್ನು ಸಾಧ್ಯವಿದ್ದಲ್ಲಿ ಗಾದೆಗಳನ್ನು ಕೊಟ್ಟಿದ್ದಾರೆ. ಆಯಾ ನಾಮಘಟಕಗಳಿಗೆ ಅವರು ಸಾಮಾನ್ಯ ಅರ್ಥ ಕೊಟ್ಟಿದ್ದಾರೆ. ಅವುಗಳ ರಚನಾಸ್ವರೂಪ, ಸಾಮಾಜಿಕ ಆಯಾಮ ಮುಂತಾದ ವಿಷಯಗಳನ್ನು ಗಮನಿಸಿಲ್ಲ ಎಂಬ ಅಭಿಪ್ರಾಯಗಳನ್ನು ಸಂಶೋಧಕರು ತಳೆದಿದ್ದಾರೆ.

**೨.೫೮. ಸ್ಥಳನಾಮಗಳ ಪರಿವರ್ತನೆ ಮತ್ತು ಪ್ರಭಾವ - ಸಂ. ಕೆ.ವಿ.ನಾರಾಯಣ - ೧೯೯೯**

ಈ ಕೃತಿಯು ಆರು ಲೇಖನಗಳನ್ನೊಳಗೊಂಡಿದೆ. ಊರ ಹೆಸರುಗಳು ಬದಲಾಗುವ ಪ್ರಕ್ರಿಯೆಯನ್ನು ಮುಖ್ಯವಾಗಿ ಅನ್ಯಭಾಷಿಕ ಸಮುದಾಯಗಳ ಸಂಪರ್ಕದಿಂದ ಗಮನಿಸಿದೆ. ಕರ್ನಾಟಕದ ಕನ್ನಡ ಭಾಷಾ ಸಮುದಾಯದೊಡನೆ ಆರ್ಯ - ಸಂಸ್ಕೃತ ಪ್ರಭಾವಗಳನ್ನು ವಿ.ಗೋಪಾಲಕೃಷ್ಣ ಅವರು ನಿರ್ದಿಷ್ಟ ಮತ್ತು ವಾರ್ಗಿಕಮಟ್ಟದಲ್ಲಿ ಹೇಗೆ ಸ್ಥಳನಾಮಗಳು ಬದಲಾಗುತ್ತವೆ. ಆ ಮೂಲಕ ಸಂಸ್ಕೃತೀಕರಣ - ತಪ್ಪು ಭಾಷಾಂತರ ಸ್ಥಿತಿಯನ್ನು ಹೇಳಿದ್ದಾರೆ. ಮರಾಠಿ ಪ್ರಭಾವವನ್ನು ಎಂ.ಬಿ.ನೇಗಿನಹಾಳ್ ಅವರು ಧ್ವನಿ - ಧ್ವನಿಮಾ - ಆಕೃತಿಮಾ ಮಟ್ಟದಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸಿದ್ದಾರೆ. ಇಸ್ಲಾಂ ಉರ್ದು ಪ್ರಭಾವಗಳನ್ನು ಕೆ.ಎಂ.ವೀರಭದ್ರಶರ್ಮ ಅವರು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಕನ್ನಡೇತರ ದ್ರಾವಿಡ ಭಾಷಾ ಪ್ರಭಾವ ಎಂಬಲ್ಲಿ ತೆಲುಗಿನ ಪ್ರಭಾವವನ್ನು ಎಸ್.ಎಸ್. ಅಂಗಡಿಯವರು ಹೇಳುತ್ತಾರೆ. ಆಂಗ್ಲ - ಆಡಳಿತ ಇಂಗ್ಲಿಷ್ ಪ್ರಭಾವಗಳನ್ನು ಡಿ.ಪಾಂಡುರಂಗಬಾಬು ಅವರು ವಿವರಿಸಿದ್ದಾರೆ.

ಈ ಎಲ್ಲ ಲೇಖನಗಳು ಉಪಯುಕ್ತವಾಗಿದ್ದು, ಹೆಚ್ಚಾಗಿ ಈ ಹಿಂದೆ ಚರ್ಚಿಸಿದ ಮಾದರಿಯನ್ನೇ ಅನುಸರಿಸಿದಂತಿದೆ. ಗೋಪಾಲಕೃಷ್ಣ ಅವರ ಆರ್ಯ ಸಂಸ್ಕೃತ ಪ್ರಭಾವಗಳು ಅವರ ಪ್ರಬಂಧದ ಒಂದು ಭಾಗ. ಅಂಗಡಿಯವರ ಲೇಖನ ಗೋಪಾಲಕೃಷ್ಣ ಅವರ 'ಸ್ಥಳನಾಮಗಳು' ಕೃತಿಯನ್ನು ಸಂಪೂರ್ಣ ಅವಲಂಬಿಸಿದೆ. ಇಂಗ್ಲಿಷ್ ಪ್ರಭಾವವನ್ನು ಗುರುತಿಸಿದ ಪಾಂಡುರಂಗಬಾಬು ಅವರ ಲೇಖನ ಅನೇಕ ಹೊಸ ಹೊಳಹು ನೀಡುವ ಲೇಖನವಾಗಿದೆ ಕೊನೆಗೆ ಅಂಗಡಿಯವರ ಸ್ಥಳನಾಮಾಧ್ಯಯನ ಸಮೀಕ್ಷೆ ಉಪಯುಕ್ತವಾಗಿದ್ದು, ಒಟ್ಟಾರೆ ಕೃತಿಯು ಸ್ಥಳನಾಮ ಶೋಧಕರಿಗೆ ಬದಲಾಗುವ ಭಾಷಿಕ ಪರಿಸರದ ಹಾದಿಯನ್ನು ಹೇಳುವಲ್ಲಿ ಆಕರಗ್ರಂಥವಾಗಿದೆ.

**೨.೫೯. ಒಕ ಊರಿ ಕಥ - ಪ್ರೊ.ವೈ.ಬಾಲಗಂಗಾಧರರಾವು - ೨೦೦೦**

ತೆಲುಗು ಸ್ಥಳನಾಮ ವಿಜ್ಞಾನಿಗಳಲ್ಲಿ ಬಾಲಗಂಗಾಧರರಾವ್ ಅವರ ಹೆಸರು ಪ್ರಮುಖವಾದುದು. ಇವರು ಗ್ರಾಮನಾಮಗಳ ವೈಜ್ಞಾನಿಕ ಅಧ್ಯಯನ ಮಾಡಿ ಪಿಎಚ್.ಡಿ. ಪಡೆದವರು. ಪ್ರಸ್ತುತ ಒಕ ಊರಿ ಕಥ ಎಂಬ ಕೃತಿಯಲ್ಲಿ ಆಂಧ್ರದ ಅನೇಕ ಪ್ರಮುಖ ಗ್ರಾಮನಾಮಗಳು ಹಾಗೂ ಕನ್ನಡದ ಕೆಲವು ಗ್ರಾಮನಾಮಗಳು, ದ್ವಿಭಾಷಿಕ ವಲಯದಲ್ಲಿನ ಹಲವಾರು ಸ್ಥಳನಾಮಗಳ ನಿಷ್ಪತ್ತಿ, ಚಾರಿತ್ರಿಕ, ಜಾನಪದೀಯ ಮಹತ್ವ, ಶಾಸನೋಕ್ತ ಹೆಸರುಗಳು ಮುಂತಾದ ವಿವರಗಳನ್ನು ಪ್ರತಿಸ್ಥಳನಾಮಕ್ಕೂ ಕೊಡುತ್ತಾ ಹೋಗುತ್ತಾರೆ. ಇದೊಂದು ಸಂಗ್ರಹಯೋಗ್ಯ ಕೃತಿಯಾಗಿದೆ. ಇಲ್ಲಿ ಕ್ಷೇತ್ರಕಾರ್ಯದ ಕೊರತೆ ಎದ್ದು ಕಾಣುತ್ತದೆ. ಇಂತಹ ಕೆಲಸ ಅಪಾರ ಕ್ಷೇತ್ರಕಾರ್ಯವನ್ನು ಬಯಸುತ್ತದೆ. ಆದರೂ ಅನೇಕ ಸತ್ಯ ಸಂಗತಿಗಳನ್ನು ಪ್ರಾಮಾಣಿಕವಾಗಿ ಬರೆದಿದ್ದಾರೆ. ರಾವ್ ಅವರು ಭಾಷಿಕ ನೆಲೆಯಲ್ಲಿ ಹೆಚ್ಚಾಗಿ ನೋಡಿಲ್ಲ. ಒಟ್ಟು ೪೩೧ ಗ್ರಾಮನಾಮಗಳ ಸಂಕ್ಷಿಪ್ತ ವಿವರಣೆಯಿಲ್ಲಿದೆ.

**೨.೬೦. ಕನ್ನಡ ಪರ ಚಿಂತನೆ ಮತ್ತು ಪರಂಪರೆ - ಡಾ.ಕಾ.ವೆಂ.ಶ್ರೀನಿವಾಸಮೂರ್ತಿ - ೨೦೦೦**

ಇದು ಪಿಎಚ್.ಡಿ. ನಿಬಂಧ. ಎರಡನೇ ಅಧ್ಯಾಯದ ಕವಿರಾಜಮಾರ್ಗ ಮತ್ತು ನಾಡು ನುಡಿ ಜಿಜ್ಞಾಸೆಯಲ್ಲಿ ಸಾಂಸ್ಕೃತಿಕ ನೆಲೆಗಳನ್ನು ಹುಡುಕಲು ಸ್ಥಳನಾಮಗಳ ಮಹತ್ವವನ್ನು ಹೇಳಿದ್ದಾರೆ. ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಗಳಾಗಿ ಹಾಗೂ ಕನ್ನಡದ ಭೌಗೋಳಿಕ ವಿಸ್ತಾರದ ಅರಿವಿಗೆ ಇವುಗಳ ಅಗತ್ಯವನ್ನು ಇಲ್ಲಿ ಕಾ.ವೆಂ. ಹೇಳಿದ್ದಾರೆ.

**೨.೬೧. ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು - ಎಂ.ನಂಜಯ್ಯ - ೨೦೦೦**

ಎಂ.ನಂಜಯ್ಯನವರ ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು ಎಂಬ ಅಪ್ರಕಟಿತ ಸಂಶೋಧನಾ ನಿಬಂಧವು ಮುಖ್ಯವಾಗಿ ಐದು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಇಲ್ಲಿನ ಅಧ್ಯಯನ ಈವರೆಗೆ ನಡೆದು ಬಂದ ವರ್ಣನಾತ್ಮಕ ಮಾದರಿಯಲ್ಲಿದೆ. ಸ್ಥಳನಾಮಗಳ ಉಗಮ - ವಿಕಾಸ - ಪ್ರಯೋಜನವನ್ನು ಖಚಿತವಾಗಿ ಹೇಳಿದ್ದಾರೆ. ಚಾಮರಾಜನಗರ ತಾಲ್ಲೂಕಿನ ಗ್ರಾಮನಾಮಗಳ ಭೌಗೋಳಿಕ, ಐತಿಹಾಸಿಕ, ಜಾನಪದೀಯ ಶಾಸನ ಹಾಗೂ ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಗಳನ್ನು ಹೇಳಿದ್ದಾರೆ. ಸ್ಥಳನಾಮಗಳ ಭೌತಿಕ ವಿಶ್ಲೇಷಣೆಯನ್ನು ಮಾಡುತ್ತಾ ಸಂಧಿ, ಸಮಾಸ, ತದ್ಭವ, ಸಮಸಂಸ್ಕೃತ, ಭಾಷಿಕ ವ್ಯತ್ಯಾಸ ಮುಂತಾದುವನ್ನು ನೀಡಿದ್ದಾರೆ. ನಿಬಂಧದ ಕೊನೆಯಲ್ಲಿ ಸ್ಥಳನಾಮ ಸೂಚಿ ಮತ್ತು ನಿಷ್ಪತ್ತಿಯನ್ನು ಕೊಡಲಾಗಿದೆ.

ಕನ್ನಡದಲ್ಲಿ ಬಂದ ಈವರೆಗಿನ ಸ್ಥಳನಾಮ ಅಧ್ಯಯನಗಳಂತೆಯೇ ಇದು ಮುಂದುವರೆದಿದೆಯಾದರೂ, ಆ ತಾಲ್ಲೂಕಿನ ಮಟ್ಟಿಗೆ ಹೊಸದೆನಿಸುತ್ತದೆ. ಸ್ಥಳನಾಮಗಳ ಚಾರಿತ್ರಿಕತೆಯನ್ನು ಹೇಳುವಾಗ ನೇರವಾಗಿ ಚರಿತ್ರೆ ಮತ್ತು ನಾಮಕ್ಕೆ ಸಂಬಂಧಿಸಿದ ವಿಷಯ ಪ್ರಸ್ತಾಪಿಸಿಲ್ಲ. ಬದಲಾಗಿ ನಾಡು, ವಿಷಯ ಇವುಗಳ ಚಾರಿತ್ರಿಕ ವಿವರ ಅಧ್ಯಯನಕ್ಕೆ ಹೊರತಾಗುತ್ತದೆ. ಇತ್ತೀಚೆಗೆ ಬಂದ ಈ ಅಧ್ಯಯನ ಹೊಸ ಸಾಧ್ಯತೆಗಳ ಬಗೆಗೆ ಪ್ರಸ್ತಾಪಿಸುವುದಿಲ್ಲ. ಈ ಕೃತಿ ಸ್ಥಳನಾಮ ಕ್ಷೇತ್ರಕ್ಕೆ ಮತ್ತೊಂದು ಸೇರ್ಪಡೆಯೆನ್ನಬಹುದು.

**೨.೬೨. ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ - ಡಾ.ವಿಶ್ವನಾಥ - ೨೦೦೦**

ಈ ಕೃತಿಯು ಎಂಟು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಗ್ರಾಮನಾಮಗಳ ಚರಿತ್ರೆಯನ್ನು, ಆರಂಭದ ಆದಿಮಾನವನ ಕಾಲದಿಂದ ಹಳ್ಳಿಗಳ ನಿರ್ಮಾಣದವರೆಗೆ ಹೇಗಾಯಿತೆಂಬುದು ಹೇಳುತ್ತಾರೆ. ಗ್ರಾಮನಾಮ ಕುರುಹು ಎಂಬಲ್ಲಿ ವಾರ್ಗಿಕಗಳ ಪಟ್ಟಿ, ವರ್ಗೀಕರಣವಿದೆ. ಗ್ರಾಮನಾಮ ಸಂಸ್ಕೃತಿಯಲ್ಲಿ ಸಾಂಸ್ಕೃತಿಕ ಅಂಶಗಳನ್ನು ವಿವರಿಸಲಾಗಿದೆ. ಇಲ್ಲಿ 'ಇಂಗಳದಾಳು' ಎಂಬಂತಹ ಸ್ಥಳನಾಮಗಳನ್ನು ಚರ್ಚಿಸುವಾಗ ಸಂಸ್ಕೃತದ ಇಂಗುಲ > ಬೇವು ಎಂಬುದನ್ನೂ ಪ್ರಸ್ತಾಪಿಸಿ ಬೇವಿನ ಮರಕ್ಕೆ ಸಂಬಂಧಿಸಿದ ಊರುಗಳೆನ್ನುತ್ತಾರೆ. ಆದರೆ 'ಇಂಗಳ' ಪದಾರಂಭದಿಂದಿರುವ ಯಾವುದೇ ಸ್ಥಳನಾಮ ಬಹುತೇಕ ಕೈಗಾರಿಕೆಯ ನೆಲೆಯೆಂಬುದಾಗಿ ಅನೇಕ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಗ್ರಾಮನಾಮಗಳ ಭೌಗೋಳಿಕ, ಸಾಂಸ್ಕೃತಿಕ ಹಿನ್ನೆಲೆ ಹೇಳಿದ್ದಾರೆ. ಭಾಷಿಕ ನೆಲೆಯಲ್ಲಿ ಗ್ರಾಮನಾಮಗಳನ್ನು ಚರ್ಚಿಸಲಾಗಿದೆ ಕೊನೆಗೆ ಗ್ರಾಮನಾಮಗಳ ನಿಷ್ಪತ್ತಿಯನ್ನು ಹೇಳಲಾಗಿದೆ. ಕೃತಿಯಲ್ಲಿ ಪದೇ

ಪದೇ 'ಗ್ರಾಮನಾಮ ಊರುಗಳು' ಎಂಬ ಅನರ್ಥಕಾರಿ ವಾಕ್ಯ ಮರುಕಳಿಸುತ್ತದೆ. ಈ ಹಿಂದೆ ಇವರ ಸಂಶೋಧನ ನಿಬಂಧದ (ಸಕಲೇಶಪುರ ಪರಿಸರದ ಸ್ಥಳನಾಮಗಳು) ಅನೇಕ ವಿಷಯಗಳು ಇಲ್ಲಿ ಮರುಪ್ರಸ್ತಾಪಿಸಲಾಗಿದೆ. ಆದರೂ ಅನೇಕ ಹೊಸ ಸಂಗತಿಗಳ ಕಡೆ ಈ ಅಧ್ಯಯನ ಗಮನಹರಿಸಿದೆ.

**೨.೬೩. ಭಾಷೆ - ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ - ೧ - ಸಂ. ಕೆ.ವಿ.ನಾರಾಯಣ - ೨೦೦೦**

ಹೆಸರುಗಳು' ಎಂಬ ಶೀರ್ಷಿಕೆಯಡಿ ಡಾ.ಕೆ.ಎಂ.ವೀರಭದ್ರಶರ್ಮ ಅವರ ವ್ಯಕ್ತಿನಾಮ ಮತ್ತು ಸ್ಥಳನಾಮ ಎಂಬ ಒಂದು ಲೇಖನವಿದೆ. ಸ್ಥಳನಾಮ ಎಂಬಲ್ಲಿ ಅಧ್ಯಯನದ ಸಂಕ್ಷಿಪ್ತ ಇತಿಹಾಸ; ಹಾಗೂ ವರ್ಗೀಕರಣದಲ್ಲಿ ಭೂಸ್ಥಿತಿವಾಚಕಗಳು; ಶಿಲಾವಾಚಿ; ಭೂಮಾರ್ಗವಾಚಿ; ಜಲವಾಚಿ; ಸಸ್ಯವಾಚಿ; ಪ್ರಾಣಿವಾಚಿ; ಪೌರಾಣಿಕ, ಧಾರ್ಮಿಕ; ಐತಿಹಾಸಿಕ; ಆಡಳಿತಾತ್ಮಕ; ಸಾಮಾಜಿಕ; ಎಂದು ವಿಂಗಡಿಸಿ ಉದಾಹರಣೆ ನೀಡಿದ್ದಾರೆ. ಡಾ. ಕೆ.ಎಂ.ವೀರಭದ್ರಶರ್ಮ ಅವರು ನೀಡಿದ ಕೆಲವು ಉದಾಹರಣೆಗಳು ಅಸ್ಪಷ್ಟವಾಗಿವೆ. ಭೂಮಾರ್ಗ ವಾಚಿಯಲ್ಲಿ ಕರಿಚೇಡು; ಕರೇಕಲ್ಲು; ಕಪ್ಪಗಲ್ಲು ಏನನ್ನು ಹೇಳುತ್ತವೆಂಬುದು ತಿಳಿಯದು. ಪುನರ್ನಾಮಕರಣದ ಬಗೆಗೆ ಹೇಳಿದ್ದಾರೆ. ಹೆಸರುಗಳ ಅಧ್ಯಯನದ ಅವಶ್ಯಕತೆಯನ್ನು ಕೊನೆಯಲ್ಲಿ ವಿವರಿಸಿದ್ದಾರೆ. ಇದೊಂದು ಉತ್ತಮ ಸಂಪ್ರಬಂಧವಾಗಿದೆ.

**೨.೬೪. ಡಾ.ಶಂಬಾ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ: ಎಸ್.ಎಂ.ಗಂಗಾಧರಯ್ಯ - ೨೦೦೦ ಪಿಎಚ್.ಡಿ, ಅ.ಪ್ರ.**

ಕಂನಾಡ ಸಂಸ್ಕೃತಿಯ ಜೀವನಸ್ಥ ಗ್ರಹಿಕೆಗೆ ಹಾಗೂ ಮರಾಠಿಗರಲ್ಲಿ ಕನ್ನಡ ಸಂಸ್ಕೃತಿಯನ್ನು ಗುರುತಿಸುವಾಗ ಶಂಬಾ ಅವರು ಬಳಸಿಕೊಂಡದ್ದು ಸ್ಥಳನಾಮಗಳನ್ನು. ಕಂನಾಡ ಸಂಸ್ಕೃತಿಯ ಹುಡುಕಾಟಕ್ಕೆ ಬಳಸಿಕೊಂಡ ಸೂತ್ರಗಳಲ್ಲಿ ಇದೂ ಒಂದು ಆ ಮೂಲಕ ಒಟ್ಟು ಸಂಸ್ಕೃತಿಯ ನಿರ್ವಚನ ಶಂಬಾರಿಂದ ಸಾಧ್ಯವಾಯಿತು. ಎಂಬುದನ್ನು ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ.

**೨.೬೫. ಶತಮಾನದ ಲಲಿತ ಪ್ರಬಂಧ - ಸಂ - ಗುರುಲಿಂಗ ಕಾಪಸೆ - ೨೦೦೧**

ಇದು ಲಲಿತ ಪ್ರಬಂಧ ಸಂಪುಟವಾದರೂ, 'ಸ್ಥಳಗಳ ಹೆಸರುಗಳು' ಎಂಬ ಒಂದು ಲೇಖನದಲ್ಲಿ ಎಂ.ರಾಮರಾವ್ ಅವರು ಒಂದು ಹಳ್ಳಿಯ, ನಗರದ ಚರಿತ್ರೆಯನ್ನು ತಿಳಿಯಲು ನಮಗಿರುವ ಸುಲಭವಾದ ಸಾಧನಗಳಲ್ಲಿ ಊರಿನ ಹೆಸರೂ ಒಂದು. ಇತಿಹಾಸ, ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಭೌಗೋಳಿಕ, ಜಾನಪದದ ಹಿನ್ನೆಲೆಯಲ್ಲಿಯೂ ತಮ್ಮ ರಸವತ್ತಾದ ಭಾಷೆಯ ಮೂಲಕ ಕಥೆಯ ಮಾದರಿಯಲ್ಲಿ ಇಲ್ಲಿ ಹೇಳಿದ್ದಾರೆ.

**೨.೬೬. ಗೋದಾವರಿವರಂ ಇರ್ದ ಕನ್ನಡನಾಡು' - ಡಾ.ಜಿ.ಎಸ್ .ಉಪಾಧ್ಯ - ೨೦೦೨**

ಈ ಕೃತಿಯು ಮುಂಬೈ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಅಧ್ಯಯನ. ಇದರಲ್ಲಿ ಒಂದು ಅಧ್ಯಾಯವನ್ನು ವ್ಯಕ್ತಿನಾಮಗಳು ಮತ್ತು ಸ್ಥಳನಾಮಗಳು ಎಂದು ಸೀಮಿತಮಾಡಿಕೊಂಡು ಚರ್ಚಿಸಿದ್ದಾರೆ. ಶಾಸನಗಳ ಮೂಲಕ ಮಹಾರಾಷ್ಟ್ರದಲ್ಲಿನ ಕನ್ನಡ ಗ್ರಾಮನಾಮಗಳನ್ನು ನಿಸರ್ಗವಾಚಿ - ಜನಾಂಗವಾಚಿ - ವ್ಯಕ್ತಿವಾಚಿ - ನಿರ್ಮಾಣವಾಚಿ - ಆದರ್ಶವಾಚಿ ಎಂದು ಕಲ್ಬುರ್ಗಿಯವರ ನಾಮವಿಜ್ಞಾನ ಕೃತಿಯಲ್ಲಿರುವ ವಿಷಯಗಳನ್ನು

ಅವಲಂಬಿಸಿ ವಿಭಾಗಿಸಿದ್ದಾರೆ. ಕೆಲವಾರು ವಾರ್ಗಿಕಗಳನ್ನು ವಿವರಿಸಿ ಉದಾಹರಣೆ ನೀಡಿದ್ದಾರೆ. ಮಹಾರಾಷ್ಟ್ರ ಮತ್ತು ಕರ್ನಾಟಕದ ಸ್ಥಳನಾಮಗಳನ್ನು ತೌಲನಿಕವಾಗಿ ನೋಡಿ ಭಾಷೆ, ಭೂಗೋಳ ಮುಂತಾದ ಮೂಲಕ ಸಾಂಸ್ಕೃತಿಕ ಪರಿಸರದ ವ್ಯಾಪ್ತಿಯನ್ನು ತಿಳಿಸಿದ್ದಾರೆ. ಇಲ್ಲಿ ಯಾವ ಹೊಸ ವಿಧಾನದ ಮೂಲಕ ಅಧ್ಯಯನವನ್ನು ಮಾಡಿಲ್ಲ.

**೨.೬೭. ಕರ್ನಾಟಕದ ಶಾಸನೋಕ್ತ ಸ್ಥಳನಾಮಗಳು - ಭಾಷಾಭಿವೃದ್ಧಿ ವಿಭಾಗ - ಹಂಪಿ ಕನ್ನಡ ವಿಶ್ವವಿದ್ಯಾಲಯ. ಅ.ಪ್ರ.**

ಕರ್ನಾಟಕದ ಎಲ್ಲ ಜಿಲ್ಲೆಗಳ ಶಾಸನಗಳನ್ನು ಪರಿಶೀಲಿಸಿ, ಅದರಲ್ಲಿ ಉಕ್ತವಾದ ಸ್ಥಳನಾಮಗಳನ್ನು ಅಕಾರಾದಿಯಾಗಿ ನೀಡುವ ಮಹತ್ತರವಾದ ಯೋಜನೆಯಿದು. ಈವರೆಗೆ ಕನ್ನಡದಲ್ಲಿ ಇಂಥದೊಂದು ಕೃತಿಯಿರಲಿಲ್ಲ. ಅಂತಹ ಕೊರತೆಯನ್ನು ನೀಗಿಸಿ ಗ್ರಾಮನಾಮಾಧ್ಯಯನಕಾರರಿಗೆ, ಇತಿಹಾಸ, ಪುರಾತತ್ವಜ್ಞರಿಗೆ ಅತ್ಯುಪಯುಕ್ತ ಗ್ರಂಥವಾಗುವಲ್ಲಿ ಅನುಮಾನವಿಲ್ಲ.

**೨.೬೮. ಮಾರ್ಗ - ೩ - ಡಾ.ಎಂ.ಎಂ.ಕಲಬುರ್ಗಿ**

- ಕೆ, - ಗೆ, - ಕಿ, - ಗಿ ಎಂಬ ಒಂದು ಲೇಖನವಿದೆ. ಊರ ಹೆಸರಿನ ಕೊನೆಯ ಗ್ರಾಮ ಎಂಬುದು ಗಾ, ಗೆ, ಗಿ ಆಗಿದೆ. 'ಕೆಯ್ ' ಮತ್ತು 'ಇಕ್ಕೆ' ಎಂಬಿವೂ ಕೆ, ಕಿ, ಗೆ, ಗಿ ಆಗಿವೆಯೆಂದು ಹೇಳಬಹುದು. ಗ್ರಾಮ ಎಂಬುದು ಸಂಸ್ಕೃತಪದ. ಕೆಯ್ , ಇಕ್ಕೆ ಎಂಬವು ದ್ರಾವಿಡ ಪದಗಳು. ಸಂಸ್ಕೃತ ಮೂಲದ ಊರುಗಳು ಇತ್ತೀಚಿನವು. ದ್ರಾವಿಡ ಮೂಲದ ಊರುಗಳು ಹಳೆಯವು ಎಂಬ ಅಭಿಪ್ರಾಯವನ್ನು ಈ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

ಇಲ್ಲಿ ಈವರೆಗೆ ಪತ್ರಿಕೆಗಳಲ್ಲಿ ಬಂದಂತಹ ಬಿಡಿಬಿಡಿಯಾದ ಲೇಖನಗಳನ್ನು ನೀಡಲಾಗಿದೆ. ಈ ಲೇಖನಗಳನ್ನೆಲ್ಲಾ ಅವಲೋಕನ ಮಾಡಲಾಗಿಲ್ಲ. ಮುಖ್ಯವಾಗಿ ಇಲ್ಲಿರುವ ಲೇಖನಗಳು ೭೦ರ ದಶಕದಿಂದ ಬರೆಯಲ್ಪಟ್ಟವುಗಳಾಗಿವೆ. ಸ್ಥಳನಾಮಶಾಸ್ತ್ರ ಕನ್ನಡನಾಡಿನಲ್ಲಿ ಆರಂಭವಾದ ಸಮಯದಲ್ಲಿ ಬಹುತೇಕ ಲೇಖನಗಳು ಆ ಶಾಸ್ತ್ರವು ಪರಿಚಯವಾಗುವ ನಿಟ್ಟಿನಲ್ಲಿ ಅದರ ಸಿದ್ಧಾಂತದ ರೂಪು - ರೇಶೆಗಳನ್ನು ಅಧ್ಯಯನದ ವಿಧಿವಿಧಾನಗಳ ರೀತಿಯಲ್ಲಿ ಬರೆಯಲಾಯಿತು. ಹಾಗೆ ೮೦ರ ದಶಕದಲ್ಲಿ ಸ್ಥಳನಾಮಾಧ್ಯಯನದ ಸಾಧ್ಯತೆ, ಸಾಧನೆಗಳ ವಿಶ್ಲೇಷಣೆಯ ಜೊತೆಗೆ ಆಯಾ ಪ್ರಾದೇಶಿಕ ಗ್ರಾಮನಾಮಗಳ ಅಧ್ಯಯನ ಆರಂಭವಾಯಿತು. ಈ ಹಿನ್ನೆಲೆಯಲ್ಲಿ ಜಾನಪದ, ಭಾಷಾಶಾಸ್ತ್ರ, ಚರಿತ್ರೆ, ಮುಂತಾದ ಅಂಶಗಳಿಂದ ಸ್ಥಳನಾಮಗಳನ್ನು ನೋಡಲಾಯಿತು. ಅಂತಹ ಅನೇಕ ಲೇಖನಗಳು ಬರೆಯಲ್ಪಟ್ಟವು. ಹೆಚ್ಚಾಗಿ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡಿದ ಲೇಖನಗಳು ಆರಂಭದಲ್ಲಿ ಕಾಣಿಸಿಕೊಂಡವು. ನಂತರ ಐತಿಹ್ಯಗಳ, ಪುರಾಣಗಳ ಮೂಲಕ ಸ್ಥಳಕ್ಕಿರುವ ನಿಷ್ಪತ್ತಿಯನ್ನು ಹೇಳುವ ಪರಂಪರೆಯು ಜಾನಪದ ಅಧ್ಯಯನಕಾರರು ಮಾಡಿದರು. ಅಲ್ಲಲ್ಲಿ ಚರಿತ್ರೆಯ ಮಾತೃಕೆಗಳಂತೆ ಗ್ರಾಮನಾಮಗಳ ಉಲ್ಲೇಖವೂ ಇತಿಹಾಸಕಾರರಿಂದ ದಾಖಲೆಗೊಂಡಿತು. ಮೈಸೂರಿನಲ್ಲಿ ಆರಂಭವಾದ ಸ್ಥಳನಾಮ ಅಧ್ಯಯನ ಸಂಸ್ಥೆಯಿಂದ ಅಧಿಕೃತವಾಗಿ ನಾಮಾಧ್ಯಯನ ಕ್ಷೇತ್ರ ಅನೇಕ ಕಮ್ಮಟಗಳ ಮೂಲಕ ಹಾಗೂ ಕ್ರಿಯಾಶೀಲ ಅಧ್ಯಯನದ ಮೂಲಕ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಮಾತ್ರವಲ್ಲದೇ ಭಾರತದಾದ್ಯಂತ ಅನೇಕ ಲೇಖನಗಳನ್ನು ಬರೆಯಿಸಿ ಪ್ರಕಟಿಸಿತು. ಈ ಎಲ್ಲ ಲೇಖನಗಳು ಆಯಾ ಭೌಗೋಳಿಕ, ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಾಶಾಸ್ತ್ರದ

ನೆಲೆಯಲ್ಲಿ ವಿವಿಧ ದೃಷ್ಟಿಕೋನಗಳಿಂದ ಬರೆಯಲ್ಪಟ್ಟಿವೆ. ಅಂತಹ ಉಪಲಬ್ದ ಲೇಖನಗಳ ಪಟ್ಟಿಯೊಂದನ್ನು ಇಲ್ಲಿ ನೀಡಲಾಗಿದೆ.

**೨.೭೯. ಸಾಧನೆ (ಪತ್ರಿಕೆ. ಬೆಂಗಳೂರು ವಿಶ್ವವಿದ್ಯಾಲಯ)**

೧. ಉಡುಪಿ ತಾಲ್ಲೂಕಿನ ಸ್ಥಳನಾಮಗಳು: ಕೆಲವು ಪರಿಶೀಲನೆಗಳು - ಕೆಮ್ಮೂರು ರಘುಪತಿಭಟ್ಟ
Vol-14 : No-3: June- Sep- 1985

೨. ಊರ ಹೆಸರುಗಳ ಕೊನೆಯ - ವರ, - ವಾರ - ಎಂ.ಎಂ.ಕಲಬುರ್ಗಿ
Vol-9: No-1: Jan- March-1980

೩. ಎರಡು ಹೆಸರುಗಳು: ಚಿತ್ರದುರ್ಗ ಮತ್ತು ಮುಕ್ತಾಯಕ್ಕ - ಎಂ.ಚಿದಾನಂದಮೂರ್ತಿ
Vol-14: No-2: April- June-1985

೪. ಕರ್ನಾಟಕ ನಾಮಶಾಸ್ತ್ರ: ಒಂದು ಸ್ಥೂಲ ಪರಿಚಯ - ರಘುಪತಿ ಕೆಮ್ಮೂರು: ಅನು: ರೇಣುಕಾ ಆರ್ಕೆ
Vol-11: No-3: July- Sep-1982

೫. ಕೆಲವು ವಸ್ತ್ರನಾಮ ವಿಶೇಷಗಳು - ಹಂಪನಾಗರಾಜಯ್ಯ
Vol-1: No-1: Jan- March-1972

೬. ಕೆಜೆ: ಗ್ರಾಮನಾಮ ವಿವೇಚನೆ - ಚನ್ನಕ್ಕ ಎಲಿಗಾರು
Vol-14 : No-3: June- Sep-1985

೭. ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಥಮ ಅಕ್ಷರ 'ಬೆ' ಅಲ್ಲ 'ಚಿ' - ಬಿ.ರಾಜಶೇಖರಪ್ಪ
Vol-13: No-4: Oct- Dec-1984

೮. ತುಳುನಾಡಿನ 'ಕಾರ್ ' ಊರುಗಳ ಒಂದು ಸ್ಥಳನಾಮಾಧ್ಯಯನ - ಕೆಮ್ಮೂರು ರಘುಪತಿಭಟ್ಟ
Vol-7: No-2: April- June-1978

೯. - ಪುರ > ವರ - ವಾರ ಎಂಬುದೇ ಸರಿ - ಎಂ.ಚಿದಾನಂದಮೂರ್ತಿ
Vol-9: No-4: Oct- Dec-1980

೧೦. ಬನವಾಸಿ' - ಸ್ಥಳನಾಮ ವಿವೇಚನೆ - ಎಂ.ಚಿದಾನಂದಮೂರ್ತಿ
Vol-12: No-2: April- June-1983

೧೧. ಬೆಂಗಳೂರು ಜಿಲ್ಲೆಯ ಹಲವು ಸ್ಥಳನಾಮಾಂತ್ಯಗಳ ವೈಶಿಷ್ಟ್ಯ - ಕೆ.ಆರ್.ಮೋಹನ್
Vol-13: No-2: April- June-1984

೧೨. ವರ, - ವಾರ ಎಂದು ಕೊನೆಯಾಗುವ ಊರ ಹೆಸರುಗಳು - ಎಂ.ಚಿದಾನಂದಮೂರ್ತಿ
Vol-7: No-1: Jan- March-1978

೧೩. ಶ್ರವಣಬೆಳುಗೊಳಕ್ಕೆ ಮೂಲ ಹಳೆಯ ಬೆಳ್ಗೊಳ - ಎಂ.ಚಿದಾನಂದಮೂರ್ತಿ
Vol-14: No-1: Jan- March -1985

೧೪. ಸ್ಥಳನಾಮಗಳಲ್ಲಿ ಧ್ವನಿ ಬದಲಾವಣೆ - ಆರ್.ಎಂ.ಕರ್ಜಗಿ
Vol-12: No-3: July- Sep-1983

೧೫. ಸ್ಥಳನಾಮ ರೂಪುರೇಷೆ - ಕೆಮ್ಮೂರು ರಘುಪತಿಭಟ್ಟ
Vol-8: No-7: April- June-1979

೧೬. ಸ್ಥಳನಾಮಾಧ್ಯಯನ ಸಮಸ್ಯೆ ಹಾಗೂ ನಿವಾರಣೆ - ವಿ.ಗೋಪಾಲಕೃಷ್ಣ
Vol-7: No-2: April- June-1978

೧೭. ಹಿಂದಿನ ನೆಲವತ್ತಿಯೇ ಈಗಿನ ನ್ಯಾಮತಿ - ಎಚ್.ದೇವೀರಪ್ಪ
Vol- II: No-2: April- June-1982

**೨.೮೦. ಕರ್ನಾಟಕ ಭಾರತಿ (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ)**

೧. ಒರೆಗಲ್ಲು - ಕೇಸಿ - ಕೇರಿ - ಎಂ.ಎಂ.ಕಲ್ಬುರ್ಗಿ
ಸಂ - ೧೧, ಸಂ - ೨ - ೧೯೭೭

೨. ಕರ್ನಾಟಕ ಗ್ರಾಮವೊಂದರ ಹಾಗೂ ಅದರ ಸುತ್ತಮುತ್ತಲಿನ ಸ್ಥಳನಾಮಗಳು - ಎಚ್.ಎಂ.ಮಹೇಶ್ವರಯ್ಯ
ಸಂ - ೭, ಸಂ - ೧ - ೧೯೮೭

೩. ಕರ್ನಾಟಕದ ಅಗ್ರಹಾರಗಳು - ಎಸ್.ಎಲ್.ಶಾಂತಕುಮಾರಿ
ಸಂ - ೪, ಸಂ - ೨ - ೧೯೭೧

೪. ತಮ್ಮ ಕೊನೆಯಲ್ಲಿರುವ ಹೆಸರುಗಳು - ಎಂ.ಚಿದಾನಂದಮೂರ್ತಿ
ಸಂ - ೨, ಸಂ - ೨ - ೧೯೭೦

೫. ಮನೆತನದ ಅಡ್ಡಹೆಸರುಗಳು - ಸಂಗಮೇಶ ಸವದತ್ತಿಮಠ
ಸಂ - ೫, ಸಂ - ೪, ಮೇ - ೧೯೭೩

೬. ಮಲೆಯಾಳಿ ಸ್ಥಳನಾಮಗಳಲ್ಲಿ ತುಳುಭಾಷೆಯ ಪ್ರಭಾವ - ಎಂ.ರಾಮ
ಸಂ - ೨೨, ಸಂ - ೩, ಜೂನ್ - ೧೯೯೦

೭. ಮನೆಗಳ ಹೆಸರುಗಳು - ಎಂ.ರಾಮರಾವ್
ಸಂ - ೪೩, ಸಂ - ೩ - ೧೯೬೧

೮. ಸ್ಥಳನಾಮಗಳಲ್ಲಿ ದೇಶ್ಯೀಕರಣದ ಪ್ರಕ್ರಿಯೆ - ಆರ್ಕೆ ಮಣಿಪಾಲ
ಸಂ - ೨೧, ಸಂ - ೩, ೪, - ೧೯೬೩

೯. ಸ್ಥಳನಾಮ ಸ್ವರೂಪ: ಒಂದು ಸ್ಥೂಲ ವಿವೇಚನ - ಕೆಮ್ತೂರು ರಘುಪತಿಭಟ್ಟ
ಸಂ - ೧೧, ಸಂ - ೨, - ೧೯೭೭

**೨.೭೧. ಜೀವನ**

೧. ಊರಹೆಸರುಗಳು - ಮಾಸ್ತಿ - ೧೯೫೦

**೨.೭೨. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**

೧. ಕರ್ನಾಟಕದ ೧೧ನೇ ಶತಮಾನದ ಕೆಲವು ಸ್ಥಳನಾಮಗಳು - ಡಾ. ದೇವರಕೊಂಡಾರೆಡ್ಡಿ - ೧೯೭೮
೨. ತೌಳವ ಪ್ರಾದೇಶಿಕ ನಾಮಗಳು - ಕೆ.ವೆಂಕಟರಾಯಾಚಾರ್ಯ - ೧೯೬೬
೩. ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ವಿಶೇಷ ಸ್ಥಳಗಳು - ಪಿ.ಶಿವರಾಮಯ್ಯ - ೧೯೨೭, ಸಂ - ೧೨: ಸಂ - ೨ - ೧೯೨೭

**೨.೭೩. ರುಜುವಾತು**

೧. ಸ್ಥಳನಾಮಾಧ್ಯಯನ - ಸಾಧ್ಯತೆ ಮತ್ತು ಸಾಧನೆ - ಆರ್ಕೆ ಮಣಿಪಾಲ, ಸಂ - ೧೯, ಜುಲೈ - ಸೆಪ್ಟೆಂಬರ್ - ೧೯೮೮

**೨.೭೪. ಜೀವನ**

೧. ಊರ ಹೆಸರುಗಳು - ಪಿ.ಕೆ.ರಾಜಶೇಖರ - ೧೯೫೦

**೨.೭೫. ಸಾಕ್ಷಿ**

೧. ಒಂದು ವಿಲಕ್ಷಣ ಊರಿನ ಹೆಸರಿನಲ್ಲಿ ಒಂದು ಅಪೂರ್ವ ಕನ್ನಡ ಪದ - ಎಂ.ಚಿದಾನಂದಮೂರ್ತಿ - ವಸಂತ ಸಂಚಿಕೆ - ಏಪ್ರಿಲ್ - ೧೯೭೩

**೨.೭೬. ಶೂದ್ರ**

೧. ಶಂಬಾ ಅವರ ಸಾಂಸ್ಕೃತಿಕ ಅಧ್ಯಯನ ಒಂದು ಪರಿಚಯ - ಡಾ.ರಾಜೇಂದ್ರಚೆನ್ನಿ
ಜೂನ್ - ಜುಲೈ - ೧೯೮೬

**೨.೭೭. ಕಲಾದರ್ಶನ**

೧. ಕಾರ್ಕಳ ಹೆಸರು ಹೇಗೆ ಬಂದಿತು - ಕೆಮ್ತೂರು ರಘುಪತಿಭಟ್ಟ - ೧೯೭೭

**೨.೭೮. ಪ್ರಭಾತ**

೧. ಮಂಗಳೂರು - ಈ ಹೆಸರು ಹೇಗಾಯಿತು - ನರ್ಕಳ ಮಾರಪ್ಪಶೆಟ್ಟಿ - ೧೯೬೯

**೨.೭೯. ಸ್ವದೇಶಾಭಿಮಾನ**

೧. ಸ್ಥಳನಾಮ - ಪಂಜೆಮಂಗೇಶರಾಯ - ೧೯೩೧

**೨.೮೦. ಕಲಾಗಂಗಾ**

೧. ಗುಲಬರ್ಗಾ ತಾಲ್ಲೂಕಿನ ಸ್ಥಳನಾಮಗಳು: ಭಾಷಿಕ, ಸಾಂಸ್ಕೃತಿಕ ಅಧ್ಯಯನ - ವ್ಹಿ.ಜಿ.ಪೂಜಾರ. - ಗುಲಬರ್ಗಾ ವಿಶ್ವವಿದ್ಯಾಲಯ - ಜೂನ್ - ಡಿಸೆಂಬರ್ - ೧೯೯೦

**೨.೮೧. ಮಾನವಿಕ ಕರ್ನಾಟಕ**

೧. ಸ್ಥಳನಾಮಗಳಲ್ಲಿ ಸಂಸ್ಕೃತೀಕರಣ - ಕೆಮ್ತೂರು ರಘುಪತಿಭಟ್ಟ

**೨.೮೨. ಯುಗಪುರುಷ**

೧. ಕುಕ್ಕೆ' ಸ್ಥಳನಾಮ ರೂಪ ನಿಷ್ಪತ್ತಿ - ಕೆಮ್ತೂರು ರಘುಪತಿಭಟ್ಟ - ೧೯೭೭
೨. ಬೆ (ಮ)ಳ್ ಊರುಗಳು ಅಧ್ಯಯನ - ಕೆಮ್ತೂರು ರಘುಪತಿಭಟ್ಟ - ೧೯೭೭

**೨.೮೩. ಸತ್ಯಶುದ್ಧನಾಯಕ**

೧. ಗ್ರಾಮ: ಅಗ್ರಹಾರ: ಮಂಗಲ ಇತ್ಯಾದಿ - ಎಂ.ಎನ್.ಪ್ರಭಾಕರ
ಸಂ - ೧: ಸಂ - ೧ - ಸೆಪ್ಟಂಬರ್ - ಅಕ್ಟೋಬರ್ - ೧೯೯೦
೨. ಪ್ರಾಚೀನ ಹಂಪೆ ಒಂದು ಪರಿಚಯ - ಎಸ್.ಎಂ.ನಾಗಭೂಷಣ
ಸಂ - ೩: ಸಂ - ೩,೪, - ಮಾರ್ಚ್ - ಆಗಷ್ಟ್ - ೧೯೯೩
೩. ಬೆಂಗಳೂರಿನ ಅಗ್ರಹಾರಗಳು: ಒಂದು ಸ್ಥೂಲ ಅಧ್ಯಯನ - ಆಲ್ಲ ಚಿರಂಜೀವಿ
ಸಂ - ೫: ಸಂ - ೧: ಸೆಪ್ಟೆಂಬರ್ - ನವೆಂಬರ್ - ೧೯೯೪

**೨.೮೪. ಬಸವಪಥ**

೧. ಬಸವಣ್ಣನವರ ಹೆಸರಿರುವ ಊರುಗಳು - ಹೀ.ಚಿ.ಶಾಂತವೀರಯ್ಯ
ಸಂ - ೮: ಸಂ - ೨: ಮೇ - ೧೯೮೬
೨. ಶರಣಸಾಹಿತ್ಯದಲ್ಲಿ ಪಂಪಾಕ್ಷೇತ್ರದ ವರ್ಣನೆ - ಕೆ.ಶ್ರೀಕಂಠಯ್ಯ
ಸಂ - ೮, ಸಂ - ೨, ಮೇ - ೧೯೮೬

**೨.೮೫. ನಮ್ಮಕನ್ನಡ**

೧. ಕನ್ನಡದ ಮೇಲೆ ತೆಲುಗು ಭಾಷೆಯ ಪ್ರಭಾವ (ಸ್ಥಳನಾಮಗಳೊಂದಿಗೆ) - ಜಾಜಿ ದೇವೇಂದ್ರಪ್ಪ
ಹೊನ್ನಸಂಚಿಕೆ - ೫೦ - ೨೦೦೨
೨. ಶಾಸನೋಕ್ತ ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳವಣಿಗೆ - ಜಾಜಿ ದೇವೇಂದ್ರಪ್ಪ
ಸಂಚಿಕೆ - ೫೪ - ೨೦೦೨
೩. ಸ್ಥಳನಾಮ ಬದಲಾವಣೆ - ಜಾಜಿ ದೇವೇಂದ್ರಪ್ಪ
ಸಂಚಿಕೆ - ೫೩ - ೨೦೦೨

**೨.೮೬. ಇತಿಹಾಸದರ್ಶನ**

೧. ಕೊಪ್ಪತಾಲೂಕಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳನಾಮಗಳು - ಒಂದು ಅಧ್ಯಯನ - ಎಂ.ಆರ್.ಗುರು.
ಸಂ - ೧೩ - ೧೯೯೮

೨. ಚಿತ್ರದುರ್ಗದ ಪ್ರಾಚೀನ ನಾಮ - ಮರುಪರಿಶೀಲನೆ - ಪ್ರೊ.ಲಕ್ಷ್ಮಣ ತೆಲಗಾವಿ
ಸಂ - ೧೨ - ೧೯೯೭

೩. ತಿರುಮಲಾದೇವಿಯರ ಪಟ್ಟಣ ನಾಗಲಾಪುರ - ಹೊಸಪೇಟೆ - ಒಂದು ಮರುಪರಿಶೀಲನೆ - ಡಾ.ಸಿ.ಮಹದೇವ
ಸಂ - ೧೦ - ೧೯೯೫

೪. ತುಳುನಾಡಿನ ಸ್ಥಳನಾಮಗಳಲ್ಲಿ ಗದ್ದೆಗಳ ಹೆಸರುಗಳು - ಒಂದು ವಿಶ್ಲೇಷಣೆ - ಪಿ.ಗಣಪಯ್ಯಭಟ್ಟ
ಸಂ - ೭ - ೧೯೯೨

೫. ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ - ಟಿ.ಗಿರಿಜ
ಸಂ - ೧೫, ೨೦೦೦

೬. ನಾಗಮಂಗಲ ತಾಲ್ಲೂಕಿನ ಶಾಸನೋಕ್ತ ಗ್ರಾಮನಾಮ ವಿಶ್ಲೇಷಣೆ - ಆರ್.ವೆಂಕಟೇಶಮೂರ್ತಿ
ಸಂ - ೧೭, ೨೦೦೦

೭. ವಿಜಾಪುರ ಜಿಲ್ಲೆಯ ಆಡಳಿತಾತ್ಮಕ ಸ್ಥಳನಾಮಗಳು - ಡಾ.ಎಸ್.ಕೆ.ಕೊಪ್ಪಾ
ಸಂ - ೧೨ - ೧೯೯೭

೮. ಸಾಸಲು ಪ್ರದೇಶದ ಸ್ಥಳನಾಮಗಳು - ಸಾಸಲು ಜೆ. ವಿಶ್ವನಾಥ
ಸಂ - ೧೬ - ೨೦೦೧

೯. ಹಾವೇರಿ ಗ್ರಾಮನಾಮ - ಡಾ.ಭೋಜರಾಜ ಪಾಟೀಲ
ಸಂ - ೧೭ - ೨೦೦೨

**೨.೮೭. ಸ್ಮರಣಸಂಚಿಕೆ (೭ನೇ ಜಿಲ್ಲಾ ಸಾಹಿತ್ಯ ಸಮ್ಮೇಳನ ಬೆಂಗಳೂರು ಗ್ರಾಮಾಂತರ)**

೧. ಸ್ಥಳನಾಮ ಐತಿಹ್ಯಗಳು - ಡಾ.ಎಂ.ಭೈರೇಗೌಡ. ಕೆ.ಪಿ.ದೊಡ್ಡಿ

## ೨.೮೮. Studies in Indian Place names

**Volume 1 - 1980**

1. A note on the etymology of the generic morpheme - Vara' found in place names - M. Chidanandamurthy
2. A few interesting place names of Tulunadu - R.K.Manipal
3. Renaming the places : A study of patterns - V.Gopalakrishna
4. Regional features in naming places in Karnataka - B.B. Rajpurohit
5. Studies in ancient geography in Karnataka - G.S.Gai
6. Some street names of Mysore City - D. Javaregouda
7. Some observations on Indian place names - K.V.Ramesh

**Volume 2 - 1981**

1. Distribution of suffix - Uru in Karnataka - B.B. Rajpurohit
2. Epigraphical and the study of Indian place and personal names - K.V.Ramesh
3. Names of village donated to brahmanas - M.Chidanandamurthy
4. Numerical territorial divisions in Karnataka - Madhav N. Katty
5. Place names and Folklore : A breif note - Javaharlal Handoo
6. Studies in ancient geography of Karnataka - II - G.S. Gai
7. Some stray thoughts on nick names - D. Javaregowda

**Volume 3 - 1982**

1. A note on name change - D. Javaregowda
2. Balligave : A toponym - H.R. Raghunath Bhat
3. Identification of the name of a Kadamba King - P.N. Narasimhamurthy
4. Names of some dynasties and rules of Karnataka - Madhava N. Katty

5. Origin of certain place names of Karantaka - K. Abhishankar
6. On some place and temple names - K. V. Ramesh
7. Some interesting place names in Karnataka - K.M. Bhadri
8. Some important place names in Karnataka - Venkatesha
9. Some place names of Bijapur and Gulburga area - Jayant Kulli
10. Tirumaladevi pattana, present Hospet near Hampi - C.T.M. Kotraiah
11. The Telugu suffix 'Manchi' in place names - D.C. Reddy
12. Vijayanagara influence on tamilnadu place names - P. Shanmugam

**Volume 4 - 1984**

1. A Distribution of 'Halli' and 'Pura' suffix in Karnataka - B.B. Rajpurohit
2. Methodology of place names study - D. Javaregowda
3. 'Sivalli' - A place name - P. Ramabhat
4. Studies in ancient geography of Karnataka - III - G.S. Gai
5. Some interesting surnames from North Karnataka, K.M. Bhadri
6. The origin of the place names Mantralaya - Venkatesha

**Volume 5 - 1984**

1. A Study of some place names in Karnataka - B.N. Chandraiah
2. Note on naming of Chaluvindala Village - C.T.M. Kotraiah
3. Phonology of place names - S. Jayaprakash
4. Some place names in Hassan District - Radha Patel
5. Studies in ancient geography of Karnataka - IV - G.S. Gai
6. The term Muliga - Madhava N. Katty

**Volume 6 - 1984**

1. A Katavapragiri - A Sociological study - M.B. Rajamani
2. Some interesting names and terms in the memorial Epigraphs from Kellaputtige - P.N. Narasimhamurthy

**Volume 7 - 1986**

1. A Sociological Study of agrahara place names - R. Indira
2. A Case for the national dictionary of place names - D. Javaregowda
3. Identification of place names mentioned in the Varuna inscriptions - H.R. Raghunathabhat

**Volume 8 - 1986**

1. Buddhist place names of Andhra - A.V.D. Sharma
2. Place names in Folklore - D. Javaregowda
3. Place names and Chronology in Andhra Pradesh - P.V. Parabrahma Shastri
4. Study of a few personal and place names in Andhra - G.A. Padmanabha Shastri
5. Study of place and personal names of North Kanara - M.D. Sampath

**Volume 9 - 1987**

1. Computer analysis for the study of place names - S.K. Havanur
2. Hampi - Vijayanagara - names through history - C.T.M. Kotraiah
3. The suffix - Angadi - P.N. Narasimhamurthy
4. The local rulars and the place names - A.V. Narasimhamurthy

**Volume 10 - 1989**

1. Place names in inscriptions of Kalachuris - T.S. Ravishankar
2. Place names in Tulu folk literature - Susheela P. Upadhya
3. Some tulu place names in sumadhva Vijaya - P. Ramabhat
4. Village names with names of castes and tribes in Ananthapuram district - M. Govindaswamy Naidu

**Volume 11 - 1989**

1. Chalukya an onamastic study - Vaijyanatha Bhande
2. Chikkamagalur - study of place name - P.N.Narasimhamurthy
3. Identification of two place names mentioned in banavasi Kadamba inscripritions - H.R. Raghunath Bhat
4. Place names as part of cast names - A.V. Narasimhamurthy
5. 'Raravi' an interesting place name - N.N. Swamy
6. The title 'Rajan' and its extended forms - K.V. Ramesh

**Volume 12 - 1981**

1. Nanjanagudu. i.e. Garalapuri - D.M. Nagaraju
2. Need for a national methodology for the study of Indian place names - K.V.Ramesh
3. Place names and personal names in Ramayana - Vishwanath Kaire
4. Study of some place names of Karnataka - P.N. Narasimhamurthy
5. Some deity based place names in Athani taluk - Ananth Kulkarni

**Volume 13 - 1992**

1. Administrative nomenclature - A Study - C.S.Vasudevan
2. Note on the place name Barakuru - C.T.M. Kotraiah
3. Place name prefixes 'Hosa' and 'Hale' in Karnataka - A.V. Narasimhamurthy
4. Place name with 'puram' suffix in the Vijayanagara period - P. Shanmugham
5. Royal seats of the Satavahanas - H.S. Thosar
6. Some more deity based village from Athani taluk - Ananth Kulakarni
7. Yelandur - A Place name - D.M. Nagaraju

**Volume 21 - 2001**

1. Adavanidurga and Rayadurga simas - D.M. Nagaraju
2. Parada and Pete place names - A.V. Narasimhamurthy

ಕನ್ನಡ ಸ್ಥಳನಾಮ ಅಧ್ಯಯನಗಳ ವಿಷಯಾವಲೋಕನ' ಅಧ್ಯಾಯದಲ್ಲಿ ಅವಲೋಕಿಸಿದ ಒಟ್ಟು ಕೃತಿಗಳನ್ನಿಟ್ಟುಕೊಂಡು ಅಧ್ಯಾಯದ ಆರಂಭದಲ್ಲಿ ಒಂದು ನಕ್ಷೆಯನ್ನು ನೀಡಲಾಗಿದೆ. ಪ್ರಸ್ತುತ ನಿಬಂಧದಲ್ಲಿ ಈ ಎಲ್ಲ ಅಂಶಗಳನ್ನು ಒಳಗೊಳ್ಳುವಂತೆ ಮಾಡಲಾಗಿದೆ. ಅಲ್ಲದೆ ಈವರೆಗಿನ ಅಧ್ಯಯನಗಳಲ್ಲಿ ಸಂಕ್ಷೇಪವಾಗಿ ಅಥವಾ ಕೆಲವು ಎಳೆಗಳನ್ನು ಮಾತ್ರ ಹೇಳಲಾದ ವಿಷಯಗಳನ್ನು ಇಲ್ಲಿ ಸಮಗ್ರವಾಗಿ ನೋಡಲಾಗಿದೆ. ಮೌಖಿಕ ಪರಂಪರೆಯ ಮೂಲಕ ಸ್ಥಳನಾಮಗಳನ್ನು ಐತಿಹ್ಯ, ಪುರಾಣಗಳಿಂದ ಮಾತ್ರ ನೋಡಲಾಗಿತ್ತು. ಆದರೆ ಈ ಪ್ರಬಂಧದಲ್ಲಿ ಗಾದೆ, ಒಗಟು, ಒಡಪು, ಹಾಡು, ರಂಗಭೂಮಿ, ಕಥೆ ಮುಂತಾದ ಪ್ರಕಾರಗಳಿಂದ ಸ್ಥಳನಾಮಗಳ ಅಧ್ಯಯನದ ಸಾಧ್ಯತೆಗಳನ್ನು ತೋರಿಸುವ ಪಯತ್ನ ಮಾಡಲಾಗಿದೆ. ಅಲ್ಲದೇ ಚಾರಿತ್ರಿಕ ಅಧ್ಯಯನಕ್ಕೆ ಕೇವಲ ಶಾಸನೋಕ್ತ ಸ್ಥಳನಾಮಗಳನ್ನು ಪ್ರಸ್ತಾಪಿಸಲಾಗುತ್ತಿತ್ತು. ಇಲ್ಲಿ ಚರಿತ್ರೆ ಮತ್ತು ಸ್ಥಳನಾಮಗಳನ್ನು ಒಂದು ಸಂಸ್ಕೃತಿಯ

ರೂಪಿಕೆಗಳನ್ನಾಗಿ ಸ್ವೀಕರಿಸಿ, ಆ ಮೂಲಕ ಶಾಸನೋಕ್ತ ಸ್ಥಳನಾಮಗಳಲ್ಲಿ ಕಾಲಾಂತರದಲ್ಲಾದ ಭಾಷಿಕ ಅವಸ್ಥಾಂತರಗಳನ್ನು ಭಾಷೆಯ ಚಾರಿತ್ರಿಕ ಬೆಳವಣಿಗೆಯೆಂದು ಗುರುತಿಸಿಕೊಂಡು ಬರೆಯಲಾಗಿದೆ. ಅಲ್ಲದೇ ಈವರೆಗೆ ಗಮನಹರಿಸದೇ ಇದ್ದ ಮಾಸ್ತಿ, ವೀರಗಲ್ಲುಗಳ ಮೂಲಕ ಸಂಸ್ಕೃತಿಯ ಅಧ್ಯಯನದಲ್ಲಿ ಸ್ಥಳನಾಮಗಳ ಮಹತ್ವವನ್ನು ಚರ್ಚಿಸಲಾಗಿದೆ. ಸಾಮಾಜಿಕ ಅಂಶಗಳನ್ನು ಜನಾಂಗಗಳ ಮೂಲಕ ಗುರುತಿಸಿ ಸಂಕ್ಷೇಪಿಸಲಾದ ಹಿಂದಿನ ಅಧ್ಯಯನಗಳ ಜಾಡನ್ನೇ ಹಿಡಿದು ಪ್ರಸ್ತುತ ಸ್ಥಳನಾಮಗಳ ಸಾಮಾಜಿಕ ಅಧ್ಯಯನದಲ್ಲಿ ಇದರ ವ್ಯಾಪ್ತಿಯನ್ನು ವೃತ್ತಿಪರ ಹಾಗೂ ವಿಸ್ತೃತವಾಗಿ ಆಯಾ ಜಾತಿಗಳ ಹೆಸರಿನ ಸ್ಥಳಗಳು, ಅವುಗಳ ಸಾಮಾಜಿಕ ರಚನೆ, ಬದ್ಧತೆಗಳು ಮನೆಗಳ ಮಾದರಿ, ವಾರ್ಗಿಕಗಳ ಮೂಲಕ ಜನಾಂಗಿಕ ಸ್ಥಳಗಳನ್ನು ಗುರುತಿಸುವ ಬಗೆ, ಸಂಸ್ಕೃತೀಕರಣ, ಪ್ರತಿನಾಮಕರಣಗಳು ಆಧುನಿಕವಾಗಿ ಕಂಡುಕೊಂಡ ಮಾರ್ಗಗಳು ಹಾಗೂ ಜನತೆ ಸ್ವೀಕರಿಸಿದ ಬಗೆಯನ್ನು ಚರ್ಚಿಸುವುದರೊಂದಿಗೆ, ಸ್ಥಳನಾಮಗಳ ಬಳಕೆಯ ವಲಯಗಳನ್ನು ಜಾತಿ ಮತ್ತು ವರ್ಗದ ನೆಲೆಯಲ್ಲಿ ಉಚ್ಚಾರಣಾ ಸಂದರ್ಭದೊಂದಿಗೆ ಚರ್ಚಿಸಲಾಗಿದೆ.

ಮುಖ್ಯವಾಗಿ ಈವರೆಗೆ ನಿಷ್ಪತ್ತಿಯೇ ಅತ್ಯಂತ ಮುಖ್ಯವೆಂದು ಹೇಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಸ್ಥಳನಾಮ ನಿಷ್ಪತ್ತಿಯ ಕೋಶವನ್ನು ನೀಡಲಾಗಿಲ್ಲ. ಸ್ಥಳನಾಮಗಳ ವಾರ್ಗಿಕಗಳ ಪಟ್ಟಿ, ವರ್ಗೀಕರಣ, ಭಾಷಿಕ ಅಧ್ಯಯನದಲ್ಲಿ ಅಲ್ಲಲ್ಲಿ ನಿಷ್ಪತ್ತಿಯ ವಿವರಗಳು ಬಂದಿವೆ. ಪುನರಾವೃತ್ತಿಯಾಗಬಾರದೆಂಬ ಕಾರಣದಿಂದ ನಿಷ್ಪತ್ತಿಯನ್ನು ಬಿಡಲಾಗಿದೆ.

ಹೀಗೆ ಹಿಂದಿನ ಸಂಶೋಧನಾಧ್ಯಯನಗಳ ಕೆಲವು ಮಾದರಿಗಳನ್ನು ಅನುಸರಿಸಿ, ಕೆಲವು ಹೊಸ ಪ್ರಯೋಗವನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ಈ ದೃಷ್ಟಿಯಿಂದ ಇಲ್ಲಿನ ವಿಷಯಾವಲೋಕನವನ್ನು ಮಹತ್ವದ ಅಂಶವೆಂದು ತಿಳಿಯಲಾಗಿದೆ.

❑❑

## ೩

# ಸ್ಥಳನಾಮಗಳ ಸ್ವರೂಪ ಮತ್ತು ವರ್ಗೀಕರಣ

## ಭಾಗ ೧

### ೩. ಭೌಗೋಳಿಕ ಸ್ವರೂಪ

ಕರ್ನಾಟಕದ ಗಡಿಭಾಗದಲ್ಲಿರುವ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ, ಬಳ್ಳಾರಿ ತಾಲ್ಲೂಕುಗಳು ಬಯಲು ಭೂಮಿಯಿಂದ ಕೂಡಿದ್ದು, ಅಲ್ಲಲ್ಲಿ ಚಿಕ್ಕ ಚಿಕ್ಕ ಬೆಟ್ಟಗಳಿವೆ. ತುಂಗಭದ್ರ ನದಿಯ ನೀರಿನ ಪೂರೈಕೆಯಿಂದ ಕೊಂಚ ಭೂಮಿಯು ನೀರಾವರಿ ಪ್ರದೇಶವಾಗಿ ಮಾರ್ಪಟ್ಟಿದೆ. ಶೇಕಡ ೭೫ ರಷ್ಟು ಭೂಮಿಯು ಕಪ್ಪು - ಕೆಂಪು - ಮಣ್ಣಿನಿಂದ ಕೂಡಿದ್ದು ವ್ಯವಸಾಯಕ್ಕೆ ಯೋಗ್ಯವಾಗಿದೆ. ಮಳೆಯನ್ನು ಅವಲಂಬಿಸಿ ಬೆಳೆಯ ಪ್ರಮಾಣ ನಿರ್ಧರಿತವಾಗುತ್ತದೆ. ಈ ಎರಡು ತಾಲ್ಲೂಕುಗಳಲ್ಲಿ ಅರಣ್ಯ ಪ್ರದೇಶವು ತುಂಬಾ ಕಡಿಮೆ ಪ್ರಮಾಣದಲ್ಲಿದೆ. ತಾಲ್ಲೂಕುಗಳ ಪೂರ್ವಕ್ಕೆ ವೇದಾವತಿ (ಹಗರಿ) ನದಿಯು ಹರಿಯುತ್ತದೆ. ಈ ನದಿಯು ಸಂಪೂರ್ಣ ಮಳೆಯನ್ನು ಅವಲಂಬಿಸಿದೆ. ಭೌಗೋಳಿಕವಾಗಿ ಎತ್ತರದಲ್ಲಿರುವ ಬಳ್ಳಾರಿ - ಸಿರುಗುಪ್ಪ ತಾಲ್ಲೂಕಿನಲ್ಲಿ ಬಿಸಿಲಿನ ಪ್ರಮಾಣ ಹೆಚ್ಚಾಗಿರುತ್ತದೆ. ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು ೧೦೭ ಗ್ರಾಮಗಳಿವೆ. ಸಿರುಗುಪ್ಪ ತಾಲ್ಲೂಕಿನಲ್ಲಿ ೮೫ ಗ್ರಾಮಗಳಿವೆ. ಆಂಧ್ರ ಪ್ರದೇಶದ ಜನರ ವಲಸೆಯು ಈ ಜಿಲ್ಲೆಗೆ ನಿರಂತರವಾಗಿದೆ. ಈ ಕಾರಣದಿಂದ ವಲಸಿಗರು ನೆಲೆಸಿ, ನಿರ್ಮಿಸಿದ ಗ್ರಾಮಗಳು, ಕ್ಯಾಂಪುಗಳು ಅನೇಕ ಇವೆ. ಒಟ್ಟು ೧೯೨ ಗ್ರಾಮಗಳಲ್ಲಿ ಅಲ್ಲಲ್ಲಿ ಕೆರೆ, ಕುಂಟೆ, ಕಾಲುವೆ, ಹಳ್ಳ ಮುಂತಾದ ಜಲ ಮೂಲಗಳಿವೆ. ಕೋಟೆ, ಕೊತ್ತಲಗಳಿಂದ ಕೂಡಿದ ಈ ತಾಲ್ಲೂಕುಗಳು ಐತಿಹಾಸಿಕ ಮಹತ್ವ ಪಡೆದಿವೆ. ಆದಿಮಾನವನ ನೆಲೆ, ಪ್ರಾಚೀನ ಪುರಾತತ್ವ ಪರಿಸರ ಈ ಪ್ರದೇಶ ಒಳಗೊಂಡಿದೆ.

ಬಳ್ಳಾರಿ - ಸಿರುಗುಪ್ಪ ತಾಲ್ಲೂಕುಗಳ ಪೂರ್ವಕ್ಕೆ ಕರ್ನೂಲು ಜಿಲ್ಲೆಯ ಆಲೂರು ಆದವಾನಿ ತಾಲ್ಲೂಕುಗಳಿವೆ. ಈ ಎರಡು ತಾಲ್ಲೂಕುಗಳು ಭೌಗೋಳಿಕವಾಗಿ ಒಣ ಭೂಮಿಯಿಂದ ಕೂಡಿವೆ. ಮಳೆಯಾಧಾರಿತವಾದ ಕೆಂಪು -

ಕಪ್ಪು ನೆಲವಿದೆ. ತಾಲ್ಲೂಕಿನ ದಕ್ಷಿಣ ಹಾಗೂ ಉತ್ತರ ಭಾಗದಲ್ಲಿ ಅಲ್ಲಲ್ಲಿ ಬೆಟ್ಟ - ಗುಡ್ಡಗಳಿವೆ. ಆಲೂರು ತಾಲ್ಲೂಕಿನಲ್ಲಿ ೯೯ ಗ್ರಾಮಗಳಿವೆ. ಹಾಗೆಯೆ ಆದವಾನಿ ತಾಲ್ಲೂಕಿನಲ್ಲಿ ೧೧೮ ಗ್ರಾಮಗಳಿವೆ. ಎರಡೂ ತಾಲ್ಲೂಕಿನಲ್ಲಿ ಅಲ್ಲಲ್ಲಿ ಬೇಚರಾಕ್ ಗ್ರಾಮಗಳಿವೆ. ಅನೇಕ ನಿರ್ವಸಿತ ಪ್ರದೇಶಗಳಿವೆ. ಅಲ್ಲಲ್ಲಿ ಐತಿಹಾಸಿಕ ಪ್ರಸಿದ್ಧ ಗ್ರಾಮಗಳಿದ್ದು, ಕೋಟೆ - ಕೊತ್ತಲ - ಹುಡೇವುಗಳಿವೆ. ಒಟ್ಟು ೨೧೭ ಗ್ರಾಮಗಳಲ್ಲಿ ಅಲ್ಲಲ್ಲಿ ಕೆರೆ, ಹಳ್ಳ - ಕೊಳ್ಳ - ಕುಂಟೆ - ವಕ್ರಾಣಿ, ಬಾವಿಗಳು ನಿರ್ಮಾಣವಾಗಿವೆ. ಭೌಗೋಳಿಕವಾಗಿ ಈ ಪ್ರದೇಶವೂ ಎತ್ತರದಲ್ಲಿರುವುದರಿಂದ ಬಿಸಿಲಿನ ಧಗೆಯು ಹೆಚ್ಚಾಗಿದ್ದು, ಮಳೆಯ ಪ್ರಮಾಣ ಕಡಿಮೆ. ಇದರಿಂದ ಅರಣ್ಯ ಪ್ರದೇಶವೂ ಕಡಿಮೆಯಿದೆ. ಆದವಾನಿಯ ಉತ್ತರಕ್ಕೆ ತುಂಗಭದ್ರ ನದಿಯು ಹರಿಯುತ್ತದೆ. ಹತ್ತಿ - ಶೇಂಗಾ - ಸೂರ್ಯಕಾಂತಿ - ಭತ್ತ - ನವಣೆ - ಜೋಳ ಇಲ್ಲಿನ ಮುಖ್ಯ ಬೆಳೆಗಳು.

### ೩.೧. ಸಾಂಸ್ಕೃತಿಕ ಸ್ವರೂಪ

ಬಳ್ಳಾರಿ - ಸಿರುಗುಪ್ಪ - ಆಲೂರು - ಆದವಾನಿ ತಾಲ್ಲೂಕುಗಳು ತಮ್ಮದೇ ಆದಂತಹ ವಿಶಿಷ್ಟ ಸಾಂಸ್ಕೃತಿಕ ಚಹರೆಗಳಿಂದ ಪ್ರಸಿದ್ಧಿ ಪಡೆದಿವೆ. ಬಳ್ಳಾರಿ ತಾಲ್ಲೂಕಿನಲ್ಲಿ ಆದಿಹಳೆ ಶಿಲಾಯುಗದ ನೆಲೆಗಳಾದ ಸಂಗನಕಲ್ಲು - ಬೂದಿಹಾಳು - ಉದೆಗೊಳಂ ಗ್ರಾಮಗಳಿವೆ. ಐತಿಹಾಸಿಕ ಪ್ರಸಿದ್ಧ ಏಕಶಿಲಾಬೆಟ್ಟದ ಮೇಲೆ ಭದ್ರ ಹಾಗೂ ಮನಮೋಹಕ ಕೋಟೆಯಿದೆ. ಮಲ್ಲೇಶ್ವರ ದೇವಸ್ಥಾನ - ನಗರೇಶ್ವರ ದೇವಸ್ಥಾನ ಸೇರಿದಂತೆ ಹಲವಾರು ಗ್ರಾಮಗಳಲ್ಲಿ ಪ್ರಾಚೀನ ದೇವಾಲಯಗಳು, ಶಾಸನಗಳೂ ದೊರೆತಿವೆ. ಬಳಹರಿ ದೇವತೆಯೆಂದೆನಿಸಿದ ದುರ್ಗಮ್ಮನ ಪ್ರಸಿದ್ಧ ಮಂದಿರವಿದೆ. ಸಾಹಿತ್ಯಿಕ ಚಟುವಟಿಕೆಯನ್ನು ಮುದ್ರಣದ ಮೂಲಕ ಮೊಟ್ಟಮೊದಲು ಆರಂಭಿಸಿದ ಮಿಶನರಿಗಳ ಚರ್ಚ್ ಇಲ್ಲಿದೆ.

ಸಿರುಗುಪ್ಪ ತಾಲ್ಲೂಕು ತೆಕ್ಕಲಕೋಟೆಯು ಶಿಲಾಯುಗದ ನೆಲೆಯಾಗಿದ್ದು, ಕೋಟೆ ಕೊತ್ತಲುಗಳು, ಪ್ರಾಚೀನ ದೇವಾಲಯಗಳು ಇಲ್ಲಿವೆ. ನಿಟ್ಟೂರು, ಮೌರ್ಯರ ಇತಿಹಾಸವನ್ನು ಹೇಳುವ ಗ್ರಾಮ. ಕೆಂಚನಗುಡ್ಡ - ಹಳೇಕೋಟೆಗಳು ದೇವಾಲಯಗಳಿಂದ ಮಹತ್ವ ಪಡೆದಿವೆ. ಸಿರುಗುಪ್ಪದ ಶಂಭುಲಿಂಗ ದೇವಸ್ಥಾನ, ವರುವಿನ ಮಲ್ಲಯ್ಯ ದೇವಸ್ಥಾನಗಳು ಪ್ರಾಚೀನ ಪರಂಪರೆಯನ್ನೂ, ಇಲ್ಲಿ ದೊರೆಯುವ ಅನೇಕ ಶಾಸನಗಳು ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರತಿನಿಧಿಸುತ್ತವೆ.

ಆಲೂರು - ಆದವಾನಿ ತಾಲ್ಲೂಕುಗಳು ವಿಶಿಷ್ಟವಾಗಿ ತೆಲುಗು - ಕನ್ನಡ ಸಂಸ್ಕೃತಿಯಿಂದ ಮಹತ್ವವನ್ನೊಂದಿವೆ. ಮೀನಗೊಂದಿ ಕ್ಷೇತ್ರವು ಮೈಲಾರ ಸಂಪ್ರದಾಯದ ಪ್ರಾಚೀನ ನೆಲೆಯಾಗಿದೆ. ಚಿಪ್ಪಗಿರಿ - ಹುಳೇಬೀಡು - ರಾಮದುರ್ಗ - ತುಂಬಳಂ - ಉರುಕುಂದೆ - ಹೊಳಲಗುಂದ - ಮಂತ್ರಾಲಯ - ಮುಂತಾದ ಗ್ರಾಮಗಳಲ್ಲಿರುವ ಭವ್ಯವಾದ ಶೈವ ಹಾಗೂ ವೈಷ್ಣವ ದೇವಾಲಯಗಳು - ದೊರೆಯುವ ಶಾಸನಗಳು, ಕಂಡುಬರುವ ಭದ್ರವಾದಂತಹ ಕೋಟೆಗಳು - ಬೆಟ್ಟದ ಮೇಲೆ ನಿರ್ಮಾಣಗೊಂಡ ದೇವಾಲಯಗಳು ಗತ ವೈಭವವನ್ನು ಸಾರುತ್ತವೆ. ಆದವಾನಿ ಬೆಟ್ಟದ ಮೇಲಿನ ಕೋಟೆ, ಸುಂದರವಾದ ದೇವಾಲಯಗಳು, ಜೈನ ಮಂದಿರಗಳು, ಮುಸ್ಲಿಂರ ದರ್ಗಾಗಳು ವಿಶೇಷವೆನಿಸುತ್ತವೆ.

ಈ ನಾಲ್ಕು ತಾಲ್ಲೂಕುಗಳಲ್ಲಿ ವಾಸಿಸುವ ವಿವಿಧ ಜಾತಿ - ಸಮುದಾಯದವರು ತಮ್ಮ ಸಂಪ್ರದಾಯ - ಪರಂಪರೆಗನುಗುಣವಾಗಿ ಹಬ್ಬ - ಹರಿದಿನ - ಜಾತ್ರೆ ಇತ್ಯಾದಿಗಳನ್ನು ವೈಭವದಿಂದ ಆಚರಿಸುತ್ತಾರೆ. ಈ ಎಲ್ಲವೂ ಬಯಲುನಾಡಿನ ಸಾಂಸ್ಕೃತಿಕ ಹೆಗ್ಗುರುತುಗಳಾಗಿ ಕಂಡುಬರುತ್ತವೆ.

## ೩.೨. ಭಾಷಿಕ ಸ್ವರೂಪ

ಬಳ್ಳಾರಿ - ಸಿರುಗುಪ್ಪ ತಾಲ್ಲೂಕಿನಲ್ಲಿ ಮುಖ್ಯವಾದ ಭಾಷೆ ಕನ್ನಡ. ಎರಡನೇ ಮುಖ್ಯ ಭಾಷೆಯಾಗಿ ತೆಲುಗು ಬಳಕೆಯಾಗುತ್ತದೆ. ಉರ್ದು, ತಮಿಳು ನಂತರದ ಸ್ಥಾನವನ್ನು ಪಡೆದಿವೆ. ತೆಲುಗು - ಕನ್ನಡ ವ್ಯವಹಾರ ಭಾಷೆಗಳನ್ನಾಗಿ ಬಳಸುವಂತಹ ಸಾಮರ್ಥ್ಯ ಬಹುತೇಕ ಜನರಿಗಿದೆ. ಆದವಾನಿ - ಆಲೂರು ತಾಲ್ಲೂಕುಗಳಲ್ಲಿ ಮುಖ್ಯವಾದ ಭಾಷೆ ತೆಲುಗು. ಎರಡನೇ ಮುಖ್ಯ ಭಾಷೆ ಕನ್ನಡ. ಕರ್ನಾಟಕದ ಗಡಿಗುಂಟ ಕನ್ನಡದ ಗ್ರಾಮಗಳೇ ಹೆಚ್ಚು. ವ್ಯವಹಾರ ಭಾಷೆ ಹೆಚ್ಚಾಗಿ ತೆಲುಗು. ಶಿಕ್ಷಣ ಎರಡೂ ಭಾಷೆಯಲ್ಲಿ ಸಮನಾಗಿ ನಡೆಯುತ್ತಿದೆ. ಇಂದು ಬಹುತೇಕ ಕನ್ನಡ ಮಾತೃಭಾಷಿಕರು ವ್ಯಾಪಾರ, ವಾಣಿಜ್ಯ, ತೆಲುಗು ಭಾಷೆಯ ಸಿನಿಮಾ, ದೂರದರ್ಶನ, ಭಾಷೆಯ ವ್ಯಾಮೋಹ ಮುಂತಾದ ಕಾರಣಗಳಿಂದಾಗಿ ತೆಲುಗು ಭಾಷೆಗೆ ಜಗಿಯುತ್ತಿರುವುದು ಕಂಡುಬರುತ್ತದೆ. ಕೆಲವೇ ಸಮುದಾಯದವರು ಕನ್ನಡವನ್ನು ಉಳಿಸಿಕೊಂಡಿದ್ದಾರೆ. ತೆಲುಗು ಭಾಷಿಕ ಹಾಗೂ ರಾಜಕೀಯದ ಒತ್ತಡಗಳೂ ಕನ್ನಡ ಭಾಷೆಯ ಮೇಲೆ ಪ್ರಭಾವವನ್ನು ಬೀರಿದೆ. ಒಟ್ಟಾರೆ ಇದನ್ನು ದ್ವಿಭಾಷಿಕ ವಲಯವೆಂದು ಗುರ್ತಿಸಬಹುದು.

## ೩.೩. ಗ್ರಾಮಗಳ ವಾಸ್ತುಸ್ವರೂಪ

ಆಂಧ್ರ ಹಾಗೂ ಕರ್ನಾಟಕದ ಗಡಿ ಭಾಗದ ನಾಲ್ಕು ತಾಲ್ಲೂಕುಗಳಲ್ಲಿ ಸಾಮಾನ್ಯವಾಗಿ ಗ್ರಾಮಗಳ ನಿರ್ಮಾಣ ಏಕರೀತಿಯಲ್ಲಿವೆ. ಹೆಚ್ಚಾಗಿ ಬೆಟ್ಟಗುಡ್ಡಗಳ ಪಕ್ಕದಲ್ಲಿ: ತಗ್ಗು ಪ್ರದೇಶದಲ್ಲಿ: ನದಿ, ಹಳ್ಳ, ಕೊಳ್ಳ ಮುಂತಾದ ಪ್ರಕೃತಿದತ್ತ ಜಲಮೂಲಗಳ ಹತ್ತಿರ: ವಿಶಾಲವಾದ ಬಯಲು ಪ್ರದೇಶ, ಸುತ್ತಲೂ ಬೆಟ್ಟಗಳಿರುವ ಸ್ಥಳದಲ್ಲಿ, ಅರಣ್ಯಗಳ ಸಮೀಪ ಗ್ರಾಮಗಳು ನಿರ್ಮಾಣವಾಗಿವೆ. ಬಹುತೇಕ ಗ್ರಾಮಗಳು ಪ್ರಾಚೀನವೇ ಆಗಿದ್ದು, ಕೆಲವು ಈಚಿನವು.

ಗ್ರಾಮಗಳ ಆಂತರಿಕ ವಿನ್ಯಾಸವು ವಿಶೇಷವಾಗಿದೆ. ಇಕ್ಕೆಲಗಳಲ್ಲಿ ಮನೆಗಳು, ತಕ್ಕ ಬಯಲಿನಲ್ಲಿ ಗ್ರಾಮದೇವತೆ, ಇತರೆ ದೇವಾಲಯಗಳು, ಅನುಕೂಲಕ್ಕೆ ಅನುಗುಣವಾಗಿ ಬಾವಿ, ಕೆರೆ, ಕುಂಟೆಗಳ ನಿರ್ಮಾಣ ಕಂಡು ಬರುತ್ತವೆ. ಕೆಲವು ಪಟ್ಟಣಗಳ ರಚನೆಯು ವ್ಯವಸ್ಥಿತವಾಗಿದೆ. ಮನೆಗಳು ಸಾಧಾರಣವಾಗಿ ನಿರ್ಮಿಸಲ್ಪಟ್ಟಿವೆ. ಕನ್ನಡನಾಡಿನ ಗಡಿಯಲ್ಲಿ ಇತ್ತೀಚೆಗೆ ಆಂಧ್ರದ ಜನಸಮುದಾಯಗಳ ವಲಸೆಯಿಂದ ವೃತ್ತಾಕಾರದ ಮಾದರಿಯ ಗುಡಿಸಲುಗಳು, ಮನೆಗಳು ವೈವಿಧ್ಯಮಯ ರೀತಿಯಲ್ಲಿ ಅನುಕರಿಸಲ್ಪಟ್ಟು ರಚನೆಯಾಗಿವೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಜಾತಿಯಾಧಾರಿತ ಕೇರಿಗಳು ನಿರ್ಮಾಣಗೊಂಡಿದ್ದು, ಆಯಾ ಸಮುದಾಯ ಅಲ್ಲಲ್ಲಿಯೇ ವಾಸವಾಗಿರುವುದು ತಿಳಿಯುತ್ತದೆ. ಪಟ್ಟಣ ಪ್ರದೇಶದಲ್ಲಿ ಈ ವ್ಯವಸ್ಥೆಯು ಹಿಂದೆ ಇದ್ದಿತಾದರೂ ಇಂದು ಅದು ಬದಲಾಗುತ್ತಿದೆ. ಮೇಲಿನ ನಾಲ್ಕು ಸ್ವರೂಪಗಳಿಂದ ಗ್ರಾಮನಾಮಗಳ ಸ್ವರೂಪ ಅಧ್ಯಯನವನ್ನು ಮಾಡಬಹುದು.

೩.೪. ಸ್ಥಳನಾಮಗಳ ವರ್ಗೀಕರಣದ ಮಾದರಿಗಳು

ಈವರೆಗೆ ಸ್ಥಳನಾಮ ಅಧ್ಯಯನಕಾರರು ವರ್ಗೀಕರಣದ ಮಾದರಿಗಳನ್ನು ವಿವಿಧ ರೀತಿಯಲ್ಲಿ ಪಟ್ಟಿ ಮಾಡಿದ್ದಾರೆ. ಅಂತಹ ಅಧ್ಯಯನಕಾರರಲ್ಲಿ ಪಾಶ್ಚಾತ್ಯ ವಿದ್ವಾಂಸರೂ ಇದ್ದಾರೆ. ಕೆಲವು ಮಾದರಿಗಳನ್ನು ನೋಡುವ ಮೂಲಕ ಪ್ರಸ್ತುತ ಪ್ರಾದೇಶಿಕ ವರ್ಗೀಕರಣ ಮುಂದುವರೆಯುತ್ತದೆ.

೧. ಲ್ಯಾಂಬರ್ಟ್ ಮತ್ತು ಮೇರಿಯಾ ಪೈ: 'ಅಮೇರಿಕನ್ ಪ್ಲೇಸ್ ನೇಮ್ಸ್' ಎಂಬ ಗ್ರಂಥದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವರ್ಗೀಕರಿಸಿದ್ದಾರೆ.

೧. Descriptive names
೨. Association names
೩. Possessive names
೪. Incident names
೫. Commendatory names
೬. Coined names
೭. Transfer and shift names
೮. Commemorative names
೯. Folk etymology
೧೦. Mistake names

೨. ಜೆ.ಜೆ.ಯಗ್ಲಿ : ೧. Natural names ೨. Cultural names
ಎಂದು ಸಂಕ್ಷಿಪ್ತವಾಗಿ ವರ್ಗೀಕರಿಸುತ್ತಾರೆ.

೩. ಕೆ.ಪಿ.ಪದ್ಮನಾಭ ಮೆನನ್ : ಇವರು 'Some place names of Malbar' (೧೯೩೨) ಎಂಬ ಲೇಖನದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ.

೧. Topographical condition
೨. Artificial condition
೩. Native soil products
೪. Temple
೫. Ancient military holds
೬. Culture and religious
೭. Incidental
೮. Trade Culture
೯. Profession of the people
೧೦. Accidental phenomena

೪. ಪಿ. ನಾರಾಯಣರಾವ್ : ಅವರು 'A study of place names in Ananthapuram district' (೧೯೩೫) ಕೃತಿಯಲ್ಲಿ :

೧. Direction
೨. Rocks
೩. Big and small
೪. Old and new
೫. Hill and spring
೬. Cold and hot
೭. Channels
೮. Forts
೯. Home sheds
೧೦. Hevenly bodies
೧೧. Animal and birds
೧೨. Part of human body
೧೩. Food
೧೪. Proffession
೧೫. Family
೧೬. Dynasty

೫. ರಾಮಚಂದ್ರ ಚೆಟ್ಟಿಯಾರ್ : ಅವರು 'Place names of selam district' ಎಂಬ ಲೇಖನದಲ್ಲಿ ಆರು ವಿಧವಾಗಿ ವಿಂಗಡಿಸಿದ್ದಾರೆ.

೧. Hill area
೨. Water sources
೩. Plains
೪. Civic life
೫. Agriculture
೬. Religion

೬. ಹಿರಾಲಾಲ್ : 'Indian Antiquary' (೧೯೩೧) ಯಲ್ಲಿ ಹೀಗೆ ವಿಂಗಡಿಸಿದ್ದಾರೆ.

೧. ಮರಗಳ ಬೆಳವಣಿಗೆಗಿಂತ ಮುಂಚಿತವಾಗಿ ಇಟ್ಟ ಹೆಸರುಗಳು
೨. ಪ್ರಾಣಿ - ಪಕ್ಷಿಗಳಿಂದ ಬಂದ ಹೆಸರುಗಳು
೩. ದೇವತೆಗಳಿಂದ ಬಂದ ಹೆಸರುಗಳು

೭. ಎಸ್.ಎಸ್.ರಾಮಚಂದ್ರಮೂರ್ತಿ: ಅವರು A study of telugu place names ಎಂಬ ನಿಬಂಧದಲ್ಲಿ ಒಂಭತ್ತು ಬಗೆಯಲ್ಲಿ ವಿಂಗಡಿಸಿದ್ದಾರೆ.

೧. ಭೌತಿಕ ಮತ್ತು ಭೌಗೋಳಿಕ ಲಕ್ಷಣಗಳಿರುವಂಥವು
೨. ಸಸ್ಯಲೋಕದ ಹೆಸರುಗಳು
೩. ಪ್ರಾಣಿ ಜಗತ್ತಿನ ಹೆಸರುಗಳು
೪. ಧಾರ್ಮಿಕ ಸಂಗತಿಗಳು
೫. ಜನಾಂಗಿಕ ಅಂಶಗಳು
೬. ಚಾರಿತ್ರಿಕ
೭. ವ್ಯಾಪಾರ - ವಾಣಿಜ್ಯ
೮. ಪ್ರಸಿದ್ಧ ವರ್ಗಗಳ ನಾಮದಿಂದ ಬಂದಂತಹವು
೯. ಸಂಕೀರ್ಣ

೮. ಎಸ್.ಕೆ.ಚಟರ್ಜಿ : ಅವರ ವರ್ಗೀಕರಣ ಹೀಗಿದೆ

೧. ಬುಡಕಟ್ಟು ಅಥವಾ ಜಾತಿಯ ಹೆಸರಿನಿಂದ
೨. ನೈಸರ್ಗಿಕ ಲಕ್ಷಣಗಳು
೩. ಧಾರ್ಮಿಕ ಸಂಗತಿಗಳು
೪. ವ್ಯಕ್ತಿ ಅಥವಾ ಘಟನೆ
೫. ಹಳೆಯ ಹೆಸರುಗಳಿಂದ

೯. ಎಚ್.ಡಿ.ಸಂಕಾಲಿಯಾ : ಅವರ ವರ್ಗೀಕರಣ

೧. ವ್ಯಕ್ತಿಯಾಧಾರಿತ
೨. ಘಟನೆ ಆಧಾರಿತ
೩. ಸಂಪ್ರದಾಯ ಮತ್ತು ಮೌಢ್ಯಗಳಿಂದ
೪. ಭೌಗೋಳಿಕ ಲಕ್ಷಣಗಳಿಂದ
೫. ಹೂ, ಹಣ್ಣು, ಮರ, ಬೆಳೆಗಳಿಂದ
೬. ಪ್ರಾಣಿ ಪಕ್ಷಿಗಳಿಂದ
೭. ಹಳೆಯ ಹೆಸರುಗಳಿಂದ

೧೦. ಶಂಬಾ ಜೋಷಿ : ಅವರು 'ಎಡೆಗಳು ಹೇಳುವ ಕಂನಾಡ ಕತೆ' ಎಂಬ ಕೃತಿಯಲ್ಲಿ

೧. ಪ್ರಾಣಿಗಳಿಂದ ಬಂದವು
೨. ಗಿಡಗಂಟಿಗಳಿಂದ ಬಂದ ಹೆಸರು
೩. ದೇಹದ ಅಂಗಾಂಗಗಳಿಂದ
೪. ಬಳಗದವರಿಂದ
೫. ಮನೆಗಳಿಂದ
೬. ದಿನಸುಗಳಿಂದ
೭. ಬಣ್ಣಗಳಿಂದ
೮. ಹರಳುಗಳಿಂದ
೯. ಬಂಗಾರದಿಂದ
೧೦. ಅಂಕೆಗಳಿಂದ
೧೧. ಗ್ರಹಾದಿಗಳಿಂದ
೧೨. ನೆಲದಿಂದ
೧೩. ಬೇಸಾಯದಿಂದ
೧೪. ಕಾಲದಿಂದ
೧೫. ಮಳೆ ಮಿಂಚು ಮುಂತಾದುವುಗಳಿಂದ
೧೬. ಕಾಲದಿಂದ
೧೭. ಚಿಕ್ಕ, ದೊಡ್ಡ
೧೮. ಕೂಡಿಕೆಯಿಂದ
೧೯. ದೇವತಾದಿಗಳಿಂದ
೨೦. ಜನಗಳಿಂದ
೨೧. ವ್ಯವಸಾಯ ಉದ್ಯೋಗಾಧಿಕಾರಿಗಳಿಂದ
೨೨. ವ್ಯಕ್ತಿಗಳಿಂದ - A. ಪುರಾತನ ಋಷಿ
B. ರಾಜಕೀಯ ಸಾಮಾಜಿಕ
C. ಧಾರ್ಮಿಕ

೧೧. ದೇ.ಜವರೇಗೌಡ : ಅವರು ಹೀಗೆ ವರ್ಗೀಕರಿಸಿದ್ದಾರೆ

೧. ವಸತಿ ಸೂಚಿಸುವ ಘಟಕಗಳು
೨. ಬೆಟ್ಟ, ಗುಡ್ಡ, ಕಲ್ಲು ಸೂಚಕಗಳು
೩. ಜಲಸೂಚಕ ಘಟಕಗಳು
೪. ಭೌಗೋಳಿಕ ಲಕ್ಷಣ ಹೇಳುವಂಥವು
೫. ಜಾತಿ, ಕುಲಧರ್ಮ ಸೂಚಕ
೬. ವ್ಯಾಪಾರಕೇಂದ್ರವನ್ನು ಹೇಳುವಂಥವು
೭. ಸೈನಿಕರಿಗೆ ಸಂಬಂಧಿಸಿದಂತಹವು
೮. ಸಸ್ಯವಾಚಿ
೯. ಪ್ರಾಣಿವಾಚಿ
೧೦. ಸಂಕೀರ್ಣ ಘಟಕಗಳು

೧೨. ಡಾ.ಎಂ.ಎಂ.ಕಲ್ಬುರ್ಗಿ : ಅವರು 'ನಾಮ ವಿಜ್ಞಾನ'ದಲ್ಲಿ :

೧. ನಿಸರ್ಗವಾಚಿ
೨. ನಿರ್ಮಾಣವಾಚಿ
೩. ಜನಾಂಗವಾಚಿ
೪. ವ್ಯಕ್ತಿವಾಚಿ
೫. ಆದರ್ಶವಾಚಿ

ಹೀಗೆ ಅನೇಕ ಮಂದಿ ವಿದ್ವಾಂಸರು ಸ್ಥಳನಾಮಗಳ ವರ್ಗೀಕರಣ ಮಾದರಿಗಳನ್ನು ನೀಡಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು ನೀಡಿದ ವರ್ಗೀಕರಣದ ಮಾದರಿಯು ನಮ್ಮ ದೇಶಕ್ಕೆ ಹೊಂದಬಹುದು ಹೊಂದದಿರಬಹುದು. ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ ವೈವಿಧ್ಯತೆಯಿರುವುದರಿಂದ ಇಂತಹ ವರ್ಗೀಕರಣ ನಮಗೆ ಅಗತ್ಯವೆಂದು ತೋರಲಾರದು. ಅನೇಕರು ನೀಡಿದ ವರ್ಗೀಕರಣ ಅವೈಜ್ಞಾನಿಕವಾಗಿಯೂ ಇದೆ.

ದೇಸೀಯ ವಿದ್ವಾಂಸರು ನೀಡಿದ ವರ್ಗೀಕರಣದಲ್ಲಿಯೂ ಅನೇಕ ಭಿನ್ನರೀತಿಯ ಮಾದರಿಗಳು ಕಂಡು ಬರುತ್ತವೆ. ಇವುಗಳಲ್ಲಿ ಕೆಲವು ಅಸಮರ್ಪಕವೂ, ಅವೈಜ್ಞಾನಿಕವೂ, ಅತಿವ್ಯಾಪ್ತಿಯೂ, ಸಂಕ್ಷಿಪ್ತವೂ ಆಗಿ ಕಂಡು ಬರುತ್ತವೆ. ದೇಸೀಯ ನೆಲದಲ್ಲಿಯೂ ವಿವಿಧ ರೀತಿಯಲ್ಲಿ ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಇರುವುದರಿಂದ ಇಂತಹ ವರ್ಗೀಕರಣ ಆಯಾ ಪ್ರಾದೇಶಿಕ ಪರಿಸರಕ್ಕೆ ಸರಿಹೊಂದುತ್ತದೆ. ಭಾರತದಲ್ಲಿಯೇಕೆ, ಒಂದೇ ಭಾಷೆಯನ್ನೊಳಗೊಂಡ ಕರ್ನಾಟಕದಲ್ಲಿಯೂ ಇಂತಹ ಭಿನ್ನತೆಯನ್ನು ಕಾಣಬಹುದು. ಮಂಗಳೂರು (ದಕ್ಷಿಣ ಕರ್ನಾಟಕದ) ಭಾಗದ ಭೌಗೋಳಿಕ ಹಾಗೂ ಸಾಂಸ್ಕೃತಿಕ ಪರಿಸರ ಉಳಿದ ಕರ್ನಾಟಕದ ಭಾಗಕ್ಕಿಂತ ಭಿನ್ನವಾಗಿರುವುದರಿಂದ ಅಲ್ಲಿನ ವರ್ಗೀಕರಣದ ಮಾದರಿಯು ಸರ್ವಮಾನ್ಯವಾಗಲಾರದು.

ಈ ದೃಷ್ಟಿಯಿಂದ ಯಾವೊಂದು ಪ್ರದೇಶದ ವರ್ಗೀಕರಣವು ಅದೇ ಪ್ರದೇಶಕ್ಕೆ ಹೊಂದುತ್ತದೆ. ಇದಕ್ಕೆ ಒಂದು ಸಾಮಾನ್ಯ ನಿಯಮ (Common role) ಹೇಳಲಾಗುವುದಿಲ್ಲ. ಪಾಶ್ಚಾತ್ಯರ ವರ್ಗೀಕರಣವಂತೂ ಇದರಿಂದ ತುಂಬಾ ದೂರ ಉಳಿಯುತ್ತವೆ. ದ್ವಿಭಾಷಿಕ ವಲಯದಲ್ಲಿ ಇಂತಹ ಮಾದರಿಯು ವಿಶೇಷವಾಗಿ ತೋರುತ್ತದೆ. ಮಾದರಿಗಾಗಿ ಮೇಲಿನ ವರ್ಗೀಕರಣದ ವಿವಿಧ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಆಂಧ್ರ - ಕರ್ನಾಟಕ ಗಡಿ ಪ್ರದೇಶದ ಭೌಗೋಳಿಕ - ಸಾಂಸ್ಕೃತಿಕ - ಭಾಷಿಕ ಪರಿಸರದಿಂದ ನಿರ್ಮಾಣಗೊಂಡ ಸ್ಥಳನಾಮಗಳನ್ನು ಈ ರೀತಿ ವರ್ಗೀಕರಿಸಲಾಗಿದೆ.



### ೩.೫. ಪ್ರಾಕೃತಿಕ ಸ್ಥಳನಾಮಗಳು

#### ೩.೫.೧. ಜಲವಾಚಿ ಸ್ಥಳನಾಮಗಳು

ಮಾನವ ಸಂಸ್ಕೃತಿಯ ವಿಕಾಸದ ಹಂತದಲ್ಲಿ 'ಜಲ'ಕ್ಕೆ ಅತಿಮುಖ್ಯಸ್ಥಾನವಿದೆ. ಬಹುತೇಕ, ಜಗತ್ತಿನ ನಾಗರಿಕತೆಗಳೆಲ್ಲವೂ ನದಿಯ ದಂಡೆಯಮೇಲೆ ಜೀವನವನ್ನು ಆರಂಭಿಸಿದವೆಂದು ತಿಳಿಯುತ್ತದೆ. ಸದಾ ಸಂಚಾರಿಯಾಗಿದ್ದ ಆದಿಮಾನವರು ಒಂದೆಡೆ ತಮ್ಮ ಅಸ್ತಿತ್ವವನ್ನು ಕಂಡುಕೊಂಡರು. ಆಗ 'ಜಲ' ಮುಖ್ಯವಾಗಿ ಬೇಕಿತ್ತು. ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಕೊಂಡರು. ಅಥವಾ ಸಹಜವಾಗಿ ಹರಿಯುವ ನೀರಿಗೆ ಕೆರೆ, ಕೊಳ, ಕುಂಟೆಗಳಂತಹ ಕೃತಕ ಜಲ ಸಂಗ್ರಾಹಕಗಳನ್ನು ನಿರ್ಮಿಸಿಕೊಂಡರು. ಇಂದಿಗೂ ಗ್ರಾಮಗಳ ನಿರ್ಮಾಣ ನೀರನ್ನು ಅವಲಂಬಿಸಿ ರಚನೆಯಾಗುತ್ತಿವೆ. ಹೀಗೆ ಜಲಮೂಲ ಸಂಸ್ಕೃತಿಯಿಂದ ಆರಂಭವಾದ ಸಂಸ್ಕೃತಿಯಲ್ಲಿ ಆ ಜಲವನ್ನವಲಂಬಿಸಿಯೇ ಕೆಲವು ಗ್ರಾಮಗಳಿಗೆ ಹೆಸರು ಕರೆದುಕೊಳ್ಳುವ ರೂಢಿ ಆರಂಭವಾಗಿರಬೇಕು. ಅಂತಹ ಭೂಸ್ಥಿತಿಯನ್ನು ಹೇಳುವ (ಗ್ರಾಮ) ಸ್ಥಳನಾಮಗಳು ಹೇರಳವಾಗಿ ದೊರೆಯುತ್ತವೆ. ಗಡಿ ಭಾಗದಲ್ಲಿನ ಜಲವಾಚಿ ಸ್ಥಳನಾಮಗಳು ಹೀಗಿವೆ.

| | | | |
|---|---|---|---|
| ಆಲಹರಿವಿ (ಹಾಲಹರಿವಿ) | - ALR | ಪದಲಕುಂಟ | - ADN |
| ಆಲೂರು | - ALR | ಪುಟ್ಟಕುಂಟ | - ADN |
| ಆದವಾನಿ | - ADN | ಬಂಟಕುಂಟೆ | - ADN |
| ಉದೆಗೊಳಂ - (ಉದಕೊಳ) | - BLR | ಬಲ್ಲೂರು | - ALR |
| ಐರೂರು | - ADN | ಬೆಲ್ಲೊನ | - ALR |
| ಕಲ್ಲುಕುಂಟೆ | - ADN | ಬೊಳುಗೋಟೆ | - ALR |
| ಕಲ್ಲುಬಾವಿ | - ADN | ಮೈಕಡೊಣೆ | - ADN |
| ಕೆರೆಕೇರಿ | - BLR | ಸೂಳೆಕೆರೆ | - ADN |
| ಗೋನಬಾವಿ | - ADN | ಸೋಮಸಮುದ್ರ | - BLR |
| ಚಿಂತಕುಂಟೆ | - ALR | ಸುಳುವಾಯಿ | - ALR |
| ಚಿಂತಕುಂಟೆ | - ADN | ಹರಗಿನಡೊಣೆ | - BLR |
| ಜಾನಿಕುಂಟೆ | - BLR | ಹೊನ್ನಿಕೆರೆ | - ALR (ನಿರ್ವಸಿತ) |
| ತಂಗರಡೊಣ | - ALR | | |
| ನಗರಡೊಣೆ | - ALR | | |
| ನದಿಬ್ಯಾಗಿ | - ADN | | |
| ನಾಂಚರ್ಲ | - ALR | | |

ಕೊಳ - ಕುಂಟೆ - ಕೆರೆ - ಬಾವಿ - ಡೊಣೆ - ನದಿ - ಸಮುದ್ರ - ಏರಿ - ಚೆರ್ಲ ಎಂಬ ಜಲವಾಚಿ ವಾರ್ಗಿಕಗಳು ಈ ಭಾಗದಲ್ಲಿ ಬಳಕೆಯಾಗಿವೆ. ಚೆರ್ಲ ಎಂಬುದು ಚೆರುವು (ಕೆರೆ) ಎಂಬುದರ ತೆಲುಗಿನ ಬಹುವಚನ ರೂಪವಾಗಿದೆ. ಕುಂಟ: ದೊಣ: ಏರು, ಚೆರ್ಲ ಎಂಬ ನಾಲ್ಕು ತೆಲುಗು ಭಾಷೆಯ ಜಲವಾಚಿ ವಾರ್ಗಿಕಗಳು ಕಂಡು ಬರುತ್ತವೆ. ಬಳ್ಳಾರಿಯಂತಹ ಬಯಲು ಪರಿಸರದಲ್ಲಿ ಸಮುದ್ರ - ಸಾಗರ ಎಂಬಂತಹ ಜಲಮೂಲ ಉತ್ತರ ಪದಗಳಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದು ವಿಶೇಷವಾಗಿ ತೋರುತ್ತದೆ. ಕೆರೆ, ಕುಂಟೆಯಂತಹ ಜಲ ಸಂಗ್ರಾಹಕಗಳಿಗೆ ತಮ್ಮ ಕಲ್ಪನೆಯಲ್ಲಿ ಸಮುದ್ರ, ಸಾಗರ ಎಂದು ಕರೆದುಕೊಂಡಿರಬೇಕು.

ಜಲವಾಚಿ ನಾಮಗಳಲ್ಲಿ ಬಳಕೆಯಾಗುವ ಕೆರೆ ಹಾಗೂ ಕೇರಿ/ಗೇರಿ ಒಂದೇ ಎಂದು ಭಾವಿಸಲಾಗುತ್ತದೆ. (ಉತ್ತರ ಕರ್ನಾಟಕದಲ್ಲಿ) ಕೇರಿ' ಎಂಬುದು ಓಣಿ, ಬೀದಿಯನ್ನು ನಿರ್ದೇಶಿಸುತ್ತದೆ. ಕೆರೆ ಜನಪದರ ಉಚ್ಚಾರದಲ್ಲಿ 'ಕೇರಿ' ಯಾಗಿರಬಹುದು.

ಜಲವನ್ನು ಸೂಚಿಸುವ ಪದಗಳು ಹೆಚ್ಚಾಗಿ ಸ್ಥಳನಾಮಗಳ ಉತ್ತರಭಾಗದಲ್ಲಿ ಕಂಡುಬಂದಿವೆ. ಪೂರ್ವಪದವಾಗಿ ವಿರಳವಾಗಿ ತೋರುತ್ತವೆ.

- ಆಲ (ಆಟ, ಅಲ, ಅಟೆ) : ತಗ್ಗಾದ ಸ್ಥಳದಲ್ಲಿ ನೀರು ನಿಂತಿರುವ ಜಾಗ. ಆಳವಾದ ನೀರುಳ್ಳ ಜಾಗ (ಕಿಟ್ಟೆಲ್) ಎಲ್ಲ ದ್ರಾವಿಡ ಭಾಷೆಯಲ್ಲಿ ದೊರೆಯುವ ಅಸ್ವತಂತ್ರ ರೂಪ. ಇಂದು ಆಡುನುಡಿಯಲ್ಲಿ ಈ ಪದದ ಬಳಕೆ ಕನ್ನಡದಲ್ಲಿ ಉಳಿದಿಲ್ಲ.
- ಏರಿ : ಕೆರೆಕಟ್ಟೆ - ನೀರು ನಿಲ್ಲಿಸಲು ಕಟ್ಟಿದ ಒಡ್ಡು:
  ಏರು (ತೆಲುಗು): (ಏರೂರು):
  ಮೂಲದ್ರಾವಿಡಪದ 'ಯಾಜ್ - DED - (೩೨೩೩)
- ಡೊಣೆ : ಬಂಡೆಗಳ ಮಧ್ಯೆಯಿರುವ ನಿಸರ್ಗ ಜಲಾಶಯ: ಕೊಳ: ಕಲ್ಯಾಣಿ ದೊನ/ ದೊಣ (ತೆಲುಗು): ದ್ರೋಣಿ (ಸಂಸ್ಕೃತ):
- ಬೆಳ್ / ಬೊಳ್ : ಜಲಾಧಿಕ್ಯವುಳ್ಳ ಸ್ಥಳ, ನೆರೆ, ಬೆಳ್ಳ (ಕನ್ನಡ)
  ಬೊಳ್ಳ (ತುಳು): ಉದಾ : ಬೊಳುಗೋಟಿ: ಬೊಲ್ಲೂರು
  ಬೆಳ್ಳಾರೆ (ಬಳ್ಳಾರಿ)
- ವಾನಿ : ನದಿ, ದೊಡ್ಡಹಳ್ಳ: ವಾಣಿ - ವೇಣಿ - ಓಣಿ ಎಂಬ ರೂಪಗಳೂ ಇವೆ.
  ಉದಾ : ಆದವಾನಿ: ಆದೋನಿ

### ೩.೫.೨. ಶಿಲಾವಾಚಿ

ಸ್ಥಳನಾಮ ನಿರ್ದೇಶನದಲ್ಲಿ ಹೆಚ್ಚಾಗಿ ಪ್ರಕೃತಿಯನ್ನೇ ಅವಲಂಬಿಸಿದ ಪ್ರಾಚೀನರು ಕಲ್ಲನ್ನು ಅತಿಹೆಚ್ಚಾಗಿ ಗಮನದಲ್ಲಿಟ್ಟುಕೊಂಡಿದ್ದಾರೆ. ಎಂಬುದು ಸ್ಥಳನಾಮಗಳ ಅವಲೋಕನದಿಂದ ತಿಳಿಯುತ್ತದೆ.

| | | | |
|---|---|---|---|
| ಅರಿಕೇರಿ | - ALR | ತುರ್ವಗಲ್ಲು | - ALR |
| ಅರೇಕಲ್ಲು | - ADN | ದಿಬ್ಬನಕಲ್ಲು | - ADN |
| ಅರ್ಲೇ ಬಂಡೆ | - ADN | ದಮ್ಮೂರ ಕಗ್ಗಲ್ಲು | - BLR |
| ಈರನಗಲ್ಲು | - ADN | ನವಿಲಕಲ್ಲು | - ADN |
| ಕಲ್ಲುಕುಂಟಿ | - ADN | ನೇಮಕಲ್ಲು | - ALR |
| ಕಪ್ಪುಗಲ್ಲು | - BLR | ನೆಟ್ಟೇಕಲ್ಲು | - ADN |
| ಕರೇಕಲ್ಲು | - BLR | ಪಾಂಡವಗಲ್ಲು | - ADN |
| ಕರೇಕಲ್ಲು ವೀರಾಪುರ | - BLR | ಪೀಸಲಬಂಡ | - ADN |
| ಕಲ್ಲುಕುಟಿಗನಹಾಳು | - BLR | ಬಲ್ಲೇಕಲ್ಲು | - ADN |
| ಕಳವಲಗುಂಡು | - ADN | ಬೆಣ್ಣೇಕಲ್ಲು | - BLR |
| ಕಲ್ಲುಬಾವಿ | - ADN | ಬೆಳಗಲ್ಲು | - BLR |
| ಕಲ್ಲುಕುಟಿಗನಹಳ್ಳಿ | - SRP | ಬೆಳಗಲ್ಲು | - ADN |
| ಕಗ್ಗಲ್ಲು | - ADN | ಯಳಪಿಕಗ್ಗಲ್ಲು | - BLR |
| ಕುಪ್ಪಗಲ್ಲು | - ADN | ವಂದಗಲ್ಲು | - ADN |
| ಕೆಂಚಗಾರ ಬೆಳಗಲ್ಲು | - SRP | ಶಂಕರಬಂಡೆ | - ALR |
| ಕೊಳಗಲ್ಲು | - BLR | ಶಂಕರಬಂಡ | - BLR |
| ಗಣೇಕಲ್ | - ADN | ಸಂಗನಕಲ್ಲು | - BLR |
| ಗೌಡಗಲ್ಲು | - ADN | ಹದ್ದಿನಗುಂಡು | - BLR |
| ಚಿರ್ತನಕಲ್ಲು | - ADN | ಪೆಂಡೆಕಲ್ಲು | - ADN |
| ತ್ಸ್ಯಾಕಿಬಂಡ | - ALR | ಹಿರೇಕಲ್ಲು | - SRP |

ಅರೆ (ಬಂಡೆ, ಕಲ್ಲು) : ಕಲ್ಲು: ಗುಂಡು: ಬಂಡೆ ಎಂಬ ನಾಲ್ಕು ಶಿಲಾವಾಚಿ ಪದಗಳಿಂದ ಗಡಿಭಾಗದ ಸ್ಥಳನಾಮಗಳು ಸಿಂಹಪಾಲನ್ನು ಪಡೆದಿವೆ. ವ್ಯಕ್ತಿ, ಪ್ರಾಣಿ, ಪಕ್ಷಿ, ಪುರಾಣ ಪುರುಷರು, ಕೊಳ, ಮುಂತಾದವು ಈ ಶಿಲಾವಾಚಿ ಪದಕ್ಕೆ ತಳುಕು ಹಾಕಿಕೊಳ್ಳುವ ಮೂಲಕ ಇಲ್ಲಿನ ಸ್ಥಳನಾಮಗಳು ನಿರ್ದೇಶನಗೊಂಡಿವೆ. ಆದವಾನಿ ತಾಲ್ಲೂಕಿನಲ್ಲಿ ಅತಿಹೆಚ್ಚು ಶಿಲಾವಾಚಿ ಸ್ಥಳನಾಮಗಳಿವೆ. ಇಲ್ಲಿನ ಗುಡ್ಡ, ಬೆಟ್ಟ, ಕಲ್ಲು ಬಂಡೆಗಳು ಈ ಪರಿಸರಕ್ಕೆ ಕಾರಣವಾಗಿದೆಯೆಂಬುದು ಮೇಲ್ನೋಟಕ್ಕೆ ತಿಳಿಯುತ್ತದೆ. ಶಿಲಾವಾಚಿ ಸ್ಥಳನಾಮಗಳು ಹೆಚ್ಚಾಗಿ ಉತ್ತರಪದದಲ್ಲಿ ಸೂಚಿತವಾಗಿವೆ. ಅತಿ ವಿರಳವಾಗಿ ಅಲ್ಲೊಂದು, ಇಲ್ಲೊಂದರಂತೆ ಪೂರ್ವಪದದಲ್ಲಿಯೂ ಇರುವುದು ಕಂಡುಬರುತ್ತದೆ.

### ೩.೫.೩. ಪರ್ವತ/ದಿನ್ನೆ/ಗುಡ್ಡ/ಬಯಲು, ಕೋಟೆ ಸೂಚಿಸುವ ನಾಮಗಳು

| | |
|---|---|
| ಅಗಸಲದಿನ್ನೆ | - ADN |
| ಉರುಕುಂದೆ | - ADN |
| ಕುರುಕುಂದ | - ALR |
| ಕುರುಗೋಡು | - BLR |
| ಕೆಂಚನಗುಡ್ಡ | - SRP |
| ಕೊರ್ಲಗೊಂದಿ | - BLR |
| ಕೊಂಡಾಪುರ | - ADN |
| ಕೋಟೆಹಾಳ್ | - SRP |
| ಕೊಂಡಾಪುರ. ಎಸ್. | - ADN |
| ಕೋಟೆಹಾಳ್ ಸೂಗೂರು | - SRP |
| ಚಿಪ್ಪಗಿರಿ | - ALR |
| ತೆಕ್ಕಲಕೋಟೆ | - SRP |
| ದಯ್ಯಾಲಗುಡ್ಡ | - ADN |
| ದಿಬ್ಬನಕಲ್ಲು | - ADN |
| ದಿಬ್ಬನದೊಡ್ಡಿ | - ADN |
| ದೇವರ ಬೆಟ್ಟ | - ADN |
| ದೊಂಬಲದಿನ್ನೆ | - ADN |
| ಪರ್ವತಾಪುರ | - ADN |
| ಪೀಕಲಬೆಟ್ಟ | - ADN |
| ಬಸರಕೋಡು | - BLR |
| ಬಳಕುಂದಿ | - SRP |
| ಬೂದಿಗುಪ್ಪ | - SRP |
| ಬೊಳಗೋಟೆ | - ALR |
| ಮಂಡಗಿರಿ | - ADN |
| ಮಿಂಚೇರಿ | - BLR |
| ಮಿಟ್ಟೆಸೂಗೂರು | - SRP |
| ಮುಚ್ಚಗಿರಿ | - ADN |
| ಮುಸ್ತಗಟ್ಟ | - BLR |
| ಮೋಟರದಿನ್ನೆ | - SRP |
| ರಾಮದುರ್ಗ | - ALR |
| ಲಿಂಗಲದಿನ್ನೆ | - ADN |
| ವೀರಲದಿನ್ನೆ | - ADN |
| ಸಲಕಲಕೊಂಡ | - ADN |
| ಸಿರುಗುಪ್ಪ | - SRP |
| ಹಳಕುಂದಿ | - BLR |

ದಿನ್ನೆ: ಕುಂದ: ಕೋಡು (ಗೋಡು): ಕೊಂಡ (ಗೊಂಡ: ಗೊಂದಿ): ಗುಡ್ಡ: ಬೆಟ್ಟ: ಗಿರಿ: ದಿಬ್ಬ: ಗುಪ್ಪ (ಕುಪ್ಪ): ಗಟ್ಟ (ಘಟ್ಟ): ಮಿಟ್ಟೆ: ದೊಡ್ಡಿ: ಕೋಟೆ: ಹಾಳ್: ದುರ್ಗ - ಎಂಬಂತಹ ವಾರ್ಗಿಕಗಳ ಆಧಾರದ ಮೇಲೆ ಇವುಗಳನ್ನು ವರ್ಗೀಕರಿಸಲಾಗಿದೆ. ಇವುಗಳ ಪೂರ್ವಪದಗಳು ಜಾತಿ, ವ್ಯಕ್ತಿ, ಪ್ರಾಣಿ, ಪಕ್ಷಿ, ದಾನ್ಯ, ದೈವ, ಪುರಾತತ್ವ ಪರಿಸರ, ಸಂಪತ್ತು, ಮುಂತಾದುವನ್ನು ಸೂಚಿಸುವ ಪದಗಳಾಗಿವೆ.

೩.೫.೪. ಹೂ/ಸಸ್ಯ/ಗಿಡ, ಮರ, ಬಳ್ಳಿ ಮುಂತಾದುವನ್ನು ಸೂಚಿಸುವಂತಹವು

| | | | |
|---|---|---|---|
| ಅರಳಿಗನೂರು | - SRP | ತೊಂಡೆಹಾಳ್ | - SRP |
| ಅಲಬನೂರು | - SRP | ಬದನೆಹಾಳ್ | - ADN |
| ಇಂಗಳದಹಾಳ್ | - ALR | ಬದನಹಟ್ಟಿ | - BLR |
| ಈಚಲಹಾಳ್ | - ADN | ಬಸರಕೋಡು | - BLR |
| ಕಕ್ಕಬೇವಿನಹಳ್ಳಿ | - BLR | ಬಸರಹಳ್ಳಿ | - SRP |
| ಕ್ಯಾದಿಗೆಹಾಳ್ | - BLR | ಬೇವಿನಮರದ ಸೂಗೂರು | - SRP |
| ಗೊನೆಹಾಳ್ | - ALR | ಬೇವಿನಹಳ್ಳಿ | - BLR |
| ಗೋನಬಾವಿ | - ADN | ರಾರವಿ (ಬಿಲ್ವಪತ್ರೆ ಮರ) | - SRP |
| ಜಾಲಿಬೆಂಚಿ | - ADN | ಹತ್ತಿ ಬೆಳಗಲ್ಲು | - ALR |
| ಜಾಲಿಬೆಂಚಿ | - BLR | ಹೂವನೂರು | - ADN |
| ಜಾಲಿಹಾಳ್ | - BLR | | |
| ಜೋಳದರಾಶಿ | - BLR | | |
| ತಂಗರಡೋಣಿ | - ALR (ತಂಗರ = ಅಂಬರೆಗಿಡ) | | |

ಅರಳಿಗನೂರು, ಅಲಬನೂರು ಈ ಎರಡು ಸ್ಥಳನಾಮಗಳು ಮೇಲ್ನೋಟಕ್ಕೆ ಸಸ್ಯವಾಚಿ ಎನಿಸಿದರೂ ಒಟ್ಟು ರಚನೆಯಲ್ಲಿ ಕಂಡುಬರುವ 'ನ' ಪುರುಷ ಸಂಬಂಧವಾಚಿ ಯಂತೆ ವ್ಯಕ್ತಿವಾಚಿಯೂ ಆಗಿರಬಹುದೆನಿಸುತ್ತದೆ. ಸ್ಥಳನಾಮಗಳ ಪೂರ್ವಪದದಿಂದ ಹೆಚ್ಚಾಗಿ ಹೂ, ಸಸ್ಯ, ಗಿಡಮರ, ಬೆಳೆ, ಮುಂತಾದುವು ನಿರ್ದೇಶನಗೊಂಡಿವೆ.

೩.೫.೫. ಕ್ಷೇತ್ರ ವಾಚಕಗಳು

| | | | |
|---|---|---|---|
| ಕೋಗಿಲ ತೋಟ | - ALR | ಪಲ್ಲಿಪಾಡು | - ADN |
| ಕಡೇತೋಟ | - ADN | ಸಿದರಗದ್ದೆ | - SRP |
| ಕೆಂಚನಗದ್ದೆ | - SRP | ಹಳೇತೋಟ ಟಿ.ಸಿ. | - SRP |
| ನೆಲಕೋಸಿಗಿ | - ADN | ಹಳೇತೋಟ ಎಸ್.ಸಿ. | - SRP |

ಸ್ಥಳನಾಮ ನಿರ್ದೇಶನದಲ್ಲಿ ತೋಪು, ತೋಟ, ಗದ್ದೆ ಈ ರೀತಿಯಾಗಿ ಆಯಾ ಸ್ಥಳೀಯ ಬಯಲು ಪ್ರದೇಶದಲ್ಲಿನ ವಸ್ತು, ವಿಷಯಗಳು ಅವಕಾಶವನ್ನು ಪಡೆದಿವೆ. ಈ ಕ್ಷೇತ್ರಗಳ ಹಿಂದೆ ನಿರ್ದಿಷ್ಟವಾಗಿ ಪ್ರಾಣಿ, ಪಕ್ಷಿ, ವ್ಯಕ್ತಿ ಹಾಗೂ ಕೆಲವು ವಿಶೇಷಣಗಳು ಬಂದಿರುತ್ತವೆ.

### ೩.೫.೬. ಲೋಹ/ಸಂಪತ್ತನ್ನು ಸೂಚಿಸುವ ನಾಮಗಳು

| | | | |
|---|---|---|---|
| ತಾಂಬ್ರಹಳ್ಳಿ | - BLR | ಸಿರಿಗಾಪುರ | - ALR |
| ಸಿರಿಗೇರಿ | - SRP | ಹೊನ್ನಹಳ್ಳಿ | - BLR |
| ಸಿರಿಗುಪ್ಪ | - SRP | ಹೊನ್ನರಳ್ಳಿ | - SRP |

ಈ ಭಾಗದಲ್ಲಿ ತಾಮ್ರ, ಬಂಗಾರ ಹಾಗೂ ಕಬ್ಬಿಣದ ನಿಕ್ಷೇಪಗಳು ದೊರೆಯುತ್ತವೆ. ಈ ಕಾರಣದಿಂದ ಈ ಲೋಹ ತಯಾರಿಕೆಗೆ ಬೇಕಾದ ಕೈಗಾರಿಕೆಗಳನ್ನು ಅಲ್ಲಲ್ಲಿ ನಿರ್ಮಿಸಿ, ಕಾರ್ಮಿಕರು ಕೆಲಸ ಮಾಡುತ್ತಿರಬೇಕು. ಈ ಕಾರಣಗಳಿಂದ ಆಯಾ ನೆಲೆಗೆ ತಾಂಬ್ರಹಳ್ಳಿ, ಹೊನ್ನಳ್ಳಿ, ಕಮ್ಮಾರಚೇಡು, ಇಂಗಳದಾಳು ಎಂಬಂತಹ ಗ್ರಾಮನಾಮಗಳು ಉದಯವಾಗಿವೆ ಎಂದು ತಿಳಿಯಬಹುದು.

### ೩.೫.೭. ವರ್ಣಸೂಚಕಗಳು (Colour)

| | | | |
|---|---|---|---|
| ಎರಿಗೇರಿ | - ADN | ಪಚ್ಚರಹಳ್ಳಿ | - ALR |
| ಕಪ್ಪಗಲ್ಲು | - BLR | ಬಿಳೇಹಾಳ್ | - ALR |
| ಕರೇಕಲ್ಲು | - BLR | ಬೆಲ್ಲೋನಾ | - ALR |
| ಕರೇಕಲ್ಲು ವೀರಾಪುರ | - BLR | ಬೆಳಗಲ್ಲು | - ADN |
| ಕರೂರು | - SRP | ಯರ್ರಗುಡಿ | - BLR |
| ಬೆಳಗಲ್ಲು | - SRP | ಹಚ್ಚೊಳ್ಳಿ | - SRP |

ಹಸಿರು, ಕಪ್ಪು, ಬಿಳಿ, ಕೆಂಪು ಈ ನಾಲ್ಕು ಬಗೆಯ ಬಣ್ಣಗಳು ಈ ಭಾಗದ ಸ್ಥಳನಾಮಗಳಿಂದ ವ್ಯಕ್ತವಾಗುತ್ತದೆ. ಭೌಗೋಳಿಕ ಚಹರೆಯನ್ನು ಗುರುತಿಸುವ (Identity) ಸಲುವಾಗಿ ಇಂತಹ ಹೆಸರುಗಳು ಬಂದಿರಬೇಕು. ಪಚ್ಚ > ಹಚ್ಚ ಎಂಬ ಎರಡು ರೂಪಗಳು ಇಲ್ಲಿ ಬಳಕೆಯಾಗಿದೆ. ಪಚ್ಚರಹಳ್ಳಿ - ಇದು ಭಾಷಿಕವಾಗಿ ಪ' ಕಾರದಿಂದ ಆರಂಭವಾಗುತ್ತಿದೆಯಾದ್ದರಿಂದ ಪ್ರಾಚೀನ ಗ್ರಾಮವಿರಬೇಕೆಂದು ಊಹಿಸಬಹುದು. ಪಚ್ಚರಹಳ್ಳಿ' ಎಂಬ ಸ್ಥಳನಾಮ ಆಕೃತಿಮಾದಲ್ಲಿ ಪಚ್ಚರ + ಹಳ್ಳಿ ಎಂಬ ರೂಪವಿದೆ. ಪಸಿರ್ > ಪಚಿರ್ > ಪಚ್ಚಿರ್ ಆಗಿರುವ ಸಾಧ್ಯತೆಗಳಿವೆ. ಅದರಂತೆ 'ಪಚ್ಚರ' ಎಂಬಲ್ಲಿ 'ರ' ಸಂಬಂಧಸೂಚಿಯಿರುವುದರಿಂದ ಇದೇನಾದರೂ ಜನಾಂಗವಾಚಿಯಾಗಿರಬಹುದೇ ಎಂಬ ಅನುಮಾನಗಳೂ ಬರುತ್ತವೆ. ಪಸಿರ್ > ಪಚ್ಚರ ಆಗಿರುವ ಸಾಧ್ಯತೆಗಳ ಬಗೆಗೆ ದ್ವಂದ್ವತೆಯೂ ಇದೆ.

ಮುಖ್ಯವಾಗಿ ಕಪ್ಪು + ಗಲ್ಲು

ಬೆಳ + ಕಲ್ಲು

ಬೆಳ್ + ದೊಣೆ

ಎಂಬ ರೂಪಗಳಲ್ಲಿ - 'ಕಲ್ಲು' - ದೊಣೆ ಎಂಬ ಪದಗಳನ್ನು ಕಪ್ಪು, ಬಿಳಿ ವರ್ಣಗಳು ವರ್ಣಿಸುತ್ತಲಿವೆ.

ಆದರೆ ಪಚ್ಚರ + ಹಳ್ಳಿ

ಹಚ್ಚ + ಹಳ್ಳಿ ಎಂಬ ರಚನೆಗಳಲ್ಲಿ - ಹಳ್ಳಿ' ಎಂಬ ವಾಸ್ತವ್ಯವಾಚಿ ಘಟಕದ 'ಬಣ್ಣ'ವನ್ನು ವರ್ಣಿಸಲು

ಸಾಧ್ಯವೇ ಎಂಬ ಬಗ್ಗೆ ಆಲೋಚಿಸಬೇಕಾಗುತ್ತದೆ. ಆದರೂ ಒಂದು ಭೌಗೋಳಿಕ ಪರಿಸರದ ನೆಲದ ಹವಾಮಾನವನ್ನು ಗುರುತಿಸುವಾಗ ಅಲ್ಲಿ ಬೆಳೆಯುವ ಬೆಳೆ, ಅಥವಾ ಅಲ್ಲಿರುವ ಭೂಮಿಯ 'ಬಣ್ಣ' (ಹಸಿರು, ಕೆಂಪು ಇತ್ಯಾದಿ) ಸ್ಥಳನಾಮಗಳಲ್ಲಿ ಎಡೆಪಡೆಯುವ ಸಾಧ್ಯತೆಯಿದೆ. - ಪಚ್ಚರ ಎಂಬ ಘಟಕದಲ್ಲಿ - 'ರ' ಎಂಬ ವರ್ಣ ಜನರ ಉಚ್ಚಾರಣೆಯಿಂದ ಬಂದಿರಲೂ ಸಾಧ್ಯವಿದೆ. ಆದ್ದರಿಂದ - ಪಚ್ಚರಹಳ್ಳಿ ಎಂಬ ಸ್ಥಳನಾಮವನ್ನು ವರ್ಣವಾಚಿಯಲ್ಲಿ ಸೇರಿಸಬಹುದಾಗಿದೆ. ಹಚ್ಚೊಳ್ಳಿ' - ಎಂಬ ಇನ್ನೊಂದು ರೂಪ ಭಾಷಿಕವಾಗಿ ಹ' ಕಾರ ಪ್ರಯೋಗದ ಕಾಲಾವಧಿಯನ್ನು ಹೇಳುತ್ತದೆ. ಯರ್ರ, ಎರ್ರಿ' ಎಂಬ ಪದಗಳು ತೆಲುಗು ಭಾಷೆಯ ಕೆಂಪು' ಎಂಬುದನ್ನು ಹೇಳುತ್ತವೆ. ಎರೆ, ಯೆರ್ ' ಎಂಬ ಪದಗಳು ಭೂಮಿಯ ಒಂದು ಮಣ್ಣಿನ ಗುಣದ ಸ್ವಭಾವವನ್ನೂ ತಿಳಿಸುವಂತಹವು.

ಒಟ್ಟಾರೆ ಪ್ರಾಕೃತಿಕ ಮೂಲದಿಂದ ಬಂದಂತಹ ಸ್ಥಳನಾಮಗಳು ಆಯಾ ಭೌಗೋಳಿಕ ಪರಿಸರದ ಚಹರೆಯನ್ನು ಗುರುತಿಸಲು ಯೋಗ್ಯವೆನಿಸುತ್ತವೆ. ಒಂದೊಂದು ಸ್ಥಳಕ್ಕೆ ಹೆಸರಿಡುವಾಗ, ಅಲ್ಲಿ ಕಂಡು ಬರುವ ನಿಸರ್ಗದ ವಿಶಿಷ್ಟತೆಯನ್ನು ಗುರುತಿಸಿ ಅದರೊಂದಿಗೆ ಗ್ರಾಮನಿರ್ಮಾಣವು ನಡೆದಿರುವುದು ತಿಳಿಯುತ್ತದೆ. ಸ್ಥಳೀಯ ವೈಶಿಷ್ಟ್ಯವನ್ನು ಆಧರಿಸಿ, ಅದೇ ಸ್ವರೂಪದ ಹೆಸರುಗಳಿರುವುದಕ್ಕೆ ಕೆಲವು ನಿದರ್ಶನಗಳು ಹೀಗಿವೆ.

ನೀರಿನ ಅನುಕೂಲಕ್ಕೆ ಇರುವ 'ಕುಂಟೆ'ಗಳು ಬಹುತೇಕ ಅನೇಕ ಊರುಗಳಲ್ಲಿವೆ. ಅದಕ್ಕೆ ಸಂಬಂಧಿಸಿ -

| | | | |
|---|---|---|---|
| ಕಲ್ಲುಕುಂಟೆ | - ADN | ಜಾನಿಕುಂಟೆ | - BLR |
| ಚಿಂತಕುಂಟೆ | - ADN | ಪುಟ್ಟಕುಂಟೆ | - ADN |
| ಚಿಂತಕುಂಟೆ | - ALR | ಬಂಟಕುಂಟೆ | - ADN |

ಅದರಂತೆ ಬಯಲು ಭೂಮಿಯಿಂದ ಕೂಡಿದ ಬಳ್ಳಾರಿ - ಕರ್ನೂಲು ಜಿಲ್ಲೆಯ ಗಡಿಭಾಗದಲ್ಲಿ ಕೆರೆ ಮತ್ತು ಬಾವಿಗಳೇ ಜನಜೀವನಕ್ಕೆ ಆಧಾರಗಳಾಗಿವೆ. ಕೆರೆ, ಬಾವಿಗಳನ್ನು ನಿರ್ಮಿಸಿಕೊಂಡು ಅದೇ ಹೆಸರಿನೊಂದಿಗೆ ಸ್ಥಳನಾಮ ನಿರ್ದೇಶನ ಮಾಡಿದ್ದಾರೆ.

| | | | |
|---|---|---|---|
| ಕೆರೆಕೇರಿ | - BLR | ಕಲ್ಲುಬಾವಿ | - ADN |
| ಸೂಳೆಕೆರೆ | - ADN | ಗೋನಬಾವಿ | - ADN |
| ಹೊನ್ನಿಕೆರೆ | - ALR (ನಿರ್ವಸಿತ) | | |

ಈ ಮಾನವ ನಿರ್ಮಿತ ಕೆರೆ, ಬಾವಿಗಳಿಗೆ ಹೊನ್ನಿ, ಸೂಳೆ, ಅಥವಾ ಮತ್ತಾರೋ ಒಬ್ಬ ವ್ಯಕ್ತಿಯ ಹೆಸರಿನೊಂದಿಗೆ ನಾಮನಿರ್ದೇಶನ ಮಾಡಿದ್ದಲ್ಲದೇ, ಕೆಲವು ಪ್ರಾಕೃತಿಕ ಹೆಸರುಗಳೂ ಬಂದಿರುವುದು ತಿಳಿಯುತ್ತದೆ. ಕೆಲವೊಮ್ಮೆ ಕೆರೆಯನ್ನು ಕಟ್ಟಿಸಿದ ರಾಜ, ಮಂತ್ರಿ, ಅಥವಾ ಊರಿನ ಯಾವುದೋ ವ್ಯಕ್ತಿಯ ಹೆಸರೂ ಇರುವುದು ಕಂಡುಬರುತ್ತದೆ.

ಆಂಧ್ರ - ಕರ್ನಾಟಕ ಗಡಿಭಾಗದ ಬಳ್ಳಾರಿ - ಕರ್ನೂಲು ಜಿಲ್ಲೆಯಲ್ಲಿ ಬೆಟ್ಟಗಳು ಹೆಚ್ಚಾಗಿ ಕಂಡು ಬರುತ್ತವೆ. ಬೆಟ್ಟಗುಡ್ಡಗಳ ಬದಿಯಲ್ಲಿಯೇ ಗ್ರಾಮ ನಿರ್ಮಾಣಗೊಂಡಿವೆ. ಕಾರಣ ಆ ಸ್ವರೂಪದ ಗ್ರಾಮನಾಮಗಳೂ ಈ ಭಾಗದಲ್ಲಿ ಕಂಡುಬಂದಿವೆ.

| | | | |
|---|---|---|---|
| ಉರುಕುಂದೆ | - ADN | ಚಿಪ್ಪಗಿರಿ | - ALR |
| ಕುರುಕುಂದೆ | - ALR | ದಯ್ಯಾಲಗುಡ್ಡ | - ADN |
| ಕೆಂಚನಗುಡ್ಡ | - SRP | ದೇವರಬೆಟ್ಟ | - ADN |
| ಕೊಂಡಾಪುರ | - ADN | ಪರ್ವತಾಪುರ | - ADN |

ಹೀಗೆ ಸ್ಥಳೀಯವಾಗಿ ಬೆಟ್ಟ, ಗುಡ್ಡಗಳಿರುವುದರಿಂದ ಅವುಗಳಿಗೆ ವ್ಯಕ್ತಿ, ದೈವ, ಪ್ರಾಣಿ ಮುಂತಾದ ವಸ್ತು, ವಿಷಯಗಳನ್ನು ನಿರ್ದಿಷ್ಟದಲ್ಲಿ ಸೇರಿಸಿಕೊಂಡು ಸ್ಥಳನಾಮ ನಿರ್ದೇಶನವನ್ನು ಮಾಡಲಾಗಿದೆ.

ಬೆಟ್ಟಗಳಲ್ಲಿ ನೈಸರ್ಗಿಕವಾಗಿ ನಿರ್ಮಿತವಾದ 'ಡೊಣೆ'ಗಳಿಂದಾಗಿ ಕೆಲವು ಗ್ರಾಮನಾಮಗಳು ಬಂದಿವೆ. ಡೊಣೆಯೆಂದರೆ ಬೆಟ್ಟಗಳಲ್ಲಿ ಮತ್ತು ಬಯಲು ನೆಲದಲ್ಲಿ ಕಲ್ಲಿನಿಂದ ಸಹಜವಾಗಿ ಉಂಟಾದ ನೀರಿನ ಕುಳಿ.

| | | | |
|---|---|---|---|
| ನಗರಡೊಣೆ | - ALR | ಹರಗಿನಡೊಣೆ | - BLR |
| ಮೈಕಡೊಣೆ | - ADN | | |

ಅಲ್ಲದೇ ಈ ಭಾಗದ ಭೌಗೋಳಿಕ ಪರಿಸರದಲ್ಲಿ ಸಹಜವಾಗಿರುವ ದಿನ್ನೆ, ಕಣಿವೆ, ದಿಬ್ಬ, ತಗ್ಗು ಇವೆಲ್ಲವುಗಳ ಕುರುಹುಗಳಾಗಿ ಸ್ಥಳನಾಮಗಳು ಬಂದಿವೆ. ಅಲ್ಲದೇ ಇಲ್ಲಿ ಬೆಳೆಯುವ ಕೆಲವು ಗಿಡ, ಮರ, ಸಸ್ಯಗಳ ವಿಶೇಷತೆಯಿಂದಲೂ ಸ್ಥಳನಾಮ ನಿರ್ದೇಶನಗೊಂಡಿವೆ. ಆಲದಮರ, ಬೇವಿನಮರ, ಜಾಲಿಮರ, ಬದನೆಸಸ್ಯ, ಕೆಲವು ಹೂಬಳ್ಳಿಗಳೂ ಸ್ಥಳನಾಮಗಳಿಗೆ ಪ್ರೇರಕವಾಗಿರುವುದು ತಿಳಿಯುತ್ತದೆ.

ಒಟ್ಟು ಗಡಿಭಾಗದ ಭೌಗೋಳಿಕ ಸ್ವರೂಪಕ್ಕನುಗುಣವಾಗಿಯೇ ಇಲ್ಲಿನ ಸ್ಥಳನಾಮಗಳಿವೆ. ಸಮುದ್ರ, ಸಾಗರ ಎಂಬ ವಾರ್ಗಿಕಗಳಿಂದ ನಿರ್ದೇಶನಗೊಂಡ ಗ್ರಾಮನಾಮ ಪರಿಸರದಲ್ಲಿ ಸಮುದ್ರ, ಸಾಗರಗಳಿಲ್ಲ. ಆದರೆ ಕೆರೆ, ಹಳ್ಳ ಮುಂತಾದ ಜಲಮೂಲಗಳಿವೆ. ಬಹುಶ: ಇದಕ್ಕೆ ಕಾರಣ ಸಂಸ್ಕೃತ ಭಾಷೆಯ ಒಲವು ಹಾಗೂ ಮಳೆ ಆಧಾರಿತ ಭೂಮಿಯಾಗಿರುವ ಈ ಪರಿಸರದಲ್ಲಿಯೂ ಸಮುದ್ರ, ಸಾಗರಗಳನ್ನು ಕಾಣುವ ದೃಷ್ಟಿಯೂ ಇರಬಹುದು. ಉಳಿದಂತೆ ಸ್ಥಳೀಯ ಭೂಮಿ, ಭೂಮಿಯ ಗುಣ, ಅಲ್ಲಿ ದೊರೆಯುವ ಲೋಹ, ಸಂಪತ್ತು, ಬೆಳೆಯುವ ಬೆಳೆ, ಮರ, ಗಿಡಗಳು, ಪರ್ವತಗಳು ಸ್ಥಳನಾಮಗಳಿಗೆ ಕಾರಣವಾಗಿರುವುದು ಕಂಡು ಬರುತ್ತದೆ. ಇದರಿಂದ ಪ್ರಕೃತಿ - ನಿಷ್ಠ ಪ್ರಾಚೀನರ ಜೀವನವಿಧಾನ, ನಿಸರ್ಗದೊಂದಿಗಿನ ಅವರ ಗಾಢ ಸಂಬಂಧವನ್ನು ತಿಳಿಯಲು ಸಾಧ್ಯವಿದೆ.

## ೩.೬. ಸಾಂಸ್ಕೃತಿಕ ಸ್ಥಳನಾಮಗಳು

### ೩.೬.೧. ವ್ಯಕ್ತಿವಾಚಿ

| | | | |
|---|---|---|---|
| ಅಗಸನೂರು | - ADN | ಇಬ್ರಾಹಿಂಪುರ | - SRP |
| ಅಗಸನೂರು | - SRP | ಈರನಗಲ್ಲು | - ADN |
| ಅಕ್ಕತಂಗೇರಹಾಳ್ | - SRP | ಕಾಮನಹಾಳ್ | - ALR |
| ಇಬ್ರಾಹಿಂಪುರ | - BLR | ಕಾಮನದೊಡ್ಡಿ | - ADN |

ಕಲ್ಲುಕುಟಿಗನಹಾಳ್ - BLR
ಕಲ್ಲುಕುಟಿಗನಹಾಳ್ - SRP
ಕುಂಟನಹಾಳ್ - ADN
ಕೆಂಚನಗುಡ್ಡ - SRP
ಕಾಮವರಂ - ADN
ಗೊಲ್ಲನಾಗೇನಹಳ್ಳಿ - BLR
ಚಿರುಮನದೊಡ್ಡಿ - ALR
ಚಿಟಿಗನಹಾಳು - BLR
ದಾಸನಾಗೇನಹಳ್ಳಿ - BLR
ದೇವಲಾಪುರ - SRP
ದೇಶನೂರು - SRP
ದೊಡ್ಡನಕೇರಿ - ADN
ನಾರಾಯಣಪುರ - ALR
ನಾರಾಯಣಪುರ - ADN
ನಾಗನಾಥನಹಳ್ಳಿ - ALR
ಪರಮದೇವನಹಳ್ಳಿ - BLR
ಬಂಟನಹಾಳ್ - ALR
ಬಂಟಕುಂಟೆ - ADN
ಬ್ಯಾಗರಾಮದಿನ್ನೆ - SRP
ಬೀರಳ್ಳಿ - SRP
ಬುರ್ರನಾಯಕನಹಳ್ಳಿ - BLR
ಭೈರದೇವನಹಳ್ಳಿ - BLR
ಭೈರಾಪುರ - SRP
ಬೊಮ್ಮಪಲ್ಲೆ - ADN
ಬೊಮ್ಮನಹಾಳ್ - BLR
ಬೊಮ್ಮಲಾಪುರ - SRP
ಮಲ್ಲಿಕಾರ್ಜುನಹಳ್ಳಿ - ALR
ಮಾಚನೂರು - ALR
ಮಲ್ಲನಹಟ್ಟಿ - ADN
ಮುದ್ದನಗೇರಿ - ALR
ಮುಗುಮನಗುಂದಿ - ALR
ಮೂಸನಹಳ್ಳಿ - ALR
ಮಂಜನಹಾಳು - SRP
ಮಾಳಾಪುರ - SRP
ಮೈಲಿಂಗನೂರು - ADN
ಮೈಲಾಪುರ - SRP
ರಂಗಾಪುರ - ADN
ರಾಮಾಪುರ - ADN
ರಾಯಪುರ - BLR
ರಾವಿಹಾಳ್ - SRP
ವಿರುಪಾಪುರ - ADN
ಶಂಕರಬಂಡ - BLR
ಶ್ರೀರಾಮನಗರ - ALR
ಸಂಗನಕಲ್ಲು - BLR
ಸಂಜೀವರಾಯನಕೋಟೆ - BLR
ಸಾಂತನೂರು - ADN
ಸಾಲಿಗನೂರು - SRP
ಸಿದ್ದಮ್ಮನಹಳ್ಳಿ - BLR
ಸಿಂಗದೇವನಹಳ್ಳಿ - BLR
ಸಿದ್ಧರಾಮಾಪುರ - SRP
ಸುಲ್ತಾನಪುರ - ADN
ಸೂಳೆಕೆರೆ - ADN
ಸೂಳೆಬಾವಿ - ALR
ಸೋಮಲಾಪುರ - BLR
ಸೋಮಸಮುದ್ರ - BLR

ಗಡಿಭಾಗದ ನಾಲ್ಕು ತಾಲ್ಲೂಕುಗಳ ಒಟ್ಟು ಗ್ರಾಮನಾಮಗಳಲ್ಲಿ ಸುಮಾರು ೬೪ ಸ್ಥಳನಾಮಗಳು ವ್ಯಕ್ತಿವಾಚಿಯಾಗಿವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಜಾತಿಯನ್ನು ಸೂಚಿಸುವ, ದೇವರನ್ನು ಸೂಚಿಸುವ ನಾಮಗಳೂ ಸೇರಿಸಲಾಗಿದೆ. ಹಾಗೆಯೇ ಕಲ್ಲುಕುಟಿಗ, ದಾಸ ಮುಂತಾದ ವೃತ್ತಿನಾಮಗಳೂ ಇಲ್ಲಿ ಒಳಗೊಂಡಿವೆ. ಅತಿಹೆಚ್ಚು ಪುರುಷ ಪ್ರಧಾನ ಸ್ಥಳನಾಮಗಳಿವೆ. ದೊರೆತ ೬೪ ಸ್ಥಳನಾಮಗಳಲ್ಲಿ ೦೭ ಸ್ತ್ರೀಯನ್ನು ಹೆಸರಿಸುತ್ತವೆ. ೭ರಲ್ಲಿ ೫ ನಾಮಗಳು ನೇರವಾಗಿ ಹೆಸರನ್ನು ಹೇಳುತ್ತವೆ. ಉಳಿದಂತೆ ವೃತ್ತಿಯನ್ನು ಹೇಳುತ್ತವೆ. ಇದಕ್ಕೆ ನಮ್ಮ ಪ್ರಾಚೀನ ಪರಂಪರೆಯಿಂದಲೂ ಬಂದಂತಹ ಪುರುಷಪ್ರಧಾನ ಸಮಾಜವೇ ಕಾರಣವೆನ್ನಬಹುದು. ಇತ್ತೀಚೆಗೆ ಆಂಧ್ರದ ಸಮುದಾಯಗಳ ವಲಸೆಯಿಂದ ನಿರ್ಮಾಣಗೊಂಡ ಕ್ಯಾಂಪುಗಳ ಹೆಸರುಗಳಲ್ಲಿ ಮಾತ್ರ ಹೆಚ್ಚಾಗಿ ಸ್ತ್ರೀಯರಿಗೆ ಸಂಬಂಧಿಸಿ ನಿರ್ದೇಶನ ಮಾಡಿರುವುದು ಗಮನಿಸತಕ್ಕ ಅಂಶವಾಗಿದೆ. ಆಧುನಿಕ ಜಗತ್ತಿನಲ್ಲೂ ಸ್ತ್ರೀಯನ್ನೂ ಸೂಚಿಸುವ ನಾಮ ನಿರ್ದೇಶನಗಳು ಅಷ್ಟಾಗಿ ನಡೆಯುತ್ತಿಲ್ಲ. ನಗರ - ಪಟ್ಟಣ ಪ್ರದೇಶದ ಬೀದಿಗಳು, ವೃತ್ತಗಳ ಹೆಸರುಗಳಲ್ಲಿ ಇತ್ತೀಚೆಗೆ ವಿರಳವಾಗಿ ಸ್ತ್ರೀಯರ ಹೆಸರು ಕಂಡು ಬರುತ್ತವೆ. ಇಂದಿರಾಗಾಂಧಿ - ಝಾನ್ಸಿರಾಣಿ ಲಕ್ಷ್ಮೀಬಾಯಿ - ಕಿತ್ತೂರುರಾಣಿ ಚೆನ್ನಮ್ಮ - ಸೋನಿಯಾ - ಮುಂತಾದವರು ಮಾತ್ರ ಈ ಸ್ಥಾನಕ್ಕೆ ಹೆಚ್ಚಿನ ಮಟ್ಟದಲ್ಲಿ ಅರ್ಹವಾಗಿರುವುದು ತಿಳಿಯುತ್ತದೆ. ಸಾಮಾನ್ಯ ಜನರಿಂದ ನಿರ್ದೇಶನವಾದ ಹೆಸರುಗಳು (ಹೆಂಗಸರ) ಕಂಡು ಬರುವುದು ತುಂಬಾ ವಿರಳ.

ಸೂಳೆ'ಗೆ ಸಂಬಂಧಿಸಿದ ಸ್ಥಳನಾಮಗಳು ಆಧುನಿಕಯುಗದಲ್ಲಿ ಕಂಡುಬರುವುದೇ ಇಲ್ಲ. ಸೂಳೆ ಮತ್ತು ಸೂಳೆಗಾರಿಕೆ ಒಂದು ಕಾಲದಲ್ಲಿ ಸಮಾಜ ಮಾನ್ಯವಾಗಿದ್ದರಿಂದ ಆ ಬಗೆಯ ಸ್ಥಳನಾಮಗಳು ಉದಯವಾದವೆನ್ನಬಹುದು. ಇತ್ತೀಚೆಗೆ ಬಂಡವಾಳಶಾಹಿ ಹಾಗೂ ರಾಜಕಾರಣಿಗಳು ಮೂಲ ಹೆಸರುಗಳನ್ನು ಅಳಿಸಿ, ತಮ್ಮ ಮನೆತನದ ಸ್ತ್ರೀಯರ ಹೆಸರುಗಳನ್ನು ಸ್ಥಳನಾಮಗಳಿಗೆ ಇಡುವ ಮೂಲಕ ತಮ್ಮ ರಾಜಾಧಿಪತ್ಯವನ್ನು ಸಾಧಿಸುತ್ತಿರುವುದು ತಿಳಿಯುತ್ತಿದೆ. ನಗರದ ಬೀದಿಗಳ ಹೆಸರುಗಳೇನಾದರೂ ಸ್ತ್ರೀಯರಿಗೆ ಸಂಬಂಧಿಸಿ ಕಂಡುಬಂದರೆ ಬಹುಶ: ಅವು ಬಂಡವಾಳಿಗರ, ರಾಜಕಾರಣಿಗಳ ಹೆಸರೇ ಇರುವುದು ತಿಳಿಯುತ್ತದೆ.

### ೩.೬.೨. ಪ್ರಾಣಿ, ಪಕ್ಷಿವಾಚಿ

ಸ್ಥಳನಾಮ ನಿರ್ದೇಶನದಲ್ಲಿ ಪ್ರಾಣಿ, ಪಕ್ಷಿಗಳೂ ತಮ್ಮ ಸ್ಥಾನವನ್ನು ಪಡೆದುಕೊಂಡಿವೆ. ಜನಪದರ ಅಥವಾ ಶಿಷ್ಟರ ಮನೋಭಾವನೆಯನ್ನು ಇದು ವ್ಯಕ್ತಪಡಿಸುತ್ತದೆ. ತಮ್ಮ ಜೀವನದೊಂದಿಗೆ ಬದುಕುವ, ಅಥವಾ ತಮಗೆ ಅತಿಮಾನುಷವೆಂದು ತೋರುವ ಪ್ರಾಣಿ, ಪಕ್ಷಿಗಳ ಹೆಸರನ್ನೇ ತಮ್ಮ ವಾಸದ ನೆಲೆಗಳಿಗೆ ಕಂಡುಕೊಂಡಿದ್ದಾರೆ, ನಿರ್ದೇಶಿಸಿದ್ದಾರೆ. ಗ್ರಾಮನಾಮಗಳಿಗಿಂತಲೂ, ನಿರ್ವಸಿತ ಪ್ರದೇಶಗಳಾದ, ಬಂಡೆ, ತಗ್ಗು, ಬೆಟ್ಟ, ಕುಂಟೆ, ಕಾಡು, ಮರ, ಯಾವುದೋ ವಿಶೇಷ ತೋಪು, ಮುಂತಾದವುಗಳಿಗೆ ಈ ಪ್ರಾಣಿ, ಪಕ್ಷಿಯನ್ನು ತಳಕು ಹಾಕುವ ಮೂಲಕ ಹೆಸರನ್ನು ಕರೆದಿರುವುದು ಕಂಡು ಬರುತ್ತದೆ. ಯಾವುದೋ ಬಂಡೆಯ ಮೇಲೆ ಹುಲಿ ಮಲಗಿದ್ದರೆ ಅದನ್ನು 'ಹುಲಿಬಂಡೆ' ಎಂದೂ, ಗುಂಡಿನ ಮೇಲೆ ಕೋತಿ ಕುಂತಿದ್ದರೆ ಅದನ್ನು 'ಕೋತಿಗುಂಡು' ಎಂದೂ ತಮ್ಮ ಗುರುತಿಗಾಗಿ ಕರೆದು, ಅದನ್ನು ಸಾರ್ವತ್ರಿಕ, ಶಾಶ್ವತವಾಗಿಸಿದ್ದೂ ಇದೆ. ಗ್ರಾಮನಾಮಗಳೂ ಈ ಬಗೆಯ ನಿರ್ದೇಶನಕ್ಕೆ ವಿರಳವಾಗಿ ಒಳಗಾಗಿವೆ. ಗಡಿ ಭಾಗದಲ್ಲಿ ಇಂತಹ ಕೆಲವು ಹೆಸರುಗಳು ದೊರೆಯುತ್ತವೆ.

೧. ಉರುಕುಂದೆ - ADN : ಉರಗ' ಎಂದರೆ ಹಾವು. ಕುಂದೆ - ಬೆಟ್ಟ; ಬೆಟ್ಟದಲ್ಲಿ ಸರ್ಪವಾಸಿಸಿದ್ದರಿಂದ ಈ ಹೆಸರು ಬಂದಿತು. ನರಸಿಂಹಾವತಾರಿ ಸರ್ಪ ಇಲ್ಲಿದೆಯೆಂಬುದು ಇಲ್ಲಿನ ಐತಿಹ್ಯ. ಬೆಟ್ಟದ ಪಕ್ಕದಲ್ಲಿರುವ (ಉರು) ಊರು ಉರುಕುಂದೆ ಎಂದೂ ಹೇಳಲು ಸಾಧ್ಯವಿದೆ.

೨. ಕರಡಿಗುಡ್ಡಂ - ALR : ಗುಡ್ಡ (ಕನ್ನಡ). ಗುಡ್ಡಂ' ಎಂಬಲ್ಲಿ 'ಮ' ಕಾರಾಂತ್ಯ ತೆಲುಗಿನ ಪ್ರಭಾವದಿಂದ ಆಗಿದೆ. ಇಲ್ಲಿನ ಬೆಟ್ಟದಲ್ಲಿ ಇಂದೂ ಕರಡಿಗಳು ಇರುವುದು ತಿಳಿಯುತ್ತದೆ.

೩. ಕೋಗಿಲೆತೋಟ - ALR : ಇಂದು ಇದು ತೆಲುಗು ರೆವಿನ್ಯೂ ದಾಖಲೆಯಲ್ಲಿ ಹಾಗೂ ತೆಲುಗು ಮಾತೃಭಾಷಿಕರ ಉಚ್ಚಾರಣೆಯಲ್ಲಿ, ನಾಮಫಲಕಗಳಲ್ಲಿ ಕೋಕಿಲತೋಟಂ' ಎಂಬುದಾಗಿ ಕರೆಯಲ್ಪಡುತ್ತಿದೆ. ವೇದಾವತಿ - ನದಿ (ಹಗರಿ) ದಂಡೆಯ ಈ ಗ್ರಾಮ ಹಸಿರಿನಿಂದ ಕೂಡಿದೆ. ಮಾವು, ತೆಂಗಿನ ಮರಗಳಿವೆ. ಇದರಿಂದ ಕೋಗಿಲೆಗಳೂ ಇಲ್ಲಿ ವಾಸಿಸುತ್ತವೆ.

೪. ಗುರ್ರಲದೊಡ್ಡಿ - ADN : ಗುರ್ರ - ಕುದುರೆ (ತೆಲುಗು): ಗುರ್ರಲು - ಕುದರೆಯ ಬಹುವಚನ ರೂಪ. ದೊಡ್ಡಿ - ಕೆಡ್ಡ, ಹಟ್ಟಿ, ದನದ ಕೊಟ್ಟಿಗೆ ಎಂಬ ಅರ್ಥಗಳಿವೆ. ಗುರ್ರಂ - ಚೆಂಚು, ಗೊಲ್ಲ, ಪದ್ಮಸಾಲಿ, ಮಾಲ, ತೊಗಡ ಇವರಲ್ಲಿ ಕುಲನಾಮ (ಗೋಪಾಲಕೃಷ್ಣ - ಸ್ಥಳನಾಮ ಅಧ್ಯಯನಗಳು-೫೩)

೫. ಗುಬ್ಬಿಹಾಳ್ - SRP :

೬. ಚಿನ್ನಹ್ಯಾಟಿ - ALR : ಚಿಕ್ಕಹ್ಯಾಟಿ (ಕನ್ನಡ): ತೆಲುಗು ಚಿನ್ನ = ಸಣ್ಣ ಹ್ಯಾಟೆ - ಹೆಣ್ಣುಕೋಳಿ. ಬಹುಶಃ ಈ ಸ್ಥಳನಾಮದ ಉತ್ತರ ಪದದ ಮೂಲರೂಪವು ಹಟ್ಟಿ ಇರಬಹುದು. ಹಟ್ಟಿಯು ತೆಲುಗು ಮಾತೃಭಾಷಿಕರಲ್ಲಿ 'ಹ್ಯಾಟಿ' ಆಗಿರುವ ಸಾಧ್ಯತೆಗಳಿವೆ. ಇದರ ಪಕ್ಕದಲ್ಲಿ ಪೆದ್ದಹ್ಯಾಟೆ' ಎಂಬ ಗ್ರಾಮವಿದೆ. ಚಿದಾನಂದಾವಧೂತರ ಚಾರಿತ್ರ್ಯ (ಅಯ್ಯಪ್ಪ ಕವಿ)ದಲ್ಲಿ ಈ ಗ್ರಾಮವನ್ನು 'ಹಿರೇಹಟ್ಟಿ' ಎಂದು ಕರೆಯಲಾಗಿದೆ. (ಚಿದಾನಂದಾವಧೂತರ ಚಾರಿತ್ರ್ಯ - ಹಸ್ತಪ್ರತಿ - ಸಂಧಿ - ೧ - ಪದ್ಯ - ೧೧) ಕಾರಣ ಇದು ಚಿಕ್ಕಹಟ್ಟಿಯಾಗಿರಲು ಸಾಧ್ಯವಿದೆ. ಇಂದಿನ ಈ ರೂಪವನ್ನು ಗಮನಿಸಿದರೆ ಪಕ್ಷಿವಾಚಿಯಾಗಿ ಕಂಡು ಬರುತ್ತಿದೆ.

೭. ಚಿನ್ನಹೋತೂರು - ALR : ಚಿನ್ನ (ತೆಲುಗು) = ಸಣ್ಣ: ಹೋತ (ಕನ್ನಡ) = ಗಂಡು ಆಡು, ಮೇಕೆ: ಪೋತ (ತೆಲುಗು: ಈ ಗ್ರಾಮದ ಕನ್ನಡ ಮಾತೃಭಾಷಿಕರು ಚಿಗೋತೂರು, ಚಿಕ್ಕಹೋತೂರು ಎಂದು ಉಚ್ಚರಿಸುತ್ತಾರೆ. ಈ ಊರಿನ ಪಕ್ಕದಲ್ಲಿ ಪೆದ್ದಹೋತೂರು ಇದೆ. ಈ ಎರಡೂ ಗ್ರಾಮ ಗಳಲ್ಲಿ ಟಗರು, ಹೋತಿನ ಕಾಳಗ ನಡೆಸುತ್ತಿದ್ದರಿಂದ ಹೆಸರು ಬಂದಿರುವುದಾಗಿ ಕಥೆ ಹೇಳುತ್ತಾರೆ. ಆದರೆ ಒಂದು ಹೋತಿನಿಂದಾಗಿ ಊರಿಗೆ ಹೆಸರು ಬರುವುದು ಸಾಧ್ಯವೇ ಎಂಬುದನ್ನೂ ಗಮನಿಸಬೇಕಾಗುತ್ತದೆ.

೮. ಚಿರ್ತನಕಲ್ಲು - ADN
೯. ಚಿರ್ತಪಲ್ಲೆ - ADN

ಈ ಎರಡೂ ಊರುಗಳ ಪರಿಸರ ಬೆಟ್ಟ, ಗುಡ್ಡಗಳ ಸಾಲಿನಿಂದ ಆವೃತವಾಗಿದೆ. ಇಲ್ಲಿ ಚಿರತೆಯ ವಾಸ ಸಹಜವಾಗಿ ಇದೆ. ಯಾವುದೋ ಒಂದು ಬಂಡೆಯ ಮೇಲೆ, ಇಲ್ಲವೇ ಗವಿಯಲ್ಲಿ ಅದರ ವಾಸವಿದ್ದಿರಬೇಕು. ಈ ಕಾರಣದಿಂದ ಅವುಗಳಿಗೆ ಚಿರತೆಗೆ ಸಂಬಂಧಿಸಿದ ಹೆಸರನ್ನೇ ಇಟ್ಟಿರಬಹುದು.

೧೦. ತುಂಬಿಗನೂರು - ADN : "ತುಂಬಿಯಿಂದ ಈ ಊರಿಗೆ ಹೆಸರು ಬಂದಿದೆ. ಇಲ್ಲಿ ಹೂವಿನ ತೋಟಗಳು ಇದ್ದುದರಿಂದ ತುಂಬಿಗಳು ಹೆಚ್ಚಾಗಿ ಇದ್ದವು. ಎಂಬ ವಿವರಣೆಯನ್ನು ಸ್ಥಳೀಯರು ನೀಡುತ್ತಾರೆ." ಇಂದು ರೆವಿನ್ಯೂ ದಾಖಲೆಯಲ್ಲಿಯೂ ತುಂಬಿಗನೂರು ಎಂಬುದಾಗಿ ಬರೆಯಲ್ಪಟ್ಟಿದೆ.

ತುಂಬಿ ಸಂಬಂಧಿತ ಆಕೃತಿಮಾಗಳುಳ್ಳ ಸ್ಥಳನಾಮಗಳಿಗೆ ಕರ್ನಾಟಕದಲ್ಲಿ ಕೆಲವು ಉದಾಹರಣೆಗಳಿವೆ.

ತುಂಬಿರಗಿ - ಉತ್ತರಕನ್ನಡ ಜಿಲ್ಲೆ - ಮುಂಡಗೋಡು - ತಾ.
ತುಂಬಿಬೀಳ - ಉತ್ತರಕನ್ನಡ ಜಿಲ್ಲೆ - ಹೊನ್ನಾವರ - ತಾ.
ತುಮ್ಮಲಪಲ್ಲಿ - (ತೆಲುಗು) - ಕೋಲಾರ - ಚಿಂತಾಮಣಿ - ತಾ.
ತುಮ್ಮೇಪಲ್ಲಿ - (ತೆಲುಗು) - ಕೋಲಾರ - ಬಾಗೇಪಲ್ಲಿ - ತಾ.
ತುಂಬಿನಕಟ್ಟೆ - ಚಿತ್ರದುರ್ಗ - ಜಗಳೂರು - ತಾ.
ತುಂಬಿಗೆರೆ - ಚಿತ್ರದುರ್ಗ - ದಾವಣಗೆರೆ - ತಾ.
ತುಂಬಿನಕೆರೆ - ಚಿತ್ರದುರ್ಗ - ಹೊಸದುರ್ಗ ತಾ.

ಹೀಗೆ ಕರ್ನಾಟಕದ ಇತರೆ ಭೌಗೋಳಿಕ ಪರಿಸರದಲ್ಲಿ ತುಂಬಿಗೆ ಸಂಬಂಧಿಸಿದ ಊರುಗಳಿವೆ. "ತೆಲುಗಿನ 'ತುಮ್ಮಲ'

ಎಂಬುದು ಮಾಲ, ಪದ್ಮಸಾಲಿಯವರಲ್ಲಿ ಒಂದು ಪಂಗಡದ ಹೆಸರು." - (ವಿ. ಗೋಪಾಲಕೃಷ್ಣ - ಪು - ೫೫)

ಬಹುಮುಖ್ಯವಾಗಿ ಗಮನಿಸಬೇಕಾದುದೆಂದರೆ ಚಿತ್ರದುರ್ಗ ಜಿಲ್ಲೆಯ ತುಂಬಿ + ನ + ಕಟ್ಟೆ

ತುಂಬಿ + ಕೆರೆ ಎಂಬ ಊರುಗಳನ್ನು ಇವು ತೂಬಿ + ನ + ಕಟ್ಟೆ

ತೂಬು + ಕೆರೆ ಎಂಬ ಜಲವಾಚಿ ಸ್ಥಳಗಳನ್ನು ಹೇಳುತ್ತವೆ. ಆದವಾನಿ ತಾಲ್ಲೂಕಿನ ತುಂಬಿ + ಗ + ಊರು ಎಂಬುದು ಅಲ್ಲಿರುವ ಕೆರೆಯಿಂದ ತೂಬು + ನ + ಕೆರೆ ಎಂಬುದಾಗಿದೆ. ಉಚ್ಚಾರಣೆಯಲ್ಲಿ ಅದು 'ತುಂಬಿಗನೂರು ಎಂಬ ರೂಪ ಪಡೆದಿದೆಯೆನ್ನಲು ಆಧಾರಗಳಿವೆ.

ತಮಿಳು ಭಾಷೆಯಲ್ಲಿ ಇಂದಿಗೂ ಕೆಲವು ಪದಗಳು ಅನುಸ್ವಾರವನ್ನು ಉಳಿಸಿಕೊಂಡು ಬಳಕೆಯಾಗುತ್ತಿವೆ.

ತೂಂಗು = ತೂಗು

ತೂಂಬು = ತೂಬು

ಮೂಲದ್ರಾವಿಡವನ್ನು ಕನ್ನಡದಲ್ಲಿಯೂ ಉಳಿಸಿಕೊಂಡು ತೂಬು' ಎಂಬರ್ಥದಲ್ಲಿ ತುಂಬು, ತುಂಬಿ, ಎಂಬ ರೂಪಗಳಿರಬಹುದೇ ಎಂಬ ಬಗ್ಗೆಯೂ ಆಲೋಚಿಸಬೇಕಾಗುತ್ತದೆ.

೧೧. ನವಿಲುಕಲ್ಲು - ADN : ಬಯಲು ಪ್ರದೇಶ, ಬೆಟ್ಟಗಳ ಸಾಲಿನ ನಡುವೆ ಇರುವ ದಟ್ಟವಾದ ಬಯಲುಗಳಲ್ಲಿ ಅಲ್ಲಲ್ಲಿ ಊರುಗಳು ನಿರ್ಮಾಣವಾಗಿವೆ. ಅದರಂತೆ ಆದವಾನಿ ತಾಲ್ಲೂಕಿನ ಈ ಊರಿನ' ಒಂದು ವಿಶಾಲ ಕಲ್ಲಿನ ಮೇಲೆ ನವಿಲು ಇರುತ್ತಿದ್ದರಿಂದ ಆ ಹೆಸರು ಬಂದಿರಬೇಕು. ಈ ಪರಿಸರದಲ್ಲಿ ಹೆಚ್ಚು ನವಿಲುಗಳು ಇರುವುದನ್ನು ಇಂದಿಗೂ ನೋಡಬಹುದು.

೧೨. ನಾಗರಕಣಿವೆ - ALR

೧೩. ನಾಗರಹಾಳು - SRP

ಈ ಸ್ಥಳನಾಮಗಳ ವಾರ್ಗಿಕ ಪದಗಳಾದ ಹಾಳು, ಕಣಿವೆಗಳು ಊರಿನ ಪ್ರಾಚೀನತೆಯನ್ನು ಹೇಳುತ್ತವೆ. ಮೇಲ್ನೋಟಕ್ಕೆ ನಾಗರ = ಎಂದರೆ ಹಾವು ಎಂಬರ್ಥವು ತೋರುತ್ತದೆ. ಸ್ಥಳೀಯರು ಹಾವಿಗೆ ಸಂಬಂಧಿಸಿದ ಐತಿಹ್ಯಗಳನ್ನು ಹೇಳುತ್ತಾರೆ. ಆದರೆ 'ನಾಗರಹಾವು' ಎಂಬ ಹೆಸರಿನಲ್ಲಿ 'ನಾಗರ' ಎಂಬ ಪದ ಹಾವಿನ ಸ್ವಭಾವ ಅಥವಾ

ರೂಪವನ್ನು ವರ್ಣಿಸುತ್ತದೆ. 'ಹಸಿರಾವು' ಎಂಬಲ್ಲಿ ಹಸಿರು ಹಾವಿನ ಬಣ್ಣವನ್ನು ಸೂಚಿಸಿದಂತೆ 'ಕಟ್ಟಾವು' ಎಂಬಲ್ಲಿ ಕಟ್ಟು ಎಂಬ ಹಾವಿನ ಸ್ವರೂಪವನ್ನು ವಿವರಿಸುತ್ತದೆ.

ಇದರಂತೆ ಕೇರೆ + ಹಾವು = ಕೇರೆಹಾವು

ಹಸಿರು + ಹಾವು = ಹಸಿರಾವು

ಹಿರಿದಾದ + ಹಾವು = ಹೆಬ್ಬಾವು

ಕರಿ + ನಾಗರ + ಹಾವು = ಕರಿನಾಗರಾವು

ಎಂಬಂತಹ ರೂಪಗಳಲ್ಲಿ 'ಹಾವಿ'ನ ವಿವಿಧ ವರ್ಣನೆಯನ್ನು ಪೂರ್ವಪದಗಳು ಮಾಡುತ್ತಿವೆ. ಸಾಮಾನ್ಯವಾಗಿ ನಾಗರ = ಎಂದರೆ ಹಾವು ಎಂದು ಭಾವಿಸಲಾಗಿದೆ. ಅದು ಸುತ್ತು, ಸುರಳಿಯನ್ನೂ ಹೇಳುತ್ತದೆ. ವ್ಯಂಜನಾರ್ಥದಲ್ಲಿ ಇದು ಹಾವು. ಇದರಿಂದ ನಾಗರ + ಕಣಿವೆ: ನಾಗರ + ಹಾಳು ಎಂಬ ರೂಪಗಳು ಸರಿಹೊಂದಬಹುದು.

ಅದರಂತೆ ಕೇರೆ + ಹಾವು ಎಂಬ ರೂಪದಲ್ಲಿರುವ ಪೂರ್ವಪದ ಕೆರೆಯನ್ನು ತೆಗೆದುಕೊಂಡು - ಕೇರೆ + ಹಾಳು

ಕೇರೆ + ಕಣಿವೆ

ಎಂಬಂತಹ ರೂಪಗಳನ್ನು 'ಹಾವು' ಎಂಬುದಕ್ಕೆ ಸಮೀಕರಿಸಿ ಹೇಳಲು ಸಾಧ್ಯವೇ ಇಲ್ಲ. ಕಾರಣ 'ನಾಗರ' ಎಂಬರ್ಥದ ನಿಷ್ಪತ್ತಿಯನ್ನು ಈ ಬಗೆಯ ಇಬ್ಬಗೆಯಲ್ಲಿ ನೋಡಲು ಸಾಧ್ಯವಿದೆ. 'ನಾಗರ' ಎಂಬ ಪೂರ್ವಪದದ ನಿಷ್ಪತ್ತಿಯನ್ನೂ 'ನಾಗ' ಎಂಬ ಜನಾಂಗದಿಂದ ಬಂದಿರಬಹುದೆಂಬ ಸಂದೇಹವನ್ನೂ ಶಂಬಾ ಜೋಶಿಯವರು ವ್ಯಕ್ತಪಡಿಸುತ್ತಾರೆ. (ಶಂಬಾ ಜೋಶಿ - ಎಡೆಗಳು ಹೇಳುವ ಕಂನಾಡ ಕಥೆ - ಪು - ೧೦೨)

ಅದರಂತೆ ನಾಗನ + ಹಳ್ಳಿ

ನಾಗಲ + ಪುರ

ಎಂಬ ರೂಪಗಳನ್ನು 'ವ್ಯಕ್ತಿವಾಚಿ'ಯಾಗಿ ವಿಂಗಡಿಸುವುದು ಒಂದು ಬಗೆಯಿದೆ. ಅದರಂತೆ ಕರ್ನಾಟಕದಲ್ಲಿರುವ ನಾಗರ + ಕಟ್ಟೆ

ನಾಗರ + ಬಾವಿ

ಎಂಬಂತಹ ಊರುಗಳಲ್ಲಿ 'ಹಾವಿನ' ಚಿತ್ರವಿರುವ ಕಲ್ಲು

ಬಂಡೆಗಳನ್ನು ಕಟ್ಟೆಯ ಮೇಲೆ, ಬಾವಿಗಳ ಸುತ್ತಲೂ ನೆಟ್ಟಿರುವ ಉದಾಹರಣೆಗಳಿವೆ. ಇಲ್ಲಿರುವ ಕಟ್ಟೆ, ಬಾವಿ ವಾರ್ಗಿಕಗಳು ಪೂರ್ವಪದದ ರೂಪಕ್ಕೆ ಸರಿಹೊಂದುತ್ತವೆ. ಆದರೆ ಕಣಿವೆ: ಹಾಳು: ಎಂಬ ವಾರ್ಗಿಕಗಳಿಗೆ 'ನಾಗರ' ಎಂಬ ನಿರ್ದಿಷ್ಟ ಅಷ್ಟಾಗಿ ಹೊಂದ ಲಾರದೆಂಬ ಅನುಮಾನವಿದೆ. ಈ ನಿಯಮ ಸಾರ್ವತ್ರಿಕ ಎಂಬುದೂ ಇಲ್ಲಿಯ ವಾದವಲ್ಲ. ಆಯಾ ಸ್ಥಳೀಯ ಚರಿತ್ರೆ, ಐತಿಹ್ಯ, ಘಟನೆಗಳನ್ನಾಧರಿಸಿ ಈ ನಿಷ್ಪತ್ತಿಗಳನ್ನು ಅರ್ಥೈಸಬೇಕಾಗುತ್ತದೆ.

೧೪. ಪೆದ್ದ ಹೋತೂರು - ALR : ಪೆದ್ದ = ಹಿರಿಯ, ದೊಡ್ಡ: ಹಿರೇಹೋತೂರು (ಕನ್ನಡ) ಇದರ ಪಕ್ಕದಲ್ಲಿ ಚಿನ್ನಹೋತೂರು ಗ್ರಾಮವಿದೆ.

೧೫. ಪೆದ್ದಹ್ಯಾಟೆ - ALR : ಈ ಊರಿನ ಕನ್ನಡದ ಹೆಸರು 'ಹಿರೇಹ್ಯಾಟೆ' ಇಂದು ರೆವಿನ್ಯೂ ದಾಖಲೆಯಲ್ಲಿ 'ಪೆದ್ದಹ್ಯಾಟ' ಎಂದು ನಮೂದಾಗಿದೆ. ಚಿದಾನಂದಾವಧೂತರ ಚಾರಿತ್ರ್ಯದಲ್ಲಿ (ಅಯ್ಯಪ್ಪ ಕವಿ) ಕಾವ್ಯದಲ್ಲಿ ಈ ಊರು 'ಹಿರೇಹಟ್ಟಿ' ಎಂಬುದಾಗಿ ಉಕ್ತವಾಗಿದೆ. (ಚಿದಾನಂದಾವಧೂತರ ಚಾರಿತ್ರ್ಯ - ಅಯ್ಯಪ್ಪ ಕವಿ - ಹಸ್ತಪ್ರತಿ - ಸಂಧಿ - ೧, ಪದ್ಯ - ೧೧)

ಸ್ಥಳೀಯ ಐತಿಹ್ಯದ ಪ್ರಕಾರ ಇದು 'ಮಹಾಭಾರತದ ವಿರಾಟರಾಯನು ಇದ್ದಂತಹ ಸ್ಥಳ. ಇದಕ್ಕೆ 'ವೀರಅಟವಿ' ಎಂದೂ ಕರೆಯುತ್ತಿದ್ದರು. ಎಂಬ ಹೇಳಿಕೆ ಇದೆ. ಇದನ್ನು 'ವಿರಾಟನಗರ' ಎಂದು ಆಗ ಕರೆಯುತ್ತಿದ್ದರು. (ಶ್ರೀ ಗುಂಡೂರು ಶೇಷಗಿರಿಯಪ್ಪ ಸಂದರ್ಶನ - ೧೪-೦೯-೨೦೦೦ - ಯಳ್ಳಾರ್ತಿ)

೧೬. ಮೀನಹಳ್ಳಿ - BLR : ಬಳ್ಳಾರಿ ಪರಿಸರದ ಪುರಾತತ್ವ ಪರಿಸರದಲ್ಲಿ ಮೀನು ಹಿಡಿಯುವ 'ಗಾಳ'ವು ಇತಿಹಾಸಕಾರರಿಗೆ ದೊರಕಿದೆ. ಬಹುಶಃ ಅದರ ಕುರುಹಾಗಿ ಈ ನೆಲೆಯಿದ್ದಿರಬೇಕು. (ವೀರಭದ್ರಶರ್ಮ - ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು - ಪಿಎಚ್.ಡಿ. ಹಸ್ತಪ್ರತಿ - ಪು - ೧೯೦)

೧೭. ಸಿದಿಗನಮೊಲ - BLR : ಎಂಬಲ್ಲಿ ವಾರ್ಗಿಕದಲ್ಲಿ 'ಮೊಲ' ಬಂದಿದೆ. ಕಾರಣ ಇದು ಪ್ರಾಣಿವಾಚಿ ಎಂದು ಅದರ ರೂಪದಿಂದ ಹೇಳಬಹುದು. ಆದರೆ ನಿರ್ದಿಷ್ಟದಲ್ಲಿ ಸಿದಿಗ + ನ + ಮೊಲ ಎಂಬಲ್ಲಿ 'ನ' ಎಂಬ ವ್ಯಕ್ತಿ ಸಂಬಂಧವಾಚಿ ಅಕ್ಷರವಿರುವುದನ್ನು ಗಮನಿಸಬೇಕಾಗುತ್ತದೆ.

ಬಹುಶಃ ಇದು ಸಿದ್ಧಿಗ + ನ + ಹೊಲ = ಸಿದ್ಧಿಗನಹೊಲ ಆಗಿರುವ ಸಾಧ್ಯತೆಗಳಿವೆಯೆಂದು ಹೇಳಬಹುದು. ಬಳ್ಳಾರಿ ಜಿಲ್ಲೆಯ ಪರಿಸರದಲ್ಲಿ "ಮೊಲವು ನಾಯಿಯನ್ನು ಅಟ್ಟಿಕೊಂಡು ಹೋದ ಸ್ಥಳದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡಿತು" ಎಂಬ ಐತಿಹ್ಯವೊಂದಿದೆ. ಆದರೆ 'ಮೊಲ' ಹೆಸರೇ ಅಲ್ಲಿ ಸ್ಥಳಕ್ಕಿಲ್ಲ ಎಂಬುದನ್ನು ಗಮನಿಸಬಹುದು.

೧೮. ಹುಲಿಕಣಿವೆ - ADN : ಪರ್ವತಗಳಿಂದ ಕೂಡಿದ ಈ ಊರಿನಲ್ಲಿ ಯಾವುದೋ ಒಂದು ಕಣಿವೆಯ ಮೇಲೆ ಹುಲಿಯು ಇರುತ್ತಿದ್ದರಿಂದ ಈ ಹೆಸರು ಬಂದಿದೆ. ಎಂಬ ಸ್ಥಳೀಯರ ವ್ಯಾಖ್ಯಾನವಿದೆ.

೧೯. ಹದ್ದಿನಗುಂಡು - BLR : ಗುಂಡಿನ ಮೇಲೆ ಹದ್ದು ಕೂರುತ್ತಿದ್ದುದರಿಂದ ಆ ಹೆಸರು ಬಂದಿದೆಯೆಂಬ ಸ್ಥಳೀಯ ವ್ಯಾಖ್ಯಾನವಿದೆ. ವಿಷ್ಣುವಿನ ವಾಹನವಾದ 'ಗರುಡ'ನ ಮೂರ್ತಿಯನ್ನು ಒಂದು ಗುಂಡಿಗೆ ಕೆತ್ತಿರುವುದರಿಂದ ಆ ಹೆಸರು ಬಂದಿದೆಯೆಂಬ ಮತ್ತೊಂದು ವ್ಯಾಖ್ಯಾನವಿದೆ. ಈಗ ಈ ಅವಶೇಷ ಇರುವುದಿಲ್ಲ.

೨೦. ಹಂದಿಹಾಳು - BLR ಹಂದಿ ಒಂದು ಸಸ್ತನಿ ಪ್ರಾಣಿ. ವಿಷ್ಣುವಿನ ಅವತಾರ ವರಾಹ'ವೆಂದು ಪುರಾಣಗಳು ಹೇಳುತ್ತವೆ. ಹಂದಿ'ಯಿಂದ ಈ ಸ್ಥಳನಾಮ ಹೇಗೆ ಬಂತೆಂಬ ಬಗೆಗೆ ಸ್ಥಳೀಯರಿಂದ ಮಾಹಿತಿಯಿಲ್ಲ. 'ವರಾಹಪುರ' ಎಂಬುದಾಗಿ ಸಂಸ್ಕೃತಾನುಕರಣ ಮಾಡಿದ ಬಗ್ಗೆ ತಿಳಿಯುತ್ತದೆ.

ತೆಲುಗಿನಲ್ಲಿ ಹಂದಿಯನ್ನು 'ಪಂದಿ' ಎಂಬುದಾಗಿ ಕರೆಯುತ್ತಾರೆ. ಪಂದಿ, ಹಂದಿ - ಬೋಯ, ಗಮಳ್ಳ ಈ ಜಾತಿಗಳಲ್ಲಿ ಒಂದು ಕುಲನಾಮ (ವಿ.ಗೋಪಾಲಕೃಷ್ಣ-ಸ್ಥಳನಾಮ ಅಧ್ಯಯನಗಳು-೫೭)

ಬಳ್ಳಾರಿಯ ಪರಿಸರದ ಸಂಗನಕಲ್ಲು, ನಿಟ್ಟೂರು, ತೆಕ್ಕಲಕೋಟೆ ಮುಂತಾದವು ಆದಿಶಿಲಾಯುಗದ ನೆಲೆಗಳು. ಬೇಟೆಯ ಹಂತದಲ್ಲಿ ಈ ಪ್ರಾಣಿಯನ್ನು ಬೇಟೆಯಾಡಿದ ಬಗೆಗೆ ಮಾಹಿತಿಗಳು ಪುರಾತತ್ವಜ್ಞರು ಒದಗಿಸಿದ್ದಾರೆ. ಬಹುಶಃ ಅಂತಹ ಒಂದು ನೆಲೆಯಾಗಿದ್ದಿರಬಹುದು.

ಹಂದರು' ಎಂಬುದೊಂದು ಜನಾಂಗ. (ಎಂ.ಎಂ.ಕಲ್ಬುರ್ಗಿ - ನಾಮವಿಜ್ಞಾನ) ಹಂದರ = ಚಪ್ಪರ, ಬಿದಿರು, ದಬ್ಬೆ (ಸಿ.ಅ - ೫೪೭) ಎಂಬರ್ಥಗಳೂ ಇವೆ.

೨೧. ಹಾವಿನಹಾಳು - SRP : ಇದು ನೇರವಾಗಿ 'ಹಾವು' ನ್ನು ವ್ಯಾಖ್ಯಾನಿಸುತ್ತಿದೆ. ನಾಗಾರಾಧನೆ ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಬಂದಿದೆ. ಕೆಲವು ಕ್ರೂರಪ್ರಾಣಿ, ಜಂತುಗಳ ಅಪಾಯದಿಂದ ಮುಕ್ತವಾಗಲು ಆರಾಧನೆ ಮಾಡುತ್ತಿದ್ದರು. ಅದರಂತೆ ಊರುಗಳಿಗೂ ಆ ಬಗೆಯ ಹೆಸರುಗಳನ್ನು ನೀಡಿರಬೇಕು.

ಮೇಲೆ ಚರ್ಚಿಸಲಾದ 'ಪ್ರಾಣಿ - ಪಕ್ಷಿವಾಚಿ' ಸ್ಥಳನಾಮಗಳಲ್ಲಿ ಬಹು ಮುಖ್ಯವಾಗಿ ಎರಡು ಮಾರ್ಗವನ್ನು ಅನುಸರಿಸಲಾಗಿದೆ. ಇಂದು ಪ್ರಮಾಣಿತ ರೂಪಗಳೆಂಬಂತೆ ಬಳಕೆಯಾಗುತ್ತಿರುವ ಗಡಿ ಆಂಧ್ರ - ಕರ್ನಾಟಕ ಭಾಗದ ಸ್ಥಳನಾಮಗಳನ್ನು ಮೇಲ್ ರೂಪದಲ್ಲಿ ಪ್ರಾಣಿ - ಪಕ್ಷಿ ವಾಚಿಗಳೆಂದು ಗುರುತಿಸುವುದು ಒಂದು ಬಗೆ. ಅದೇ ರೂಪದಿಂದ ದ್ವಂದ್ವಾತ್ಮಕ ನೆಲೆಯಲ್ಲಿ ಅವುಗಳಿಗೆ ಕೊಡಬಹುದಾದ ಭಿನ್ನ ಅರ್ಥಗಳನ್ನು ವಿವರಿಸುವುದು ಮತ್ತೊಂದು ಬಗೆ. ಕ್ಷೇತ್ರಕಾರ್ಯದಲ್ಲಿ ಸ್ಥಳೀಯರು ನೀಡುವ ಮಾಹಿತಿ ಬಹುತೇಕ ಇಂದಿನ ರೂಪವನ್ನೇ ಅವಲಂಬಿಸಿದೆ. ಅಲ್ಲದೇ ಕೆಲವು ಸಂಸ್ಕೃತಾನುಕರಣ ಸ್ಥಳನಾಮಗಳನ್ನು ಹೇಳಲು ಮುಂದಾದದ್ದಿದೆ. ಕ್ಷೇತ್ರಮಾಹಿತಿಯನ್ನಾಧರಿಸಿದ ಕೆಲವು ಸಂಗತಿಗಳೊಂದಿಗೆ ಪ್ರಾಣಿ, ಪಕ್ಷಿ ಮುಂತಾದವು ಸ್ಥಳನಾಮಗಳಿಗೆ ನೀಡಿರಬಹುದಾದ ಪ್ರೇರಣೆ, ಆ ಮೂಲಕ ಸ್ಥಳದ ಹೆಸರಿಗೆ ಪಡೆದಿರುವ ಪ್ರಮಾಣವನ್ನು ಗುರುತಿಸಲು ಪ್ರಯತ್ನಿಸಿದೆ.

ಪ್ರಾಣಿ, ಪಕ್ಷಿಗಳೊಂದಿಗೆ ಮಾನವರು ತಮ್ಮ ಸಂಸ್ಕೃತಿಯಲ್ಲಿ ಕಟ್ಟಿಕೊಂಡ ಜೀವನ ವಿಧಾನ, ಪ್ರಾಕೃತಿಕವಾಗಿ ಅವುಗಳೊಂದಿಗಿನ ಸಂಬಂಧ, ಸಹಾಯ ಪಡೆದು ಸಾಮಾಜಿಕ ಸಂದರ್ಭದಲ್ಲಿ ಅವುಗಳಿಗೆ ನೀಡಬೇಕಾದ ಮನ್ನಣೆಯನ್ನೂ ನೀಡಲಾಗಿದೆ. ಎತ್ತು, ಎಮ್ಮೆ, ಹಸು, ಕೋಣ, ಕರಡಿ, ಕೋಗಿಲೆ, ನವಿಲು, ತುಂಬಿ, ಮೀನು ಹೀಗೆ ಹಲವಾರು ಪ್ರಾಣಿ ಪಕ್ಷಿಗಳು ಸ್ಥಳಕ್ಕೆ ಹೆಸರುಗಳಾಗಿ ನಿಂತಿವೆ.

ಕೆಲವು ಸಾಧುಪ್ರಾಣಿ, ಪಕ್ಷಿಗಳಂತೆ, ಕ್ರೂರಜಂತು, ಪ್ರಾಣಿಗಳೂ ಎಡೆಗಳ ಹೆಸರಾಗಿರುವುದು ಕಂಡುಬರುತ್ತದೆ. ಹುಲಿ, ಸಿಂಹ, ಚಿರತೆಯಂತಹ ಪ್ರಾಣಿಗಳು ತಮ್ಮ ಕಾಡು, ಬೆಟ್ಟಗಳಲ್ಲಿರುವುದರಿಂದಲೋ, ಹುಲಿ ಶಿವನು ಕುಳಿತುಕೊಳ್ಳುವ ಪ್ರಾಣಿ, ಸಿಂಹ ದೇವಿಯವಾಹನವೆಂದೋ ಹೀಗೆ ಹಲವಾರು ಕಾರಣಗಳಿಂದ ಮಹತ್ವ ನೀಡಿರಬಹುದು. ಅದರಂತೆ 'ಹಾವು' ಕೂಡ ಶಿವನ ಕೊರಳಹಾರವೆಂದೂ ಇರಬಹುದು. ಭಾರತದಲ್ಲಿ ನಾಗಾರಾಧನೆಯೂ ಪ್ರಾಚೀನವಾದದ್ದು. ಅಲ್ಲದೇ ವಿಷಜಂತುಗಳಿಂದ ತಮಗೊದಗುವ ಅಪಾಯದ ನಿವಾರಣೆಗೆ ಕೆಲವು ನಂಬಿಕೆಗಳಿಂದ ಪೂಜೆಗೊಳಗಾಗಿವೆ. ಅವು ಕ್ರಮೇಣ ಊರುಗಳಿಗೂ ಹೆಸರಾಗಿರುವ ಸಾಧ್ಯತೆಗಳಿವೆ.

ಪ್ರಾಣಿ, ಪಕ್ಷಿವಾಚಿ ಸ್ಥಳನಾಮಗಳಿಂದ ಪ್ರಾಣಿ, ಪಕ್ಷಿ ಶಾಸ್ತ್ರಜ್ಞರಿಗೆ ಅಮೂಲ್ಯ ಮಾಹಿತಿ ದೊರೆಯುತ್ತದೆಂಬುದನ್ನು ಗಮನಿಸಬೇಕು. ಆಯಾ ಭೌಗೋಳಿಕ ಪರಿಸರದಲ್ಲಿ ಇರುವ ಪ್ರಾಣಿಗಳ ಬಗೆಗಳು,

ಪಕ್ಷಿಗಳ ಬಗೆಗಳನ್ನು ತಿಳಿಯಲು ಪೂರಕ ಮಾಹಿತಿಯನ್ನು ಈ ಬಗೆಯ ಸ್ಥಳನಾಮಗಳು ನೀಡುತ್ತವೆ. ಅಲ್ಲದೇ ಆಯಾ ಪ್ರಾಣಿಗಳಿಗೆ ಇರುವ ಮಹತ್ವ, ಅವುಗಳಿಗೆ ನೀಡುವ ಆಚರಣೆಗಳ ಬಗೆಗೂ ವಿಶ್ಲೇಷಿಸಲು ಸಾಧ್ಯವಿದೆ. ಈ ದೃಷ್ಟಿಯಿಂದ ಇಂತಹ ಸ್ಥಳನಾಮಗಳ ಪ್ರತ್ಯೇಕ ಅಧ್ಯಯನಗಳನ್ನು ನಡೆಸಲು ಸಾಧ್ಯವಿದೆ.

[illegible] . ಈ ಗುಡ್ಡದಲ್ಲಿ [illegible]
ಮಾಳಮ್ಮ ದೇವರುಗಳ ದೇವಾಲಯವಿದೆ. ಇದರಿಂದ ಈ ಸ್ಥಳಕ್ಕೆ ದೇವರಗುಡ್ಡ' ಎಂದು ಕರೆಯಲಾಗುತ್ತದೆ.

೩. ದೇವರಬೆಟ್ಟ, - ADN : ಇಲ್ಲಿನ ಒಂದು ಚಿಕ್ಕ ಬೆಟ್ಟದಲ್ಲಿ ಒಂದು ದೇವಾಲಯವಿದೆ.

೪. ದೇಗುಲದಹಾಳ್ - ALR : ಈ ಊರಿನಲ್ಲಿ ಈ ಹಿಂದೆ ದೇವಸ್ಥಾನಗಳು ಅಧಿಕಸಂಖ್ಯೆಯಲ್ಲಿದ್ದುದಾಗಿ ಸ್ಥಳೀಯರು ಹೇಳುತ್ತಾರೆ. ಒಂದುನೂರು ಲಿಂಗಗಳು, ಒಂದುನೂರು ದೇವಾಲಯಗಳಿದ್ದವು. ಅವು ಕಾಲಾಂತರದಲ್ಲಿ ಹಾಳಾಗಿದ್ದರಿಂದ 'ದೇಗುಲದಹಾಳ್ ' ಎಂಬ ಹೆಸರು ಬಂತೆಂದು ಹೇಳುತ್ತಾರೆ.

೫. ನಾಗನಾಥನಹಳ್ಳಿ - ALR : ಈ ಊರಿನಲ್ಲಿ ನಾಗನಾಥನ ದೇವಾಲಯವಿದೆ.

೬. ನಾರಾಯಣಪುರ - ADN : ವೆಂಕಟೇಶ್ವರ ದೇವಾಲಯ ಈ ಗ್ರಾಮದಲ್ಲಿದೆ.

೭. ಪರಮದೇವನಹಳ್ಳಿ - BLR : ಈಶ್ವರ ದೇವಾಲಯ ಇರುವುದರಿಂದ ಈ ಹೆಸರು ಬಂದಿದೆ.

೮. ಭೈರಾಪುರ - SRP : ಭೈರವ ಎಂಬುದು ಶಿವನ ಇನ್ನೊಂದು ಅವತಾರ. ಈ ನೆಲೆಗಳು
ಭೈರದೇವನಹಳ್ಳಿ : BLR : 'ನಾಥ' ಸಂಪ್ರದಾಯದ ಸ್ಥಳಗಳೆಂದು ತಿಳಿಯುತ್ತದೆ.

೯. ಮಣಿಕಂಠಪುರ - SRP : ಇದು ಇತ್ತೀಚೆಗೆ ನಿರ್ಮಾಣಗೊಂಡ ಚಿಕ್ಕಹಳ್ಳಿ. ಇಲ್ಲಿ 'ಅಯ್ಯಪ್ಪ' ಸ್ವಾಮಿಯ ದೇವಸ್ಥಾನ ನಿರ್ಮಿಸಿದ್ದಾರೆ. ಅಯ್ಯಪ್ಪನ ಮತ್ತೊಂದು ಹೆಸರಾದ 'ಮಣಿಕಂಠ' ಎಂಬ ಹೆಸರಿನೊಂದಿಗೆ ಈ ಊರಿನ ಹೆಸರನ್ನು ನಿರ್ದೇಶಿಸಲಾಗಿದೆ.

೧೦. ಮಂತ್ರಾಲಯ - ADN : ಮಂಚಾಲೆ ಎಂಬ ಮೂಲನಾಮವಿದ್ದ ಈ ಸ್ಥಳಕ್ಕೆ ರಾಘವೇಂದ್ರ ಯತೀಂದ್ರರು ಬಂದು ತಪಸ್ಸು ಮಾಡಿ ಈ ಸ್ಥಳವನ್ನು ಮಂತ್ರಾಲಯವೆಂದು ಮಾಡಿದರು.

೧೧. ರಂಗಾಪುರ - ADN : ಶ್ರೀಕೃಷ್ಣದೇವರ ಗುಡಿಯಿಂದಾಗಿ ಬಂದ ಹೆಸರು.

೧೨. ಲಿಂಗದಹಳ್ಳಿ - ALR
ಲಿಂಗಲದಿನ್ನೆ - ADN } ಈಶ್ವರಲಿಂಗದ ಪ್ರತಿಮೆಯಿಂದಾಗಿ ಬಂದಂತಹ ಹೆಸರು.

೧೩. ಶಂಕರ ಬಂಡೆ - BLR
ಶಂಕರ ಬಂಡೆ - ADN } ಶಿವನ ದೇವಾಲಯವಿರುವ ಊರುಗಳು ಇಲ್ಲಿನ ಒಂದು ಬೆಟ್ಟದಲ್ಲಿ 'ಶಂಕರ' ಎಂಬ ಋಷಿ ತಪಸ್ಸು ಮಾಡಿದನೆಂದೂ ಸ್ಥಳೀಯರು ಹೇಳುತ್ತಾರೆ.

೧೪. ಶ್ರೀರಾಮನಗರ - ALR : ಆಂಧ್ರದ ಗಡಿಭಾಗದಲ್ಲಿರುವ ಒಂದು ಸಣ್ಣಗ್ರಾಮ. ಮಧ್ಯ ಆಂಧ್ರದ ಗುಂಟೂರು ಜಿಲ್ಲೆಯ ಕೆಲವು ಸಮುದಾಯಗಳು ಇಲ್ಲಿಗೆ ವಲಸೆ ಬಂದು 'ಶ್ರೀರಾಮನಗರ' ಎಂಬ ವೈಷ್ಣವ ಹೆಸರನ್ನು ಇಟ್ಟುಕೊಂಡಿದ್ದಾರೆ.

೧೫. ಸಾಂಬಗಲ್ಲು - ADN : ಶಿವನ·ಇನ್ನೊಂದು ಹೆಸರು ಸಾಂಬ. (ಕ.ನಿ.ಸಂ - ೮, ೮೪೪೯) ಆ ಮೂಲದಿಂದ ಬಂದಂತಹ ಹೆಸರು. ಎಂಬದಾಗಿ ಸ್ಥಳೀಯರ ಹೇಳಿಕೆ.

೧೬. ಸಿದ್ಧರಹಾಳ್ - ALR
೧೭. ಸಿದ್ಧಾಪುರ - ALR
೧೮. ಸಿದ್ಧರ ಗುಡ್ಡ - ALR
೧೯. ಸಿದ್ಧರಾಮಾಪುರ - SRP } ಈ ನೆಲೆಗಳೆಲ್ಲ ಸಾಧು, ಸಜ್ಜನರು, ಸಿದ್ಧರು, ಪರಮ ತಪಸ್ಸು ಮಾಡಿದ ಸ್ಥಾನಗಳೆಂದು ಸ್ಥಳೀಯರು ಹೇಳುತ್ತಾರೆ.

ಹೀಗೆ ದೇವರು, ಪುರಾಣಪುರುಷರು, ಸಾಧು ಸಜ್ಜನರು, ತಪಸ್ವಿಗಳು ಮುಂತಾದವರು ನಮ್ಮ ಸಂಸ್ಕೃತಿಯಲ್ಲಿ ಜೀವನದ ಅನನ್ಯ ಭಾಗವಾಗಿ, ಅದರಲ್ಲಿಯೂ ಸ್ಥಳಗಳಿಗೆ ಹೆಸರುಗಳಾಗಿ ಬಂದಿರುವುದು ತಿಳಿಯುತ್ತದೆ. ದೈವವಾಚಿ ಸ್ಥಳನಾಮಗಳ ನಿರ್ದಿಷ್ಟಭಾಗದಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳು ಮತ್ತು ಸಂಸ್ಕೃತದಿಂದ ತದ್ಭವಗೊಂಡ ಪದಗಳು ಇವೆ. ಬಹುಶಃ ದ್ರಾವಿಡ ದೈವಗಳು ಇಲ್ಲಿ ಗೌಣಗೊಂಡಿವೆಯೆಂಬುದು ಗಮನಾರ್ಹ.

ಗಡಿಭಾಗದ ಬಳ್ಳಾರಿ - ಕರ್ನೂಲು ಜಿಲ್ಲೆಯಲ್ಲಿ ಹೆಣ್ಣುದೇವತೆಗೆ ಸಂಬಂಧಿಸಿದ ಸ್ಥಳನಾಮಗಳಿಲ್ಲವೆಂಬುದು ಗಮನಿಸುವಂತಹ ಅಂಶ. ಇದಕ್ಕೆ ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆಯು, ದೈವಕ್ಕೆ ಕೂಡ ಅನ್ವಯಿಸಿ, ಸ್ಥಳನಾಮ ನಿರ್ದೇಶನದಲ್ಲಿ ಕಡೆಗಣಿಸಿರಲೂಬಹುದು. ಕರ್ನಾಟಕದ ಇತರ ಕಡೆ ಸ್ತ್ರೀ ದೇವತೆಗಳ ಸ್ಥಳನಾಮಗಳು ವಿರಳವಾಗಿಯೇ ಕಂಡು ಬರುತ್ತವೆ. ವ್ಯಕ್ತಿವಾಚಿ ಮತ್ತು ದೈವವಾಚಿ ಸ್ಥಳನಾಮವನ್ನು ಅದರ ರೂಪದಿಂದಲೇ ಬೇರ್ಪಡಿಸಲು ಸಾಧ್ಯವಾಗದು.

ಲಿಂಗದೇವನಹಳ್ಳಿ ಶ್ರೀರಾಮನಗರ ಸಿದ್ಧರಾಮಪುರ

ಹೀಗೆ ಕೆಲವು ಸ್ಥಳನಾಮಗಳ ಆಕೃತಿಯಿಂದ ಅದು ವ್ಯಕ್ತಿಯೋ ಅಥವಾ ದೈವವೋ ಎಂಬಂತಹ ತೊಡಕುಗಳು ಉಂಟಾಗುತ್ತವೆ. ಕಾರಣ ಕ್ಷೇತ್ರಮಾಹಿತಿಯಿಂದ ಮಾತ್ರ ಈ ಬಗ್ಗೆ ಖಚಿತತೆ ಬರುತ್ತದೆ. ಅದೇನೇ ಇದ್ದರೂ ದೇವರೊಂದಿಗಿನ ಸಂಬಂಧ, ಆ ಮೂಲಕ ಕಟ್ಟಿಕೊಂಡ ನಾಡವರ ಸಂಸ್ಕೃತಿಯಲ್ಲಿ ಈ ಸ್ಥಳನಾಮಗಳು ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ.

ದೈವವಾಚಿ ಸ್ಥಳನಾಮಗಳಿಂದ ಪ್ರಾದೇಶಿಕವಾಗಿರುವ ಶೈವ - ವೈಷ್ಣವ - ಬೌದ್ಧ, ಜೈನ ಹೀಗೆ ಹಲವಾರು ಧಾರ್ಮಿಕ ಅಂಶಗಳತ್ತ ಗಮನಹರಿಸಲು ಸಾಧ್ಯವಾಗುತ್ತದೆ. 'ಭೈರವ'ದಿಂದ ಆರಂಭವಾಗುವ ಗ್ರಾಮನಾಮಗಳಲ್ಲಿ 'ನಾಥ' ಸಂಪ್ರದಾಯ ಶೈವ ಸಂಸ್ಕೃತಿಯ ನಿರ್ವಚನದಲ್ಲಿ ಇಂತಹ ಊರುಗಳಲ್ಲಿ ಅಧ್ಯಯನ ಕೈಗೊಂಡರೆ ಅನೇಕ ಮೂಲಾಧಾರಗಳು ದೊರೆಯುವ ಸಾಧ್ಯತೆಗಳಿರುತ್ತವೆ. ಈ ನಿಟ್ಟಿನಲ್ಲಿ ದೈವವಾಚಿ ಸ್ಥಳನಾಮಗಳು ಮಹತ್ವ ಪಡೆದುಕೊಳ್ಳುತ್ತವೆ.

## ೩.೮. ವೃತ್ತಿ ಅಥವಾ ಜಾತಿವಾಚಿ

ಆರಂಭದಲ್ಲಿ ಕೆಲವು ವೃತ್ತಿಗಳನ್ನವಲಂಬಿಸಿದ್ದ ಸಮುದಾಯಗಳಿಗೆ, ಅವರವರ ವೃತ್ತಿಯಿಂದಲೇ ಗುರುತಿಸುವ ರೂಢಿಯು ಆರಂಭವಾಯಿತು. ಮುಂದೆ ವೃತ್ತಿಯಿಂದ ವರ್ಗಶ್ರೇಣಿಯನ್ನುಗಣಿಸಿ ಕ್ರಮೇಣ ವೃತ್ತಿವಾಚಿಗಳೇ ಆಯಾ ಸಮುದಾಯಗಳಿಗೆ ಜಾತಿಯಾದದ್ದನ್ನು ಗುರುತಿಸಬಹುದು. (ಅಗಸ - ಕುಂಬಾರ - ಕಮ್ಮಾರ - ಚಮ್ಮಾರ - ಇತ್ಯಾದಿ)

ಸ್ಥಳನಾಮಗಳಲ್ಲಿಯೂ ವೃತ್ತಿ ಮತ್ತು ಜಾತಿ - ಸಂಬಂಧೀ ಅಂಶಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಜನಾಂಗಿಕ ಅಧ್ಯಯನಕ್ಕೆ ಈ ಬಗೆಯ ಹೆಸರುಗಳು ಮಹತ್ವದ ಆಕರಗಳಾಗಬಹುದು. ಬಹುತೇಕ ಎಲ್ಲಜಾತಿ, ವೃತ್ತಿ, ಉಪಜಾತಿಗಳಿಗೂ ಸ್ಥಳನಾಮಗಳಿರುವುದು ಕರ್ನಾಟಕದಲ್ಲಿ ಕಂಡುಬರುತ್ತದೆ. ಬ್ರಾಹ್ಮಣರಿಗೆ ದತ್ತಿಯಾಗಿ, ದಾನವಾಗಿ ನೀಡಿದಂತಹ ಗ್ರಾಮಗಳಿಗೆ ಅಗ್ರಹಾರಗಳೆಂದು ಕರೆದರು. ಆ ಅಗ್ರಹಾರಗಳಿಗೆ ಅದೇ ಸಮುದಾಯದ ಹಿರಿಯರ, ಗುರುಗಳ, ಪ್ರಮುಖ ವ್ಯಕ್ತಿಗಳ ಹೆಸರನ್ನು ನೀಡುತ್ತಿದ್ದರು. (ಸೋಮಯಾಜಿ ಅಗ್ರಹಾರ: ವೇದಮುನಿ ಅಗ್ರಹಾರ ಇತ್ಯಾದಿ). ಆದರೆ ಉಳಿದ ರೈತಾಪಿ, ಕಾರ್ಮಿಕ, ಸಾಮಾನ್ಯ ಜನರಿಗೆ ಇಂತಹ ಯಾವುದೇ ಗ್ರಾಮದಾನಗಳಿರಲಿಲ್ಲ. ಈ ಕಾರಣವಾಗಿ ಒಂದೊಂದು ವೃತ್ತಿ, ಜಾತಿ, ವರ್ಗದ ಗುಂಪುಗಳು ತಾವು ನೆಲೆಸಿದ

ಕಡೆಯಲ್ಲಿ ತಮ್ಮ ವೃತ್ತಿ, ಜಾತಿಯ ಹೆಸರನ್ನು ಕರೆದುಕೊಂಡಿರಬೇಕು. ಇಲ್ಲವೇ ಈ ಗುಂಪಿಗೆ ಮತ್ತೊಂದು ಗುಂಪು ಹೆಸರಿಸಿರಬೇಕೆಂಬುದನ್ನು ತಿಳಿದರೆ ಜಾತಿ ವ್ಯವಸ್ಥೆಯು ಇದ್ದ ಬಗೆಗೆ ಮಾಹಿತಿಯು ದೊರೆಯುತ್ತದೆ.

ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿ ಅನೇಕ ವೃತ್ತಿ, ಜಾತಿಗಳಿಗೆ ಸಂಬಂಧಿಸಿ ಗ್ರಾಮನಾಮಗಳು ಇರುವುದನ್ನು ಗುರುತಿಸಬಹುದು.

೧. ಅಗಸಲದಿನ್ನೆ - ADN
೨. ಅಗಸನೂರು - SRP

ಮಡಿವಾಳ ವೃತ್ತಿಯವರ ನೆಲೆಗಳು. ಈ ಸಮುದಾಯ ಇಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಿರಬೇಕು. ಅಗಸ + ನ + ಊರು: ಎಂಬುದು ವ್ಯಕ್ತಿಯನ್ನು ವ್ಯಾಖ್ಯಾನಿಸಿದರೂ ಅದು ಅವನ ಹೆಸರನ್ನು ಹೇಳದೇ, ವೃತ್ತಿಯನ್ನೂ ವ್ಯಕ್ತಿವಾಚಿ 'ನ' ಪ್ರತ್ಯಯದಿಂದ ಹೇಳುತ್ತಿದೆ.

ಅಗಸ + ಲ + ದಿನ್ನೆ ಎಂಬಲ್ಲಿ 'ಲ' ಕಾರವು ತೆಲುಗಿನ ಬಹುವಚನವನ್ನು ಸೂಚಿಸುವ ಅಕ್ಷರ. ಕನ್ನಡದ ರಚನೆಯ ನಡುವೆ 'ಲ' ಸಂಬಂಧವಾಚಿ ಬಂದಿರುವುದು ಗಡಿಭಾಗದ ದ್ವಿಭಾಷಿಕ ವಲಯದ ಪ್ರಭಾವದಿಂದ. ತೆಲುಗು ಭಾಷಿಕರು ಅಗಸಕ್ಕೆ ಪರ್ಯಾಯ 'ಚಾಕಲಿ' ಪದವನ್ನು ಬಳಸುತ್ತಾರೆ. ಆದರೆ 'ಅಗಸ' ಇದರ ಅರ್ಥ ಗಮನಿಸದೇ ಅದನ್ನು ಇಡಿಯಾಗಿ ಸ್ವೀಕರಿಸಿ ದಿನ್ನೆ ವಾರ್ಗಿಕದ ನಡುವೆ ತೆಲುಗಿನ ಬಹುವಚನ ವಾಚಿ 'ಲ' ಸೇರಿಸಿ ಉಚ್ಚರಿಸಿರಬೇಕು.

೩. ಉಪ್ಪಾರಹಾಳ್ - ADN
೪. ಉಪ್ಪಾರ ಹೊಸಳ್ಳಿ - SRP

ವೃತ್ತಿವಾಚಿ. ಉಪ್ಪಾರರು. ಕೆರೆ, ಬಾವಿಗಳನ್ನು ತೋಡುವುದು ಉಪ್ಪು ತಯಾರುಮಾಡುವುದು ಮುಂತಾದ ಕಸುಬುಳ್ಳ ತೆಲುಗು ಮೂಲದ ಜನಾಂಗ. (CTSI VII)

ಉಪ್ಪಾರ + ಹಾಳು = ಇದು ಹಳೆಯ ವಾಸ್ತವ್ಯವಾಗಿದೆ.

ಉಪ್ಪಾರ + ಹೊಸ + ಹಳ್ಳಿ = ಸ್ಥಳಾಂತರಿತ ವಾಸ್ತವ್ಯವೆಂದು ತಿಳಿಯುತ್ತದೆ.

೫. ಕಮ್ಮರಚೇಡು - ALR
೬. ಕಮ್ಮರಚೇಡು - ALR

ಆಂಧ್ರಪ್ರದೇಶದಲ್ಲಿ ಹೆಚ್ಚಾಗಿರುವ ಒಂದು ಜಾತಿ. 'ಕಮ್ಮ' ಇದೊಂದು ವೃತ್ತಿಯವರ ಹೆಸರೂ ಹೌದು. ಕಾಪು, ರೆಡ್ಡಿ, ತೆಲುಗರ ಒಂದು ಉಪಜಾತಿ. (CTSI- Vol- III- Page-94 and 106) ಚೇಡು, ಸೇಡು ಎಂಬುದು ಕಬ್ಬಿಣದ ವೃತ್ತಿಯ 'ಸಾಲೆ', 'ಕುಲುಮೆ'ಯನ್ನು ಸೂಚಿಸುತ್ತದೆನ್ನಬಹುದು.

| | |
|---|---|
| ೭. ಕಂಚುಗಾರ ಹೊಸಳ್ಳಿ - SRP<br>೮. ಕಂಚಿಗನಹಳ್ಳಿ - SRP | ಪಾಂಚಾಲರಲ್ಲಿ ಒಂದು ಕುಲನಾಮ. ಇದೊಂದು ವೃತ್ತಿ. ಎರಡೂ ಗ್ರಾಮನಾಮಗಳು ಕಂಚು + ಕಾರ + ಹೊಸ + ಹಳ್ಳಿ<br>ಕಂಚು + ಇಗ + ನ + ಹಳ್ಳಿ ಎಂಬುದಾಗಿ ಆ ವೃತ್ತಿಯನ್ನು ಮಾಡುವವನು ಎಂದು ವ್ಯಕ್ತಿಯನ್ನು ವ್ಯಾಖ್ಯಾನಿಸುತ್ತಿವೆ. |
| ೯. ಕಾತರಕಿ - ALR : | ಕಾತರು ಎಂಬುದೊಂದು ಜನಾಂಗ? (ಎಂ.ಎಂ.ಕಲ್ಬುರ್ಗಿ - ನಾಮವಿಜ್ಞಾನ - ಪು - ೭೦). ಇಲ್ಲಿ ಕಾತರ + ಕೆಯ್ ಎಂಬ ರೂಪ 'ಕಾತರಕಿ' ಎಂದು ಸವಕಳಿಯಾಗಿರಬಹುದು. 'ಕೆಯ್ ' ಎಂಬುದು ಮಣ್ಣು, ನೆಲ, ಭೂಮಿಯನ್ನು ಸೂಚಿಸುತ್ತದೆ. |
| ೧೦. ಕಾರ್ಕರ್ಲ ತೋಟ - BLR : | ಕಾರ್ಕರ್ಲ (ತೆಲುಗು) = ಹಾಗಲಕಾಯಿ. ಕಮ್ಮಾ ಹಾಗೂ ಮೂಕದೊರ ಜಾತಿಯಲ್ಲಿ ಒಂದು ಕುಲನಾಮ. (CTSI- Vol- III- Page- ೪೪) |
| ೧೧. ಕುರುವಳ್ಳಿ - ALR<br>೧೨. ಕುರುವಳ್ಳಿ - SRP<br>೧೩. ಕುರುಗೋಡು - BLR<br>೧೪. ಕುರುಕುಂದೆ - ALR | ಕುರುವ + ಹಳ್ಳಿ = ಕುರುವಳ್ಳಿ: ಕುರುಬರ ನೆಲೆಗಳೆಂದು ತಿಳಿಯುತ್ತದೆ. ಕುರುವ (ತೆಲುಗು): ಆದರೆ ಕುರು + ಗೋಡು ಎಂಬಲ್ಲಿ 'ಕುರು' ಪದ = ಒಂದು ಪ್ರಸಿದ್ಧ ಪ್ರಾಚೀನ ವಂಶ. ಪಾಂಡುರಾಯನ ಹಿರಿಯರಾದವರು; ಕುರುಹು: ಬಾವು: ಎತ್ತರ ಕಡಿಮೆಯಾದ, ಕುಳ್ಳು ಎಂಬರ್ಥಗಳನ್ನು ಹೇಳುತ್ತದೆ. (ಸಿ.ಅ - ಪು - ೧೨೨).<br>ಕುರುವ = ಒಂದು ದ್ವೀಪ, ಬೆಟ್ಟ (ಸಿ.ಅ - ಪು - ೧೨೨) ಎಂಬ ಪ್ರಕೃತಿ ಮೂಲದ ಅರ್ಥಗಳೂ ಇವೆ. ಸ್ಥಳೀಯರ ಪ್ರಕಾರ ಇವು ಜನಾಂಗವಾಚಿಯಾಗಿ, ಮಹಾಭಾರತದ ಕೆಲವು ಐತಿಹ್ಯಕ್ಕೆ ಸಂಬಂಧಿಸಿ ಕಥೆ ಹೆಣೆಯುವುದಿದೆ.<br>ಮೊದಲೆರೆಡು ಸ್ಥಳನಾಮಗಳು 'ಕುರುವ' ಎಂದು ಹೇಳುವುದರಿಂದ ಕುರುಬರ ನೆಲೆಗಳೆಂದು, ಗೋಡು, ಕುಂದೆ ಎಂಬ (ಬೆಟ್ಟ ಎಂಬರ್ಥ) ವಾರ್ಗಿಕವನ್ನೊಂದಿದ ಗ್ರಾಮನಾಮಗಳು ಪ್ರಕೃತಿವಾಚಿಯನ್ನಾಗಿ ಅಥವಾ ಬೆಟ್ಟದಲ್ಲಿ ವಾಸಿಸುವ ಕಾಡು ಕುರುಬರ ನೆಲೆಗಳೆಂದೂ ಕರೆಯಲು ಸಾಧ್ಯವಿದೆ. |
| ೧೫. ಕೊಕ್ಕರಚೇಡು - ALR : | ನಾಯರ್ ಜನಾಂಗದ ಒಂದು ಉಪಜಾತಿಯಾಗಿದೆ. ಕೊಕ್ಕರ - (CTSI - Vol - III - Page - 299). ಕುಕ್ಕಲ (ತೆಲುಗು) ನಾಯಿ: ಬೋವಿ ಜನಾಂಗದಲ್ಲಿ ಒಂದು ಗೋತ್ರ. ಆದರೆ 'ಕೊಕ್ಕರು' |

ಎಂಬುದಕ್ಕೆ ಅರ್ಥವು ಸ್ಪಷ್ಟವಿಲ್ಲ. ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕಿನಲ್ಲಿ 'ಕೊಕ್ಕರಪಡೆ' ಎಂಬೊಂದು ಈ ರೀತಿಯ ಹೆಸರಿದೆ. ಬಹುಶ: ಪಡೆ ಎಂಬ ಪದ ಸೈನಿಕರು, ಗುಂಪು ಎಂಬರ್ಥ ನೀಡುತ್ತದೆ. ಇದರಿಂದ ಕೊಕ್ಕರಪಡೆ' ಎಂಬುದು ಕೊಕ್ಕರ ಎಂಬುವವರ ಪಡೆ ಇರಬೇಕು.

ಚೇಡು > ಶಾಲೆ, ಸಾಲೆ (Work shop) ಲೋಹ ಅಥವಾ ಕಬ್ಬಿಣ ಕೈಗಾರಿಕೆಯನ್ನು ನಿರ್ಮಿಸಿದ ಈ ಜನಾಂಗದ ನೆಲೆಯಿದ್ದಿರಬೇಕೆಂದು ಊಹಿಸಬಹುದು.

೧೬. ಕೊರ್ಲಗುಂದಿ - BLR : ಕೊರ್‍ರ್ಲು (ತೆಲುಗು) ಗೂಡೆಲ ಎಂಬ ಜಾತಿಯಲ್ಲಿ ಒಂದು ಕುಲನಾಮ. (CTSI- Vol- IV). ಕನ್ನಡದ 'ನವಣೆ' ಎಂಬ ಧಾನ್ಯಕ್ಕೆ ಸಮಾನಪದ.

೧೭. ಗುಮ್ಮನೂರು - ALR : ಗುಮ್ಮ ಅರ್ಥ ಸ್ಪಷ್ಟವಿಲ್ಲ. ಇದೊಂದು ಕುಲನಾಮವಿರಬಹುದು. ಗುಮ್ಮವಾಳ್ಳ ಪಲ್ಲಿ' ಎಂಬ ಸ್ಥಳನಾಮ ಕೋಲಾರದ ಬಾಗೇವಾಡಿ ತಾಲ್ಲೂಕಿನಲ್ಲಿದೆ. (ವಿ.ಗೋಪಾಲಕೃಷ್ಣ - ಸ್ಥಳನಾಮ ಅಧ್ಯಯನ ಗಳು - ೫೨)

ಅದರಂತೆ 'ಗುಮ್ಮ'ದವರಲ್ಲಿ ಒಬ್ಬ ವ್ಯಕ್ತಿಯನ್ನು ಹೇಳುತ್ತಿರಬೇಕು. ಗುಮ್ಮ = ಕೋಟೆಯ ಗೋಡೆಯನ್ನು ಒಡೆಯಲು ಉಪಯೋಗಿಸುತ್ತಿದ್ದ ಒಂದು ಬಗೆಯ ಯಂತ್ರವಿಶೇಷ. (ಕ.ನಿ - ಸಂ - ೩ - ೨೫೬೦)

೧೮. ಗೌಡಗಲ್ಲು - ADN : ವೃತ್ತಿವಾಚಿ. ಗಾವುಂಡ ಎಂಬುದು ಊರ ಪ್ರಮುಖನನ್ನು ಹೇಳುತ್ತದೆ. ಅವನಿಗೆ ಸಂಬಂಧಿಸಿದ ಗ್ರಾಮ.

೧೯. ಜಂಗಮರ ಹೊಸಳ್ಳಿ - ALR : ಜಂಗಮರು. ಲಿಂಗಾಯತರಲ್ಲಿ ಪೂಜಾವೃತ್ತಿಯುಳ್ಳವರು. ಶೈವ ಸನ್ಯಾಸಿ, ಚಲಿಸುವ ಶಕ್ತಿಯುಳ್ಳ (ಸಿ.ಅ - ಪು - ೧೯೮) ಈ ಸಮುದಾಯ ಹೆಚ್ಚಾಗಿ ನೆಲೆಸಿದ್ದಂತಹ ನೆಲೆಯಾಗಿರಬೇಕು.

೨೦. ದೊಂಬಲದಿನ್ನೆ - ADN : ಸಂಚಾರಿ ಬುಡಕಟ್ಟು ಜನಾಂಗ. ಡೊಂಬರು ಗಣೆಯಮೇಲೆ ಆಟವಾಡುವವ, ವೇಶ್ಯೆ (ಸಿ.ಅ - ಪು - ೨೬೬)

೨೧. ದಾಸಪುರ - SRP ದಾಸರು. ಮಾದಿಗದಾಸ, ಗೊಲ್ಲದಾಸ, ವೈದಿಕದಾಸ ಹೀಗೆ ಮುಂತಾದ ಸಮುದಾಯವನ್ನು ಸೂಚಿಸುತ್ತದೆ. ಒಂದು ವೃತ್ತಿ, ಜಾತಿ ವಾಚಿಯೂ ಆಗಿದೆ.

೨೨. ಭಟ್ಟರ ಬೊಮ್ಮಲಪುರ - ADN
೨೩. ಭಟ್ಟರಹಳ್ಳಿ - ALR

ಭಟ್ರಾಜು ಎಂಬ ಜಾತಿಯವರು. ಬೊಮ್ಮ' ಎಂಬುದು ದಾಸರಲ್ಲಿ ಒಂದು ಪಂಗಡ (ವಿ.ಗೋಪಾಲಕೃಷ್ಣ - ಸ್ಥಳನಾಮ ಅಧ್ಯಯನಗಳು - ೬೦ - ೬೧)

ಸ್ತುತಿ ಪಾಠಕ ವೃತ್ತಿಯವ, ಭಟ್ಟಂಗಿ, ಸ್ವಾಮಿತ್ವ, ಒಡೆತನ, ಶಾಸ್ತ್ರಗಳನ್ನರಿತ, ಭಟ್ಟಾಚಾರ್ಯ (ಸಿ.ಅ - ಪು - ೩೯೬)

೨೪. ಬಾಪುರಂ - ADN
೨೫. ಬಾಪುರಂ - ALR
೨೬. ಬಾಪುಲದೊಡ್ಡಿ - ADN

ಬಾಪುನೋಳ್ಳು (ತೆಲುಗು) = ಬ್ರಾಹ್ಮಣರು.
ಬಾಪು = ಬ್ರಾಹ್ಮಣ: ಇವರಿಗೆ ಸಂಬಂಧಿಸಿದ ಊರು.

೨೭. ಅಗ್ರಹಾರಂ - ALR : ಅಗ್ರಹಾರ = ಬ್ರಾಹ್ಮಣರಿಗೆ ನೀಡಿದ ದತ್ತಿಗ್ರಾಮ.

೨೮. ಮುಂಡ್ರಗಿ - BLR : ಮುಂಡರು ಎಂಬುದೊಂದು ಜನಾಂಗ.
(ಎಂ.ಎಂ. ಕಲ್ಬುರ್ಗಿ - ನಾಮವಿಜ್ಞಾನ - ಪು - ೬೦)

ಮುಂಡರು + ಕೆಯ್ = ಮುಂಡರಗಿ ಎಂಬ ಸವಕಳಿ ರೂಪ. ಕೆಯ್ ಎಂಬುದು ಮಣ್ಣು, ನೆಲ, ಭೂಮಿಯನ್ನು ಸೂಚಿಸುತ್ತದೆ. ಈ ಜನಸಮುದಾಯ ಇದ್ದ ಬಗೆಗೆ ಉಲ್ಲೇಖಗಳಿಲ್ಲ.

೨೯. ವಡ್ಡರಹಟ್ಟಿ - BLR : ಮನೆಕಟ್ಟುವ ವೃತ್ತಿಯವರು. ಬೋಯ ಜನಾಂಗ (ತೆಲುಗು) ಅವರಿಗೆ ಸಂಬಂಧಿಸಿದ ಹಟ್ಟಿ.

೩೦. ಹಂದ್ರಾಳು - BLR : ಹಂದರು ಎಂಬುದೊಂದು ಜನಾಂಗ?
(ಎಂ.ಎಂ. ಕಲ್ಬುರ್ಗಿ - ನಾಮವಿಜ್ಞಾನ - ಪು - ೬೦)

ಹೀಗೆ ಅನೇಕ ಜನಸಮುದಾಯಗಳು ಆಂಧ್ರ - ಕರ್ನಾಟಕ ಗಡಿಪ್ರದೇಶದ ಬಳ್ಳಾರಿ - ಕರ್ನೂಲು ಗಡಿಭಾಗದಲ್ಲಿ ತಮ್ಮದೇ ಆದಂತಹ ವಿಶಿಷ್ಟ ನೆಲೆಗಳಲ್ಲಿ ಗ್ರಾಮಗಳನ್ನು ಕಟ್ಟಿಕೊಂಡು ಸಂಸ್ಕೃತಿಯನ್ನು ರೂಪಿಸಿದರು. ಕರ್ನಾಟಕದ ಜನಸಮುದಾಯದ ಅಧ್ಯಯನಗಳಿಗೆ ಇಂತಹ ಸ್ಥಳನಾಮಗಳು ಆಕರಗಳಾಗುತ್ತವೆ. ಈ ಕುರಿತು ಸ್ಥಳನಾಮಗಳ ಜನಾಂಗಿಕ ಅಧ್ಯಯನವನ್ನು ಪ್ರತ್ಯೇಕವಾಗಿ ಕೈಗೊಳ್ಳಬಹುದು.

### ೩.೯. ನಗರ, ಪಟ್ಟಣವನ್ನು ಸೂಚಿಸುವ ನಾಮಗಳು (ವ್ಯಾಪಾರ, ವಾಣಿಜ್ಯ ಕೇಂದ್ರಗಳು)

ಪ್ರಾಚೀನ ಕರ್ನಾಟಕದಲ್ಲಿ ಪಟ್ಟಣಗಳೆ ಬಹುಮಟ್ಟಿಗೆ ವ್ಯಾಪಾರ ಕೇಂದ್ರಗಳು. ಬಹುಶಃ ವ್ಯಾಪಾರದಿಂದಲೇ ಊರುಗಳು ಪಟ್ಟಣಗಳಾಗುತ್ತಿದ್ದವು. ಪಟ್ಟಣಗಳ ಜನಸೇವೆಗಾಗಿ ರಾಜನಿಂದ ಆಡಳಿತವರ್ಗ ನೇಮಕವಾಗುತ್ತಿತ್ತು. ಪಟ್ಟಣದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ 'ನಗರ' ಅಥವ 'ನಖರ' ಎಂಬ ವರ್ತಕ ಶ್ರೇಣಿಯ ಪ್ರಮುಖರಿದ್ದರು. (ಡಾ.ವಿಶ್ವನಾಥ - ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ - ಪು - ೭೯). ಇಂದಿಗೂ 'ನಗರ್ತಪೇಟೆ' ಎಂಬುದು

ಬೆಂಗಳೂರು ನಗರದಲ್ಲಿದೆ. ಬಹುಶಃ ಇದು ನಖರ ಎಂಬುದರ ರೂಪವೇ ಆಗಿದೆ. ಇಲ್ಲಿ ಇಂದಿಗೂ ವ್ಯಾಪಾರವೇ ಮುಖ್ಯವಾಗಿರುವುದನ್ನು ಗಮನಿಸಬೇಕು.

ಪ್ರಾಚೀನ ಕರ್ನಾಟಕದಲ್ಲಿ ಸಂತೆ ನೆರೆಯಿಸುವುದರಿಂದ ಯಾವುದೇ ಗ್ರಾಮ ಪಟ್ಟಣವೆನಿಸಿಕೊಳ್ಳುತ್ತಿತ್ತು. ಎಂಬುದನ್ನು ಮೂಗೂರು ಶಾಸನ ಹೇಳುತ್ತದೆ. (ಬಿ.ಕೆ.ಹಿರೇಮಠ - ಶಾಸನಗಳಲ್ಲಿ ಕರ್ನಾಟಕದ ವರ್ತಕರು - ಪು - ೧೩೨) ಕಾರಣ ನಗರ, ಪೇಟೆ, ಪಟ್ಟಣ, ಸಂತೆ ಮುಂತಾದ ವಾರ್ಗಿಕ, ನಿರ್ದಿಷ್ಟದಿಂದ ಕೂಡಿದ ಸ್ಥಳನಾಮಗಳು ವ್ಯಾಪಾರ ಕೇಂದ್ರಗಳನ್ನು ಸೂಚಿಸುತ್ತವೆಂದು ಗುರುತಿಸಬಹುದು. ಗಡಿಭಾಗದಲ್ಲಿ ಅಂತಹ ಕೆಲವು ಸ್ಥಳನಾಮಗಳಿವೆ.

| | | | | | | | |
|---|---|---|---|---|---|---|---|
| ನಗರ | + | ದೊಣೆ | | | = | ನಗರ'ದೊಣೆ | - ALR |
| ನಗರ | + | ಊರು | | | = | ನಗರೂ'ರು | - ALR |
| ಪಟ್ಟಣ | + | ಸೆರಗು | | | = | ಪಟ್ಟಣ'ಸೆರಗು | - BLR |
| ಸಂತೆ | + | ಕೂಡಲು | + | ಊರು | = | ಸಂತೇ'ಕೂಡ್ಲೂರು | - ADN |
| ಹೊಸ | + | ಪೇಟೆ | | | = | ಹೊಸ'ಪೇಟೆ | - ALR |
| ಹೊಳಲು | + | ಕುಂದೆ | | | = | ಹೊಳಲು'ಗುಂದೆ | - ALR (ಪೊಳಲ್ = ಪಟ್ಟಣ) |

**೩.೧೦. ಸಂಕೀರ್ಣ ಸ್ಥಳನಾಮಗಳು : ಅರ್ಥಸ್ಪಷ್ಟವಿಲ್ಲದ ಕೆಲವು ಸಂಕೀರ್ಣ ಹೆಸರುಗಳು ಹೀಗಿವೆ.**

| | | | |
|---|---|---|---|
| ಅಸುಂಡಿ | - BLR | ತುಂಬಳ | - ADN |
| ಇಸ್ವಿ | - ADN | ತೊಲಮಂಡಿ | - BLR |
| ಎಳ್ಳಾರ್ತಿ | - ALR | ಥೋವಿ | - ADN |
| ಕಪತಿ | - ADN | ನೆರಣಿಕೆ | - ALR |
| ಕರಣಿ | - ADN | ಮದಿರೆ | - ADN |
| ಕುಡುತಿನಿ | - BLR | ಮದಿರೆ | - BLR |
| ಕೌತಾಳ | - ADN | ಮಂತ್ರಿಕಿ | - ADN |
| ಗೂಳ್ಯ | - ALR | ಹಾಲ್ವಿ | - ADN |
| ಚಾಗಿ | - ADN | | |

ಹೀಗೆ ಆಂಧ್ರ - ಕರ್ನಾಟಕದ ಗಡಿಭಾಗದ ನಾಲ್ಕು ತಾಲ್ಲೂಕುಗಳಲ್ಲಿ ದೊರೆಯುವ ಸ್ಥಳನಾಮಗಳನ್ನು, ಅವುಗಳ ಭೌಗೋಳಿಕ, ಸಾಂಸ್ಕೃತಿಕ ಸ್ವರೂಪಕ್ಕನುಗುಣವಾಗಿ ಈ ಮೇಲಿನಂತೆ ವರ್ಗೀಕರಿಸಲಾಗಿದೆ. ದ್ವಿಭಾಷಿಕ ವಲಯವಾದುದರಿಂದ ಭಾಷಿಕ ಮತ್ತು ಸಮುದಾಯಗಳ ಸ್ವರೂಪದಿಂದ ಕೆಲವು ವಿಶೇಷವಾದ ಸ್ಥಳನಾಮಗಳಿರುವುದು ಸಹಜವೇ ಆಗಿದೆ.

□□

೪

# ಸ್ಥಳನಾಮಗಳ ಭಾಷಿಕ ಅಧ್ಯಯನ

## ಭಾಗ ೨

### ೪. ಪ್ರವೇಶ

ಸ್ಥಳನಾಮಗಳ ಅಧ್ಯಯನಕ್ಕೂ, ಭಾಷೆಯ ಅಧ್ಯಯನಕ್ಕೂ ನಿಕಟ ಸಂಬಂಧವಿದೆ. ಸ್ಥಳನಾಮಗಳ ಶೋಧನೆಗೆ ತೊಡಗಿದ ಸಂಶೋಧಕನಿಗೆ ಭಾಷೆಯ ವಿವಿಧ ಮಗ್ಗುಲುಗಳನ್ನು ಸ್ಪರ್ಶಿಸಿ, ಪದರು, ಪದರುಗಳನ್ನು ತೆರೆದು ನೋಡಿದಂತೆ ಕೆಲವು ಸೂಕ್ಷ್ಮ ಒಳನೋಟಗಳ ಮೂಲಕ ಮಹತ್ವದ ಮಾಹಿತಿಯು ದೊರೆಯುತ್ತದೆ. ಹೀಗಾಗಿ ಸ್ಥಳನಾಮಶಾಸ್ತ್ರ ಮತ್ತು ಭಾಷಾಶಾಸ್ತ್ರ ಒಂದಕ್ಕೊಂದು ಅವಿನಾಭಾವ ಸಂಬಂಧ ಪಡೆದ ವಿಷಯಗಳಾಗಿವೆ. "ಭಾಷಾ ವಿಜ್ಞಾನದ ದೃಷ್ಟಿಯಿಂದ ಸ್ಥಳನಾಮ ಸಂಶೋಧನೆಗೆ ಎತ್ತರದ ಸ್ಥಾನವಿದೆ" (F.T. Wain Wright - Page 84).

ಸ್ಥಳನಾಮಗಳು ಭಾಷಿಕ ಘಟಕಗಳೇ ಆದ್ದರಿಂದ ಭಾಷಾವಿಜ್ಞಾನಿಗಳು ಸ್ಥಳನಾಮೇತರ ಭಾಷಾಘಟಕಗಳನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಹೇಗೆ ಪರಿಶೀಲಿಸುತ್ತಾರೋ ಅದೇ ರೀತಿಯಲ್ಲಿ ಸ್ಥಳನಾಮಗಳನ್ನು ಪರಿಶೀಲಿಸುತ್ತಾರೆ. ಭಾಷೆಯ ವಿಕಾಸ, ಸಜಾತೀಯ ಭಾಷೆಗಳೊಡನೆ ಅವುಗಳ ಸಂಬಂಧ, ಅನ್ಯ ಭಾಷೆಯ ಪ್ರಭಾವ, ಪ್ರಾಂತೀಯ ಭಾಷಾ ಲಕ್ಷಣ ಹಾಗೂ ಇತರ ಸೋದರ ಭಾಷೆಗಳೊಂದಿಗೆ ಬೆಳೆಸಿಕೊಂಡ ಸಾಮ್ಯ, ಭಿನ್ನತೆ ಮುಂತಾದ ಲಕ್ಷಣಗಳನ್ನು ವಿಂಗಡಿಸಲು ಪೂರಕ ಆಕರಗಳಾಗಿ ನಾಮಗಳು ಸಹಾಯಕ. ದ್ವಿಭಾಷಿಕ ವಲಯದಲ್ಲಿನ ಭಾಷಿಕ ಚಹರೆಗಳನ್ನು ವರ್ಣನಾತ್ಮಕ, ಚಾರಿತ್ರಿಕ, ಸಾಮಾಜಿಕ, ತುಲನಾತ್ಮಕ ಪದ್ಧತಿಗಳ ಮೂಲಕ ಸ್ಥಳ ಸಂಶೋಧನೆ ಮುಖೇನ ಧ್ವನಿಮಾ ರಚನೆ (Phonology), ಆಕೃತಿಮಾ ವಿಜ್ಞಾನ, ನಿಘಂಟು ರಚನೆ, ಲಿಪಿವಿಜ್ಞಾನ, ಶಬ್ದಾರ್ಥ ವಿವರಣೆ ಮೊದಲಾದ ಭಾಷಾಶಾಸ್ತ್ರಗಳ ರಚನೆಗೆ ಸ್ಥಳನಾಮ, ಗ್ರಾಮನಾಮಗಳು ಸಹಾಯಕವಾಗಬಲ್ಲವು.

ಸ್ಥಳನಾಮಗಳನ್ನು ಸಾಮಾನ್ಯವಾಗಿ ಭಾಷಿಕ ನೆಲೆಯಲ್ಲಿ ಅಧ್ಯಯನ ಮಾಡುವಾಗ ವಿವರಣಾತ್ಮಕವಾಗಿ ನೋಡಲಾಗಿದೆ. ಸಂಧಿ - ಸಮಾಸ - ಆಕೃತಿಮಾ - ಧ್ವನಿಮಾ ಮುಂತಾದ ನಿಯಮಗಳಿಂದ ಹೆಸರುಗಳನ್ನು ಪ್ರಸ್ತುತ ಪಡಿಸುವ ಪರಂಪರೆಯು ಮುಂದುವರೆದಿದೆ. "ವಿವರಣಾತ್ಮಕ ಭಾಷಾ ವಿಜ್ಞಾನವೇ ನಿಜವಾಗಿ ಇಂದಿಗೂ

ಭಾಷಾವಿಜ್ಞಾನದ ಬೆನ್ನೆಲುಬು. ತಾತ್ವಿಕ ದೃಷ್ಟಿಯಿಂದ ಇದನ್ನು ಸಾಮಾನ್ಯ ಭಾಷಾವಿಜ್ಞಾನದ ಗುಂಪಿಗೆ ಸೇರಿಸಿದ್ದರೂ, ಎಲ್ಲಾ ಭಾಷಾವಿಜ್ಞಾನ ವಿವೇಚನೆಗಳಿಗೂ ಇದೇ ಜೀವಾಳ. ಇದನ್ನುಳಿದು ಭಾಷಾವಿಶ್ಲೇಷಣೆ ಮಾಡುವುದು ದುಸ್ಸಾಹಸದ ಮಾತು. ಏಕೆಂದರೆ ಭಾಷಾ ವಿಶ್ಲೇಷಣೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದಿರುವ ರೂಪಾಂತರ ವ್ಯಾಕರಣವನ್ನಾಗಲಿ, ಸಾಮಾಜಿಕ ಭಾಷಾವಿಜ್ಞಾನ ಮಾದರಿಗಳಾಗಲೀ ಅವು ಎಷ್ಟೇ ನವ್ಯ ತಂತ್ರಗಳನ್ನು ಮೈಗೂಡಿಸಿಕೊಂಡಿದ್ದರೂ ಅವುಗಳ ವಿಶ್ಲೇಷಣೆಗೆ ಮೂಲದ್ರವ್ಯ ಸಾಧಿತವಾಗುವುದು ವರ್ಣನಾತ್ಮಕ ಭಾಷಾ ವಿಜ್ಞಾನದಿಂದಲೇ'' (ಡಾ. ಸೋಮಶೇಖರಗೌಡ - ಭಾಷೆ ರಚನೆ ಬಳಕೆ - ಪು. ೦೭) ಎಂಬ ಮಾತನ್ನು ಒಪ್ಪಬಹುದು. ಆದರೂ ಇಂದು ಸಾಮಾಜಿಕ ಮನಸ್ಥಿತಿಯ ಮೂಲಕ ವರ್ಣನಾತ್ಮಕ ಮಾದರಿಯ ಅಗತ್ಯತೆಯನ್ನು ಕಂಡುಕೊಳ್ಳಬೇಕಾಗಿದೆ. ಕಾರಣ ಇಲ್ಲಿ ವಿವರಣಾತ್ಮಕ ಮಾದರಿಗಿಂತ ಭಿನ್ನವಾಗಿ ಸಾಮಾಜಿಕ ಪ್ರಸ್ತುತತೆಯ ಮೂಲಕ ಸ್ಥಳನಾಮಗಳನ್ನು ಭಾಷಿಕ ನೆಲೆಯಲ್ಲಿ ನೋಡುವ ಪ್ರಯತ್ನವಿದೆ.

**೪.೧. ಆಂಧ್ರ - ಕರ್ನಾಟಕ ಗಡಿಭಾಗದ ದ್ವಿಭಾಷಿಕತೆ ಕುರಿತು**

ಯಾವ ಭಾಷೆಯೂ ತನ್ನ ಮಡಿವಂತಿಕೆಯನ್ನು ಬಹಳಕಾಲ ಕಾಯ್ದುಕೊಳ್ಳಲಾರದು. ರಾಜಕೀಯ ಕಾರಣದಿಂದಾಗಿ ಆಳರಸರು ಸ್ಥಳೀಯ ಭಾಷೆಗೆ ಸಂಬಂಧಿಸಿರದಿದ್ದರೆ ಕ್ರಮೇಣ ಆಡಳಿತಗಾರರ ಭಾಷೆ ಸ್ಥಳೀಯ ಭಾಷೆಯ ಮೇಲ ಪ್ರಭಾವ ಬೀರತೊಡಗುತ್ತದೆ. ಮೊದಲು ರಾಜಧಾನಿ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶ, ಅನಂತರ ಆಡಳಿತ ಕೇಂದ್ರಗಳು, ಅವುಗಳ ಸುತ್ತಲಿನ ಪ್ರದೇಶ ಹೀಗೆ ಪ್ರಭಾವ ಪಸರಿಸುತ್ತಾ ಹೋಗುತ್ತದೆ. ರಾಜಕೀಯ ಗಡಿಗಳನ್ನು ದಾಟಿ ಒಂದು ಭಾಷೆ ಬಳಕೆಗೊಳ್ಳುತ್ತಿರಬಹುದು. ಭಾಷಾ ಗಡಿಪ್ರದೇಶಗಳಲ್ಲಿಯ ಜನರು ಸ್ಥಳೀಯ ಭಾಷೆ, ಆಡಳಿತ ಭಾಷೆ ಇವುಗಳಲ್ಲಿ ಮಾತೃಭಾಷೆಯೊಂದಿಗೆ ಕನಿಷ್ಟ ಪಕ್ಷ ಒಂದನ್ನಾದರೂ ಬಲ್ಲವರಾಗಿರುತ್ತಾರೆ. ಹೀಗಾಗಿ ಆ ಪ್ರದೇಶ ದ್ವಿಭಾಷಾ ಇಲ್ಲವೇ ಬಹುಭಾಷಾ ಪ್ರದೇಶವೆನಿಸುತ್ತದೆ. ಯಾವುದೇ ಕಾರಣವಿರಲಿ, ಅನ್ಯ ಭಾಷಾ ಪ್ರಭಾವ ಸುತ್ತಲಿನ ಪರಿಸ್ಥಿತಿಗನುಗುಣವಾಗಿ ಒಂದು ಪ್ರದೇಶದ ಸ್ಥಳೀಯ ಭಾಷೆಯ ಮೇಲೆ ಗಾಢವಾಗಿ ಆಗುತ್ತಾ ಹೋದಂತೆ ಅದರದೇ ಆದ ವಿಶಿಷ್ಟ ಭಾಷೆಗಿಂತ ಭಿನ್ನವಾಗಿ ತೋರಲಾರಂಭಿಸುತ್ತದೆ. ಆಗ ಅದನ್ನು ಪ್ರಾದೇಶಿಕ ಪ್ರಭೇದವಾಗಿ ಪರಿಗಣಿಸಬೇಕಾಗುತ್ತದೆ. ಅನ್ಯ ಭಾಷಾ ಪ್ರಭಾವ ಈ ರೀತಿ ಪ್ರಭೇದಗಳಾಗಲು ಅವಕಾಶಮಾಡಿಕೊಡುವ ಪ್ರಧಾನ ಅಂಶವಾಗಿದೆ. ಅನ್ಯಭಾಷಾ ಪ್ರಭಾವವೆಂದರೆ ಸಾಮಾನ್ಯವಾಗಿ ಸ್ಥಳೀಯ ಭಾಷೆಯಲ್ಲಿ ಹಲವು ಬಗೆಯಲ್ಲಿ ನಡೆಯುವ ಸ್ವೀಕರಣ.

ಕನ್ನಡ ಭಾಷೆಯ ಮೇಲೆ ಅನೇಕ ಅನ್ಯ ಭಾಷೆಗಳು ಪ್ರಭಾವ ಬೀರಿವೆ. ಅದರಂತೆ ತೆಲುಗು ಭಾಷೆಯ ಮೇಲೂ ಅನ್ಯ ಭಾಷಾ ಪ್ರಭಾವ ಆಗಿದೆ. ಒಂದು ಕಾಲಕ್ಕೆ ಕನ್ನಡದ ಪ್ರದೇಶಗಳೇ ಆಗಿದ್ದ ಕರ್ನೂಲು - ಅನಂತಪುರ ಜಿಲ್ಲೆಯ ಗಡಿಭಾಗವು ಅನೇಕ ಸ್ಥಿತ್ಯಂತರಗಳಿಗೆ ಇಂದು ಒಳಗಾಗಿದೆ. ಭಾಷಿಕವಾಗಿ ಒಂದು ಕಡೆ ಕನ್ನಡದ ಎಲ್ಲೆ ಮತ್ತೊಂದೆಡೆ ತೆಲುಗಿನ ಎಲ್ಲೆ ರಾಜಕೀಯ ಗಡಿಯನ್ನು ಮೀರಿ ನಿಂತಿದೆ. ಈ ಬೆಳವಣಿಗೆಯ ನಡುವೆಯೇ ಪರಸ್ಪರ ಭಾಷಾ ಕೊಡುಕೊಳ್ಳುವಿಕೆಯಲ್ಲಾದ ದ್ವಿಭಾಷಿಕ ಸ್ಥಿತಿಯನ್ನು ನಾಮಶಾಸ್ತ್ರಕ್ಕೆ ಅನ್ವಯಿಸಿ ಅಧ್ಯಯನ ಮಾಡಲಾಗಿ ರಾಜಕೀಯ ಗಡಿಯ ಗುರುತಿಸುವಿಕೆಯ ನಂತರದ ಅವಧಿಯಲ್ಲಾದ ಭಾಷಾ ಪ್ರಭಾವಗಳು ಸ್ಥಳನಾಮಗಳ ಮೇಲೆ ಗಾಢವಾದ ಪರಿಣಾಮ ಬೀರಿರುವುದನ್ನು ಈ ಪ್ರದೇಶದಲ್ಲಿ ಗುರುತಿಸಬಹುದು.

ಕನ್ನಡ ಭಾಷೆ ತನ್ನ ಸೋದರ ಭಾಷೆಗಳಾದ ತಮಿಳು, ಮಲೆಯಾಳಂ, ತುಳು, ತೆಲುಗು ಭಾಷೆಗಳಿಂದ ಸ್ವಾಭಾವಿಕವಾಗಿ ಗಡಿಭಾಗಗಳಲ್ಲಿ ಪ್ರಭಾವಿತಗೊಂಡಿದೆ. ಬೀದರ್ , ಕಲಬುರ್ಗಿ, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಕೋಲಾರ ಈ ಆರು ಜಿಲ್ಲೆಗಳ ಗಡಿಭಾಗವೆಲ್ಲ ನೆರೆಯ ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವುದರಿಂದ ಆ ಪೂರ್ವಭಾಗವೆಲ್ಲ ತೆಲುಗು ಭಾಷೆಯ ಸಂಪರ್ಕದಿಂದ ಅದರ ಪ್ರಭಾವಕ್ಕೆ ಒಳಗಾಗಿದೆ. ತೆಲುಗಿನಂತೆ ಉರ್ದು ಮತ್ತು ಮರಾಠಿ ಭಾಷೆಗಳೂ ಕನ್ನಡದ ಮೇಲೆ ಪ್ರಭಾವ ಬೀರಿವೆ. ಆರು ಜಿಲ್ಲೆಗಳ ಗಡಿಯಲ್ಲಿ ತೆಲುಗಿನ ಪ್ರಭಾವ ಒಂದೇ ರೀತಿಯಲ್ಲಿ ಇಲ್ಲ. ಆಯಾ ಭೌಗೋಳಿಕ, ರಾಜಕೀಯ, ಸಾಮಾಜಿಕ ಕಾರಣಗಳಿಂದ ಪ್ರಮಾಣದಲ್ಲಿ ವ್ಯತ್ಯಾಸವನ್ನು ಪಡೆದುಕೊಂಡಿದೆ. ಅಂತೆಯೇ ಬಳ್ಳಾರಿ ತಾಲ್ಲೂಕು, ಸಿರುಗುಪ್ಪ ತಾಲ್ಲೂಕುಗಳು ಭಾಗಶಃ ತೆಲುಗಿನ ಪ್ರಭಾವಕ್ಕೊಳಪಟ್ಟಿವೆ. ಕರ್ನೂಲು ಜಿಲ್ಲೆಯ ಕೆಲವು ಭಾಗಗಳು ಕನ್ನಡ ಭಾಷಾ ದ್ವೀಪಗಳನ್ನೂ, ಬಳ್ಳಾರಿ ಜಿಲ್ಲೆಯ ಕೆಲವು ಭೂ ಭಾಗಗಳು ತೆಲುಗು ಭಾಷಾ ದ್ವೀಪಗಳನ್ನೊಳಗೊಂಡಿವೆ. ಈ ಕಾರಣಗಳಿಂದಾಗಿ ಪರಸ್ಪರ ದ್ವಿಭಾಷಿಕ ವಲಯ ಪ್ರೇರಣೆ ಪ್ರಭಾವದಿಂದ ಸ್ಥಳನಾಮಗಳ ಮೇಲೆ ತಕ್ಕಷ್ಟು ಪ್ರಭಾವ ಬೀರಿದೆಯೆಂಬುದನ್ನು ಇಲ್ಲಿ ಗುರುತಿಸುವ ಪ್ರಯತ್ನವಿದೆ.

**೪.೨. ಸ್ಥಳನಾಮಗಳು - ವಾರ್ಗಿಕಗಳ ಪಟ್ಟಿ**

ಆಂಧ್ರ - ಕರ್ನಾಟಕ ಗಡಿ ಪ್ರದೇಶದಲ್ಲಿ ಬರುವ ಸಿರುಗುಪ್ಪ, ಬಳ್ಳಾರಿ, ಆದವಾನಿ, ಆಲೂರು ತಾಲ್ಲೂಕುಗಳ ಒಟ್ಟು ಸ್ಥಳನಾಮಗಳ ಉತ್ತರ ಪದದಲ್ಲಿ ಕಂಡು ಬರುವ ವಾರ್ಗಿಕ ರಚನೆಗಳು ಹಾಗೂ ಅವುಗಳ ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

- ಊರು : ಇದು ಅಚ್ಚದ್ರಾವಿಡ ಪದ. ವಾಸಸ್ಥಳವನ್ನು ಸೂಚಿಸುತ್ತದೆ. ನಾಡು, ಗ್ರಾಮ ಸಣ್ಣಪಟ್ಟಣ, ತೊಡೆ, ನೆಡು - (ಸಿ. ಅ - ಪು - ೬೮)

  - ಊರು ಕೊನೆಯಲ್ಲಿ ಬರುವ ಕೆಲವು ಹೆಸರುಗಳಾದರೂ ಮೂಲತಃ ಪುರದಿಂದ ಕೊನೆಯಾಗುತ್ತಿದ್ದವೆಂಬುದಕ್ಕೆ ಶಾಸನಾಧಾರಗಳಿವೆ. (ವಾಗರ್ಥ - ೧೫)

  ಜನ ವಾಸಮಾಡುವ ಸ್ಥಳ, An inhabited place : a village : a town, a city ( ಕ. ಕ. ಇ. ನಿ - ೧೧೬)

  ಇದು ದ್ರಾವಿಡ ಪದವಾದ್ದರಿಂದ ತೆಲುಗಿನಲ್ಲಿಯೂ ಇದೇ ಪದವು ಬಳಕೆಯಾಗುತ್ತದೆ.

  ಉದಾ: ಅಗಸನೂರು - ADN

  ಆಲೂರು - ALR

  ಕಂದಕೂರು - ADN

  ಬೊಗ್ಗೂರು - ADN

- ಏರಿ : ಜಲವಾಚಿ ಪದ. ಕೆರೆಕಟ್ಟೆಯನ್ನು ಹೇಳುವ ಪದ. ಕಟ್ಟೆ, ಮಣ್ಣಿನಸಾಲು ದಂಡೆ (ಸಿ. ಅ - ಪು - ೭೬): ಉದಾ: ಏರಿ + ಊರು = ಏರೂರು - ALR

ಮಿಂಚು + ಏರಿ = ಮಿಂಚೇರಿ - BLR

- ಕಣಿವೆ : ಎರಡು ಬೆಟ್ಟಗಳ ಎಡೆಯ ತಗ್ಗು, ಕೊರಕಲು (ಸಿ. ಅ - ಪು - ೯೦). ಪ್ರಾದೇಶಿಕ ವೈಲಕ್ಷಣವನ್ನು ಹೇಳುವ ಪದ. ತೆಲುಗಿನಲ್ಲಿಯೂ 'ಕಣವ' ಎಂದು ಬಳಕೆಯಾಗುತ್ತದೆ. ಉದಾ: ಹುಲಿಕಣಿವೆ.

- ಕಂಬ : (ಕಂಭ), ಸ್ತಂಭ, ಕುಂದ: ಕಲ್ಲು, ಮರ, ಕಬ್ಬಿಣದಿಂದ ಮಾಡಿದ ನಿಲುವು ಕಂಬ (ಸಿ. ಅ. ಪು - ೧೦೬). ತೆಲುಗಿನಲ್ಲಿ ಸ್ತಂಬಂ ಎಂದು ಕರೆಯುತ್ತಾರೆ. ಉದಾ : ಕಲ್ಲುಕಂಬ

- ಕಟ್ಟು : ಸುತ್ತು, ಬಿಗಿ, ತಡೆ, ಕಡೆ, ನಿಯಮ, ನಿರ್ಬಂಧ: ದಂಡೆ, ಸಾರ, ನೀರ್ಕಟ (ಸಿ. ಅ - ಪು - ೮೮) ಎಂಬರ್ಥಗಳಿವೆ. ಉದಾ : ಗವಿಗಟ್ಟು - ಗವಿಗಳಿಂದ ಸುತ್ತುವರೆದ, ಕೂಡಿದ ಸ್ಥಳ.

ಮರಕಟ್ಟು - ಮರಗಳಿಂದ ತುಂಬಿದ ಸ್ಥಳ.

- ಕಲ್ಲು : ನಿಸರ್ಗವಾಚಿ ಪದ. ಬಂಡೆ, ಶಿಲೆ (ಕ. ರ. ಕೋ - ಪು - ೪೬).

ಈ ಪದ 'ಕಲ್ ' ಎಂಬ ವ್ಯಂಜನಾಂತ ಪದವಾಗಿಯೂ, ಕ > ಗ ಬದಲಾವಣೆಯಿಂದ ಗಲ್, ಗಲ್ಲು ಎಂದೂ ಬಳಕೆಯಾಗಿದೆ. ದ್ರಾವಿಡ ಭಾಷೆಗಳಾದ ತಮಿಳು, ತೆಲುಗು, ಮಲೆಯಾಳಂ, ಕನ್ನಡದಲ್ಲಿ ಇದಕ್ಕೆ 'ಶಿಲೆ'ಯೆಂದೇ ಅರ್ಥಗಳಿವೆ.

ತೆಲುಗಿನಲ್ಲಿ 'ರಾಯಿ' ಎಂಬುದಕ್ಕೆ ಸಮಾನ ಪದ. ಇಂದು 'ಕಲ್ಲು' ಎಂಬ ಪದ ಬಳಕೆಯಲ್ಲಿ ಇಲ್ಲ. ಆಂಧ್ರದ ಬಹುತೇಕ ಪ್ರದೇಶಗಳಲ್ಲಿ ಕಲ್ಲು, ಗಲ್ಲು ವಾರ್ಗಿಕ ಗ್ರಾಮನಾಮಗಳಲ್ಲಿ ಬಳಕೆಯಾಗಿವೆ. ಉದಾ: ತುರ್ವಗಲ್ಲು, ಭೀಮಗಲ್ಲು, ವರಂಗಲ್ಲು ಇತ್ಯಾದಿ. ಕಲ್ಲು' ಎಂಬ ಪದಕ್ಕೆ ಇಂದು ತೆಲುಗಿನಲ್ಲಿ ಹೆಂಡ, ಸರಾಯಿ ಎಂಬರ್ಥಗಳಿವೆ. ಕನ್ನಡದಲ್ಲಿಯೂ 'ಕಳ್ಳು' ಎಂಬ ಪದವಿದೆ. ಇದು ದ್ರಾವಿಡ ರೂಪ. ಆದ್ದರಿಂದ ಇದು ಶಿಲಾವಾಚಿ.

ಕನ್ನಡದಲ್ಲಿ 'ಕಲ್ಲು' ಶಿಲಾವಾಚಿ. ಉದಾ: ಅಂಗಸಕಲ್ಲು: ಕಲ್ಲುಬಾವಿ: ಕಪ್ಪಗಲ್ಲು: ಹತ್ತಿಬೆಳಗಲ್ಲು

- ಕಾಲೋನಿ : ಇದು ಇಂಗ್ಲಿಷ್ ಪದ. ಕಾಲನಿ = Settlement of emigrants into new country. ಪರಸ್ಥಳಕ್ಕೆ ಹೋಗಿ ವಕ್ಕಲು ಹೂಡಿದ ಸ್ಥಳ. (ಕ. ಕ. ಇ. ನಿ - ಪು - ೧೫೭)

ಒಂದು ಹಳೆಯ ಸ್ಥಳನಾಮದ ಪಕ್ಕದಲ್ಲಿ ಅಥವಾ ವ್ಯವಸಾಯಕ್ಕೆ ಅನುಕೂಲವಾದ ಸ್ಥಳದಲ್ಲಿ ವಾಸ್ತವ್ಯ ಹೂಡಿದ ಹೊಸ ನಿವೇಶನಗಳಿರುವ ಜಾಗ. ಇಂತಹ ಅನೇಕ ಕಾಲನಿಗಳು ಗಡಿಭಾಗದಲ್ಲಿವೆ. ಉದಾ: ಗೊಲ್ಲನರಸಪ್ಪ ಕಾಲನಿ - BLR

ಬಳ್ಳಾರಪ್ಪ ಕಾಲೋನಿ - BLR

ವೆಂಕಟಮ್ಮ ಕಾಲನಿ - BLR

- ಕ್ಯಾಂಪು : ಇದು ಇಂಗ್ಲಿಷ್ ಪದ. ನೆಲೆಯೂರಿಕೆ, ಒಂದು ಕಡೆ ಗುಂಪಾಗಿ ನೆಲೆಸುವುದು. ಆಂಧ್ರದಿಂದ ವಲಸೆ ಬಂದ ಅನೇಕ ಸಮುದಾಯಗಳು ಕರ್ನಾಟಕದ ಗಡಿಭಾಗದಲ್ಲಿ ಕ್ಯಾಂಪುಗಳನ್ನು ನಿರ್ಮಿಸಿಕೊಂಡು, ಅವುಗಳಿಗೆ ವ್ಯಕ್ತಿ, ದೈವಕ್ಕೆ ಸಂಬಂಧಿಸಿದ ಹೆಸರುಗಳನ್ನು ನೀಡಿದ್ದಾರೆ.

ಉದಾ: ದೇವಿನಗರ ಕ್ಯಾಂಪು - SRP
ಧನಲಕ್ಷ್ಮಿ ಕ್ಯಾಂಪು - SRP
ಮಂಗಮ್ಮ ಕ್ಯಾಂಪು - BLR
ವಿಘ್ನೇಶ್ವರ ಕ್ಯಾಂಪು - BLR
ರಂಗೀಲಾ ಕ್ಯಾಂಪು - BLR

- ಕುಂದೆ : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಕಲ್ಲಿನಿಂದ ಮಾಡಿದ ಕಂಬ, ಚಿಕ್ಕ ಬೆಟ್ಟ (ಸಿ. ಅ - ಪು - ೧೨೬). ಇದು ಕುಂದ, ಕುಂದಿ ಎಂದೂ ಬಳಕೆಯಾಗುತ್ತದೆ. ಕುಂದಿ ತಗ್ಗುಭೂಮಿ, ಬಾಗಿದನೆಲ (ಸಿ. ಅ - ಪು - ೧೨೬) ಕುಂದೆ' ಎಂಬ ವಾರ್ಗಿಕವಿರುವ ಗಡಿಭಾಗದ ಎಲ್ಲ ಊರುಗಳಲ್ಲಿಯೂ ಬೆಟ್ಟಗಳಿವೆ.

ಕ > ಗ : ಬದಲಾವಣೆಯಿಂದ - ಗುಂದ, - ಗುಂದಿ, - ಗೊಂದಿ, - ಗುಂದೆ ಎಂಬ ಪದಗಳು ಸ್ಥಳನಾಮಗಳಲ್ಲಿ ಬಳಕೆಗೊಂಡಿವೆ.

ತೆಲುಗಿನಲ್ಲಿ - ಕೊಂಡ ಎಂದೂ, ತಮಿಳಿನಲ್ಲಿ - ಕುನ್ರಂ ಎಂದೂ (ವಾಗರ್ಥ - ಪು - ೧೮) ಕರೆಯುತ್ತಾರೆ. ಉದಾ: ಕುರುಕುಂದೆ - ALR
ಕೊರ್ಲಗುಂದೆ - BLR
ಬಲ್ಲಕುಂದೆ - SRP
ಮೀನಗೊಂದಿ - ALR
ಮುಗಮನಗೊಂದಿ - ALR
ಹೊಳಲಗುಂದ - ALR

- ಕುಂಟೆ : ಜಲವಾಚಿ ಪದ. ನೀರಕುಣಿ, ಕೊಳ (ಸಿ. ಅ. ಪು - ೧೨೫), ಚಿಕ್ಕಕೆರೆ, ವಕ್ರಾಣಿ. ಬಯಲು ಭೂಮಿಯಲ್ಲಿ ಹೆಚ್ಚಾಗಿ ಕುಂಟೆಗಳು ಕಂಡು ಬರುತ್ತವೆ.

ಕ > ಗ : ಬದಲಾವಣೆಯಿಂದ - ಗುಂಟೆ: - ಗುಂಟ ಎಂದು ಬಳಕೆಯಾಗುತ್ತದೆ.

ತೆಲುಗಿನಲ್ಲಿ ಇದು - ಕುಂಟ: - ಕುಂಟಾ: - ಗುಂಟ ಎಂದು ಇದೇ ಅರ್ಥದಲ್ಲಿ ಬಳಕೆಗೊಳ್ಳುತ್ತಿದೆ.

ಉದಾ: ಎರಗುಂಟ - ALR ಬೊಬ್ಬಕುಂಟೆ - BLR
ಕಲ್ಲುಕುಂಟೆ - ADN ಬೊಂತುಕುಂಟೆ - ADN
ಚಿಂತಕುಂಟೆ - ALR

- ಕುಪ್ಪೆ : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಎತ್ತರವಾದ ಸ್ಥಳ. ರಾಶಿ ಎಂಬ ಅರ್ಥಗಳಿವೆ (ಸಿ. ಅ - ೧೨೧).

ಕ > ಗ ಬದಲಾವಣೆಯಿಂದ - ಗುಪ್ಪೆ, - ಗುಪ್ಪ ಎಂದು ಬಳಕೆಯಾಗಿವೆ.

ತೆಲುಗಿನಲ್ಲಿ - ಕುಪ್ಪ, - ಕುಪ್ಪಂ, - ಗುಪ್ಪಾ ಎಂದು ಅದೇ ಅರ್ಥದಲ್ಲಿ ಬಳಕೆಯಾಗಿವೆ.

ಉದಾ: ಕುರೇಕುಪ್ಪೆ - SRP
ಬೂದಿಗುಪ್ಪ - SRP
ಸಿರುಗುಪ್ಪ - SRP

ಈ - ಕುಪ್ಪೆ, - ಗುಪ್ಪೆ ಎಂಬಂತಹ ವಾರ್ಗಿಕಗಳು ಸಾಮಾಜಿಕರ ಆಡುನುಡಿಯಲ್ಲಿ - ಕುಂಪೆ, - ಗುಂಪ ಎಂದು ಬಿಂದು ಸಹಿತ ಉಚ್ಚಾರಣೆಯಾಗುತ್ತಿವೆ. ಉದಾ: ಕುರೇಕುಂಪೆ
ಬೂದುಗುಂಪೆ
ಸಿರುಗುಂಪೆ.

ಕುಪ್ಪೆಯು 'ಕೊಪ್ಪಲು' ಎಂಬುದನ್ನು ನಿರ್ದೇಶಿಸುತ್ತದೆ. ಕೊಪ್ಪ, ಕೊಪ್ ಎಂದೂ ಆಗುತ್ತದೆ. (ವಾಗರ್ಥ - ಪು - ೧೮)

- ಕುರ್ಕಿ : ವಾಸಸ್ಥಳ ಸೂಚಿ. - ಕುರಿಕೆ; - ಕುರ್ಕಿ; - ಕುಕ್ಕಿ; - ಕುರುಚಿ

ಕ > ಗ ಬದಲಾವಣೆಯಿಂದ - ಗುರಿಕೆ; - ಗುರ್ಕಿ; - ಗುರ್ಕೆ ಎಂದು ಬಳಕೆಯಲ್ಲಿವೆ.

ತೆಲುಗಿನಲ್ಲಿ - ಗುರ್ಕಿ; - ಕುರ್ಕಿ; - ಕುರುಕೆ. A village in the hilly tract - (ವಾಗರ್ಥ - ಪು - ೧೬). ಉದಾ: ಚೇಳ್ಳಗುರ್ಕಿ- BLR

- ಕೆರೆ : ಜಲವಾಚಿ ಪದ. ಕೊಳ, ಜಲಾಶಯ (ಸಿ. ಅ - ಪು - ೧೩೨). ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ. A tank, a reservoir (ಕ, ಕ, ಇ, ನಿ - ಪು - ೧೯೭)

ಉತ್ತರ ಕರ್ನಾಟಕದಲ್ಲಿ ಈ ಪದವನ್ನು 'ಕೇರಿ' ಎಂದು ದೀರ್ಘೀಕರಿಸಿ ಉಚ್ಚರಿಸುತ್ತಾರೆ. ಆದರೆ ಈ ಪದದ ಅರ್ಥ ಓಣಿ, ಬೀದಿ, ಎಂಬರ್ಥ ನೀಡುತ್ತದೆ. (ಮಾದಿಗಕೇರಿ: ಹೊಲೆಯರಕೇರಿ ಇತ್ಯಾದಿ).

ಕ > ಗ ಬದಲಾವಣೆಯಿಂದ - ಗೆರೆ, - ಗೆರಿ ಎಂದೂ ಬಳಕೆಗೊಂಡಿದೆ.

ತೆಲುಗಿನಲ್ಲಿ - ಕೆರೆ ಗೆ ಸಮಾನಪದ - ಚೆರುವು ಎಂದು ಕರೆಯುತ್ತಾರೆ. ಉದಾ: ಎರಿಗೆರೆ
ಕೆರೆಕೇರಿ
ಸೂಳೆಕೆರೆ.

- ಕೇರಿ : ವಾಸಸ್ಥಳ ವಾಚಿ ಪದ. ಬೀದಿ, ಅಂಗಡಿ ಬೀದಿ (ಸಿ. ಅ - ಪು - ೧೩೪) Street.

ಉದಾ : ಅರಿಕೇರಿ - ALR

ಎರಿಗೇರಿ - ADN

ದೊಡ್ಡನಕೇರಿ - ADN

ಬಿಣಿಗೇರಿ - ADN

ಹಲಿಗೇರಿ - ALR

ಹರ್ದಗೇರಿ - ALR

ಕ > ಗ ಬದಲಾವಣೆಯಿಂದ - ಗೇರಿ: - ಗೇರಾ ಎಂದೂ ಬಳಕೆಗೊಂಡಿವೆ.

- ಕೊಟ್ಟಾಲ : ವಾಸಸ್ಥಳ ವಾಚಿ. - ಕೊಟ್ಟ - ಕೊಟ್ಟಿಗೆ. ಗುಡಿಸಲು, ದನಕಟ್ಟುವ ಮನೆ. ಪುಟ್ಟ ಗುಡಿಸಲು (ಸಿ. ಅ - ಪು - ೧೩೭).

- ಕೊಟ್ಟಾಲು = ತೆಲುಗಿನಲ್ಲಿ ಬಹುವಚನ ಪದ. ಕೊಟ್ಟಂ (ತೆಲುಗು) = ಗುಡಿಸಲು.

ಆಂಧ್ರದಿಂದ ವಲಸೆ ಬಂದಂತಹ ಸಮುದಾಯಗಳು ಕರ್ನಾಟಕದ ಗಡಿಭಾಗದಲ್ಲಿ ಗುಡಿಸಲುಗಳನ್ನು ನಿರ್ಮಿಸಿಕೊಂಡು, ಅದೇ ಹೆಸರನ್ನು ಸೂಚಿಸಲು ನಿರ್ದಿಷ್ಟದಲ್ಲಿ ವ್ಯಕ್ತಿ, ದೈವವಾಚಿಯನ್ನು ಬಳಸಿಕೊಂಡಿದ್ದಾರೆ. ಪಕ್ಕದ ಗ್ರಾಮನಾಮದೊಂದಿಗೆ - ಕೊಟ್ಟಾಲ ಎಂಬ ವಾರ್ಗಿಕ ಬಳಸಲಾಗಿದೆ. ಇದು ಜಲವಾಚಿಯಲ್ಲ. - ಆಲ ಎಂಬುದನ್ನು ಜಲವಾಚಿಯೆಂದು ವರ್ಗೀಕರಣದಲ್ಲಿ ಬಳಸಲಾಗಿದೆ. ಆದರೆ ಇದು ಹೊಸರಚನೆಯಾಗಿದೆ. ಕೊಟ್ಟಾಲ ಎಂಬಲ್ಲಿ ವಾರ್ಗಿಕ ಭಾಗವಿಲ್ಲ. ಇದು ತೆಲುಗು ಮೂಲ ಪದ. ಉದಾ: ಕಂಪ್ಲಿ ಕೊಟ್ಟಾಲ

ವೆಂಕಟೇಶ್ವರ ಕೊಟ್ಟಾಲ್

S.S. ಕೊಟ್ಟಾಲ್

- ಕೊಂಡ : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಸಂಸ್ಕೃತದ 'ಕುಂಡ' ಪದದಿಂದ ತದ್ಭವಗೊಂಡಿದೆ. ಬೆಂಕಿ ಉರಿಸುವ ಕುಣಿ, ಬೆಟ್ಟ, ಪರ್ವತ (ಸಿ. ಅ - ಪು - ೧೪೦) ಇದು - ಕುಂದ ಪದಕ್ಕೆ ಸಮಾನವಾಗಿಯೇ ಬಳಕೆಯಾಗುತ್ತದೆ. ತೆಲುಗಿನಲ್ಲಿ - ಕೊಂಡವೆಂದೇ ಬಳಕೆಯಾಗುತ್ತದೆ. ಕುನ್ರ (ತಮಿಳು). ಕೆಲವು ಕಡೆ ಕ > ಗ ಪರಿವರ್ತನೆಯಿಂದ - ಗೊಂಡ ಎಂಬ ರೂಪ ಕಂಡು ಬರುತ್ತದೆ.

ಉದಾ: ಕೊಂಡಾಪುರ - ADN

ದ್ಯಾವನಕೊಂಡ - ADN

ಪತ್ತಿಕೊಂಡ - ADN

ಸಲಕಲಕೊಂಡ - ADN

- ಕೊಂಡಿ : ಪ್ರಕೃತಿ ವಾಚಿ. The string of a scorpion (DED-1732)

ತೆಲುಗಿನಲ್ಲಿ ಅದೇ ಅರ್ಥದಿಂದ ಬಳಕೆಯಾಗುತ್ತದೆ. ಉದಾ: ಕೆಸರಕೊಂಡಿ - SRP.

- ಕೋಟೆ : ನಿರ್ಮಾಣ ವಾಚಿ. ಸೇನೆಯ ರಕ್ಷಣೆಗೆ ಕಟ್ಟಿದ ಪ್ರಾಕಾರ. ಬಲವಾದ ಗೋಡೆಯ ಆವರಣ. ದುರ್ಗ, ಗಡ, ಕಿಲ್ಲೆ (ಸಿ. ಅ - ಪು - ೧೪೧).

ತೆಲುಗಿನಲ್ಲಿ - ಕೋಟ, - ದುರ್ಗಂ ಎಂದು ಬಳಕೆಯಲ್ಲಿದೆ.

ಕ > ಗ ಪರಿವರ್ತನೆಯಿಂದ - ಗೋಟೆ - ಗೋಟ ಎಂದು ಬಳಕೆಯಾಗಿದೆ.

ಉದಾ : ತೆಕ್ಕಲಕೋಟೆ - SRP

ಬೊಳುಗೋಟ - ADN

ಸಂಜೀವರಾಯನ ಕೋಟೆ - BLR

- ಕೋಡು : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಸಂಸ್ಕೃತದ 'ಕೂಟ' ಪದಕ್ಕೆ ಸಮಾನವಾದುದು. ಪರ್ವತ, ಶಿಖರ, ಕೊಂಬು, ಟೊಂಗೆ (ಸಿ. ಅ - ಪು - ೧೪೧): ಕೋಡುಗಲ್ಲು, ಪರ್ವತ (ಕ, ಕ, ಕೋ - ಪು - ೨೧೫)

ಕ > ಗ ಪರಿವರ್ತನೆಯಿಂದ - ಗೋಡು: ಎಂದು ಬಳಕೆಯಾಗುತ್ತದೆ. - ಗೋಡು = ತುದಿ, ಅಂಚು (ವಾಗರ್ಥ - ಪು - ೧೮). ಉದಾ: ಕುರುಗೋಡು - BLR

ಬಸರಕೋಡು - BLR

ಬಸರಕೋಡು - ADN

- ಗದ್ದೆ : ಕ್ಷೇತ್ರವಾಚಕ. ಭತ್ತ ಬೆಳೆಯುವ ನೆಲ, ಹೊಲ (ಸಿ. ಅ - ಪು - ೧೫೩)

ತೆಲುಗಿನಲ್ಲಿ 'ಮಾಗಾನಿ' ಎಂಬ ಪದಕ್ಕೆ ಸಮಾನವಾದುದು. ಉದಾ: ಸಿದರಗದ್ದೆ.

- ಗಿರಿ : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಬೆಟ್ಟ, ಪರ್ವತ (ಸಿ. ಅ - ಪು - ೧೬೧)

ಗಿರಿ (ಸಂಸ್ಕೃತ). ತೆಲುಗಿನಲ್ಲಿ ಗಿರಿ, ಶಿಖರಂ ಎಂದು ಬಳಕೆಯಾಗಿದೆ.

ಉದಾ : ಚಿಪ್ಪಗಿರಿ - ALR

ಮಂಡಗಿರಿ - ADN

ಮುಚ್ಚಿಗಿರಿ - ADN

- ಗುಡ್ಡ : ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಬೆಟ್ಟ, ದಿನ್ನೆ ಎಂಬರ್ಥವಿದೆ. ತೆಲುಗಿನ 'ಕೊಂಡ' ಪದಕ್ಕೆ ಸಮಾನವಾದುದು. ತೆಲುಗು ಮಾತೃಭಾಷಿಕರು ಕನ್ನಡ 'ಗುಡ್ಡ' ವಾರ್ಗಿಕವನ್ನೊಂದಿದ ಸ್ಥಳನಾಮ ರಚನೆಯನ್ನು 'ಗುಡ್ಡಂ' ಎಂದು 'ಮ' ಕಾರಾಂತ್ಯವಾಗಿ ಉಚ್ಚರಿಸುವುದು

ಗಡಿಭಾಗದಲ್ಲಿ ಕಂಡು ಬಂದಿದೆ. ಕುಪ್ಪೆ, ಗುಡ್ಡಗಾಡು, ಕಾಡು, Hillock, a mountain, a hill (ಕ. ನಿ - ೫೮೪) ಎಂಬರ್ಥಗಳಿವೆ. ಉದಾ : ಕರಡಿಗುಡ್ಡಂ - ALR

ದಯ್ಯಾಲಗುಡ್ಡ - ADN

ದೇವರಗುಡ್ಡ - ALR

ಸಜ್ಜಲಗುಡ್ಡ - SRP

ಸಿದ್ಧರಗುಡ್ಡ - BLR

ತೆಲುಗಿನಲ್ಲಿ - ಗುಟ್ಟ ಎಂದೂ ಬಳಸುತ್ತಾರೆ = ಚಿಕ್ಕಬೆಟ್ಟ (ಕ. ನಿ - ಸಂ - ೩ - ೨೫೩೯)

- ಗುರ್ತಿ : ಸಸ್ಯವಾಚಿ. < ಗುತ್ತಿ : ಗೊಂಚಲು, ಗೊನೆ, ಗುಪ್ಪೆ, ಪೊದರು, ಕಂಟಿ

ನೆಲ, ಭೂಮಿ, ಗಡ್ಡೆ. ಒಂದು ಊರಿನ ಹೆಸರು. ಗುತ್ತಿ (ತೆಲುಗು): (ಕ. ನಿ - ಸಂ - ೩ - ೨೫೫೦). ಉದಾ: ಕುಂಡನಗುರ್ತಿ - ADN

ಗುತ್ತಿ - ANT

ಗುತ್ತಿನೂರು - BLR

ಚಂದ್ರಗುತ್ತಿ - ANT

ಮಣೇಕುರ್ತಿ - ALR

- ಗುಡಿ : ನಿರ್ಮಾಣವಾಚಿ. ಸಂಸ್ಕೃತದ 'ಕುಟಿ' ಪದದ ತದ್ಭವ. ಗುಡಿಸಲು, ಮಂಟಪ, ಧ್ವಜ, ಬಾವುಟ, ದೇವಸ್ಥಾನ, ಮಂಡಲ (ಸಿ. ಅ - ಪು - ೧೬೨) ತೆಲುಗಿನಲ್ಲಿಯೂ ಅದೇ ಅರ್ಥದಲ್ಲಿ ಬಳಕೆಯಲ್ಲಿದೆ. ಗುಡಿಸಲು ಎಂಬುದಕ್ಕೆ ಗುಡಿಸೇನು, ಗುಡಿಚೇನು (ತೆಲುಗು) ಸಮಾನ ಪದಗಳು.

ಬೆಟ್ಟದತುದಿ, ಶೃಂಗ, ಮನೆ, ಕುಟೀರವೆಂಬ ಅರ್ಥಗಳಿವೆ. (ಕ. ನಿ - ಸಂ - ೩ - ೨೫೩೪)

ತೆಲುಗಿನಲ್ಲಿ - ಗುಡಿ, - ಕೊಡಿ (ಕ. ನಿ - ಸಂ - ೩ - ೨೫೩೪).

ಉದಾ : ಎರ್ರಗುಡಿ - BLR

ಛತ್ರಗುಡಿ - ALR (ನಿರ್ವಸಿತ)

ಗುಡಿಕಂಬಾಲಿ - ADN

ರೂಪನಗುಡಿ - BLR

- ಗುಂಡು : ಶಿಲಾವಾಚಿ. ವರ್ತುಲ. ಗೋಳಾಕಾರ, ದಪ್ಪವಾಗಿರುವ ಕಲ್ಲು, ದೊಡ್ಡಕಲ್ಲು, ಗುಂಪು, ಸಮೂಹ (ಕ. ನಿ - ಸಂ - ೩ - ೨೫೨೧). ತೆಲುಗು - ಗುಂಡು.

ಉದಾ : ಕಳವಲಗುಂಡು - ADN

- ಗುಂಡಿ : ಜಲವಾಚಿಪದ (ವಾಗರ್ಥ - ಪು - ೭). ಆಳ, ಕುಣಿ, ಕುಳಿ (ಸಿ. ಅ - ಪು - ೧೬೫)

ಮಣ್ಣನ್ನು ತೆಗೆದು ಹಳ್ಳವಾಗಿರುವ ಪ್ರದೇಶ (ಚಾ. ನ. ತಾ. ಸ್ಥ - ೯೨)

ಉದಾ : ಉಬ್ಬಳಗುಂಡಿ

- ಗುಮ್ಮ : ಕೋಟೆಯ ಗೋಡೆಯನ್ನು ಒಡೆಯಲು ಉಪಯೋಗಿಸುತ್ತಿದ್ದ ಒಂದು ಬಗೆಯ ಯಂತ್ರವಿಶೇಷ (ಕ. ನಿ. ಸಂ - ೩ - ೨೫೬೦) ಉದಾ: ಗುಮ್ಮನೂರು.

- ಚರ್ಲ : ಜಲವಾಚಿ. ತೆಲುಗುಪದ. ಕನ್ನಡದ 'ಕೆರೆ' ಪದಕ್ಕೆ ಸಮಾನವಾದುದು. ಚೆರುವು'ಪದದ ಬಹುವಚನ ರೂಪ. ಉದಾ: ನಾಂಚೆರ್ಲ.

- ಚಿಂತ : ಸಸ್ಯವಾಚಿ. ತೆಲುಗು ಪದ. ಮಾಲ ಜಾತಿಯಲ್ಲಿ ಒಂದು ಕುಲನಾಮವಾಗಿಯೂ ಬಳಕೆಯಲ್ಲಿದೆ. (ಸ್ಥಳನಾಮ ಅಧ್ಯಯನಗಳು - ೫೪). ಹುಣಸೇಮರ ಎಂಬರ್ಥವಿದೆ. ಸ್ಥಳನಾಮಗಳಲ್ಲಿ ಪೂರ್ವಪದದಲ್ಲಿ ನಿರ್ದಿಷ್ಟ ಸ್ಥಾನದಲ್ಲಿಯೂ ಬಳಕೆಯಾಗಿದೆ. ಉತ್ತರಪದದಲ್ಲಿ ವಾರ್ಗಿಕ ವಾಗಿಯೂ ಬಳಕೆಯಾಗಿದೆ. ಉದಾ :

ಕೊತ್ತಲಚಿಂತ - SRP

ಚಿಂತಕುಂಟ - ALR

ಚಿಂತಕುಂಟ - ADN

- ಬ್ಯಾಲಚಿಂತ - BLR ಬೇಲ (ಬ್ಯಾಲ) = ಒಂದು ಜಾತಿಯ ಮರ (ಸಿ. ಅ - ೩೧೯)

- ಚೆರುವು : ಜಲವಾಚಿ. ತೆಲುಗು ಪದ. ಜಲಾಶಯ, ಕೆರೆ. ಉದಾ :

ಕಮ್ಮಲಚೆರುವು - ADN

ಮುತ್ಯಾಲ ಚೆರುವು - ANT

- ಚೇಡು < ಸೇಡು. Shrinking: Bending: Contraction, ಎಂಬರ್ಥಗಳನ್ನು ಕಿಟ್ಟೆಲ್ ಕೋಶ ನೀಡಿದೆ. (ಪು. ೨೬೭)

- ಕಮ್ಮಟ < ಕಮ್ಮರಸಾಲೆ. ಬಾಣ, ಆಯುಧ ತಯಾರಿಸುವ ಪ್ರಯೋಗ ಶಾಲೆ (ಲೋಕೋಪಕಾರ - ಪು - ೪೫). ಸಾಲೆ > ಸೇಡು > ಚೇಡು.

ತೆಲುಗಿನಲ್ಲಿಯೂ ಅದೇ ಪದ ಬಳಕೆಯಲ್ಲಿದೆ. ಉದಾ:

ಕಮ್ಮರಚೇಡು - ALR

ಕಮ್ಮರಚೇಡು - BLR

ಕರಿಚೇಡು - SRP

- ಚೇರಿ : ವಾಸ್ತವ್ಯವಾಚಿ. ತಮಿಳಿನ 'ಚೇರಿ' ಪದ ಕನ್ನಡದ 'ಕೇರಿ' ಪದ ಮೂಲತ: ಒಂದೇ ಶಬ್ದಗಳು. ಕನ್ನಡದ ಕೇರಿಗೆ ಇರುವುದಕ್ಕಿಂತ ಹೆಚ್ಚು ಅರ್ಥಗಳು ತಮಿಳಿನ ಚೇರಿಗೆ ಇವೆ. - ಚೇರಿ ಎಂಬುದಕ್ಕೆ ಬೀದಿ, ಮನೆಗಳ ಗುಂಪು, ಹಳ್ಳಿ ಇತ್ಯಾದಿ ಅರ್ಥಗಳು ತಮಿಳು ಕೋಶಗಳಲ್ಲಿವೆ. (ಕೆಲವು ದೇಶನಾಮಗಳು - ಪು - ೩೭)

ಉದಾ: ಮಿಂಚೇರಿ - BLR

ಚೇರಿ ಎಂಬುದನ್ನು ಮಿಂಚು+ಏರಿ ಎಂಬುದಾಗಿ ಜಲವಾಚಿ ಎಂದು ಗೂರುತಿಸಲೂ ಸಾಧ್ಯವಿದೆ. ಕಾರಣ ಒಂದೊಂದು ಗ್ರಾಮನಾಮಗಳು ಈ ಬಗೆಯ ದ್ವಂದ್ವ ಅರ್ಥವನ್ನು ನೀಡುತ್ತವೆ.

- ಛತ್ರ : ವಾಸ್ತವ್ಯವಾಚಿ. ಇದು ಸಂಸ್ಕೃತ ಪದ. ಧರ್ಮಸತ್ರ, ಧರ್ಮಶಾಲೆ ಎಂಬರ್ಥಗಳಿವೆ. ತೆಲುಗಿನಲ್ಲಿ ಸತ್ರ, ಸತ್ರಂ ಎಂದು ಬಳಕೆಯಲ್ಲಿದೆ. ಸ್ಥಳನಾಮದ ನಿರ್ದಿಷ್ಟ ಸ್ಥಾನದಲ್ಲಿಯೂ ಬಳಕೆಯಾಗಿದೆ.

ಉದಾ: ಛತ್ರಗುಡಿ - ALR

- ದೊಣೆ : ಜಲವಾಚಿ. ಬಂಡೆಯ ಮೇಲಿನ ನೀರಕುಳಿ, ಸ್ವಾಭಾವಿಕ ಕೊಳ, ಕೆರೆ, (ಸಿ. ಅ - ಪು - ೨೧೧): ತೆಲುಗಿನಲ್ಲಿ ಇದಕ್ಕೆ ದೊನ, ದೊಣ, ಡೊಣ ಎಂದು ಕರೆಯುತ್ತಾರೆ. ಇದು ಸಂಸ್ಕೃತ 'ದ್ರೋಣಿ'ಯ ತದ್ಭವ ರೂಪ. ಉದಾ : ಅರಗಿನದೊಣ - BLR

ತಂಗರದೊಣ - ALR

ದೊಣೆಕುಂಟೆ - ADN

ನಗರಡೊಣೆ - ALR

ಬೆಳ್ದೊಣೆ - ALR

- ತಾಂಡ : ವಾಸ್ತವ್ಯವಾಚಿ. ಲಂಬಾಣಿ ಸಮುದಾಯದವರ ವಾಸದ ನೆಲೆ. ಲಂಬಾಣಿ ಜನರು ಪ್ರತ್ಯೇಕ ಗುಂಪುಗಳಲ್ಲಿ ವಾಸಿಸುತ್ತಾರೆ. ಅವರ ನೆಲೆಗಳಿಗೆ - ತಾಂಡ, - ತಾಂಡೋ ಎಂದು ಕರೆದುಕೊಂಡಿದ್ದಾರೆ. ಹೆಚ್ಚಾಗಿ ಗ್ರಾಮಗಳ ಪಕ್ಕದಲ್ಲಿ ನಿರ್ಮಿಸಿಕೊಂಡು, ಆ ಗ್ರಾಮದ ಹೆಸರಿನ ಮುಂದೆ 'ತಾಂಡ' ಎಂದು ಕರೆದದ್ದೇ ಕಂಡು ಬರುತ್ತದೆ. ಅಲ್ಲಲ್ಲಿ ಪ್ರತ್ಯೇಕ ಹೆಸರುಗಳೂ ಇವೆ. ಉದಾ: ಗಂಗ್ಯಾನಾಯ್ಕನ ತಾಂಡ - ALR

ಜಾಲೂಬಾಯಿ ತಾಂಡ - ALR

ಹೊಸಪೇಟೆ ತಾಂಡ - ALR

ಹೊನ್ನಳ್ಳಿ ತಾಂಡ - BLR

ಕನ್ನಡದ ಕೊಪ್ಪಲು, ಅಗ್ರಹಾರ ಮಾದರಿಯ ವಿಸ್ತರಣೆಗಳ ಮಾದರಿಯಲ್ಲಿ ಇವು ಕಂಡುಬರುತ್ತವೆ.

- ತೋಟ : ಕ್ಷೇತ್ರವಾಚಕ. ಉದ್ಯಾನ, ಹಿತ್ತಿಲು, ನೆಟ್ಟು ಬೆಳೆಸಿದ ಗಿಡ ಮರಗಳ ಸಮೂಹ (ಸಿ. ಅ - ಪು - ೨೩೯) ಉದಾ : ಕದೇತೋಟ - ADN

ಕೋಗಿಲ ತೋಟ - ALR

ಹಳೇತೋಟ - ೧ - SRP

ಹಳೇತೋಟ - ೨ - SRP

ತೆಲುಗಿನಲ್ಲಿಯೂ 'ತೋಟ, ತೋಟಂ' ಎಂದು ಕರೆಯುತ್ತಾರೆ.

- ದಿನ್ನೆ : ಭೌಗೋಳಿಕ ಲಕ್ಷಣ ಸೂಚಿಸುವ ಪದ. ದಿಬ್ಬ, ತಿಟ್ಟ, ಎತ್ತರದ ಗುಡ್ಡ, ದಿಮ್ಮೆ, ಗುಲ್ಕ, ದಿವ್ವ (ಸಂ) (ಸಿ. ಅ - ಪು - ೨೫೫). ದಕ್ಷಿಣ ಕರ್ನಾಟಕದಲ್ಲಿ ಇದು 'ತಿಟ್ಟು' ಎಂದು ಬಳಕೆಯಾಗುತ್ತದೆ. - ತಿಟ್ಟು = ದಿಣ್ಣೆ, ಏರಿ, ಎತ್ತರವಾದ ಸ್ಥಾನವನ್ನು ಸೂಚಿಸುತ್ತದೆ. (ಸಂ. ಕ. ನಿ - ೪೧).

ತೆಲುಗಿನಲ್ಲಿ '- ದಿನ್ನ' ಎಂದು ಅ' ಕಾರಾಂತ್ಯವಾಗುತ್ತದೆ. ಉದಾ : ಅಗಸಲದಿನ್ನೆ - ADN

ಮೋಟರದಿನ್ನೆ - ADN

ಜರ್ನಲದಿನ್ನೆ - ADN

ಲಿಂಗಲದಿನ್ನ - ADN

ದೊಂಬಲದಿನ್ನೆ - ADN

ವೀರಲದಿನ್ನ - ADN

- ದುರ್ಗ : ನಿರ್ಮಾಣವಾಚಿ. ಸಂಸ್ಕೃತ ಪದ. ಬೆಟ್ಟ, ಕೋಟೆ ಎಂಬರ್ಥಗಳಿವೆ.

ತೆಲುಗಿನಲ್ಲಿ - ದುರ್ಗಂ' ಎಂದು 'ಮ' ಕಾರಾಂತ್ಯವಾಗುತ್ತದೆ. ಉದಾ : ರಾಮದುರ್ಗ - ALR

- ದೊಡ್ಡಿ : ವಾಸ್ತವ್ಯವಾಚಿ. ಹಟ್ಟಿ, ಕೊಟ್ಟಗೆ, ಯಜಮಾನರಿಲ್ಲದಂತಹ ದನ ಕರುಗಳನ್ನು ಕಟ್ಟುವ ಮನೆ. ಮೂಲದ ಮನೆ (ಸಿ. ಅ - ೨೬೬) ತೆಲುಗಿನಲ್ಲಿ ಇದೇ ಅರ್ಥದಲ್ಲಿ ಬಳಕೆಯಲ್ಲಿದೆ.

ಉದಾ : ಕಾಟೇದೊಡ್ಡಿ - ADN

ಕಾಮನದೊಡ್ಡಿ - ADN

ಗುರ್ರಲದೊಡ್ಡಿ - ADN

ಗೋತುಲದೊಡ್ಡಿ - ADN

ಚಿರುಮನದೊಡ್ಡಿ - ADN

ತಿಪ್ಪಲದೊಡ್ಡಿ - ADN

ದಿಬ್ಬನದೊಡ್ಡಿ - ADN

ಬಸಲದೊಡ್ಡಿ - ADN

ಬಾಪುಲದೊಡ್ಡಿ - ADN

- ನಗರ : ವಾಸಸ್ಥಳ ಸೂಚಿ. ಸಂಸ್ಕೃತ ಪದ. ಸಮೀಪದಲ್ಲಿ ಕಾಡು ಇಲ್ಲವೇ ಪರ್ವತ ಇರುವ ಪಟ್ಟಣ, ಶಹರ (ಸಿ. ಅ - ಪು - ೨೭೭). ಮುಖ್ಯವಾಗಿ 'ನಗರ ಅಥವಾ ನಖರ' ವಾಣಿಜ್ಯ ಕೇಂದ್ರಗಳಾಗಿದ್ದವೆಂದು ತಿಳಿಯುತ್ತದೆ. A city, a big town (ಕ. ಕ. ಇ. ನಿ - ೩೯೯). ಸ್ಥಳನಾಮದ ನಿರ್ದಿಷ್ಟ ಸ್ಥಾನದಲ್ಲಿಯೂ ಬಳಕೆಯಾಗಿದೆ. ಉತ್ತರ ಪದದಲ್ಲಿ ವಾರ್ಗಿಕವಾಗಿಯೂ ಬಳಕೆಯಾಗಿದೆ. ಉದಾ : ನಗರದೊಣೆ - ALR

ನಗರೂರು - ALR

ಶ್ರೀರಾಮನಗರ - ALR

- ಪರ್ತಿ : ವರ್ತಿ (ತೆಲುಗು - ಪರ್ತಿ, - ವರ್ತಿ, - ಅರ್ತಿ) (ವಾಗರ್ಥ - ಪು - ೧೯) ಸಂಕೀರ್ಣಪದ.

ಉದಾ : ನಿಡುವರ್ತಿ - ANT

ಪುಟ್ಟಪರ್ತಿ - ANT

ಯಳ್ಳಾರ್ತಿ - ALR

- ಪಲ್ಲಿ/ಪಲ್ಲೆ : ವಾಸ್ತವ್ಯವಾಚಿ. ಪಲ್ಲಿ, ಹಳ್ಳಿ, ಮನೆ, ಗೌಳಿ, (ಸಿ. ಅ - ಪು - ೩೨೪)

ಪಳ್ಳಿ (ಹಳ್ಳಿ) ಗ್ರಾಮ (ಸಿ. ಅ - ಪು - ೩೨೬). ತೆಲುಗಿನಲ್ಲಿ ಪಲ್ಲಿ, ಪಲ್ಲೆ ಎಂದು ಬಳಕೆಯಾಗುತ್ತಿದೆ.

ಉದಾ : ಪಚ್ಚರಪಲ್ಲಿ - ALR

ಪಲ್ಲಿಪಾಡು - ADN

- ಪಾಡು : ಪಾಡ (ಹಾಡ) ಸ್ಥಳ, ಸಂದರ್ಭ, ಚೌಕಟ್ಟು (ಸಿ. ಅ - ಪು - ೩೨೯) - ವಾಡ - ವಾಡಿ, - ಬಾಡ ಇವುಗಳ ಮೂಲರೂಪ ಪಾಠ. ಸಣ್ಣ ಊರು ಎಂಬ ಅರ್ಥವೂ ಇದೆ. A settlement, a hamlet, village, (ಕಿ. ನಿ - ೯೬೮), a division of the suburam portion of a city (ಕಿ. ನಿ - ೧೩೮೯). ಉದಾ : ದೇಗುಲಪಾಡು - ALR

ಪಲ್ಲಿಪಾಡು - ADN

- ಪುರ/ಪುರಿ : ವಾಸ್ತವ್ಯವಾಚಿ ಪದ. ಸಂಸ್ಕೃತ ಪದ. ಪಟ್ಟಣ, ಮನೆ, ನಗರ, ನದಿ, ಕಾಲುವೆ (ಸಿ. ಅ - ಪು - ೩೪೦): It is used vidly in all ports of India. In all Indian languages or of all genaric of sanscrit. It is used to mean simply a village or settlement. (S.V.N.M.D. by- D.J. Gow):

ತೆಲುಗಿನಲ್ಲಿ 'ಮ' ಕಾರಾಂತ್ಯವಾಗಿ 'ಪುರಂ' ಎಂದು ಬಳಕೆಯಾಗುತ್ತದೆ.

- ಅವರ, - ವರ, - ವಾರ, - ಪೂರ್ (ವಾಗರ್ಥ - ಪು - ೧೬)

ಉದಾ :

| | | | |
|---|---|---|---|
| ಅಮರಾಪುರ | - BLR | ಪರ್ವತಾಪುರಂ | - ADN |
| ಅಮೃತಾಪುರ | - ALR | ಬಾಪುರಂ | - ADN |
| ಕಾಜಿಪುರ | - ALR | ಬೊಮ್ಮಲಾಪುರಂ | - ADN |
| ಕೊಂಡಾಪುರಂ | - ADN | ವಿರುಪಾಪುರಂ | - ALR |
| ಜೋಹರಾಪುರ | - ALR | ವೆಂಗಲಾಪುರಂ | - ADN |
| ಢಣಾಪುರ | - ADN | ಸಿರಿಗಾಪುರಂ | - ALR |
| ನಾಗಲಾಪುರ | - BLR | ಸಿದ್ದಾಪುರಂ | - ALR |
| ನಾರಾಯಣಪುರ | - ADN | ಸುಲ್ತಾನಪುರಂ | - ADN |

- ಪಟ್ಟಣ : ವಾಸ್ತವ್ಯವಾಚಿ. (ಪತ್ತನ), ಸಣ್ಣನಗರ, ಪುರ (ಸಿ. ಅ - ಪು - ೩೧೧)

ತೆಲುಗು ಅದೇ ಪದವನ್ನು ಬಳಸಿಕೊಂಡಿದೆ. ಉದಾ : ಚೆನ್ನ ಪಟ್ಟಣ - BLR

ಪಟ್ಟಣ ಸೆರಗು - BLR

- ಬಂಡೆ : ಶಿಲಾವಾಚಿ. ಅರೆಕಲ್ಲು, ಶಿಲೆ (ಸಿ. ಅ - ಪು - ೩೭೫), ತೆಲುಗಿನಲ್ಲಿ 'ಬಂಡ' ಎಂದು ಬಳಕೆಯಾಗುತ್ತದೆ. ಉದಾ : ಅರ್ಲೇಬಂಡೆ - ADN

ತ್ಸಾಕಿಬಂಡ - ADN

ಪೀಸಲಬಂಡ - ADN

ಶಂಕರಬಂಡೆ - BLR, ADN

- ಬಾವಿ : ಜಲವಾಚಿಪದ. ವಾಪಿ (ಸಂಸ್ಕೃತ) ಕೃತಕ ನೀರಿನ ಆಸರೆ (ಸಿ. ಅ - ಪು - ೩೭೯)

ಉದಾ : ಕಲ್ಲುಬಾವಿ - ADN

ಓರಬಾವಿ - ADN

ಗೋನಬಾವಿ - ADN

- ಬೀಡು : ವಾಸ್ತವ್ಯವಾಚಿ. ಮನೆ, ಬಿಡಾರ, ಶಿಬಿರ, ಪಾಳೆಯ, ರಾಶಿ, ಸಮೂಹ (ಸಿ. ಅ - ಪು - ೩೮೪), ವಾಸಸ್ಥಳ, ಆಶ್ರಯಮನೆ, ದೇವನಿರುವ ಸ್ಥಳ (ಚಾ, ನ, ತಾ, ಸ್ಥ - ೧೫೯). ತೆಲುಗು ಮಾತೃಭಾಷಿಕರಲ್ಲಿ ಇದು - ಬೀಡು, - ಬೀಟು (ಡ > ಟ) ಎಂದು ಉಚ್ಚರಿಸಲ್ಪಡುತ್ತದೆ. ನಿಷ್ಪ್ರಯೋಜಕ ಭೂಮಿ, ಸಾಗುವಳಿ ಇಲ್ಲದ ಭೂಮಿ, ಬಂಜರು ನೆಲ (ಕ. ನಿ. ಸಂ - ೭ - ೬೫೦೮) ತೆಲುಗು - ವೀಡು.

ಉದಾ : ಹುಳೇಬೀಡು - ALR

- ಬೆಂಚಿ : ಜಲವಾಚಿ. - ಬೆಂಚೆ = ಸಣ್ಣಹೊಂಡ (ವಾಗರ್ಥ - ಪು - ೧೭) ಸಣ್ಣ ಸರೋವರ, ಗುಮ್ಮಿ, ನೀರಹೊಂಡ, ಕುಂಟೆ (ಸಿ. ಅ - ಪು - ೩೯೦). ತೆಲುಗಿನಲ್ಲಿ - ವೆಂಚ ಎಂದು ಬಳಕೆಯಾಗುತ್ತದೆ. (ಕ. ನಿ. ಸಂ - ೭ - ೬೫೫೭) ಉದಾ : ಏಳುಬೆಂಚಿ - BLR

ಜಾಲಿ ಬೆಂಚಿ - BLR

ಗಡಿಭಾಗದಲ್ಲಿ ಬೆಂಚಿ ಎಂಬುದು ಶಿಲಾವಾಚಿಯಾಗಿ ಬಳಕೆಯಾಗುತ್ತದೆ. ಆದರೆ ಬೆಂಚಿ ಎಂಬುದನ್ನು ಗಡಿಭಾಗದ ಆಡುನುಡಿಯಲ್ಲಿ ಇಂದು ಜಲವಾಚಿಯಾಗಿ ಬಳಸುತ್ತಿರುವುದು ಕಂಡುಬರುವುದಿಲ್ಲ. ಆದ್ದರಿಂದ ಇದು ಶಿಲಾವಾಚಿಯೆಂದೂ ಪ್ರಾದೇಶಿಕವಾಗಿ ಅರ್ಥಪಡೆದು ಕೊಳ್ಳುವ ಸಾಧ್ಯತೆಯಿದೆ.

- ಬೆಟ್ಟ : ಎತ್ತರವಾದ ಸ್ಥಳ, ಪ್ರದೇಶ, ಗುಡ್ಡ, ಪರ್ವತ - ಕೊಂಡ (ತೆಲುಗು)

ಉದಾ : ದೇವರಬೆಟ್ಟ - ADN

ಪೀಕಲ ಬೆಟ್ಟ - ADN

ಹೆಬ್ಬೆಟ್ಟ - ALR

- ಮಂಡಿ : ಮೊಣಕಾಲು, ಅಂಗಡಿ, ಗೋದಾಮು, ಮಳಿಗೆ, ಬಾಗಿದ, (ಸಿ. ಅ - ಪು - ೪೧೭) ಭಾರಿ ಪ್ರಮಾಣದ ವ್ಯಾಪಾರ ನಡೆಯುವ ಸ್ಥಳ. ಸಗಟು ವ್ಯಾಪಾರದ ಅಂಗಡಿ. ಒಂದು ಊರಿನ ಹೆಸರು (ಮಂಡಿಕಲ್ ) (ಕ. ನಿ - ಸಂ - ೭ - ೬೮೨೩). ಇದು ಹಿಂದಿಯಲ್ಲಿ 'ಮಂಡೀ' ಎಂದು ಬಳಕೆಯಾಗುತ್ತದೆ.

ಉದಾ : ತೊಲಮಂಡಿ - BLR

- ಮಿದ್ದಿ : ತೆಲುಗು ಪದ. ಛಾವಣಿ, ಮಾಳಿಗೆ, ದಿನ್ನೆ, ಎತ್ತರದ ಸ್ಥಳ ಎಂಬರ್ಥಗಳಿವೆ. ಕನ್ನಡದಲ್ಲಿ ಹಿಂದೆ ಬಳಕೆಯಾಗುತ್ತಿದ್ದ ಪದ (ಕ. ನಿ. ಸಂ - ೭, ೭೧೪೪).

ಉದಾ : ಒಂಟಿಮಿದ್ದಿ - ADN

- ಮೊಳ : ಇದು ಬಹುಶಃ - ಮಾಳ ಇದ್ದಿರಬೇಕು. - ಮಾಳ = ಗುಡಿಸಲು, ಉಪ್ಪಿನ ಆಗರ, ಬಂಡಿಯ ನಿಲ್ದಾಣ (ಸಿ. ಅ. ಪು - ೪೨೪). ಬಯಲು ಎಂಬ ಅರ್ಥವೂ ಇದೆ (ಗೋಮಾಳ).

ಉದಾ : ಉಪ್ಪಾರಮಾಳ - ALR (ನಿರ್ವಸಿತ)

ಸಿಡಿಗಿನಮೊಳ (ಮಾಳ) - ALR

- ರಾಶಿ : ರಾಸಿ (ದ್ಭ): ಗುಪ್ಪೆ, ಸಮೂಹ, ನಕ್ಷತ್ರಗಳ ಒಂದು ಮನೆ (ಸಿ. ಅ - ಪು - ೪೫೭) ರಾಸಿ, ಕುಪ್ಪ (ತೆಲುಗು)

ಉದಾ : ಜೋಳದರಾಶಿ - BLR

- ವರ, - ವಾರ : - ಪುರ: ಉದಾ : ಕಾಮವರಂ - ADN

ಶ್ರೀವಾರ - BLR

ಸಿರಿವಾರ - BLR

- ವಾಡಿ : - ವಾಡ, - ವಾಡಿ, - ವಾಡ್ , ವಾಡೆ, ಆವಾರ, ಚಿಕ್ಕಕಾಡು, ಹಾಡಿ, ಊರಿನ ವಿಭಾಗ. (ಸಿ. ಅ- ಪು - ೪೭೫) ವಾಡೆ' ಇದು ಮರಾಠಿ ಪದ. ತೆಲುಗಿನಲ್ಲಿ - ವಾಡ ಎಂಬರ್ಥದಲ್ಲಿ ಬಳಕೆಯಾಗುತ್ತದೆ. ತೆಲುಗಿನ - ವಾಡ = ಬೀದಿ, ಓಣಿ.

ಉದಾ : ಬಾಗವಾಡಿ - SRP

ಹಾಡಿ ಮತ್ತು ವಾಡಿಗಳು ಪ್ರಾಚೀನ ಜನಾಂಗಗಳ ನೆಲೆಗಳೆಂದು ಶಂಬಾ ಅಭಿಪ್ರಾಯಪಡುತ್ತಾರೆ. ಕಾರಣ ಗಡಿಭಾಗದ ವಾಡಿಗಳು ಪ್ರಾಚೀನ ವಾಸ್ತವ್ಯವನ್ನು ನಿರ್ದೇಶಿಸುತ್ತವೆ.

- ವಾಕಿಲಿ/ವಾಗಿಲು : - ಬಾಗಿಲು, - ವಾಗಿಲು ತೆಲುಗಿನಲ್ಲಿ - ವಾಕಿಲಿ, - ವಾಗಿಲಿ ಎಂಬ ರೂಪಗಳಿವೆ.

ಉದಾ: ವಂದವಾಗಿಲಿ - ALR

- ವಾಯಿ/ವಾಯ್ : ಅರ್ಥಸ್ಪಷ್ಟವಿಲ್ಲ. ಬಹುಶಃ ಬ > ವ ಪರಿವರ್ತನೆಯಾಗಿರಬೇಕು. ಬಾಯ್ , ಬಾವಿ ಎಂಬರ್ಥವಿರಬೇಕು.

ಉದಾ : ಓರುವಾಯಿ - ADN ಸುಳುವಾಯಿ - ALR

ಈ ಉದಾಹರಣೆಗಳಲ್ಲಿ ಒಂದು + ಬಾವಿ = ಓರುವಾಯಿ

ಸುಳಿ + ಬಾವಿ = ಸುಳುವಾಯಿ ಎಂದು ಇದ್ದಿರಬಹುದು.

- ವಾನಿ : ಜಲವಾಚಿ, ನದಿ, ದೊಡ್ಡಹಳ್ಳ (ಸ್ಥಳನಾಮ ಅಧ್ಯಯನಗಳು - ಪು - ೩೭).

ಉದಾ : ಆದವಾನಿ - ADN

- ವೇಣಿ : - ವಾಣಿ, - ವೇಣಿ, - ಓಣಿ, - ವಾನಿ ಇವು ಜಲವಾಚಿಗಳು. ನದಿ, ದೊಡ್ಡಹಳ್ಳ (ಸ್ಥಳನಾಮ ಅಧ್ಯಯನಗಳು - ೩೭)

ಉದಾ : ವತ್ತುಮುರುವಣಿ - SRP

ವಣೆನೂರು - BLR

ವೇಣಿ ವೀರಾಪುರ - BLR

- ಸಮುದ್ರ : ಜಲವಾಚಿ. ಸಂಸ್ಕೃತಪದ. ಕಡಲು, ಸಾಗರ, ಮುದ್ರೆಯೊತ್ತಿದ (ಸಿ. ಅ - ಪು - ೫೧೦) ತೆಲುಗಿನಲ್ಲಿ 'ಸಮುದ್ರಂ' ಎಂದು 'ಮ' ಕಾರಾಂತ್ಯವಾಗಿ ಬಳಕೆಯಾಗುತ್ತದೆ. ಬಯಲು ಪರಿಸರದಲ್ಲಿ ಸಮುದ್ರವಿಲ್ಲದಿದ್ದರೂ ಈ ಬಗೆಯ ನಾಮನಿರ್ದೇಶನವಿದೆ. ಇದು ಸಂಸ್ಕೃತ ಭಾಷೆಯ ಪ್ರಭಾವವಿರಬೇಕು.

ಉದಾ : ಸೋಮಸಮುದ್ರ - BLR

- ಸೆರಗು : ತೀರದ, ಕೊನೆಯ, ಅಂಚಿನ ಎಂಬರ್ಥಗಳಿವೆ.

ಉದಾ : ಪಟ್ಟಣಸೆರಗು - BLR

- ಸಂತೆ : ವಾಣಿಜ್ಯ ಕೇಂದ್ರ, ವ್ಯಾಪಾರ ನಡೆಯುವ ಸ್ಥಳ, ಪಟ್ಟಣ, - ಸಂತೆ ಸ್ಥಳನಾಮ ನಿರ್ದಿಷ್ಟ ಸ್ಥಾನದಲ್ಲಿಬಳಕೆಯಾಗಿದೆ.

ಉದಾ : ಸಂತೇ ಕೂಡ್ಲೂರು - ADN

- ಹಟ್ಟಿ : ಕೊಟ್ಟಿಗೆ, ದನದದೊಡ್ಡಿ, ಗೋಶಾಲೆ, ಸಂತೆ (ಸಿ. ಅ - ಪು - ೫೪೧).

ಸ್ಥಳನಾಮಗಳ ಬಳಕೆಯಲ್ಲಿ ಹ > ವ: ಹ > ನ ಪರಿವರ್ತನೆಯಿಂದ - ವಟ್ಟಿ - ನಟ್ಟಿ ಎಂಬ ರೂಪಗಳು ಕಂಡು ಬರುತ್ತವೆ. ಉದಾ :

| | |
|---|---|
| ನಿಟ್ರವಟ್ಟಿ | - ALR |
| ಬಂಡ್ರಟ್ಟಿ | - ADN |
| ಬಾದನಹಟ್ಟಿ | - BLR |
| ಮಲ್ಲನಹಟ್ಟಿ | - ALR |
| ವಡ್ಡರಹಟ್ಟಿ | - BLR |

- ಹಳ್ಳಿ : ವಾಸ್ತವ್ಯವಾಚಿ. ಪಲ್ಲೀ (ಸಂಸ್ಕೃತ) - (ಪಲ್ಲಿ, - ಅಳಿ, - ಳಿ, ತೆಲುಗು ಪ್ರಭಾವದ ಪ್ರದೇಶಗಳಲ್ಲಿ. ವಾಗರ್ಥ - ಪು - ೧೬)

ಉದಾ :

| | | | |
|---|---|---|---|
| ಉಪ್ಪಾರ ಹೊಸಳ್ಳಿ | - SRP | ಬಸರಹಳ್ಳಿ | - SRP |
| ಎಡವಳ್ಳಿ | - ADN | ಬೀರಳ್ಳಿ | - BLR |
| ಗೊಲ್ಲನಾಗೇನಹಳ್ಳಿ | - BLR | ಮೊಲಗಹಳ್ಳಿ | - ALR |
| ತಾಂಬ್ರಹಳ್ಳಿ | - HBH | ಸಿದ್ದಮ್ಮನಹಳ್ಳಿ | - BLR |
| ಪರಮದೇವನಹಳ್ಳಿ | - BLR | ಹಚ್ಚೊಳ್ಳಿ | - SRP |

- ಹಾಳ್ : ವಾಸ್ತವ್ಯವಾಚಿ. ಭೂಮಿ, ಗದ್ದೆ, ದತ್ತಿ, ಹಾನಿ, ಕೆಟ್ಟ, ಬಂಜರು (ಸಿ. ಅ - ೫೪೯)

ಇದು - ಬಾಳ (- ವಾಳ - ವಾಲ: - ಆಳು - ಹಾಳು) < ಪಾರ್ = Open space, uncultivated land) ಎಂಬುದಾಗಿಯೂ ಬಳಕೆಯಲ್ಲಿದೆ.

ಉದಾ :

| | | | |
|---|---|---|---|
| ಕಲ್ಲುಕುಟಿಗನಹಾಳ್ | - BLR | ಚನಹಾಳ್ | - BLR |
| ಕ್ಯಾದಿಗಿಹಾಳ್ | - SRP | ಚಿಟಿಗಿನಹಾಳ್ | - SRP |
| ಕುಡುದ್ರಹಾಳ್ | - SRP | ಜಾಲಿಹಾಳ್ | - BLR |
| ಗಜ್ಜಿಗನಹಾಳ್ | - SRP | ಪತ್ರಬೂದಿಹಾಳ್ | - BLR |
| ಗುಬ್ಬಿಹಾಳ್ | - BLR | ಬೊಮ್ಮನಹಾಳ್ | - BLR |
| ಗೆಣಕಿಹಾಳ್ | - BLR, SRP | ಮಂಜನಾಳು | - BLR |
| ಗೊನೆಹಾಳ್ | - BLR | ರಾವ್ಯಾಳು | - SRP |
| ಗೊಸಬಾಳ್ | - SRP | | |

- ಹ್ಯಾಟೆ : ಇದು ಹೆಣ್ಣುಕೋಳಿ ಎಂಬರ್ಥ ಕೊಡುತ್ತದೆ. ಬಹುಶಃ 'ಹಟ್ಟಿ' ಯ ಸವೆದ ರೂಪವಾಗಿರಬೇಕು. ಚಿದಾನಂದಾವಧೂತರ ಚರಿತ್ರೆಯಲ್ಲಿ ಎರಡು ಉದಾಹರಣೆಗಳಿವೆ.

ಉದಾ : ಹಿರೇಹಟ್ಟಿ - ALR

ಚಿಕ್ಕಹಟ್ಟಿ - ALR

ಇಂದು ಈ ಗ್ರಾಮನಾಮಗಳು ರೆವಿನ್ಯೂ ದಾಖಲೆಯಲ್ಲಿ ಪೆದ್ದಹ್ಯಾಟ ಮತ್ತು ಚಿನ್ನಹ್ಯಾಟ ಎಂಬ ತೆಲುಗಿನ ರೂಪವನ್ನು ಪಡೆದುಕೊಂಡಿವೆ. ಭಾಷಾವಾರು ಪ್ರಾಂತ್ಯ ರಚನೋತ್ತರ ಅವಧಿಯಲ್ಲಿ ಈ ಬಗೆಯ ಬದಲಾವಣೆಗಳು ಗಡಿಭಾಗದಲ್ಲಿ ನಡೆದಿರುವುದು ಕಂಡುಬರುತ್ತವೆ. ಕನ್ನಡಿಗರ ಆಡುನುಡಿಯಲ್ಲಿ - ಹಿರೇಹ್ಯಾಟೆ, ಚಿಕ್ಕಹ್ಯಾಟೆ ಎಂಬ ರೂಪಗಳಿಂದ ಉಚ್ಚರಿಸಲ್ಪಡುತ್ತಿವೆ.

- ಹೊಳಲು : ಪಟ್ಟಣ, ಚಹರೆ (ಸಿ. ಆ - ಪು - ೫೫೯). - ಓಲ್ ಹಳಗನ್ನಡದ ಪೊಟಲ್. - ಹೊಳಲು ದಕ್ಷಿಣ ಕರ್ನಾಟಕದಲ್ಲಿ. ಉತ್ತರಕರ್ನಾಟಕದಲ್ಲಿ - ಓಲ್. (ವಾಗರ್ಥ - ಪು - ೧೬). ಸ್ಥಳನಾಮದ ನಿರ್ದಿಷ್ಟ ಸ್ಥಾನದಲ್ಲಿ ಇಲ್ಲಿ ಬಳಕೆಗೊಂಡಿದೆ.

ಉದಾ : ಹೊಳಲುಗುಂದೆ - ALR

### ೪.೩. ಸಂಕೀರ್ಣ ವಾರ್ಗಿಕಗಳು

ಗ್ರಾಮನಾಮ ಹಾಗೂ ಸ್ಥಳನಾಮಗಳ ಉತ್ತರ ಪದವಾಗಿ ಕಂಡು ಬರುವ ಅನೇಕ ರಚನೆಗಳಿಗೆ ಅರ್ಥ ಅಸ್ಪಷ್ಟವಾಗಿರುವುದು ತಿಳಿಯುತ್ತದೆ. ಅವುಗಳ ನಿಷ್ಪತ್ತಿ, ಅರ್ಥಗಳನ್ನು ನಿರ್ಧರಿಸುವುದು ಕಷ್ಟಕರವಾಗಿದೆ. ಇಂತಹ ರಚನೆಗಳು ಹುಟ್ಟಿಕೊಂಡ ಬಗೆಯನ್ನು ಗುರುತಿಸಲು ಈವರೆಗೆ ನಡೆದ ಸಂಶೋಧನೆಗಳು ಫಲಿತ ನೀಡಿಲ್ಲ. ಭಾಷಿಕ ಘಟಕಗಳಿಗೆ ಕಾಲಾಂತರದಲ್ಲಿ ಉಂಟಾದ ಈ ಬಗೆಯ ಸವಕಳಿ ರೂಪಗಳನ್ನು ಅವುಗಳ ಮೂಲ ರೂಪಕ್ಕೆ ತರುವಲ್ಲಿ ಭಾಷಾಶಾಸ್ತ್ರೀಯ ಅಧ್ಯಯನ ತೀವ್ರವಾದ ಪ್ರಯೋಗಕ್ಕೆ ಒಳಪಡಿಸಬೇಕಾಗಿದೆ. ಸ್ಥಳನಾಮಗಳ ಮೂಲಕ ಅಧ್ಯಯನ ಮಾಡಿದ ಅಧ್ಯಯನಕಾರರು ಕೆಲವು ವರ್ಗೀಕರಣ ಮಾಡಲಾಗದ ರೂಪಗಳನ್ನು ಸಂಕೀರ್ಣವೆಂದು ಪರಿಗಣಿಸಿದ್ದಾರೆ. ಅಂತಹ ರಚನೆಗಳು ಗಡಿ ಆಂಧ್ರ - ಕರ್ನಾಟಕದಲ್ಲಿಯೂ ದೊರೆಯುತ್ತವೆ.

ಡಾ.ಎಂ.ಚಿದಾನಂದಮೂರ್ತಿಯವರು (ವಾಗರ್ಥ - ಪು - ೧೯) ಸಂಕೀರ್ಣ ವಾರ್ಗಿಕಗಳೆಂದು ನೀಡಿದ ಪಟ್ಟಿಗೆ ಇನ್ನೂ ಕೆಲವು ಸೇರಿಸಿ ಪಟ್ಟಿಮಾಡಿ, ಅವುಗಳಿಗೆ ಗಡಿಭಾಗದ ಉದಾಹರಣೆಗಳನ್ನು ಕೊಡಲಾಗಿದೆ.

- ಕೆ (- ಕಿ) : ಉದಾ : ಕಾತರ/ಕಿ/ : (ಕಾತರಕಿ)

ನೆರಣ/ಕಿ/ : (ನೆರಣಕಿ, ನೆರಣಿಕೆ)

- ಗೆ (- ಗಿ) : ಉದಾ : ಕೋಸಿ/ಗಿ/ ಮುಂಡ್ರ/ಗಿ/

ಚಾ/ಗಿ/ ಯರಂಗಳಿ/ಗಿ/

ನಾಡಂ/ಗಿ/ ಹಿರೇ ಹದಳಿ/ಗಿ/

ನೆಲ ಕೋಸ/ಗಿ/

ಎಂಬ ಮೇಲಿನ ರಚನೆಗಳಲ್ಲಿ ಉತ್ತರ ಪದದಲ್ಲಿ ಕಂಡು ಬರುವ - ಕಿ, - ಗಿ ಗಳು ಏಕಾಕ್ಷರವಾಗಿ ನಿಲ್ಲುತ್ತವೆ. ಬಹುಶಃ ಇವುಗಳು ಸವಕಳಿ ರೂಪಗಳಾಗಿ ಪೂರ್ವಪದದಲ್ಲಿ ಲೀನವಾಗಿರಬಹುದು. ಆದರೆ ಪದವನ್ನು ಬಿಡಿಸಿದರೆ ಈ ಬಗೆಯ ಅರ್ಥಸ್ಪಷ್ಟತೆಯು ಉಳಿಯುವುದಿಲ್ಲ. - ಅಂಗಿ ಎಂಬುದನ್ನು ಡಾ. ಎಂ.ನಂಜಯ್ಯನವರು ಸ್ಥಳನಾಮದ ವಾರ್ಗಿಕ ಘಟಕವೆಂದು ಸೂಚಿಸುತ್ತಾರೆ. ಆದರೆ ಅಂಗಿ ಎಂಬುದು ಯಾವ ಅರ್ಥವನ್ನು ನೀಡುತ್ತದೆಂಬುದು ಸ್ಪಷ್ಟವಾಗುವುದಿಲ್ಲ.

ಬಹುಶಃ ಕಾತರು + ಕೆಯ್

ನೆರಣೆ + ಕೆಯ್

ಮುಂಡರು + ಗೆಯ್

ಎಂಬ ರೂಪಗಳ ಸವಕಳಿಗಳಾಗಿರುವ ಸಾಧ್ಯತೆಯಿದೆ. - ಕೆಯ್ , - ಗೆಯ್ ಎಂಬ ರೂಪಗಳು ಭೂಮಿ, ನೆಲ ಎಂಬ ಅರ್ಥವನ್ನು ನೀಡುತ್ತವೆ. (ಎಂ.ಎಂ.ಕಲ್ಬುರ್ಗಿ - ನಾಮವಿಜ್ಞಾನ)

- ಊಡಿ : ಉದಾ : ನೆಲ್ಲುಡಿ : ಉಡಿ : ಊಡಿ < ಹುಡೇವು ? ಇರಬಹುದೇ ಎಂಬ ಅನುಮಾನವಿದೆ.
ನೆಲ್ + ಉಡಿ

- ಣೆ : ಉದಾ : ಕರಣೆ: ಎಂಬ ಸ್ಥಳನಾಮದ ಉತ್ತರ ಪದದಲ್ಲಿರುವ 'ಣೆ' ಎಂಬುದು ಯಾವ ರಚನೆಯ ಸವಕಳಿ (Relics) ಎಂಬುದು ಸ್ಪಷ್ಟವಿಲ್ಲ. ಕರ್ + ಅಣೆ ಎಂದು ಬಿಡಿಸಬಹುದೇ ಎಂಬ ಅನುಮಾನಗಳಿವೆ.

- ತಿ : ಉದಾ : ಕಪತಿ

- ನಿ : ಉದಾ : ಕುಡುತಿನಿ

- ಪಿ : ಉದಾ : ಯಳಪಿ

- ಯ : ಉದಾ : ಗೂಳ್ಯ

- ರೆ (- ರಿ) : ಉದಾ : ಆಸ್ಪರಿ
ಮದಿರಿ - ೧
ಮದಿರೆ - ೨

- ವಿ : ಉದಾ : ಇಸ್ವಿ
ರಾರಾವಿ
ನಡವಿ
ಹಾಲ್ವಿ
ಥೋವಿ

- ಳಿ : ಉದಾ : ಚಿಗಳಿ, ಚಿಕ್ಕ + ಹಳ್ಳಿ = ಚಿಗಳ್ಳಿ > ಚಿಗಳಿ ಯಾಗಿರಬಹುದು.

ಮೇಲಿನ ಕೆಲವು ಸ್ಥಳನಾಮಗಳ ಉತ್ತರಪದದಲ್ಲಿ ಅರ್ಥ ಕ್ಲಿಷ್ಟತೆಯಿದೆ. ಆದರೂ ಅವು ಮೇಲೆ ಹೇಳಿದಂತೆ ಸ್ವತಂತ್ರ ಅಕ್ಷರಗಳಾಗಿರಲು ಸಾಧ್ಯವಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಅವು ಪೂರ್ವ ಪದದೊಡನೆ ಸವಕಳಿ (Relics) ರೂಪಗಳಾಗಿರುತ್ತವೆ. ಅಥವಾ ಏಕ ಘಟಕಗಳನ್ನಾಗಿಯೂ ಇವುಗಳನ್ನು ಸ್ವೀಕರಿಸಬಹುದು.

| ಕಪತಿ |

| ಕರಣಿ |

| ಗೂಳ್ಯ |

| ನಡವಿ |

ಹೀಗೆ ಇಡೀ ಪದವನ್ನು ಒಂದೊಂದು ಘಟಕಗಳನ್ನಾಗಿ ಸ್ವೀಕರಿಸಿದಾಗ ಉತ್ತರ ಪದದ ಸಮಸ್ಯೆಯಿರಲಾರದು. ಒಂದೊಮ್ಮೆ ಹಾಗಿದ್ದರೂ ಅವುಗಳನ್ನು ಭಾಷಾ ಅಧ್ಯಯನದಲ್ಲಿ ಇನ್ನೂ ಪ್ರಯೋಗಕ್ಕೆ ಒಳಪಡಿಸುವ ಅಗತ್ಯವಿದೆ.

**೪.೪. ಸ್ಥಳನಾಮಗಳ ಪೂರ್ವಪದದಲ್ಲಿ ವಾರ್ಗಿಕ ರೂಪದ ರಚನೆಗಳು**

ಸ್ಥಳನಾಮಗಳಲ್ಲಿ ವಾರ್ಗಿಕಗಳಾಗಿ (Generics) ಬಳಕೆಯಾಗುವ ಆಕೃತಿಮಾಗಳು ಕೆಲವೊಮ್ಮೆ ನಿರ್ದಿಷ್ಟಗಳಾಗಿ (Spcifics) ಬಳಕೆಯಾಗಿರುವುದು ಕಂಡು ಬರುತ್ತದೆ. ಗಡಿ ಆಂಧ್ರ - ಕರ್ನಾಟಕ ಪ್ರದೇಶದಲ್ಲಿನ ಅಂತಹ ಒಂದು ಮಾದರಿಯನ್ನು ಹೀಗೆ ಪಟ್ಟಿಮಾಡಲಾಗಿದೆ.

| | |
|---|---|
| ಅರೆ + ಕೇರಿ | = ಅರೆಕೇರಿ |
| ಅರೆ + ಕಲ್ಲು | = ಅರೇಕಲ್ಲು |
| ಅರ್ಲೆ + ಬಂಡ | = ಅರ್ಲೇಬಂಡ |
| ಆಲ್ + ಊರು | = ಆಲೂರು |
| ಏರಿ + ಊರು | = ಏರೂರು |
| ಕಲ್ಲು + ಬಾವಿ | = ಕಲ್ಲುಬಾವಿ |
| ಕಲ್ಲು + ಕುಂಟೆ | = ಕಲ್ಲುಕುಂಟೆ |
| ಕಲ್ಲು + ಕಂಬ | = ಕಲ್ಲುಕಂಬ |
| ಕುಪ್ಪ + ಕಲ್ಲು | = ಕುಪ್ಪಗಲ್ಲು |
| ಕೆರೆ + ಕೇರಿ | = ಕೆರೆಕೇರಿ |
| ಕೋಟೆ + ಹಾಳು | = ಕೋಟೆಹಾಳ್ |
| ಗವಿ + ಕಟ್ಟು | = ಗವಿಗಟ್ಟು |
| ಗೌಡ + ಕಲ್ಲು | = ಗೌಡಗಲ್ಲು |
| ಚಿಂತ + ಕುಂಟೆ | = ಚಿಂತಕುಂಟೆ |

| | |
|---|---|
| ಛತ್ರ + ಗುಡಿ | = ಛತ್ರಗುಡಿ |
| ದಿಬ್ಬ + ನ + ದೊಡ್ಡಿ | = ದಿಬ್ಬನದೊಡ್ಡಿ |
| ನಗರ + ಡೊಣೆ | = ನಗರಡೊಣೆ |
| ನಗರ + ಊರು | = ನಗರೂರು |
| ಪಲ್ಲಿ + ಪಾಡು | = ಪಲ್ಲಿಪಾಡು |
| ಪರ್ವತ + ಪುರಂ | = ಪರ್ವತಾಪುರಂ |
| ಪೆಂಡೆ + ಕಲ್ಲು | = ಪೆಂಡೆಕಲ್ಲು |
| ಬಾಡ + ನ + ಹಟ್ಟಿ | = ಬಾಡನಹಟ್ಟಿ |
| ಸಂತೆ + ಕೂಡಲು + ಊರು | = ಸಂತೇಕೂಡ್ಲೂರು. |
| ಹೊಳಲು + ಕುಂದೆ | = ಹೊಳಲುಗುಂದೆ. |

ಮೇಲಿನ ಸ್ಥಳನಾಮಗಳಲ್ಲಿ ಎರಡು ವಾರ್ಗಿಕ ರಚನೆಗಳು ಸೇರಿ ಹೆಸರಾಗಿರುವುದು ಕಂಡುಬರುತ್ತದೆ. ಸ್ಥಳನಾಮಗಳ ಪೂರ್ವಪದದಲ್ಲಿ ನಿರ್ದಿಷ್ಟ ಆಕೃತಿಮವಾಗಿ ಈ ಬಗೆಯ ವಾರ್ಗಿಕ ಆಕೃತಿಮಾಗಳು ಕಾರ್ಯ ನಿರ್ವಹಿಸುತ್ತವೆ. ಆದರೆ ಇವು ಪೂರ್ವಪದದಲ್ಲಿದ್ದಾಗ ವಾರ್ಗಿಕಗಳೆಂದು ಕರೆಯಲ್ಪಡುವುದಿಲ್ಲ. ಆಗ ನಿರ್ದಿಷ್ಟ ಆಕೃತಿಮಾಗಳಾಗಿಯೇ ತಮ್ಮ ಸ್ಥಾನವನ್ನು ನಿರ್ವಹಿಸುತ್ತಿರುತ್ತವೆ. "ದ್ವಂದ್ವ ವಾರ್ಗಿಕ ಆಕೃತಿಮಾಗಳೇ ಹೀಗೆ ಸೇರಿ ಒಂದು ಸ್ಥಳನಾಮವಾದಾಗ ಆ ಪ್ರದೇಶದಲ್ಲಿ ಅವೆರಡರಲ್ಲಿ ಯಾವುದಕ್ಕೆ ಹೆಚ್ಚಿನ ಆವರ್ತನವುಂಟೋ (Freqeency) ಅದು ವಾರ್ಗಿಕದ ಸ್ಥಾನ ಪಡೆಯುತ್ತದೆ." (ವಾಗರ್ಥ - ಪು - ೨೦). ವಾರ್ಗಿಕ ಆಕೃತಿಮಾಗಳೇ ಅನೇಕ ಬಾರಿ ಸ್ವತಂತ್ರ ಸ್ಥಳವಾಚಕಗಳಾಗಿ ಬಳಕೆಯಾಗಿರುವುದು ಕರ್ನಾಟಕದಲ್ಲಿ ಕಂಡುಬರುತ್ತದೆ. ಕುಕ್ಕೆ, ಕೊಪ್ಪ, ಪುರ, ಪಾಳ್ಯ, ಬಾಡ, ಹುರ, ಪಟ್ಟಣ ಮುಂತಾದವು. ಆಂಧ್ರ - ಕರ್ನಾಟಕ ಗಡಿಪ್ರದೇಶದಲ್ಲಿ ಈ ರೀತಿಯ ರಚನೆಗಳು ಕಂಡುಬರುವುದಿಲ್ಲ. ಬದಲಾಗಿ ಏಕ ಘಟಕವಿರುವ (ಕಪತಿ, ಕರಣಿ, ಗೂಳ್ಯ, ಥೋವಿ ಇತ್ಯಾದಿ) ಸ್ಥಳನಾಮಗಳು ಕಂಡು ಬರುತ್ತವೆ.

### ೪.೫. ವಾರ್ಗಿಕಗಳ ಪ್ರಸರಣ

ಗಡಿ ಪ್ರದೇಶದ ಸ್ಥಳನಾಮಗಳಲ್ಲಿ ಬಳಕೆಯಾಗಿರುವ ಸುಮಾರು ಅರವತ್ತೆಂಟು ಬಗೆಯ ವಾರ್ಗಿಕಗಳಲ್ಲಿ, ಅವು ವಿಸ್ತರಿಸಿಕೊಂಡಿರುವ ಪ್ರಮಾಣವನ್ನು ಒಂದು ಪಟ್ಟಿಯ ಮೂಲಕ ಗುರುತಿಸಬಹುದು. ಇಲ್ಲಿ ಹೆಚ್ಚು ಬಳಕೆಗೊಂಡ ವಾರ್ಗಿಕ ಆಕೃತಿಮಾಗಳ ಪ್ರಮಾಣವನ್ನು ಮಾತ್ರ ನೋಡಲಾಗಿದೆ. ಉಳಿದಂತೆ ವಿರಳವಾಗಿ ಬಳಕೆಯಾದ ರಚನೆಗಳಾಗಿವೆ. ಆದವಾನಿ - ಆಲೂರು - ಬಳ್ಳಾರಿ - ಸಿರುಗುಪ್ಪ ಈ ನಾಲ್ಕು ತಾಲ್ಲೂಕುಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಬಳಕೆಗೊಂಡ ವಾರ್ಗಿಕಗಳ ಪಟ್ಟಿ ಹೀಗಿದೆ.

## ೪.೫.೧. ವಾರ್ಗಿಕಗಳ ಪಟ್ಟಿ
(ಭಾಷಾವಾರು)

| ಕನ್ನಡ | ತೆಲುಗು | ಸಂಸ್ಕೃತ | ಸಂಸ್ಕೃತಮೂಲ | ತದ್ಭವರೂಪಗಳು | ಇಂಗ್ಲಿಷ್ | ಮರಾಠಿ | ತಮಿಳು ಮೂಲ |
|---|---|---|---|---|---|---|---|
| ಊರು | ಕುರ್ಕಿ | ಗಿರಿ | ಕಂಬ (ಸ್ತಂಭ) | ಕೊಂಡ (ಕುಂಡ) | ಕಾಲೋನಿ | ವಾಡಿ | ಚೇರಿ |
| ಏರಿ | ಕೊಟ್ಟಾಲ | ಛತ್ರ | ಕೋಡು (ಕೂಟ) | ಗುಡಿ (ಕುಟಿ) | ಕ್ಯಾಂಪು | | |
| ಕಣಿವೆ | ಕೊಂಡ | ದುರ್ಗ | ದಿನ್ನೆ (ದಿವ್ಯ) | ಪಟ್ಟಣ (ಪತ್ತನ) | | | |
| ಕಟ್ಟು | ಗುರ್ತಿ | ನಗರ | ಬಾವಿ (ವಾಪಿ) | ರಾಶಿ (ರಾಸಿ) | | | |
| ಕಲ್ಲು | ಗುಮ್ಮ | ಪುರ | | ವರ/ವಾರ (ಪುರ) | | | |
| ಕುಂದೆ | ಚರ್ಲ | ಪಟ್ಟಣ | | ಸಂತೆ (ಸಂಸ್ಥಾ) | | | |
| ಕುಂಟೆ | ಚಿಂತ | ವೇಣಿ | | ಹಳ್ಳಿ (ಪಲ್ಲೀ) | | | |
| ಕುಪ್ಪೆ | ಚೆರುವು | ಸಮುದ್ರ | | | | | |
| ಕೆರೆ | ಚೇಡು | | | | | | |
| ಕೇರಿ | ಪರ್ತಿ | | | | | | |
| ಕೊಂಡಿ | ಪಲ್ಲಿ | | | | | | |
| ಕೋಟೆ | ಪಾಡು | | | | | | |
| ಕೋಡು | ಮಿದ್ದಿ | | | | | | |
| ಗದ್ದೆ | ವಾಕಿಲಿ | | | | | | |
| ಗುಡ್ಡ | ವಾಯಿ | | | | | | |
| ಗುಡಿ | ವಾನಿ | | | | | | |
| ಗುಂಡು | | | | | | | |
| ಗುಮ್ಮ | | | | | | | |
| ಡೊಣೆ | | | | | | | |
| ತೋಟ | | | | | | | |
| ದಿನ್ನೆ | | | | | | | |
| ದೊಡ್ಡಿ | | | | | | | |
| ಬಾವಿ | | | | | | | |
| ಬೀಡು | | | | | | | |
| ಬೆಂಚಿ | | | | | | | |
| ಬೆಟ್ಟ | | | | | | | |
| ಮಂಡಿ | | | | | | | |
| ಮೊಳ | | | | | | | |
| ಸೆರಗು | | | | | | | |
| ಹಟ್ಟಿ | | | | | | | |
| ಹಳ್ಳಿ | | | | | | | |
| ಹಾಳ್ | | | | | | | |
| ಹ್ಯಾಟೆ | | | | | | | |
| ಹೊಳಲು | | | | | | | |

### ೪.೫.೨. ವಾರ್ಗಿಕಗಳ ಪ್ರಸರಣ

(ಸಂಖ್ಯಾವಾರು)

| ತಾಲ್ಲೂಕುಗಳು | ಊರು | ಹಳ್ಳಿ | ಹಾಳ್ | ಪುರ | ಕಲ್ಲು |
|---|---|---|---|---|---|
| ೧. ಆದವಾನಿ | ೧೧ | ೦೧ | ೦೫ | ೧೭ | ೧೫ |
| ೨. ಆಲೂರು | ೦೯ | ೧೪ | ೧೦ | ೧೧ | ೦೪ |
| ೩. ಬಳ್ಳಾರಿ | ೧೦ | ೧೫ | ೧೫ | ೧೨ | ೧೧ |
| ೪. ಸಿರುಗುಪ್ಪ | ೨೫ | ೦೯ | ೧೫ | ೧೩ | ೦೨ |

ಈ ಪರಿಸರದಲ್ಲಿ ವಾಸಸ್ಥಾನ ಸೂಚಕಗಳಾದ ಊರು, ಹಳ್ಳಿ, ಹಾಳ್, ಪುರ, ಎಂಬ ವಾರ್ಗಿಕಗಳು ಹೆಚ್ಚಾಗಿ ಸ್ಥಳನಾಮಗಳಲ್ಲಿ ಕಂಡುಬರುತ್ತವೆ. - ಊರು ಮತ್ತು - ಹಳ್ಳಿ ಎಂಬ ವಾರ್ಗಿಕಗಳು ಅತಿಹೆಚ್ಚಾಗಿ ಕಂಡುಬಂದಿವೆ. ಅದರಂತೆ ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಹೊಂದಿದ ಕುರುಹಾಗಿ - 'ಕಲ್ಲು' ಎಂಬ ಉತ್ತರಪದವಿರುವ ಸ್ಥಳನಾಮಗಳು ಕಂಡುಬರುತ್ತವೆ. ಉಳಿದಂತೆ ನಿರ್ಮಾಣವಾಚಿಗಳಾದ ಕೆರೆ, ಕುಂಟೆ, ಕೋಟೆ, ಗುಡಿ, ಗೋಡೆ, ದುರ್ಗ, ಬಾವಿ, ಗದ್ದೆ ಮುಂತಾದ ವಾರ್ಗಿಕಗಳ ಬಳಕೆಯಿರುವುದು ಕಂಡು ಬಂದಿದೆ. ಇದರಿಂದ ಅರ್ವಾಚೀನ ಕಾಲಾವಧಿಯ ಸ್ಥಳನಾಮಗಳೆಂದು ಇವುಗಳನ್ನು ಗುರುತಿಸಬಹುದಾಗಿದೆ. ಗುಡ್ಡ, ಬೆಟ್ಟ, ನದಿ, ಕಲ್ಲು, ಸಮುದ್ರ, ಸಾಗರ ಮುಂತಾದ ಪ್ರಕೃತಿವಾಚಿಗಳಿಂದ ಹಾಗು ಹಾಳ್, ಹಳ್ಳಿ, ಪುರ ಮುಂತಾದ ವಾಸ್ತವ್ಯವಾಚಿಗಳಿಂದ ಹೆಸರಿಡುವ ಪ್ರಾಥಮಿಕ ಹಂತವನ್ನು ಗುರುತಿಸಿಕೊಂಡು ಪ್ರಾಚೀನ ಜನಜೀವನದ ಇತಿಹಾಸ, ಸಂಸ್ಕೃತಿಯನ್ನು ಈ ಮೂಲಕ ತಿಳಿಯಲು ಸಾಧ್ಯವಾಗುತ್ತದೆ. ನಿರ್ಮಾಣವಾಚಿಗಳಿಂದ ಸ್ಥಳನಾಮ ನಿರ್ದೇಶನಗೊಂಡ ಅವಧಿಯನ್ನು ಹೆಸರಿಡುವ ಎರಡನೇ ಹಂತವನ್ನಾಗಿ ಗುರುತಿಸಿಕೊಂಡು ಅರ್ವಾಚೀನ ಸಾಂಸ್ಕೃತಿಕ ಇತಿಹಾಸದ ಚಹರೆಯನ್ನು ಹೇಳಲು ಆಕರಗಳನ್ನಾಗಿ ಬಳಸಿಕೊಳ್ಳಬಹುದು. ಗಡಿಭಾಗದ ಸ್ಥಳನಾಮಗಳಲ್ಲಿ ಹೆಚ್ಚಾಗಿ ಪ್ರಾಚೀನವಾದುವುಗಳಿದ್ದು, ಮತ್ತೆ ಕೆಲವು ಅರ್ವಾಚೀನ ಗ್ರಾಮನಾಮಗಳಿವೆಯೆಂದು ವಾರ್ಗಿಕಗಳ ಮುಖೇನ ಗುರುತಿಸಬಹುದಾಗಿದೆ.

### ೪.೬. ಪ್ರತಿಕರಣ ಸ್ಥಳನಾಮಗಳು (Duplication place names)

ಒಂದೇ ಹೆಸರಿನ ಗ್ರಾಮನಾಮ, ಸ್ಥಳನಾಮಗಳು ಬೇರೆ ಬೇರೆ ಕಡೆಗಳಲ್ಲಿ ಕಂಡು ಬರುತ್ತವೆ. ಇದಕ್ಕೆ ಆಯಾ ಭೌಗೋಳಿಕ ಪರಿಸರ, ಸಮಕಾಲೀನ ಘಟನೆಗಳು, ಆಡಳಿತದ ಪ್ರಭಾವ ಮುಂತಾದುವು ಕಾರಣವಾಗಿರುತ್ತವೆ. ಅದಕ್ಕಿಂತ ಮುಖ್ಯವಾಗಿ ಮೌಖಿಕ ಪರಂಪರೆಯ ವಕ್ತಾರರಾದ ಗ್ರಾಮೀಣ ಜನಸಮುದಾಯಗಳ ನಾಮ ನಿರ್ದೇಶನಾ ನಿಯಮ, ಅವರು ನಂಬಿಕೊಂಡ ಆಚರಣೆ, ಸಂಪ್ರದಾಯ, ದೈವ ಮುಂತಾದುವು ಸ್ಥಳನಾಮ ನಿರ್ದೇಶನವು ಏಕರೀತಿಯಾಗಿ ನಡೆಯಲು ಕಾರಣವಾಗಿರುತ್ತವೆ. ಪ್ರಕೃತಿಯನ್ನು ಸ್ಥಳನಾಮಗಳೊಂದಿಗೆ ಆರೋಪಿಸುವ ಜಾನಪದರು ಹೆಚ್ಚಾಗಿ ಪ್ರಕೃತಿಯ ಚಹರೆಗಳನ್ನು ಪುರಾಣ - ಐತಿಹ್ಯಗಳ ಮೂಲಕ ಹೇಳುತ್ತಾರೆ. ಈ ಹೇಳುವಿಕೆ ಬಹುತೇಕ ಎಲ್ಲಾ ಕಡೆ ಕೆಲವು ಬದಲಾವಣೆಗಳಿಂದ ಏಕ ಮಾದರಿಯಲ್ಲಿರುವುದು ಕಂಡುಬರುತ್ತದೆ. ಇದರಿಂದ ಪ್ರತಿಕರಣ

ಸ್ಥಳನಾಮಗಳು ಹುಟ್ಟಿಕೊಳ್ಳುತ್ತವೆ. ಆಂಧ್ರ - ಕರ್ನಾಟಕ ಗಡಿಭಾಗದಲ್ಲಿಯೂ ಈ ಮಾದರಿಯ ಗ್ರಾಮನಾಮಗಳಿವೆ. ಅವುಗಳ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

ಮಾದರಿ ೧

| ಆಂಧ್ರದಗಡಿಭಾಗ | | ಕರ್ನಾಟಕದಗಡಿಭಾಗ | |
|---|---|---|---|
| ಅಗಸನೂರು | - ADN | ಅಗಸನೂರು | - SRP |
| ಕಗ್ಗಲ್ಲು | - ADN | ಕಗ್ಗಲ್ಲು | - BLR |
| ಕಮ್ಮಾರಚೇಡು | - ALR | ಕಮ್ಮಾರಚೇಡು | - BLR |
| ಬಸರಕೋಡು | - ADN | ಬಸರಕೋಡು | - BLR |
| ಬೆಳಗಲ್ಲು | - ALR | ಬೆಳಗಲ್ಲು | - BLR |
| ಮದಿರೆ | - ADN | ಮದಿರೆ | - BLR |
| ಶಂಕರಬಂಡೆ | - ALR | ಶಂಕರಬಂಡೆ | - BLR |

ಮಾದರಿ ೨

| ಆಂಧ್ರದಗಡಿಭಾಗ | | ಕರ್ನಾಟಕದಗಡಿಭಾಗ | |
|---|---|---|---|
| ಅಂಬೇಡ್ಕರ ನಗರಂ | - ADN | ಅಂಬೇಡ್ಕರ ನಗರ | - BLR |
| ಇಂದಿರಾನಗರಂ | - ADN | ಇಂದಿರಾನಗರ | - BLR |
| ಗಾಂಧಿನಗರಂ | - ALR | ಗಾಂಧಿನಗರ | - BLR |
| ನೇತಾಜಿನಗರಂ | - ADN | ನೇತಾಜಿನಗರ | - SRP |
| ಪಟೇಲ್ ನಗರಂ | - ALR | ಪಟೇಲ್ ನಗರ | - BLR |
| ಬಾಪೂಜಿನಗರಂ | - ALR | ಬಾಪೂಜಿನಗರ | - BLR |
| ವಿವೇಕಾನಂದ ಕಾಲನಿ | - ADN | ವಿವೇಕಾನಂದ ನಗರ | - BLR |

ಮೇಲಿನ ಪಟ್ಟಿಕೆಗಳಲ್ಲಿ ಮಾದರಿ ೧ ರಲ್ಲಿ ಆಂಧ್ರದ ಗಡಿಭಾಗ ಮತ್ತು ಕರ್ನಾಟಕದ ಗಡಿಭಾಗದಲ್ಲಿ ಏಕರೀತಿಯ ಸ್ಥಳನಾಮಗಳಿರುವುದು ತಿಳಿಯುತ್ತದೆ. ವೃತ್ತಿ, ವ್ಯಕ್ತಿ, ನಿಸರ್ಗವಾಚಿ, ಸ್ಥಳನಾಮಗಳು ಅಲ್ಲಿವೆ. ಬಹುಶಃ ಏಕರೀತಿಯ ಭೌಗೋಳಿಕ ಪರಿಸರ ಸಾಂಸ್ಕೃತಿಕ ಅಂಶಗಳು ಕಾರಣವಿರಬಹುದು. ಇದು ಗಡಿಭಾಗದಲ್ಲಿ ಮಾತ್ರವಲ್ಲ ಉಳಿದೆಡೆಯಲ್ಲಿಯೂ ಕಂಡು ಬರುವಂತಹ ಅಂಶವೇ ಆಗಿದೆ.

ಮಾದರಿ ೨ ರಲ್ಲಿ ಸ್ವಾತಂತ್ರೋತ್ತರ ಅವಧಿಯಲ್ಲಿ ನಾಮನಿರ್ದೇಶನಗೊಂಡ ಹೆಸರುಗಳಿವೆ. ಬಹುತೇಕ ಪಟ್ಟಣ, ನಗರಗಳಲ್ಲಿನ ಬೀದಿಗಳಿಗೆ ಈ ಹೆಸರುಗಳಿರುವುದು ತಿಳಿಯುತ್ತದೆ. ಸ್ವಾತಂತ್ರೋತ್ತರ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಗಾರರ, ಕವಿಗಳ, ಸಂತರ ಹೆಸರಿಡುವ ಪದ್ಧತಿಯು ಆರಂಭವಾಯಿತು. ಭಾರತದಲ್ಲಿನ ಏಕಮಾದರಿಯ ಹೋರಾಟ, ಸಂಸ್ಕೃತಿಯು ಇಲ್ಲಿರುವ ಎಲ್ಲ ರಾಜ್ಯಗಳಲ್ಲಿಯೂ ಸ್ವೀಕೃತವಾಗಿರುವುದರಿಂದ ಈ ಬಗೆಯ ಪ್ರತಿನಾಮಕರಣ ಕ್ರಿಯೆಯು ಸಾಮಾನ್ಯವಾದುದೇ ಆಗಿದೆ.

ಅದರಂತೆ ರಾಜ್ಯಗಳ ಮಟ್ಟದಲ್ಲಿ ಆಯಾ ಕವಿಗಳು, ಆಯಾ ಪರಿಸರದ ಹೋರಾಟಗಾರರ ಸಂತರ ಹೆಸರುಗಳು ಸ್ಥಳನಾಮಗಳಿಗೆ ಆಕರಗಳಾಗಿರುವುದು, ಆ ಮೂಲಕ ಭೌಗೋಳಿಕ ಪ್ರಸಾರವಾಗಿ ಪ್ರತಿಕರಣಗೊಂಡಿರುವುದು ಸಹಜವಾಗಿದೆ. ಈ ಕ್ರಿಯೆಯು ಕಾಲಾಂತರದಲ್ಲಿ ಬೇರೆ ಬೇರೆ ಆಯಾಮಗಳನ್ನು ಪಡೆಯುತ್ತಾ, ನಿರಂತರವಾಗಿ ನಡೆಯುತ್ತಿರುತ್ತದೆ.

### ೪.೭. ಸಾಪೇಕ್ಷ ಸ್ಥಳನಾಮಗಳು (Relative place names)

ಸ್ಥಳನಾಮಗಳಲ್ಲಿ ನಿರ್ದಿಷ್ಟ ಭಾಗದಲ್ಲಿ ಕಂಡುಬರುವ ಸಣ್ಣ, ದೊಡ್ಡ, ಚಿಕ್ಕ, ಹಿರಿಯ, ಹೊಸ, ಹಳೆಯ, ಕುಣಿ, ಎತ್ತರ ಎಂಬ ವಿಶೇಷಣಗಳು ಹಾಗೂ ವಿವಿಧ ಹ್ರಸ್ವೀಕರಣಗಳಿಂದ ಆ ನಿರ್ದಿಷ್ಟದ ಸಂಖ್ಯೆಯು ವರ್ಧಿಸುತ್ತದೆ. ಸಾಮಾನ್ಯವಾಗಿ ಒಂದೇ ಭೌಗೋಳಿಕ ಪರಿಸರದ ಜೋಡಿ ಹೆಸರುಗಳು ಇವು ಆಗಿರುತ್ತಿದ್ದು, ಇವುಗಳನ್ನು ಸಾಪೇಕ್ಷ ಗ್ರಾಮನಾಮಗಳು ಎಂದು ಕರೆಯುತ್ತಾರೆ. ಗಡಿಭಾಗದಲ್ಲಿ ದೊರೆಯುವ ಅಂತಹ ಕೆಲವು ಜೋಡಿ ಹೆಸರುಗಳನ್ನು ಇಲ್ಲಿ ಪಟ್ಟಿ ಮಾಡಿಲಾಗಿದೆ.

| | |
|---|---|
| ಜಂಗಮರಹೊಸಳ್ಳಿ | ಹಾಗಲೂರು ಹೊಸಳ್ಳಿ |
| ಪೆದ್ದ ತುಂಬಳಂ | ಚಿನ್ನತುಂಬಳಂ |
| ಪೆದ್ದ ಕಡಬೂರು | ಚಿನ್ನ ಕಡಬೂರು |
| ಪೆದ್ದ ಹರಿವಾಣ | ಚಿನ್ನ ಹರಿವಾಣ |
| ಪೆದ್ದ ಹ್ಯಾಟೆ | ಚಿನ್ನಹ್ಯಾಟೆ |
| ಪೆದ್ದ ಗೊನೆಹಾಳ್ | ಚಿನ್ನ ಗೊನೆಹಾಳ್ |
| ಬಿ.ಎಂ.ಸೂಗೂರು | ಮಿಟ್ಟೆ ಸೂಗೂರು |
| ವಿ. ಕೊಂಡಾಪುರ | ಎಸ್. ಕೊಂಡಾಪುರ |
| ಹತ್ತಿ ಬೆಳಗಲ್ಲು | ಕೆಂಚಗಾರ ಬೆಳಗಲ್ಲು |

ಹೀಗೆ ಸ್ಥಳದ ಹೆಸರು ಒಂದೇ ಬಗೆಯಾಗಿರುತ್ತಿದ್ದು, ಅದರ ಪೂರ್ವದಲ್ಲಿ ವಿಶೇಷಣವೋ ಅಥವಾ ಭೌಗೋಳಿಕ ಚಹರೆಯನ್ನು ಗುರುತಿಸುವ ಯಾವುದಾದರೂ ಒಂದು ಆಕೃತಿಮಾ ಇರುತ್ತದೆ. ಈ ಬಗೆಯ ನಾಮಗಳೇ ಸಾಪೇಕ್ಷನಾಮಗಳು.

### ೪.೮. ವಿಶೇಷಣಗಳು - ಸ್ಥಳನಾಮ

ಯಾವುದೇ ಸ್ಥಳನಾಮಗಳಿಗೆ ವಿಶೇಷಣವಿದ್ದರೆ, ಅದು ಹೆಸರಿಡುವವರ ಮನೋಧರ್ಮವನ್ನು ತಿಳಿಸುತ್ತದೆ. ಅಂದರೆ ಒಂದು ಸ್ಥಳಕ್ಕೆ, ಗ್ರಾಮಕ್ಕೆ ನಾಮನಿರ್ದೇಶನ ಮಾಡುವಾಗ ಅವುಗಳ ಪೂರ್ವಪದಕ್ಕೆ ಯಾವುದೋ ವಿಶೇಷಣವಿರುತ್ತದೆ. ಭೂಮಿಯ ವಿವರಣೆ, ವಸ್ತುವಿನ, ವ್ಯಕ್ತಿಯ ಗುಣ, ಗಾತ್ರ, ಅವುಗಳ ಬಣ್ಣ ಇತ್ಯಾದಿ ಹೇಳುತ್ತಿರುತ್ತದೆ. ವಿಶೇಷಣಗಳು ಸಾಮಾನ್ಯವಾಗಿ ಪೂರ್ವಪದದಲ್ಲಿ ಮಾತ್ರ ಕಾಣಿಸುತ್ತದೆ. ವಾರ್ಗಿಕದಲ್ಲಿ ಘಟಿಸಲಾರದು. ಸ್ಥಳನಾಮಗಳಲ್ಲಿ ನಿರ್ದಿಷ್ಟ ಪದವು ವಾರ್ಗಿಕಪದವನ್ನು ವರ್ಣಿಸುತ್ತಿರುತ್ತದೆ. ಅಂತಹ ಕೆಲವು ರಚನೆಗಳು ಇಲ್ಲಿವೆ.

ಗಡಿ ಆಂಧ್ರ - ಕರ್ನಾಟಕ ಪ್ರದೇಶದಲ್ಲಿ ವಿಶೇಷಣಗಳು ಯಾವ ಬಗೆಯ ಸ್ವರೂಪವನ್ನು ಹೊಂದಿವೆ ಎಂಬುದನ್ನು ಕೆಳಗಿನಂತೆ ನೋಡಬಹುದು.

### ೪.೯. ಪ್ರಮಾಣವನ್ನು ಸೂಚಿಸುವ ವಿಶೇಷಣಗಳು

| | | |
|---|---|---|
| ಉದಾ : | ಚಿಕ್ಕಬಳ್ಳಾರಿ | ಪೆದ್ದ ಗೊನೆಹಾಳ್ |
| | ಚಿನ್ನತುಂಬಳಂ | ಪೆದ್ದತುಂಬಳಂ |
| | ಚಿನ್ನಹೋತೂರು | ಪೆದ್ದಹೋತೂರು |
| | ಚಿನ್ನಗೊನೆಹಾಳ್ | ಪೆದ್ದಹರಿವಾಣ |
| | ಚಿನ್ನಹ್ಯಾಟ | ಪೆದ್ದಹ್ಯಾಟ |
| | ಚಿನ್ನ ಹರಿವಾಣ | ಹಿರೇ ಕಲ್ಲು |
| | ಚಿನ್ನಕಡಬೂರು | ಹಿರೇ ಹದಳಗಿ |
| | ದೊಡ್ಡನಕೇರಿ | ಹಿರೇಹಾಳ್ |
| | ಪುಟ್ಟಕುಂಟೆ | ಹೆಬ್ಬೆಟ್ಟ |
| | ಪೆದ್ದ ಕಡಬೂರು | |

ಮೇಲಿನ ಸ್ಥಳನಾಮಗಳು ಭೌಗೋಳಿಕವಾಗಿ ಹತ್ತಿರವಾಗಿರುವಂಥವು. ಅಲ್ಲದೇ ಮೊದಲು ದೊಡ್ಡ' ಊರುಗಳಿದ್ದು, ನಂತರ ಹೊಸ ವಾಸ್ತವ್ಯ ಹೂಡಿದ ಜನತೆ ಅದೇ ಹೆಸರಿನಲ್ಲಿ ಚಿನ್ನ (ಸಣ್ಣ) ಎಂಬ ಹೆಸರಿನೊಂದಿಗೆ ಕರೆದುಕೊಂಡಿದ್ದಾರೆ. ಇನ್ನೂ ಕೆಲವು ಗ್ರಾಮಗಳು ಪ್ರತ್ಯೇಕವಾಗಿಯೇ ನಿರ್ಮಾಣವಾಗಿದ್ದರೂ, ಅದರ ಪಕ್ಕದಲ್ಲಿರುವ ಊರಿನೊಂದಿಗೆ ಸಣ್ಣ, ದೊಡ್ಡ ಸೇರಿಸಿಕೊಂಡು ನಾಮ ನಿರ್ದೇಶನಗೊಂಡಿವೆ. ಈಗ ಸಣ್ಣ, ಎಂದು ಮೂಲ ಹೆಸರಿನೊಂದಿಗೆ ಇರುವ (ಉದಾ : ಚಿನ್ನಹೋತೂರು, ಚಿನ್ನತುಂಬಳಂ, ಚಿನ್ನಹ್ಯಾಟ) ಊರುಗಳು 'ದೊಡ್ಡ' ಎಂದು ಆರಂಭವಾಗುವ ಗ್ರಾಮಗಳಿಗಿಂತ ಬೃಹತ್ತಾಗಿಯೇ ಬೆಳೆದಿದ್ದರೂ, ಅವು 'ಸಣ್ಣ' (ಚಿನ್ನ) ಎಂಬ ವಿಶೇಷಣದೊಡನೆ ಬಳಕೆಯಾಗುತ್ತಿರುವುದು ಕಂಡು ಬರುತ್ತದೆ.

೪.೧೦. ದಿಕ್ಸೂಚಕ ವಿಶೇಷಣಗಳು

| | | |
|---|---|---|
| ಎಡಗೊಳ್ಳ | - ALR | (ನಿರ್ವಸಿತ) |
| ಬಲಗೊಳ್ಳ | - ALR | (ನಿರ್ವಸಿತ) |
| ಬಲಕುಂದಿ | - SRP | |
| ಬಲಗುಡ್ಡ | - ANT | |
| ಮೂಡಲದಿನ್ನೆ | - ADN | (ನಿರ್ವಸಿತ) |

ಎಂಬಂತಹ ಸ್ಥಳನಾಮಗಳಲ್ಲಿ ವಾರ್ಗಿಕ ಪದಗಳನ್ನು ವಿಶೇಷಣಗಳು ವರ್ಣಿಸುತ್ತಲಿವೆ.

೪.೧೧. ಬಣ್ಣವನ್ನು ಸೂಚಿಸುವ ವಿಶೇಷಣಗಳು

| | | |
|---|---|---|
| ಕರೇಕಲ್ಲು | ಪಚ್ಚರಳ್ಳಿ | ಬೆಳಗಲ್ಲು - BLR |
| ಕಪ್ಪುಗಲ್ಲು | ಬಿಳೇಹಾಳ್ | ಬೆಳ್ಳೊಣೆ |
| ಕರಿಚೇಡು | ಬೆಳಗಲ್ಲು - ALR | ಹಚ್ಚೊಳ್ಳಿ |

ಎಂಬಲ್ಲಿ ಆಯಾ ಭೌಗೋಳಿಕ ಪರಿಸರದ ಕಲ್ಲು, ಕ್ಷೇತ್ರದ ವರ್ಣ, ನೀರಿನ ಬಣ್ಣ ಮುಂತಾದುವನ್ನು ವಿಶೇಷಣಗಳು ವರ್ಣಿಸುತ್ತಿವೆ. ಕಪ್ಪು, ಬಿಳಿ, ಹಸಿರು ಮೂರು ಬಣ್ಣಗಳು ಗಡಿಭಾಗದ ಸ್ಥಳನಾಮಗಳಲ್ಲಿ ಸ್ಥಾನ ಪಡೆದುಕೊಂಡಿವೆ. ಹಸಿರು ತಕ್ಕಷ್ಟು ಬಳಕೆಯಾಗಿದೆ.

೪.೧೨. ಕಾಲವನ್ನು ಸೂಚಿಸುವ ವಿಶೇಷಣಗಳು

| | | |
|---|---|---|
| ಹಳೇ ತೋಟ - ೧ | ಹಳೇ ತೋಟ - ೨ | ಹೊಸಳ್ಳಿ |

ಎಂಬಂತಹ ಸ್ಥಳನಾಮಗಳಿಂದ ಹಳೆಯ = ಪ್ರಾಚೀನ, ಹೊಸ = ನೂತನ ಎಂದು ಗುರುತಿಸಲು ಸಾಧ್ಯವಾಗುತ್ತದೆ. ಗಡಿ ಭಾಗದಲ್ಲಿ ಕಂಡುಬರುವ ಅನೇಕ ಗ್ರಾಮಗಳು ಮೊದಲಿದ್ದ ವಿಸ್ತೀರ್ಣಕ್ಕಿಂತ ಹೆಚ್ಚಾಗಿ ಹೊಸ ವಾಸ್ತವ್ಯಗಳಿಂದ ಬೆಳೆಯುತ್ತಿವೆ. ಈ ಹೊಸ ವಾಸ್ತವ್ಯಕ್ಕೆ ಕೆಲವು ಕಡೆ ನಾಮಕರಣ ಮಾಡಲಾಗಿದೆ. ಇನ್ನೂ ಕೆಲವು ಕಡೆ 'ಹೊಸ ಊರು' ಎಂದಷ್ಟೇ ಕರೆಯುತ್ತಿರುವುದು ಕಂಡುಬರುತ್ತದೆ.

೪.೧೩. ಭೌಗೋಳಿಕ ಲಕ್ಷಣಗಳನ್ನು ಹೇಳುವ ವಿಶೇಷಣಗಳು

| | | |
|---|---|---|
| ಕಣಿಮೆ ಹಳ್ಳಿ - SND | ತೆಗ್ಗಿನ ಬೂದಿಹಾಳು | ಮಿಟ್ಟೆ ಸೂಗೂರು |

ಹೀಗೆ ಗಡಿಭಾಗದ ಸ್ಥಳನಾಮಗಳಿಗೆ ಹೆಚ್ಚಾಗಿ ಗಾತ್ರ ಮತ್ತು ದಿಕ್ಕನ್ನು ಸೂಚಿಸುವ, ಬಣ್ಣ, ಕಾಲ, ಪ್ರಾದೇಶಿಕ ವೈಲಕ್ಷಣ್ಯವನ್ನು ಗುರುತಿಸುವ ವಿಶೇಷಣಗಳು ಬಂದಿರುವುದು ತಿಳಿಯುತ್ತದೆ. ಗಡಿಭಾಗದ ಬೆಟ್ಟ - ಗುಡ್ಡಗಳಲ್ಲಿನ ಕಲ್ಲುಗಳು ಸಾಮಾನ್ಯವಾಗಿ ಕಪ್ಪು ವರ್ಣದಲ್ಲಿರುವುದರಿಂದ ಕಪ್ಪುಬಣ್ಣ, ಅಲ್ಲಲ್ಲಿ ಬಿಳಿದಾದ ಕಲ್ಲುಗಳಿರುವುದರಿಂದ ಬಿಳಿ ಬಣ್ಣಗಳು ಸ್ಥಳನಾಮದಲ್ಲಿ ಎಡೆಪಡೆದಿವೆ. ಚಿಕ್ಕ, ದೊಡ್ಡ ಎಂಬ ವಿಶೇಷಣಗಳು ಆಯಾ ಪ್ರಾದೇಶಿಕವಾರು

ನಿರ್ಮಾಣಗೊಂಡ ಗ್ರಾಮರಚನಾ ವಿನ್ಯಾಸವನ್ನು ಹೇಳುತ್ತವೆ. ಕಾರಣ ಈ ಬಗೆಯ ವಿಶೇಷಣಗಳು ಈ ಭಾಗದಲ್ಲಿ ಕಂಡುಬರುತ್ತವೆ.

**೪.೧೪. ಸ್ವರಾಂತ - ವ್ಯಂಜನಾಂತ ಸ್ಥಳನಾಮಗಳು**

ಗಡಿಭಾಗದ ಸ್ಥಳನಾಮಗಳು ಬರೆಹ, ಬಳಕೆ ಅಥವಾ ಉಚ್ಚಾರಣೆಯಲ್ಲಿ ಸ್ವರಾಂತವಾಗಿಯೂ, ವ್ಯಂಜನಾಂತವಾಗಿಯೂ ಬಳಕೆಯಾಗುತ್ತವೆ. ಸ್ವರಾಂತವಾದ ಎಲ್ಲ ಸ್ಥಳನಾಮಗಳು ವ್ಯಂಜನಾಂತವಾಗಲಾರವು. ಅದಕ್ಕೆ ಕೆಲವು ಮಾದರಿಗಳು ಇಲ್ಲಿವೆ.

| | |
|---|---|
| ಕುರುಕುಂದೆ | ಕುರು । ಕುಂದ್ । |
| ಕೊರ್ಲಗುಂದಿ | ಕೊರ್ಲ । ಗುಂದ್ । |
| ಗೋನಬಾವಿ | ಗೋನ । ಬಾವ್ । |
| ಚಿಂತಕುಂಟೆ | ಚಿಂತ । ಕುಂಟ್ । |
| ಜೋಳದರಾಶಿ | ಜೋಳದ । ರಾಶ್ । |
| ಮುದ್ದನಗೇರಿ | ಮುದ್ದನ । ಗೇರ್ । |
| ಯರ್ರಗುಡಿ | ಯರ್ರ । ಗುಡ್ । |
| ಶಂಕರಬಂಡೆ | ಶಂಕರ । ಬಂಡ್ । |
| ಹರಗಿನಡೋಣಿ | ಹರಗಿನ । ಡೋಣ್ । |
| ಹೊಸಳ್ಳಿ | ಹೊಸ । ಹಳ್ । |

ಕನ್ನಡ ಸ್ಥಳನಾಮಗಳು ಸಾಮಾನ್ಯವಾಗಿ ಸ್ವರಾಂತವಾಗಿರುತ್ತವೆ. ವಾರ್ಗಿಕದಲ್ಲಿ ಇ, ಎ, ಕಾರಾಂತ್ಯವಾಗುವ ರಚನೆಯಿಂದ ವ್ಯಂಜನಾಂತವಾಗುವುದು ಇಲ್ಲವೆಂದು ಹೇಳಬಹುದು. ಮೇಲಿನ ಪಟ್ಟಿಯಲ್ಲಿ ಎ, ಇ, ಕಾರಾಂತ್ಯ ಘಟಕಗಳು ವ್ಯಂಜನಾಂತವಾಗಿಲ್ಲ. ಇದಕ್ಕೆ ಕನ್ನಡದ ಧ್ವನಿ ಮತ್ತು ಪದರಚನೆಯ ನಿಯಮವು ಕಾರಣವಾಗಿದೆ. ಅದರಂತೆ ಕನ್ನಡ ಮಾತಿನ ನಡುವೆಯಾಗಲಿ, ಇಂಗ್ಲಿಷ್ ಮಾತಿನ ನಡುವೆಯಾಗಲಿ ಸ್ವರಾಂತ ಆಕೃತಿಮಾಗಳು ವ್ಯಂಜನಾಂತವಾಗಿರುವುದು ಕಂಡು ಬರುತ್ತದೆ.

| | |
|---|---|
| ಅಮೃತಪುರ | ಅಮೃತಾಪೂರ್ |
| ಆಲೂರು | ಆಲೂರ್ |
| ಏರೂರು | ಏರೂರ್ |
| ಗೊನೆಹಾಳು | ಗೊನೆಹಾಳ್ |
| ನೇಮಕಲ್ಲು | ನೇಮ್ ಕಲ್ |
| ಹುಳೇಬೀಡು | ಹುಳೇಬೀಡ್ |

ಇಲ್ಲಿ ಅ, ಉ, ಕಾರಾಂತ್ಯವಾಗುವ ಸ್ಥಳನಾಮಗಳು ವ್ಯಂಜನಾಂತವಾಗಿವೆ. ಕೆಲವು ಸ್ಥಳನಾಮಗಳು ಅ, ಉ, ಸ್ವರಾಂತ್ಯವಾದರೂ ವ್ಯಂಜನಾಂತವಾಗಿಲ್ಲದಿರುವ ರಚನೆಗಳಿವೆ.

ಉದಾ : ಮಂತ್ರಾಲಯ → ಮಂತ್ರಾಲ|ಯ್ |
ಮರಕಟ್ಟು → ಮರಕ|ಟ್ |
ಹರಿವಾಣ → ಹರಿವಾ|ಣ್ |

ಎಂಬ ರಚನೆಗಳು ವ್ಯಂಜನಾಂತ ಆಗಿಲ್ಲದಿರುವುದು ಕಂಡು ಬರುತ್ತದೆ. ಇದಕ್ಕೆ ಕನ್ನಡದ ಧ್ವನಿ ಮತ್ತು ಪದನಿಯಮ ಪರಿಸರವೇ ಕಾರಣವಾಗಿರುತ್ತದೆಂಬುದನ್ನು ಗಮನಿಸಬೇಕು.

ರಾಯಚೂರು ಪರಿಸರದಲ್ಲಿ ಸ್ಥಳನಾಮಗಳ ಸ್ವರಾಂತ್ಯ - ಉ ಕಾರವು - ಅ ಕಾರವಾಗಿ ಮಾರ್ಪಾಡಾಗುವುದು ತಿಳಿಯುತ್ತದೆ. ರಾಯಚೂರಿಗೆ ಹೊಂದಿಕೊಂಡಿರುವ ಆಂಧ್ರದ ಗಡಿಭಾಗದಲ್ಲಿಯೂ ಕೆಲವೆಡೆ ಈ ಕ್ರಿಯೆ ನಡೆಯುವುದು ಕಂಡುಬರುತ್ತದೆ.

ಕರೂರು - ಕರೂರ (ಬರೆಹ ಮತ್ತು ಬಳಕೆ)
ರಾಯಚೂರು - ರಾಯಚೂರ (ಬರೆಹ ಮತ್ತು ಬಳಕೆ)
ಲಿಂಗಸೂಗೂರು - ಲಿಂಗಸೂಗೂರ (ಬರೆಹ ಮತ್ತು ಬಳಕೆ)
ಸಿಂಧನೂರು - ಸಿಂಧನೂರ (ಬರೆಹ ಮತ್ತು ಬಳಕೆ)

ವ್ಯಂಜನ ದ್ವಿತ್ವದಿಂದ ಅಂತ್ಯವಾಗುವ ಸ್ಥಳನಾಮಗಳೂ ಕೂಡ ವ್ಯಂಜನಾಂತವಾಗುವುದಿಲ್ಲ.

ಉದಾ : ಕುರುವಳ್ಳಿ → ಕುರು|ವಳ್ |
ಗೆಜ್ಜೆಹಳ್ಳಿ → ಗೆಜ್ಜೆ|ಹಳ್ |
ಚಿರುಮನದೊಡ್ಡಿ → ಚಿರುಮನ| ದೊಡ್ |

ಹೀಗೆ ಇಂತಹ ರಚನೆಗಳು ಕಾಣಿಸಲು ಸಾಧ್ಯವೇ ಇಲ್ಲ. "ಹೀಗಾಗಿ ಕನ್ನಡದ ಸ್ಥಳನಾಮಗಳಲ್ಲಿ ಬಳಕೆಯಾಗುವ 'ಇ' ಕಾರಾಂತ ಸ್ವರ ಮತ್ತು ವ್ಯಂಜನ ದ್ವಿತ್ವಗಳ ನಂತರ ಬರುವ ಸ್ವರವೂ ಮತ್ತು 'ಎ' ಕಾರಾಂತ ಸ್ವರವೂ ಕನ್ನಡ ಸ್ಥಳನಾಮಗಳ ವಾರ್ಗಿಕದ ಸ್ವಂತ ಭಾಗವೆಂದು ತಿಳಿಯಬಹುದು." (ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ - ಪು - ೪೩).

ಇಲ್ಲಿ ಇನ್ನೊಂದು ಮಾದರಿ ಹೀಗಿದೆ - ಇಂದಿರಾನಗರ ನೇತಾಜಿನಗರ
ಕೌಲ್ ಪೇಟೆ ಬಸ್ತಿಪೇಟೆ
ಗಾಂಧಿನಗರ ರಾಣಿಪೇಟೆ

ಎಂಬಂತ ಸ್ಥಳನಾಮಗಳು - ನಗರ > ನಗರ್ ಆಗಿಯೂ - ಪೇಟೆ > ಪೇಟ್ ಆಗಿಯೂ ವ್ಯಂಜನಾಂತವಾಗುತ್ತವೆ. ಇಂದಿರಾನಗರ - ಇಂದಿರಾನಗರ್

| | | |
|---|---|---|
| ಗಾಂಧಿನಗರ | → | ಗಾಂಧಿನಗರ್ |
| ಕೌಲ್ ಪೇಟೆ | → | ಕೌಲ್ ಪೇಟ್ |
| ರಾಣಿಪೇಟೆ | → | ರಾಣಿಪೇಟ್ |

ಇದಕ್ಕೆ ಕಾರಣ - ನಗರ ಮತ್ತು - ಪೇಟೆ ಎಂಬ ಸ್ಥಳನಾಮ ವಾರ್ಗಿಕಗಳು ಕನ್ನಡದ ರಚನೆಗಳಲ್ಲ. "- ಪೇಟೆ ಎಂಬಲ್ಲಿ 'ಎ' ಕಾರ ಕನ್ನಡದ ಜಾಯಮಾನಕ್ಕೆ ಉಚ್ಚಾರಣಾನುಕೂಲಿಯಾಗಿ ಬಂದು ಸೇರಿದ್ದಾಗಿದೆ." (ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ - ಪು - ೪೪). ಪೇಟೆಯಂತೆ ಬಳಕೆಯಾಗುವ - ಕೋಟೆ ಎಂಬ ರಚನೆಯು - ತೆಕ್ಕಲಕೋಟೆ, ಹಳೇಕೋಟೆ ಎಂಬ ಸ್ಥಳನಾಮಗಳಲ್ಲಿ - ಕೋಟ್ ಎಂದು ವ್ಯಂಜನಾಂತವಾಗಲಾರದು. ಇದು ಕನ್ನಡ ಪರಿಸರದ ಲಕ್ಷಣವೆನ್ನಬಹುದು. ಆದರೆ ಇತ್ತೀಚೆಗೆ - ಕೋಟೆ - ಕೋಟ್ ಆಗಿಯೂ ಬಳಕೆಯಾಗುತ್ತಲಿದೆ. (ಬಾಗಲಕೋಟೆ > ಬಾಗಲಕೋಟ್ ಸಿಮೆಂಟ್ ). "ಇದಕ್ಕೆ ಕಾರಣ ಸಾಮಾನ್ಯವಾಗಿ ಕರ್ನಾಟಕದ ದಕ್ಷಿಣಭಾಗದ ಕನ್ನಡದ 'ಎ' ಕಾರಾಂತ್ಯವನ್ನು ಉತ್ತರ ಭಾಗದ ಕನ್ನಡದಲ್ಲಿ 'ಇ' ಕಾರ ಮತ್ತು 'ಅ' ಕಾರಾಂತ್ಯಗೊಳ್ಳುವುದು ಸಾಮಾನ್ಯ ನಿಯಮ. ಕಾರಣ ಇದು ಕೋಟ್ಯೆ > ಕೋಟೆ > ಕೋಟ > ಕೋಟ್ ಆಗಿ ವ್ಯಂಜನಾಂತವಾಗಿ ಬಳಕೆಯಲ್ಲಿರಬಹುದು" (ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ - ೪೪)

**೪.೧೫. ಮಹಾಪ್ರಾಣಗಳು - ಸ್ಥಳನಾಮ**

ಕನ್ನಡದಲ್ಲಿ ಸ್ಥಳನಾಮಗಳು ಮಹಾಪ್ರಾಣದಿಂದ ಆರಂಭವಾಗುವುದು ತುಂಬಾ ಕಡಿಮೆ. ಅಂತಹ ಕೆಲವು ಗ್ರಾಮನಾಮಗಳು ಗಡಿಭಾಗದಲ್ಲಿ ದೊರೆಯುತ್ತವೆ.

| | |
|---|---|
| ಛತ್ರಗುಡಿ | ಭಟ್ಟರ ಬೊಮ್ಮಲಪುರ |
| ಢಣಾಪುರ | ಭೈರಾಪುರ |
| ಭಟ್ಟರಹಳ್ಳಿ | ಭೈರದೇವನ ಹಳ್ಳಿ |

ಎಂಬ ಸ್ಥಳನಾಮಗಳಲ್ಲಿ ಪೂರ್ವಪದದ - ಛತ್ರ, - ಭೈರ, - ಭಟ್ಟ ಎಂಬ ರಚನೆಗಳು ಸಂಸ್ಕೃತ ಮೂಲದ ಆಕೃತಿಮಾಗಳು. ಬಹುಶಃ ಈ ಕಾರಣದಿಂದ ಇವು ಮಹಾಪ್ರಾಣ ರೂಪಗಳಾಗಿ ಬಳಕೆಯಾಗಿರಬೇಕು. ಅಲ್ಲದೇ ಕನ್ನಡ ಪರಿಸರದಲ್ಲಿ ಈ ಗ್ರಾಮನಾಮಗಳು ಬರೆಹ ರೂಪದಲ್ಲಿ ಮಹಾಪ್ರಾಣವಾಗಿಯೇ ಬಳಕೆಗೊಳ್ಳುತ್ತವೆ. ಆಡುನುಡಿಯ ಬಳಕೆಯಲ್ಲಿ ಈ ಗ್ರಾಮನಾಮಗಳು : ಚತ್ರಗುಡಿ

ಡಣಾಪುರ

ಬಟ್ಟರಳ್ಳಿ

ಬೈರಾಪುರ

ಎಂಬುದಾಗಿಯೇ ಅಲ್ಪಪ್ರಾಣಾಕ್ಷರದಿಂದ ಉಚ್ಚರಿಸಲ್ಪಡುತ್ತವೆ. ಕಾರಣ ಕನ್ನಡ, ತೆಲುಗು ಪರಿಸರದಿಂದ ಭಿನ್ನವಾದ ಇತರೆ ಭಾಷೆಯ ಸ್ವೀಕರಣ ಪದಗಳು ಮಹಾಪ್ರಾಣಗಳಾಗಿರುತ್ತವೆಂಬುದನ್ನು ಗಮನಿಸಬಹುದು.

೪.೧೬. ಹ್ರಸ್ವೀಕರಣ - ಸ್ಥಳನಾಮಗಳು

ಸ್ಥಳನಾಮಗಳಲ್ಲಿ ಹ್ರಸ್ವೀಕರಣ ಪ್ರಕ್ರಿಯೆಯು ನಡೆಯುವುದು ಸೌಲಭ್ಯಾಕಾಂಕ್ಷೆಗೆ ಮಾತ್ರ. ಇದು ಇತ್ತೀಚಿನ ಬೆಳವಣಿಗೆ. ಪ್ರಾಚೀನ ಕಾಲದಿಂದ ಈ ಬಗೆಯ ಹ್ರಸ್ವೀಕರಣ ನಡೆದು ಬಂದಿಲ್ಲ. ಉದ್ದುದ್ದವಾದ ಹೆಸರುಗಳನ್ನು ಪ್ರಾಚೀನರು ಆ ಊರಿನ ವಾರ್ಗಿಕಗಳಿಂದ ತಮ್ಮ ಪ್ರದೇಶದ ಜನರಿಗೆ ಮಾತ್ರ ಗೊತ್ತಾಗುವಂತೆ ಬಳಸುತ್ತಿದ್ದುದು ತಿಳಿಯುತ್ತದೆ. ಉದಾ: ಬೊಮ್ಮಗುಂಡನಹಳ್ಳಿ ಎಂಬ ಗ್ರಾಮದವರು ತಮ್ಮ ಊರನ್ನು 'ಹಳ್ಳಿ' ಎಂದೂ, 'ದೇವರಗುಡ್ಡ' ಎಂಬುದನ್ನು 'ಗುಡ್ಡಕ್ಕೆ ಹೋಗ್ತೀನಿ' ಎಂದೂ, ಹಿರೇಹ್ಯಾಟೆಗೆ ಹೋಗುವುದಿದ್ದರೆ 'ಇಲ್ಲೇ ಹ್ಯಾಟ್ಯಾಕ ಹೋಗಿ ಬರ್ತೀನಿ' ಎಂಬುದಾಗಿ ಬಳಸುತ್ತಿದ್ದರು. ಸ್ಥಳನಾಮಗಳ ವಾರ್ಗಿಕಗಳು ಮಾತ್ರ ಅಲ್ಲಿ ಉಳಿದುಕೊಂಡು, ನಿರ್ದಿಷ್ಟವೆಲ್ಲ ಗೌಣವಾಗುತ್ತಿತ್ತು. ಈ ರೀತಿಯ ಹ್ರಸ್ವೀಕರಣ ಕ್ರಿಯೆಯು ಆಯಾ ಭೌಗೋಳಿಕ ಪರಿಸರದಲ್ಲಿ ಸೀಮಿತ ವ್ಯಾಪ್ತಿಯಲ್ಲಿ ಬಳಕೆಯಾಗುತ್ತಿತ್ತು. ಇಂದಿಗೂ ಗ್ರಾಮೀಣ ಪರಿಸರದಲ್ಲಿ ಈ ರೀತಿಯ ಹ್ರಸ್ವೀಕರಣ ಮಾದರಿಯು ಉಳಿದಿರುವುದನ್ನು ನೋಡಬಹುದು.

ಆಂಗ್ಲರ ಆಗಮನದ ನಂತರ ಇಂಗ್ಲಿಷ್ ಭಾಷೆಯ ಪ್ರಭಾವದಿಂದ ದೇಸೀಯ ಸ್ಥಳನಾಮಗಳು ಹ್ರಸ್ವೀಕರಣ ಕ್ರಿಯೆಗೆ ತೀವ್ರವಾಗಿ ಒಳಪಟ್ಟವು. ಉದ್ದುದ್ದನೆಯ ಹೆಸರುಗಳಿಗೆ ಇಂಗ್ಲಿಷ್ ವರ್ಣಮಾಲೆಯ ಅಕ್ಷರಗಳನ್ನಿಟ್ಟು ಕೊಂಡು ಸಂಕ್ಷಿಪ್ತಗೊಳಿಸಿಕೊಳ್ಳುವ ರೂಢಿಯು ಆರಂಭವಾಯಿತು. ಅಂತಹ ಕೆಲವು ಉದಾಹರಣೆಗಳು ಗಡಿಭಾಗದಲ್ಲಿವೆ.

| ಗ್ರಾಮಗಳ ವಿಸ್ತೃತ ಹೆಸರು | ಹ್ರಸ್ವೀಕೃತ ಹೆಸರು |
|---|---|
| ಅಕ್ಕತಂಗೇರಹಾಳ್ | A. K. ಹಾಳ್ |
| ಉಪ್ಪಾರ ಹೊಸಹಳ್ಳಿ | U. ಹೊಸಳ್ಳಿ |
| ಎತ್ತಿನ ಬೂದಿಹಾಳು | Y. ಬೂದಿಹಾಳು |
| ಕಲ್ಲುಕುಟಿಗನಹಳ್ಳಿ | K. K. ಹಳ್ಳಿ |
| ಕಾರೇಕಲ್ಲು ವೀರಾಪುರ | K. ವೀರಾಪುರ |
| ಕಾಕರ್ಲತೋಟ | K. K. ತೋಟ |
| ಕೆಂಚಗಾರ ಬೆಳಗಲ್ಲು | K. ಬೆಳಗಲ್ಲು |
| ಕೌತಾಳಂ ರಾಡೂರು | K. ರಾಡೂರು |
| ಕೋಗಿಲ ತೋಟ | K. ತೋಟ |
| ಕೋಟೆಹಾಳು ಸೂಗೂರು | K. ಸೂಗೂರು |
| ಗುಗ್ಗರಹಟ್ಟಿ | G. G. ಹಟ್ಟಿ |
| ಜಂಗಮರ ಹೊಸಳ್ಳಿ | G. ಹೊಸಳ್ಳಿ |

| ಗ್ರಾಮಗಳ ವಿಸ್ತೃತ ಹೆಸರು | ಹ್ರಸ್ವೀಕೃತ ಹೆಸರು |
|---|---|
| ತೆಗ್ಗಿನ ಬೂದಿಹಾಳು | T. ಬೂದಿಹಾಳು |
| ಪತ್ರಬೂದಿಹಾಳು | P. ಬೂದಿಹಾಳು |
| ಪರಮದೇವನಹಳ್ಳಿ | P. D. ಹಳ್ಳಿ |
| ಬಳ್ಳಾರಿ ಗೊನೆಹಾಳು | B. ಗೊನೆಹಾಳ್ |
| ಬ್ಯಾಗರಾಮದಿನ್ನೆ | B. G. ದಿನ್ನೆ |
| ಬೇವಿನಮರದ ಸೂಗೂರು | B. M. ಸೂಗೂರು |
| ಬೊಮ್ಮಗುಂಡನಹಳ್ಳಿ | B. G. ಹಳ್ಳಿ |
| ಮೋಕಾ ಗೊನೆಹಾಳ್ | M. ಗೊನೆಹಾಳ್ |
| ಯಳಪಿ ಕಗ್ಗಲ್ಲು | Y. ಕಗ್ಗಲ್ಲು |
| ವೆಲ್ಲೂರು ಕೊಂಡಾಪುರ | V. ಕೊಂಡಾಪುರ |
| ವೇಣಿ ವೀರಾಪುರ | V. ವೀರಾಪುರ |
| ಹಾಗಲೂರು ಹೊಸಳ್ಳಿ | H. ಹೊಸಳ್ಳಿ |
| ಹಾವಿನಹಾಳು ವೀರಾಪುರ | H. ವೀರಾಪುರ |

ಎಂದು ಇಂಗ್ಲಿಶ್ ವರ್ಣಮಾಲೆಯ ಮೂಲಕ ಆಧುನಿಕ ಜನರು ತಮ್ಮ ಸೌಲಭ್ಯಕ್ಕೆ ತಕ್ಕಂತೆ ಹ್ರಸ್ವೀಕರಣ ಗೊಳಿಸಿಕೊಂಡಿದ್ದಾರೆ. ಈ ಕ್ರಿಯೆಯು ಅಲ್ಲಿ ವಾಸಿಸುವ ಜನತೆಯೇ ಸೃಷ್ಟಿಸಿಕೊಂಡದ್ದಾಗಿರುತ್ತದೆ. ಇತ್ತೀಚೆಗೆ ಇಂಗ್ಲಿಶ್ ವರ್ಣಮಾಲೆಯನ್ನು ಉಪಯೋಗಿಸಿಕೊಂಡು ಗ್ರಾಮಗಳ ನಾಮಫಲಕಗಳು, ಸಾರಿಗೆಯ ವಾಹನಗಳ ಫಲಕಗಳಲ್ಲಿಯೂ ಹ್ರಸ್ವೀಕರಣ ಜಾರಿಯಲ್ಲಿ ಬರುತ್ತಿದೆ. ಹೊಸ ಪೀಳಿಗೆಗೆ ಎಷ್ಟೋ ಬಾರಿ ಒಂದು ಸ್ಥಳನಾಮದ ಮೂಲ ಹೆಸರು (ವಿಸ್ತೃತ ಹೆಸರು) ತಿಳಿಯದೇ ಇರುವ ಸಂದರ್ಭವೂ ಈ ಮಾದರಿಯಿಂದ ಉಂಟಾಗಿದೆ.

ಇತ್ತೀಚೆಗೆ ಕನ್ನಡದ ವರ್ಣಮಾಲೆಯಿಂದಲೇ ಹ್ರಸ್ವೀಕರಣಗೊಳಿಸಿಕೊಂಡಿರುವುದು ಕೆಲವು ಬಸ್ಸುಗಳ ನಾಮಫಲಕಗಳಲ್ಲಿ ನೋಡಬಹುದು.

| | |
|---|---|
| ಬೇವಿನಮರದ ಸೂಗೂರು | - ಬೇ.ಮ.ಸೂಗೂರು |
| ಬೊಮ್ಮಗುಂಡನಹಳ್ಳಿ | - ಬೊ.ಗು.ಹಳ್ಳಿ |
| ಹಗರಿಬೊಮ್ಮನಹಳ್ಳಿ | - ಹ.ಬೊ.ಹಳ್ಳಿ |
| ಹೊಳೆನರಸೀಪುರ | - ಹೊ.ನ.ಪುರ |

ಮೇಲಿನ ಮಾದರಿಯು ಆಧುನಿಕತೆಗೆ ಮುಂದಾಗಿ, ಜಾರಿಗೆ ಬರುತ್ತಲಿದೆ. ಪ್ರಸ್ತುತ ಈ ಮಾದರಿ ನಾಮಫಲಕಗಳ (ಸಾರಿಗೆ ಸಂಸ್ಥೆಯಲ್ಲಿ) ಬರೆಹದಲ್ಲಿ ಮಾತ್ರ ನಡೆಯುತ್ತಿದೆ.

ಅದರಂತೆ ಬ್ಯಾಂಕುಗಳಲ್ಲಿ ಸ್ಥಳನಾಮಗಳ ಹ್ರಸ್ವೀಕರಣ ವಿಭಿನ್ನ ರೀತಿಯಲ್ಲಿ ಆಗಿರುವುದು ಕಂಡುಬರುತ್ತದೆ. ಬ್ಯಾಂಕುಗಳಲ್ಲಿ ಬಳಸುವ ಕಬ್ಬಿಣದ ಟೋಕನ್ (ಬಿಲ್ಲೆ) ಗಳ ಮೇಲೆ ಆಯಾ ಬ್ಯಾಂಕಿನ ಹೆಸರು ಮತ್ತು ಆಯಾ ಬ್ಯಾಂಕು ಇರುವ ಊರಿನ ಹೆಸರು ಇರುತ್ತದೆ. ಅಂತಹ ಒಂದು ಮಾದರಿ ಹೀಗಿದೆ.

| | | |
|---|---|---|
| ಆಲೂರು | - ಆಂಧ್ರಾ ಬ್ಯಾಂಕ್ | - ALR |
| ಆದವಾನಿ | - ಸಿಂಡಿಕೇಟ್ ಬ್ಯಾಂಕ್ | - ADN |
| ಕರ್ನೂಲು | - ವಿಜಯಾ ಬ್ಯಾಂಕ್ | - KNL |
| ಕಮಲಾಪುರ | - ಇಂಡಿಯನ್ ಬ್ಯಾಂಕ್ | - KLR |
| ಬಳ್ಳಾರಿ | - ತುಂಗಭದ್ರಾ ಗ್ರಾಮೀಣ ಬ್ಯಾಂಕ್ | - BLR |

ಮೇಲಿನ ಮಾದರಿಯಲ್ಲಿ ALR : ADN : KNL : KLR : BLR ಎಂಬ ನಾಮರೂಪಗಳ ಹ್ರಸ್ವೀಕರಣದಲ್ಲಿ ಯಾವ ನಿರ್ದಿಷ್ಟ, ಯಾವ ವಾರ್ಗಿಕ ಅಥವಾ ಹೊಸಬರಿಗೆ, ದೂರದವರಿಗೆ ಯಾವ ಊರು ಎಂಬುದೂ ಸ್ಪಷ್ಟವಾಗುವುದಿಲ್ಲ. ಈ ಬಗೆಯ ಹ್ರಸ್ವೀಕರಣ ಪ್ರಕ್ರಿಯೆಯು ಕೇವಲ ಅತ್ಯಂತ ಸೀಮಿತ ವಲಯಕ್ಕೆ ಮೀಸಲಾಗಿರುತ್ತದೆಂಬುದನ್ನು ಗಮನಿಸಬಹುದು.

ಹ್ರಸ್ವೀಕರಣದ ಮತ್ತೊಂದು ಮಾದರಿಯನ್ನು ಗುರುತಿಸಬಹುದು. ಇಲ್ಲಿ ಯಾವುದೇ ಉದ್ದೇಶಪೂರ್ವಕ ಹ್ರಸ್ವಗೊಳಿಸುವ ಕ್ರಿಯೆ ನಡೆದಿರುವುದಿಲ್ಲ. ಗ್ರಾಮೀಣರು ಆಡುನುಡಿಯಲ್ಲಿ ತಮ್ಮ ನೆಲೆಗಳನ್ನು ಸಂಕ್ಷೇಪವಾಗಿಯೇ ಉಚ್ಚರಿಸುತ್ತಾರೆ. ಶಿಷ್ಟ ಉಚ್ಚಾರಣೆಯಲ್ಲಿಯೂ ಇದೇ ಕಂಡುಬರುತ್ತದೆ.

| | |
|---|---|
| ಅಮರಾಪುರ | - ಅಂ \| ಬ್ರಾ \| ಪ್ರ |
| ಅರಳಿಗನೂರು | - ಅ \| ಳ್ಳಿ \| ಗ್ನೂ \| ರು |
| ಇಬ್ರಾಹಿಂಪುರ | - ಇ \| ಬ್ರಾಂ \| ಪ್ರ |
| ಕಕ್ಕಬೇವಿನಹಳ್ಳಿ | - ಕ \| ಕ್ಕ \| ವ \| ನ \| ಳ್ಳಿ |
| ನಾರಾಯಣಪುರ | - ನಾ \| ಣ್ಯಾ \| ಪ್ರ |
| ಬೊಮ್ಮಗುಂಡನಹಳ್ಳಿ | - ಬೊಂ \| ಬಾ \| ನ \| ಳ್ಳಿ |
| ಯೆರೇಂಗಳಿಗೆ | - ಯೆ \| ರೆಂ \| ಗ್ಳಿ |

ಈ ಹ್ರಸ್ವೀಕರಣ ಕ್ರಿಯೆ ಕನ್ನಡ ಪದರಚನೆಯಲ್ಲಿ ಸ್ಥಾನಪಡೆಯುವ ಅಕ್ಷರ ರಚನೆಯ ಮಾದರಿಯೂ ಆಗಿದೆ. ಈ ಕ್ರಿಯೆಗೆ ಉದ್ದೇಶಿತ ಕಾರಣಗಳಿಲ್ಲ. ಆಡುನುಡಿಯಲ್ಲಿ ಇದು ಸಾಮಾನ್ಯವೇ ಆಗಿದೆಯೆನ್ನಬಹುದು.

### ೪.೧೭. ಸ್ಥಳನಾಮಗಳು ಬರೆಹ ಮತ್ತು ಬಳಕೆ

ಕೆಲವು ಗ್ರಾಮ, ಸ್ಥಳನಾಮಗಳಿಗೆ ಎರಡು, ಮೂರು ಬಗೆಯ ಉಚ್ಚಾರ ಹಾಗೂ ಬರೆಹ ಬಳಕೆಯಲ್ಲಿರುವುದು ಕಂಡುಬರುತ್ತದೆ. ಭಾರತದಲ್ಲಿ ಆಂಗ್ಲರ ಆಡಳಿತ ಪ್ರಭಾವ ಹೊಂದಿದ ನಂತರ, ಅವರು ದೇಶೀಯ ಹೆಸರುಗಳನ್ನು

ತಮ್ಮ ಭಾಷಾರಚನೆಗೆ ಅನುಗುಣವಾಗಿ ಕರೆದುಕೊಂಡರು. ಅಲ್ಲದೇ ಸ್ಥಳೀಯ ಸ್ಥಳನಾಮ ರೂಪಗಳನ್ನು ಇಲ್ಲಿನ ಉಚ್ಚಾರಣೆಗೆ ತಕ್ಕಂತೆ ತಮ್ಮ ಭಾಷೆಯಲ್ಲಿ ಕರೆದುಕೊಂಡರು. ಈ ಅವಧಿಯಲ್ಲಿ ಸ್ಥಳನಾಮಗಳ ಬರೆಹ ಮತ್ತು ಬಳಕೆಯಲ್ಲಿ ವಿವಿಧ ಸ್ಥಿತ್ಯಂತರಗಳು ಉಂಟಾಗಿವೆ. ಅಂತಹ ಒಂದು ಮಾದರಿಯನ್ನು ಇಲ್ಲಿ ಕೊಡಲಾಗಿದೆ.

| A | B |
|---|---|
| ದೇಸೀ ರಚನೆಗಳು | ಇಂಗ್ಲಿಶ್ ಪ್ರಭಾವಿತ ರಚನೆಗಳು |
| ಆದವಾನಿ - Adavani- ADN | Adoni- ಆದೋನಿ |
| ಕಡಪ - Kadapa | Cuddappa- ಕಡ್ಡಪ್ಪ |
| ಕರ್ನೂಲು - Karnoolu- KNL | Kurnool- ಕರ್ನೂಲು |
| ಕೊಡಗು - Kodagu | Coorg- ಕೂರ್ಗ್ |
| ಗುತ್ತಿ - Gutty- ANT | Gooty- ಗೂಟಿ |
| ಧಾರವಾಡ - Dharavada | Dharwar- ಧಾರ್‌ವಾರ್ |
| ಬಳ್ಳಾರಿ - Ballary- BLR | Bellary- ಬೆಲ್ಲಾರಿ |
| ಬೆಂಗಳೂರು - Bengalooru | Bangalore- ಬ್ಯಾಂಗಲೂರ್ |
| ವಿಜಯವಾಡ - Vijayavada | Vijayawar- ವಿಜಯವಾರ್ |
| ಹುಬ್ಬಳ್ಳಿ - Huballi | Hubli- ಹುಬ್ಲಿ |
| ಹೊಸಪೇಟೆ - Hosapete | Hospet- ಹಾಸ್ ಪೆಟ್ |

ಮೇಲಿನ ಪಟ್ಟಿಯಲ್ಲಿನ 'A' ಮಾದರಿಯ ರಚನೆಗಳು ದೇಸೀಯ ರಚನೆಗಳು. ಅವು ಮುಂದೆ ಬರೆದಿರುವಂತೆ ಇಂಗ್ಲೀಷಿನಲ್ಲಿಯೂ ಅವುಗಳ ಸ್ವರೂಪಕ್ಕೆ ತಕ್ಕಂತೆ ಬರೆಯಬಹುದಾದ ರಚನೆಗಳು. 'B' ಪಟ್ಟಿಯಲ್ಲಿ ಆಂಗ್ಲರು ಬಂದ ತರುವಾಯ ಬದಲಾದ ಹೆಸರುಗಳು. ಬಹುಶ: ಇವು ಅವರ ಭಾಷೆಯ ಸ್ವರೂಪ, ಪದ, ಧ್ವನಿ, ಉಚ್ಚಾರಣೆಯ ನಿಯಮವನ್ನು ಅನುಸರಿಸಿ ಬರೆದಂತಹ ರಚನೆಗಳಾಗಿವೆ. ಆದರೆ ದೇಸೀಯ ನೆಲೆಯಲ್ಲಿ ಈ ಸ್ಥಳನಾಮಗಳ ಬರೆಹ ಮತ್ತು ಬಳಕೆಯಲ್ಲಿ ಇಂದಿಗೂ ಭಿನ್ನತೆಯನ್ನು ಪಡೆದುಕೊಂಡಿವೆ. ಕನ್ನಡ ಮಾತೃ ಭಾಷಿಕರು ಮೇಲಿನ ಊರ ಹೆಸರುಗಳನ್ನು ಕನ್ನಡದಲ್ಲಿ ಬರೆಯುವಾಗ 'A' ಪಟ್ಟಿಯಲ್ಲಿದ್ದಂತೆ ಬರೆಯುತ್ತಾರೆ. ಅವರು ಇಂಗ್ಲೀಷಿನಲ್ಲಿ ಬರೆಯುವಾಗ 'B' ಪಟ್ಟಿಯಲ್ಲಿ ಇರುವಂತೆ ಬರೆಯುತ್ತಾರೆ.

ಉಚ್ಚಾರಣೆಯ ಸಂದರ್ಭದಲ್ಲಿ ಅಕ್ಷರಸ್ಥರೂ ಕೂಡ 'A' ಪಟ್ಟಿಯಲ್ಲಿರುವಂತೆ ಉಚ್ಚರಿಸುತ್ತಾರೆ. ಬರೆಹದಲ್ಲಿ ಮಾತ್ರ 'B' ಪಟ್ಟಿಯಲ್ಲಿರುವಂತೆ ಬರೆಯುತ್ತಾರೆ. ಉತ್ತರಭಾರತದ ಯಾವುದಾದರೂ ಒಬ್ಬ ವ್ಯಕ್ತಿ ಇಲ್ಲಿಗೆ ಬಂದಾಗ, ಇಲ್ಲಿ ಕಂಡು ಬರುವ

Adoni → ಆದೋನಿ

Bellary → ಬೆಲ್ಲಾರಿ

Bangalore → ಬ್ಯಾಂಗಲೂರ್

Seram → ಸೇಡಂ

ಎಂಬ ಸ್ಥಳಗಳನ್ನು ಇಂಗ್ಲಿಶ್‌ನ ಪ್ರಭಾವದಂತೆಯೇ ಉಚ್ಚರಿಸುವುದು ಕಂಡು ಬರುತ್ತದೆ. ಅಂದರೆ ಸ್ಥಳೀಯ ವ್ಯಕ್ತಿಗಳಿಗೆ ಆಯಾ ಸ್ಥಳನಾಮಗಳ ಮೂಲ ಅರಿವು ಇರುತ್ತದೆ. ಕಾರಣ ಅವರ ಉಚ್ಚಾರಣೆ ಮತ್ತು ಬರೆಹ ಭಿನ್ನವಾಗಿರುತ್ತದೆ. ಅನ್ಯ ಪರಿಸರದ ವ್ಯಕ್ತಿಗಳಲ್ಲಿ ಉಚ್ಚಾರಣೆ ಮತ್ತು ಬರೆಹ ಏಕ ರೀತಿಯಾಗಿರುತ್ತದೆಂಬುದನ್ನು ಗಮನಿಸಬೇಕು. ಇತ್ತೀಚೆಗೆ ಕೆಲವು ಅಕ್ಷರಸ್ಥರಲ್ಲಿ (ಸ್ಥಳೀಯರು) ಬರೆಹ ಮತ್ತು ಬಳಕೆ ಎರಡೂ ಇಂಗ್ಲಿಶ್ ರಚನೆಗಳನ್ನು ಅವಲಂಬಿಸಿರುವುದು ತಿಳಿಯುತ್ತದೆ.

ದೇಶೀಯ ಸ್ಥಳನಾಮಗಳನ್ನು ಆಂಗ್ಲರು ಒಂದೊಮ್ಮೆ ಸರಿಯಾಗಿ ಗ್ರಹಿಸಿಯೇ ಬರೆಹದ ರೂಪಕ್ಕೆ ತಂದಿದ್ದಾರೆಂದೂ ತಿಳಿಯಬಹುದು. "ಇಂಗ್ಲಿಶ್‌ನ Can, (ಕ್ಯಾನ್) Ban, (ಬ್ಯಾನ್) ನಲ್ಲಿ ಬಳಕೆಯಾಗಿರುವ 'A' ಸ್ವರದ ಉಚ್ಚಾರಕ್ಕೆ ಅನುಗುಣವಾಗಿ 'ಬೆಂಗಳೂರು' ಕನ್ನಡದ ವ್ಯಾವಹಾರಿಕ ಉಚ್ಚಾರದ 'ಬ್ಯೆಂಗಳೂರು' ಎಂಬುದಕ್ಕೆ ಸಂವಾದಿಯಾಗಿ Bangalore ಎಂದು ಬಳಕೆಯಾಗಿದೆ. ಆದರೆ ಹಿಂದಿ ಭಾಷಿಕರಲ್ಲಿ ಇದು 'ಬಂಗ್ಲೋರ್' ಎಂದೇ ಕೇಳಿಬರುತ್ತದೆ. ಇಲ್ಲಿ Can, ban, ಮಾದರಿಯ ಉಚ್ಚಾರಕ್ಕೆ ಬಳಕೆಯಾಗಿರುವ 'a' ಜಾರು ಸ್ವರವನ್ನು ಬರೆಹದ ಮೂಲಕ ಮಧ್ಯ ಅಗೋಳ 'ಅ' (a) ಸ್ವರವನ್ನಾಗಿ ಹಿಂದಿ ಭಾಷಿಕರು ಗ್ರಹಿಸಿದ್ದಾರೆ." (ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ - ಪು - ೪೮)

ಅದರಂತೆ 'ಬಳ್ಳಾರಿ' ಎಂಬ ಸ್ಥಳನಾಮವನ್ನು ವಿವರಿಸಬಹುದು. ಆಂಗ್ಲರು ಗ್ರಹಿಸಿದ Bellary - ಬೆಲ್ಲಾರಿ' ಎಂಬುದು ದೇಶೀ ರಚನೆಯಲ್ಲಿ ಶಾಸನೋಕ್ತ 'ಬೆಳ್ಳಾರೆ' ಎಂಬ ಆಕೃತಿಮಾಕ್ಕೆ ಸಂವಾದಿಯಾಗಿ ಕಂಡು ಬರುತ್ತದೆ. ಬಹುಶಃ ಇಂಗ್ಲಿಶ್‌ಗೆ ಸ್ಥಳನಾಮಗಳನ್ನು ಅಳವಡಿಸುವಾಗ ಇಂತಹ ಮೂಲ ನಿಷ್ಪತ್ತಿಯನ್ನು ನೋಡಿರಲಿಕ್ಕೆ ಸಾಧ್ಯವಿದೆಯೆಂದು ಹೇಳಬಹುದು.

ಅದೇನಿದ್ದರೂ ಕೆಲವು ರಚನೆಗಳು ಮಾತ್ರ ಈ ರೀತಿಯ ಊಹೆಗೆ ನಿಲುಕುತ್ತವೆ. ಉಳಿದಂತೆ ಅನೇಕ ಹೆಸರುಗಳು ಇಂಗ್ಲಿಶ್ ಭಾಷೆಯ ಸ್ವರೂಪ, ಧ್ವನಿನಿಯಮಕ್ಕೆ ತಕ್ಕಂತೆ ರಚನೆಯಾಗಿರುವುದೇ ಹೆಚ್ಚು ಎಂದು ಹೇಳಬಹುದು.

ಸ್ಥಳನಾಮಗಳು ಭಾಷಿಕ ಘಟಕಗಳಾಗಿ ಒಂದು ಶಿಷ್ಟವೆನ್ನಬಹುದಾದ ರೂಪವನ್ನು ಬಹುತೇಕ ಇಂದು ಪಡೆದುಕೊಂಡಿವೆ. ಸಾಮಾನ್ಯ ಜನರಿಂದ ಗ್ರಾಮಕ್ಕೆ ಹೆಸರು ನಿರ್ದೇಶನವಾಗಿದ್ದರೂ ಅದು ಆಡುನುಡಿಯ ರೂಪದಿಂದ, ಶಿಷ್ಟರೂಪಕ್ಕೆ ತಿರುಗಿರುವುದು ಕಂಡುಬರುತ್ತದೆ. ಈ ಶಿಷ್ಟರೂಪವನ್ನೇ ಬರೆಹದ ರಚನೆಯನ್ನಾಗಿ ಇಂದು ಸ್ವೀಕರಿಸಿಕೊಳ್ಳಲಾಗಿದೆ. ಅದರಂತೆ ಈ ಬರೆಹದ ರೂಪಗಳನ್ನು ಅಕ್ಷರಸ್ಥ, ಅನಕ್ಷರಸ್ಥ ಸಮುದಾಯಗಳು ಉಚ್ಚರಿಸುವ ವಿಧಾನ ಭಿನ್ನವಾಗಿರುತ್ತದೆ. ಬಳಕೆಯ ಸಂದರ್ಭದಲ್ಲಿ ಅಕ್ಷರಸ್ಥ ಮತ್ತು ಅನಕ್ಷರಸ್ಥ ಸಮುದಾಯಗಳ ನಡುವೆ ತೀರಾ ಭಿನ್ನತೆಯಿರುವುದಿಲ್ಲ. ಆದರೂ ಅಕ್ಷರಸ್ಥರು ಕೊಂಚ ಶಿಷ್ಟರೂಪವನ್ನು ಬಳಕೆಯಲ್ಲಿ ಉಳಿಸಿಕೊಂಡಿರುತ್ತಾರೆ. ಸ್ಥಳನಾಮಗಳ ಬಳಕೆಯ ವಲಯಗಳನ್ನು ಸೂಕ್ಷ್ಮವಾಗಿ ನೋಡಿದರೆ ಜಾತಿ, ವರ್ಗದ ನೆಲೆಯಲ್ಲಿಯೂ ಅನೇಕ ಭಾಷಿಕ ವ್ಯತ್ಯಾಸಗಳಿಂದ ಬಳಸಲ್ಪಡುವುದನ್ನು ಗುರುತಿಸಬಹುದು. ಪ್ರಸ್ತುತ ಗಡಿ ಆಂಧ್ರ - ಕರ್ನಾಟಕ ಪ್ರದೇಶದ ಸ್ಥಳನಾಮಗಳ ಶಿಷ್ಟರೂಪ (ಬರೆಹ) ಮತ್ತು ಆಡುನುಡಿಯ ರೂಪ (ಬಳಕೆ)ವನ್ನು ಪಟ್ಟಿ ಮಾಡಲಾಗಿದೆ.

| ಬರೆಹ (ಶಿಷ್ಟರೂಪ) | ಬಳಕೆ (ಅಕ್ಷರಸ್ಥರು) | ಬಳಕೆ (ಅನಕ್ಷರಸ್ಥರು) |
|---|---|---|
| ಅಮರಾಪುರ | ಅಂಬ್ರಾಪುರ | ಅಂಬ್ರಾಪ್ರ |
| ಅರಳಿಗನೂರು | ಅರಳಿಗ್ನೂರು | ಅಳ್ಳಿಗನೂರು |
| ಆದೋನಿ (ಆದವಾನಿ) | ಆದ್ವಾನಿ, ಆದೋನಿ | ಆದಾನಿ |
| ಇಬ್ರಾಹಿಂಪುರ | ಇಬ್ರಾಇಂಪುರ | ಇಬ್ರಾಂಪ್ರ |
| ಕಕ್ಕಬೇವೇನಹಳ್ಳಿ | ಕಕ್ಕಬೇವಿನಹಳ್ಳಿ | ಕಕ್ಕವನಳ್ಳಿ |
| ಕಮ್ಮರಚೇಡು | ಕಮ್ಮರಚೇಡು | ಕಂಬ್ರೆಚೇಡ್ |
| ಗುಬ್ಬಿಹಾಳು | ಗುಬ್ಬಿಆಳು | ಗುಬ್ಯಾಳು |
| ಗೆಜ್ಜೆಹಳ್ಳಿ | ಗೆಜ್ಜಳ್ಳಿ | ಗೆಜ್ಜ್ಯಳ್ಳಿ |
| ಗೋಡೆಹಾಳ್ | ಗೋಡೆಆಳ್ | ಗ್ಯಾಡ್ಯಾಳು |
| ಚಿಂತಕುಂಟೆ } ಚ > ಸ | ಚಿಂತ್‌ಕುಂಟೆ | ಸಿಂತ್ಗುಂಟೆ |
| ಚಿನ್ನ ಹ್ಯಾಟ | ಚಿನ್ನಹ್ಯಾಟ | ಸಿನ್ಯಾಟಿ, ಚಿಗಾಟಿ |
| ಚಿನ್ನಕಡಬೂರು | ಚಿನ್ನಕಡಬೂರು | ಸಿನ್ನಕಡಬೂರು |
| ಜೋಹರಾಪುರ | ಜೋರಾಪುರಂ | ಜೋರಾಪ್ರಂ |
| ಜೋಳದರಾಶಿ | ಜೋಳದರಾಸಿ | ಜ್ವಾಳದರಾಸಿ |
| ತಿಮ್ಮಾಪುರ | ತಿಮ್ಮಾಪುರ | ತಿಮ್ಮಾಪ್ರ |
| ದಮ್ಮೂರು } ಅ > ಒ | ದಮ್ಮೂರು | ದೊಮ್ಮೂರು |
| ದೇವಲಾಪುರ } ಏ > ಆ | ದೇವಲಾಪೂರ | ದ್ಯಾವಲಾಪ್ರ |
| ನಾರಾಯಣಪುರ | ನಾರಾಣಪುರ | ನಾಣ್ಯಾಪ್ರ |
| ಬೂದಿಗುಪ್ಪೆ | ಬೂದ್‌ಗುಪ್ಪ | ಬೂದ್‌ಗುಂಪೆ |
| ಬೇವಿನಮರದ ಸೂಗೂರು } ಹ್ರಸ್ವೀಕರಣ | ಬಿ.ಎಂ. ಸೂಗೂರು | ಬೇನ್ ಮರ್ದಸೂಗೂರು |
| ಬೊಮ್ಮಗುಂಡನಹಳ್ಳಿ | ಬಿ.ಜಿ.ಹಳ್ಳಿ | ಬೊಂಬಾನಳ್ಳಿ |
| ಮಲ್ಲಿಕಾರ್ಜುನಹಳ್ಳಿ | ಮಲ್ಲಿಕಾರ್ಜುನಹಳ್ಳಿ | ಮಲ್ಲಿಕಾನಳ್ಳಿ |
| ಮುಗುಮನಗೊಂದಿ | ಮುಗಮನಗುಂದಾ | ಮುನಾನಗುಂದೆ |
| ಮೊಲಗಹಳ್ಳಿ | ಮೊಲಗಹಳ್ಳಿ | ಮೊಳಗೋಳಿ |
| ಮೋಕ } ಓ > ಆ | ಮೋಕ | ಮಾಕೆ |
| ಯರೇಇಂಗಳಿಗಿ | ಯರಂಗಿಳಿಗಿ | ಯರೆಂಗ್ಳಿ |
| ಲಿಂಗದಹಳ್ಳಿ } ಲ > ನ | ಲಿಂಗದಳ್ಳಿ | ನಿಂಗದಳ್ಳಿ |
| ವಿರುಪಾಪುರಂ | ವಿರುಪಾಪ್ರಂ | ಇರಪಾಪ್ರಂ / ಯಿರಪಾಪ್ರಂ |
| ಸಿದ್ಧರಗಡ್ಡೆ | ಶ್ರೀಧರಗಡ್ಡೆ | ಸಿಗರಗಡ್ಡೆ |
| ಹರಗಿನದೋಣಿ | ಹರಗಿನದೋಣ | ಅರಗಿನಡೋಣಿ |
| ಹಂದರಹಾಳ್ } ಹ > ಅ, ಆ | ಹಂದ್ರಾಳ್ | ಅಂದ್ರಾಳು |
| ಹಾಲಹರಿವಿ | ಹಾಲರ್ವಿ | ಆಲರಿವಿ |
| ಹುಲಿಕಣಿವೆ } ಹು > ಉ | ಹುಲಿಕಣಿವೆ | ಉಲಿಕಣಿವೆ |
| ಹೆಬ್ಬೆಟ್ಟಂ } ಹೆ > ಎ/ಯೆ | ಹೆಬ್ಬಟಂ | ಎಬ್ಬೆಟ್ಟ / ಯಬ್ಬೆಟ್ಟ |
| ಹೊಳಲುಗುಂದ } ಹೊ > ಒ/ವ | ಹೊಳಗುಂದೆ | ವಳ್ಗುಂದೆ |

ಮೇಲಿನ ಪಟ್ಟಿಯಲ್ಲಿರುವ ಎಲ್ಲ ಸ್ಥಳನಾಮಗಳ ಉಚ್ಚಾರಣೆಯನ್ನು ಕ್ಷೇತ್ರಕಾರ್ಯದ ಮೂಲಕ ತಿಳಿಯಲಾಗಿದೆ. ಮುಖ್ಯವಾಗಿ ಬರೆಹದ ರೂಪದಿಂದ ಬಳಕೆಯ ರೂಪಕ್ಕೆ ಬಂದಾಗ, ಅದರಲ್ಲಿಯೂ ಅಕ್ಷರಸ್ಥರು ಉಚ್ಚರಿಸುವ ರೀತಿಗೂ, ಅನಕ್ಷರಸ್ಥರು ಬಳಸುವ ರೀತಿಗೂ ಕೊಂಚ ವ್ಯತ್ಯಾಸವಿರುವುದನ್ನು ಗುರುತಿಸಬಹುದು.

ಅಕ್ಷರಸ್ಥರು ಶಿಷ್ಟರೂಪದಂತೆ ಉಚ್ಚರಿಸಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ. ಅನಕ್ಷರಸ್ಥ ಸಮುದಾಯ ದೇಸೀರೂಪದ ಶುದ್ಧ ಆಡುನುಡಿಯನ್ನು ಸ್ಥಳನಾಮ ಉಚ್ಚಾರಣೆಗೆ ಬಳಸುವುದು ಕಂಡುಬರುತ್ತದೆ.

ಅದರಂತೆ ಉದ್ದುದ್ದನೆಯ ಸ್ಥಳನಾಮ ರಚನೆಗಳನ್ನು ಅಕ್ಷರಸ್ಥ ಸಮುದಾಯಗಳು ಹ್ರಸ್ವೀಕರಣಗೊಳಿಸಿಕೊಂಡಿವೆ. ಇಂಗ್ಲಿಶ್ ಭಾಷೆಯ ಪ್ರಭಾವಕ್ಕೆ ಈ ಸಮುದಾಯ ಒಳಗಾಗಿರುವುದು ಇದರಿಂದ ತಿಳಿಯುತ್ತದೆ. ಅನಕ್ಷರಸ್ಥ ಸಮುದಾಯವು ಉದ್ದುದ್ದನೆಯ ರಚನೆಗಳನ್ನು ಹಾಗೆಯೇ ಬಳಸುತ್ತಿರುವುದು ಕಂಡುಬರುತ್ತದೆ. ಆಧುನಿಕತೆಯ ಭಾಷಿಕ, ರಾಜಕೀಯ ಮುಂತಾದ ಕೆಲವು ಕಾರಣಗಳ ಪ್ರೇರಣೆ, ಒತ್ತಡಗಳಿಗೆ ಒಳಗಾಗಿಲ್ಲವೆಂಬುದನ್ನು ಈ ಮೂಲಕ ಗುರುತಿಸಬಹುದು. ಯಾವುದೇ ಭೌಗೋಳಿಕ ಪರಿಸರದಲ್ಲಿ ಈ ರೀತಿಯ ಚಿತ್ರಣ ದೊರೆಯುವುದು ಸಹಜವಾಗಿರುತ್ತದೆ.

### ೪.೧೪. ಸ್ಥಳನಾಮಗಳ ದ್ವಿಭಾಷಿಕ ರೂಪ

ದ್ವಿಭಾಷಿಕ ವಲಯವಾದ ಆಂಧ್ರ - ಕರ್ನಾಟಕ ಗಡಿಭಾಗದಲ್ಲಿ ಬರೆಹ ಮತ್ತು ಬಳಕೆಯ ವಲಯಗಳು ಎರಡು ಭಾಷೆಗೆ ಸಂಬಂಧಿಸಿ, ಆಯಾ ಮಾತೃಭಾಷಿಕರ ನೆಲೆಯಲ್ಲಿ ವೈಶಿಷ್ಟ್ಯವನ್ನು ಪಡೆದುಕೊಳ್ಳುತ್ತವೆ. ಗಡಿ ಪ್ರದೇಶದಲ್ಲಿ ಇಂದು ರೆವಿನ್ಯೂ ದಾಖಲೆಯಾಗಿರುವ ಸ್ಥಳನಾಮಗಳು ಅನೇಕ ಬದಲಾವಣೆಗಳೊಂದಿಗೆ ಸಿದ್ಧ ಮಾದರಿಯಲ್ಲಿವೆ. ಬಹುತೇಕ ಇಂದು ವ್ಯಾವಹಾರಿಕ ಸಂದರ್ಭದಲ್ಲಿ ಅಂದರೆ, ಸರಕಾರಿ ಸಾರಿಗೆ ಇಲಾಖೆ, ಸಾರ್ವಜನಿಕ ಬೋರ್ಡುಗಳು, ಕಛೇರಿ ಫಲಕಗಳು, ಮುಂತಾದ ಕಡೆ ರೆವಿನ್ಯೂ ಇಲಾಖೆಯಲ್ಲಿ ದಾಖಲೆಗೊಂಡ ಹೆಸರುಗಳೇ ಬಳಕೆಯಾಗುತ್ತವೆ. ಆದರೆ ಸ್ಥಳೀಯರು ತಮ್ಮ ಆಡುಭಾಷೆಯಲ್ಲಿ ಹೆಸರುಗಳನ್ನು ಬಳಸುವುದು ಸರ್ವೇಸಾಮಾನ್ಯವಾಗಿದೆ. ಇದಕ್ಕಿಂತ ಮುಖ್ಯವಾಗಿ ದ್ವಿಭಾಷಿಕ ವಲಯದಲ್ಲಿ ಆಯಾ ಮಾತೃಭಾಷಿಕರು ತಮ್ಮದೇ ಭಾಷೆಯಲ್ಲಿ ಸ್ಥಳನಾಮಗಳನ್ನು ಕರೆಯುವ ರೂಢಿಯು ಇಲ್ಲಿದೆ. ಅಂತಹ ಮಾದರಿಯನ್ನು ಇಲ್ಲಿ ಪಟ್ಟಿ ಮಾಡಿದೆ.

| ರೆವಿನ್ಯೂ ದಾಖಲೆಯ ರೂಪ (ಬರೆಹ) | ತೆಲುಗು ಮಾತೃಭಾಷಿಕರು (ಬಳಕೆ) | ಕನ್ನಡ ಮಾತೃಭಾಷಿಕರು (ಬಳಕೆ) |
|---|---|---|
| ಅಗಸಲದಿನ್ನೆ | ಚಾಕಲದಿನ್ನ | ಅಗಸನದಿನ್ನೆ |
| ಈಚಲಾಳ್ | ಈಚಲಪಾಡು | ಈಚಲಾಳ್ |
| ಉಪ್ಪಾರಹಾಳು | ಉಪ್ರಾಲು | ಉಪ್ಪಾರಾಳ್ |
| ಎರಿಗೇರಾ | ಎರಿಗೇರಾ | ಎರಿಗೇರಿ |
| ಚಿನ್ನಹೋತೂರು | ಚಿನ್ನೋತೂರು | ಚಿಗೋತೂರು |
| ಚಿನ್ನಹರಿವಾಣ | ಚಿನ್ನಹರಿವಾಣಂ | ಚಿಕ್ಕಹರಿವಾಣ |
| ಚಿನ್ನಹ್ಯಾಟ | ಚಿನ್ನಹ್ಯಾಟ | ಚಿಗ್ಯಾಟೆ |
| ಚಿನ್ನಗೊನೆಹಾಳು | ಚಿನ್ನಗೋನಾಳ್ | ಸಣ್ಣಗೊನಾಳು |
| ಚಿನ್ನಕಡಬೂರು | ಚಿನ್ನಕಡಬೂರು | ಚಿಕ್ಕಡಬೂರು |
| ಚಿನ್ನತುಂಬಳಂ | ಚಿನ್ನತುಂಬಳಂ | ಚಿಕ್ಕತುಂಬಳ |
| ಚೊಕ್ಕನಹಳ್ಳಿ | ಸಕ್ಕನಪಲ್ಲಿ | ಸಕ್ಕನಪಲ್ಲಿ |

| | | |
|---|---|---|
| ತಂಗರಡೋನಾ | ತಂಗರಡೋನಾ | ತಂಗರಡೊಣೆ |
| ದಯ್ಯಾಲಗುಡ್ಡ | ದಯ್ಯಾಲಗುಡ್ಡ | ದೆವ್ವದಗುಡ್ಡ |
| ದೇಗುಲದಹಾಳು | ದೇಗುಲಪಾಡು | ದೇಗುಲ್ದಾಳ್ |
| ನಗರಡೋನ | ನಗರಡೋನಾ | ನಗರಡೊಣೆ |
| ಪಲ್ಲಿಪಾಡು | ಪಲ್ಲಿಪಾಡು | ಹಳ್ಳಿಹಾಳ್ |
| ಪಚ್ಚರಹಳ್ಳಿ | ಪಚ್ಚಾರಪಲ್ಲಿ | ಪಚ್ಚಾರಳ್ಳಿ |
| ಪೆದ್ದತುಂಬಳಂ | ಪೆದ್ದತುಂಬಳಂ | ಹಿರೇತುಂಬಳ |
| ಪೆದ್ದಕಡಬೂರು | ಪೆದ್ದಕಡಬೂರು | ಹಿರೇಕಡಬೂರು |
| ಪೆದ್ದಗೊನೆಹಾಳು | ಪೆದ್ದಗೋನಾಳು | ಹಿರೇ ಗೊನಾಳ್ |
| ಪೆದ್ದಹೋತೂರು | ಪೆದ್ದೋತೂರು | ಹಿರೇಹೋತೂರ್ |
| ಪೆದ್ದಹ್ಯಾಟ | ಪೆದ್ದ್ಯಾಟ | ಹಿರ್‍ಯಾಟೆ |
| ಬದನೆಹಾಳು | ಬದಲಪಾಡು | ಬದನೆಹಾಳ್ |
| ಬೆಲ್ಲೋನಾ | ಬೆಲ್ಲೋನಾ | ಬೆಳ್ಳೊಣೆ |
| ಬೊಮ್ಮಗುಂಡನಹಳ್ಳಿ | ಬೊಮ್ಮನಪಲ್ಲೆ | ಬೊಂಬನಳ್ಳಿ |
| ಮಡ್ಡಿಲಿಂಗದಹಳ್ಳಿ | ಮಡ್ಡಿಲಿಂಗಂಪಲ್ಲಿ | ಮಡ್ಡಿನಿಂಗದಳ್ಳಿ |
| ಮಲ್ಲಿಕಾರ್ಜುನಹಳ್ಳಿ | ಮಲ್ಲಿಕಾರ್ಜುನಪಲ್ಲಿ | ಮಲ್ಲಿಕಾರ್ಜುನಹಳ್ಳಿ |
| ಮಾರಲುಮಡಿಕೆ | ಮಾರ್ಲಮಡಕ | ಮಾರ್ಲುಮಡಿಕೆ |
| ಮೂಸಾನಹಳ್ಳಿ | ಮೂಸಂಪಲ್ಲಿ | ಮೂಸಾನಳ್ಳಿ |
| ಮೆದೆಹಾಳು | ಮೆದೆಪಾಡು | ಮೆದ್ಯಾಳು |
| ಮೊಲಗಹಳ್ಳಿ | ಮೊಲಗವೇಲಿ | ಮೊಳಗೋಳಿ |
| ಲಿಂಗದಹಳ್ಳಿ | ಲಿಂಗಂಪಲ್ಲಿ | ಲಿಂಗದಳ್ಳಿ |
| ಹುಲಿಕಣಿವೆ | ಪುಲಿಕಣವ | ಹುಲಿಕಣಿವೆ |

ಮೇಲಿನ ಪಟ್ಟಿಯಲ್ಲಿರುವ ಬರೆಹ ಮತ್ತು ಬಳಕೆಯ ರೂಪಗಳು ಆಂಧ್ರದ ಗಡಿಭಾಗದಲ್ಲಿ ಆದಂತಹ ಸ್ಥಿತ್ಯಂತರವಾಗಿದೆ. ಇಲ್ಲಿ ಹೆಚ್ಚಾಗಿ (ಕರ್ನೂಲು ಜಿಲ್ಲೆಯ ಆದವಾನಿ, ಆಲೂರು) ಕನ್ನಡ ಮಾತೃಭಾಷಿಕರು, ಅದೇ ತೆರನಾಗಿ ತೆಲುಗು ಮಾತೃಭಾಷಿಕರೂ ಇದ್ದಾರೆ. ಇದರಿಂದಾಗಿ ಪರಸ್ಪರ ಎರಡೂ ಭಾಷೆಯನ್ನಾಡುವವರು ಈ ಪ್ರಕ್ರಿಯೆಗೆ ಕಾರಣವಾಗಿದ್ದಾರೆ. ಈ ಪ್ರಕ್ರಿಯೆಯು ಕರ್ನಾಟಕದ ಗಡಿಭಾಗವಾದ ಬಳ್ಳಾರಿ - ಸಿರುಗುಪ್ಪ ತಾಲ್ಲೂಕುಗಳಲ್ಲಿ ವಿರಳವಾಗಿ ನಡೆಯುತ್ತಿದೆ. ಕರ್ನೂಲು ಜಿಲ್ಲೆಯ ಗಡಿಭಾಗದ ಅನೇಕ ಸ್ಥಳನಾಮಗಳು ಕನ್ನಡದ ರಚನೆಗಳಾಗಿದ್ದರೂ, ಆಂಧ್ರದ ರಾಜಕೀಯ, ಭಾಷಿಕ ಒತ್ತಡಗಳಿಂದ ಇಲ್ಲಿನ ಗ್ರಾಮನಾಮಗಳ ಫಲಕಗಳು

ತೆಲುಗಿನಲ್ಲಿ ಬರೆಯಲಾಗಿದೆ. ಕಾರಣವಾಗಿ ಕನ್ನಡ ರಚನೆಗೆ ತೆಲುಗು ಭಾಷೆಯ ಪ್ರಭಾವ ತಾನಾಗಿಯೇ ಬಂದಿರುವುದು ತಿಳಿಯುತ್ತಿದೆ. ಬಳ್ಳಾರಿ ಜಿಲ್ಲೆಯ ಗಡಿಯಲ್ಲಿ ಈ ಬಗೆಯ ರಾಜಕೀಯ ಹಾಗೂ ಭಾಷಿಕ ಒತ್ತಡಗಳು ಸ್ಥಳನಾಮಗಳ ಮೇಲೆ ಇಲ್ಲವೆಂಬುದು ತಿಳಿಯುತ್ತದೆ. ಇತ್ತೀಚೆಗೆ ಆಂಧ್ರದ ಸಮುದಾಯಗಳು ಬಳ್ಳಾರಿ ಜಿಲ್ಲೆಗೆ ವಲಸೆ ಬಂದು ಇಲ್ಲಿ ಕ್ಯಾಂಪುಗಳನ್ನು ರಚಿಸಿಕೊಂಡಿದ್ದಾರೆ. ಆ ಕ್ಯಾಂಪುಗಳಿಗೆ ದೈವ, ವ್ಯಕ್ತಿಗೆ ಸಂಬಂಧಿಸಿದ ಹೆಸರುಗಳನ್ನು ನೀಡಲಾಗಿದ್ದು, ಇಂತಹ ರಚನೆಗಳಲ್ಲಿ ತೆಲುಗಿನ ಪ್ರಭಾವವನ್ನು ಗುರುತಿಸಲು ಸಾಧ್ಯವಿದೆ.

**೪.೧೯. ಸ್ಥಳನಾಮಗಳು - ದ್ವಿಭಾಷಿಕ ವಲಯ**

ಒಂದು ಭಾಷಿಕ ಪ್ರದೇಶದಲ್ಲಿ ಹಲವಾರು ಕಾರಣಗಳಿಂದ ಬೇರೆ ಭಾಷೆಯ ಸ್ಥಳನಾಮಗಳು ಕಂಡುಬರಲು ಸಾಧ್ಯ. ಮುಸ್ಲಿಂ, ಆಂಗ್ಲ ಆಡಳಿತದಿಂದಾಗಿ ಆಯಾ ಭಾಷಿಕ ಪ್ರೇರಣೆಗಳು ಹೆಸರುಗಳ ಮೇಲಾಗಿವೆ. ಅದರಂತೆ ದ್ವಿಭಾಷಿಕ ವಲಯದಲ್ಲಿ ಕೊಂಚಮಟ್ಟಿಗಾದರೂ ಪರಸ್ಪರ ಎರಡು ಭಾಷೆಗಳ ನಡುವೆ ನುಡಿಮಿಶ್ರಣ, ನುಡಿಬೆರಕೆ, ನುಡಿಜಗಿತಗಳು ಉಂಟಾಗಿರುವುದು ಸಹಜ ಪ್ರಕ್ರಿಯೆಯಾಗಿದೆ.

ಸ್ಥಳನಾಮಗಳನ್ನು ದ್ವಿಭಾಷಿಕ ವಲಯದಲ್ಲಿ ನೋಡುವಾಗ ಮುಖ್ಯವಾಗಿ ಅಲ್ಲಿ ನಡೆಯುವ ದ್ವಿಭಾಷಿಕ ವಲಯದ ನುಡಿಬೆರಕೆ, ನುಡಿಜಗಿತವನ್ನು ಗುರುತಿಸುವುದು ಸೂಕ್ತವೆನಿಸುತ್ತದೆ. ಕಾರಣ ನುಡಿಬೆರಕೆ, ನುಡಿಜಗಿತವನ್ನು ಇಲ್ಲಿ ಪೂರ್ವ ಪ್ರವೇಶಿಕೆಯಾಗಿ ನೀಡಲಾಗಿದೆ.

ಇಂಗ್ಲೀಷಿನ Code mixing ಗೆ ಸಂವಾದಿಯಾಗಿ ನುಡಿಬೆರಕೆ, ನುಡಿಮಿಶ್ರಣ, ಭಾಷಾಮಿಶ್ರಣ ಎಂದೂ, Code swtching ಗೆ ಸಂವಾದಿಯಾಗಿ ನುಡಿಜಗಿತ, ನುಡಿಪಲ್ಲಟ ಎಂಬ ಪದಗಳನ್ನು ಕನ್ನಡದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಬರೆಹಗಳಲ್ಲಿ ಬಳಸಲಾಗುತ್ತಿದೆ. "ಒಂದು ಭಾಷೆಯ ವಾಕ್ಯವನ್ನು ಆಡುವಾಗ, ಬರೆಯುವಾಗ ಇನ್ನೊಂದು ಭಾಷೆಯ ಅಂಶಗಳನ್ನು ಬೆರೆಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯದಾಗಿದ್ದು, ವಾಕ್ಯಾಂಶಗಳು ಮಾತ್ರ ಕೆಲವು ಇನ್ನೊಂದು ಭಾಷೆಯಿಂದ ಬಂದು ಸೇರುತ್ತದೆ. ನುಡಿಜಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ ಮುಗಿಸಿ ಅನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ, ಉದ್ದೇಶಗಳು ಭಿನ್ನವಾಗಿರುತ್ತವೆ. ಒಂದು ಇಲ್ಲವೇ ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಒಂದರ ಘಟಕಗಳನ್ನು ಇನ್ನೊಂದಕ್ಕೆ ರವಾನಿಸುತ್ತಾ ಮತ್ತೊಂದು ನಿಯಂತ್ರಿತ ಅಥವಾ ಅಷ್ಟೇನೂ ನಿಯಂತ್ರಿತವಲ್ಲದ ಹೊಸ ಭಾಷಿಕ ಪ್ರಕ್ರಿಯೆಯನ್ನು ರೂಪಿಸುವುದು ಭಾಷಾಮಿಶ್ರಣವೆಂದು ಕಾಛ್ರುರವರು ವ್ಯಾಖ್ಯಾನಿಸುತ್ತಾರೆ. ಈ ನುಡಿಮಿಶ್ರಣ ರೂಪುಗೊಳ್ಳುವುದು ದ್ವಿಭಾಷಿಕತೆಯಷ್ಟೇ ಹಳತಾದರೂ ಅದು ಭಾಷಾಶಾಸ್ತ್ರದ ಮಟ್ಟಿಗೆ ಅತ್ಯಂತ ಕುತೂಹಲಕಾರಿ ಅಧ್ಯಯನವಾಗಿ ಈಗ ಎಡೆಪಡೆಯುತ್ತಿದೆ.

ದ್ವಿಭಾಷಿಕ ಸನ್ನಿವೇಶಗಳಲ್ಲಿ ಉಂಟಾಗುವ ಈ ಭಾಷಾ ಪ್ರಕ್ರಿಯೆಗಳ ಹಿಂದೆ ಭಾಷಾ ಆಯ್ಕೆಯು ಪ್ರಧಾನವಾಗಿದ್ದು, ದ್ವಿಭಾಷಿಕರು ಯಾವ ಸಂದರ್ಭದಲ್ಲಿ ಎಷ್ಟು ಹೇಗೆ ಭಾಷೆಯನ್ನು ಬಳಸುತ್ತಾರೆ. ಭಾಷೆಯನ್ನು

ಬಳಸುವುದರ ಮೂಲಕ ತನ್ನ ಸ್ಥಾನವನ್ನು ಹೇಗೆ ಗುರುತಿಸಿಕೊಳ್ಳಬಹುದು ಎನ್ನುವುದೂ ಸಹ ಮುಖ್ಯವಾಗಿರುತ್ತದೆ. ಒಬ್ಬ ಭಾಷಿಕನ ಭಾಷಾ ಆಯ್ಕೆ ಸಾಮಾಜಿಕ ಪಾತ್ರವನ್ನು ಆಯ್ಕೆ ಮಾಡಿಕೊಳ್ಳುವಾಗ ಭಾಷೆಯೂ ಅದೇ ಪ್ರಮಾಣದಲ್ಲಿ ಆಯ್ಕೆಯಾಗುತ್ತಿರುತ್ತದೆ. ಈ ಭಾಷಾ ಆಯ್ಕೆಯು ವ್ಯಕ್ತಿಯ ಜಾತಿ, ವಯಸ್ಸು, ಲಿಂಗ, ಶಿಕ್ಷಣ, ಸಾಮಾಜಿಕ ಸ್ಥಾನಮಾನಗಳು, ಅವರು ವಾಸಿಸುವ ಸ್ಥಳ ಮುಂತಾದ ಅಂಶಗಳನ್ನು ಅವಲಂಬಿಸಿರುತ್ತದೆ. ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿ ಬಹುಮಟ್ಟಿಗೆ ನುಡಿಮಿಶ್ರಣದ ಸಂದರ್ಭಗಳು ಕಂಡುಬಂದಿರುವುದು ಕೆಲವೆಡೆಗಳಲ್ಲಿ ಮಾತ್ರ. ಕನ್ನಡದ ಭಾಷಿಕ ಸಂದರ್ಭಗಳಿಗೆ ಹೆಚ್ಚು ಒಳಗಾದ ತೆಲುಗು ಭಾಷಿಕರಲ್ಲಿ, ವ್ಯಾಪಾರದ ಸಂದರ್ಭಗಳಿಗೆ ಒಳಗಾದ ತೆಲುಗು ಭಾಷಿಕರಲ್ಲಿ, ವಯಸ್ಕ ಭಾಷಾ ಕಲಿಕೆಯ ಹಂತ ದಾಟಿದ ಮೇಲೆ ಕನ್ನಡವನ್ನು ಕಲಿತು ದ್ವಿಭಾಷಿಕರಾದ ತೆಲುಗು ವಲಸಿಗರಲ್ಲಿ, ವೈವಾಹಿಕ ಸಂಬಂಧದಿಂದುಂಟಾದ ದ್ವಿಭಾಷಿಕತೆಯಲ್ಲಿ ನುಡಿಮಿಶ್ರಣದ ಸಂದರ್ಭವನ್ನು ಕಾಣಬಹುದು. (ಎಂ.ಭಾಗ್ಯಲಕ್ಷ್ಮಿ-೨೦೦೦ : ೧೯೫)

ದಿನನಿತ್ಯದ ವ್ಯವಹಾರಗಳಲ್ಲಿ ಈ ಬಗೆಯ ನುಡಿಬೆರಕೆ ಮತ್ತು ನುಡಿಮಿಶ್ರಣ, ನುಡಿಜಗಿತಗಳು ಕಂಡುಬರುತ್ತವೆ. ವ್ಯವಹಾರದ ಸಂದರ್ಭದಲ್ಲಿ ತೆಲುಗು ಮಾತೃಭಾಷಿಕರು ಕನ್ನಡಿಗರೊಂದಿಗೆ, ಕನ್ನಡ ಮಾತೃಭಾಷಿಕರು ತೆಲುಗರೊಂದಿಗೆ ಸಂವಹನ ಏರ್ಪಡಿಸಿಕೊಂಡಾಗ ಸಹಜವಾಗಿಯೇ ನುಡಿಜಗಿತ, ನುಡಿಬೆರಕೆಗಳು ಉಂಟಾಗುತ್ತವೆ. ಭಾಷಿಕರು ತಮಗೆ ತಿಳಿದ ಭಾಷೆಯಿಂದ ತಿಳಿಯದ ಭಾಷೆಯ ಕೆಲವು ಕೊರತೆಗಳಿಂದ ಅರೆಕೊರೆಯಾಗಿ ತಿಳಿಯದ ಭಾಷೆಗೆ ತುಂಬುವುದು ಗಡಿಭಾಗದಲ್ಲಿ ಕಂಡುಬರುತ್ತದೆ. ಅಂತಹ ಕೆಲವು ಮಾದರಿಗಳು ಇಲ್ಲಿವೆ.

* ದಿನಾಲಿ ಬಸ್ ಎಕ್ಕಿಕೊಂಡೇ ನಮ್ಮೂರಿಗೆ ಹೋಗಾದು
* ಆವಿಡಕೇನು ಎಲ್ಲ ಮುಂದುಕ ತಂದಿಡತಾರ
* ಅವರ ಮನ್ಯಾಗ ನವನೆ ಬಿಯ್ಯಂ ಮಾಡಿದ್ರು
* ಅವನಿಗೇನು ವಂಕಾಯಿ ಗೊತ್ತು
* ಆ ಪಿಲ್ಲ ಒಂದೀಟೂ ಕೆಲಸ ಮಾಡಾಕಿಲ್ಲ
* ರಾಂಡಿಸಾರ್ ಭೋಜನಂ ಚೇಸ್ತಾಂ. ಹೋಳಿಗೆ ಗೀಳಿಗೆ ಮಾಡ್ಯಾರಂತೆ
* ಕಾಂಗ್ರೆಸ್‌ಕೇ ಮೀ ಓಟು. ಕಾಂಗ್ರೆಸ್‌ಗೆ ನಿಮ್ಮ ಓಟು.
* ರಾಂಡಿಸಾರ್ ಇದಿ ಲಕ್ಷ್ಮಿ ಲಾಟರಿ. ನಿಮ್ಮ ಭಾಗ್ಯದ ಬಾಗಿಲು ತೆರೆಯಬಹುದು.
* ಹತ್ತುರೂಪಾಯಿಗೆ ನಾಲ್ಕು, ಪದಿರೂಪಾಯಲಕು ನಾಲುಗು, ದಸ್ ರೂಪಾಯಕೆ ಚಾರ್

ಎಂಬಲ್ಲಿ ದಿನನಿತ್ಯದ ವ್ಯವಹಾರ, ವ್ಯಾಪಾರ ಮುಂತಾದ ಕಡೆ ಗಡಿಭಾಗದಲ್ಲಿ ಸಾಮಾನ್ಯವಾಗಿ ಭಾಷೆಯು ಬೆರೆತು, ಇನ್ನೊಂದು ಭಾಷೆಯೊಂದಿಗೆ ಜಗಿಯುವ ಸಂದರ್ಭಗಳಿರುತ್ತವೆ.

ಈ ಮೇಲಿನ ಹಿನ್ನೆಲೆಯೊಂದಿಗೆ ದ್ವಿಭಾಷಿಕ ವಲಯದಲ್ಲಾದಂತಹ ನುಡಿಬೆರಕೆ ಮತ್ತು ನುಡಿಜಗಿತಗಳನ್ನು ಸ್ವಲ್ಪಮಟ್ಟಿಗಾದರೂ ಬೇರೆ - ಬೇರೆ ರೂಪಗಳಲ್ಲಿ ಸ್ಥಳನಾಮಗಳಲ್ಲಿ ಗುರುತಿಸಲು ಸಾಧ್ಯವಿದೆ. ನುಡಿಜಗಿತದಂತಹ ಸಂದರ್ಭವನ್ನು ವಾಕ್ಯದೊಂದಿಗೆ ನಾಮಗಳಲ್ಲಿ ಹುಡುಕಲು ಸಾಧ್ಯವಾಗದಿರಬಹುದು. ನುಡಿಬೆರಕೆಯ ಮಾದರಿಯನ್ನು

ಗುರುತಿಸಲು ಸಾಧ್ಯವಿದೆ. ಈ ದೃಷ್ಟಿಯಿಂದ ಒಟ್ಟು ಈ ಗ್ರಹಿಕೆಯ ನೆಲೆಯಲ್ಲಿ ಕೆಲವು ಆಯಾಮಗಳ ಮೂಲಕ ಸ್ಥಳನಾಮಗಳನ್ನು ಇಲ್ಲಿ ನೋಡಲಾಗಿದೆ.

ಮುಖ್ಯವಾಗಿ ಬಳ್ಳಾರಿ ಹಾಗೂ ಕರ್ನೂಲು ಜಿಲ್ಲೆಯ ಗಡಿಭಾಗದಲ್ಲಿ ಈ ರೀತಿಯ ಭಾಷಿಕ ಪ್ರಭಾವಗಳು ಸ್ಥಳನಾಮಗಳ ಮೇಲೆ ಗಾಢವಾಗಿ ಬೀರಿಲ್ಲ. ಭಾಷಾವಾರು ಪ್ರಾಂತ್ಯ ರಚನೆಯ ಪೂರ್ವದಲ್ಲಿ ಕರ್ನೂಲು ಜಿಲ್ಲೆಯ ಗಡಿಭಾಗ ಕನ್ನಡ ಭಾಷೆಯ ಭೌಗೋಳಿಕ ಪರಿಸರವಾಗಿತ್ತು. ಈ ಕಾರಣದಿಂದ ತೆಲುಗು ಭಾಷೆಯ ಪ್ರೇರಣೆ ಇಲ್ಲಿನ ಸ್ಥಳನಾಮಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಭಾಷಾವಾರು ಪ್ರಾಂತ್ಯ ರಚನೋತ್ತರ ಕಾಲದಲ್ಲಿ ರಾಜಕೀಯ ಗಡಿಗಳನ್ನಾಧರಿಸಿದ ಈ ಪರಿಸರದಲ್ಲಿ ಸ್ಥಳನಾಮಗಳಲ್ಲಿ ಅನೇಕ ಭಾಷಿಕ ಸ್ಥಿತ್ಯಂತರಗಳಾಗಿರುವುದು ತಿಳಿಯುತ್ತದೆ. ಆ ಮೂಲಕ ನುಡಿಬೆರಕೆ, ನುಡಿಜಿಗಿತದಂತಹ ಕ್ರಿಯೆಗಳನ್ನು ಹೆಸರುಗಳಲ್ಲಿ ಸೂಕ್ಷ್ಮವಾಗಿ ಗ್ರಹಿಸಲು ಸಾಧ್ಯ.

**೪.೨೦. ಕನ್ನಡ ಸ್ಥಳನಾಮಗಳ ಮೇಲೆ ತೆಲುಗಿನ ಪ್ರಭಾವ**

ಸಂಬಂಧಸೂಚಕ ಪದಗಳಾದ -ಲ: -ನ: ಗಳು ಕನ್ನಡದ ಸ್ಥಳನಾಮ ರಚನೆಯಲ್ಲಿ ಬಂದು ಸೇರುವ ಮೂಲಕ ತೆಲುಗಿನ ರಚನೆಯಂತೆ ಗೋಚರಿಸುತ್ತವೆ.

| | | |
|---|---|---|
| ಅಗಸ \| ಲ \| ದಿನ್ನೆ | ಕುಂಡ \| ನ \| ಗುರ್ತಿ | ದಿಬ್ಬ \| ನ \| ದೊಡ್ಡಿ |
| ಕಳವ \| ಲ \| ಗುಂಡು | ಚಿರ್ತ \| ನ \| ಪಲ್ಲೆ | ಬಸ \| ಲ \| ದೊಡ್ಡಿ |
| ಕುಂಬ \| ಲ \| ನೂರು | ತಿಪ್ಪ \| ಲ \| ದೊಡ್ಡಿ | ಲಿಂಗ \| ಲ \| ದಿನ್ನೆ |

ಇಲ್ಲಿ ಅಗಸ, ಕಳವ, ಕುಂಡ, ಕುಂಬ, ಚಿರ್ತ, ತಿಪ್ಪ, ದಿಬ್ಬ, ಬಸ, ಲಿಂಗ ಎಂಬಂತಹ ನಿರ್ದಿಷ್ಟಗಳು ಕನ್ನಡ ಪರಿಸರದ ರಚನೆಗಳು. ವಾರ್ಗಿಕಗಳೂ ಎರಡು ಭಾಷೆಯಲ್ಲಿ ಬಳಕೆಯಾಗುತ್ತವೆ. ನಿರ್ದಿಷ್ಟ ಮತ್ತು ವಾರ್ಗಿಕಗಳ ನಡುವೆ ಇರುವ ಸಂಬಂಧಸೂಚಕ ತೆಲುಗು ಪ್ರೇರಿತವಾಗಿವೆ. ತೆಲುಗು ಮಾತೃಭಾಷಿಕರ ಉಚ್ಚಾರಣೆಯಲ್ಲಿ ಕನ್ನಡದ ಯಥಾವತ್ ನಿರ್ದಿಷ್ಟಕ್ಕೆ ಸಂಬಂಧವಾಚಿ ಅಕ್ಷರ ಸೇರಿಸಿಕೊಂಡು ವಾರ್ಗಿಕವನ್ನು ತಮ್ಮ ಭಾಷೆಗೆ ತಕ್ಕಂತೆ ಅಳವಡಿಸಿಕೊಂಡಿರುವ ಸಾಧ್ಯತೆಗಳಿವೆ.

೧. ಅಗಸ + ಲ + ದಿನ್ನೆ: ಅಗಸ - ಕನ್ನಡದ ವೃತ್ತಿವಾಚಿ ಪದ. ಇದಕ್ಕೆ ವಾರ್ಗಿಕಪದ ದಿನ್ನೆ ಇದೆ. ಈ ಎರಡೂ ಆಕೃತಿಮಾಗಳ ನಡುವೆ ಕನ್ನಡದ 'ನ' ಅಥವಾ 'ರ' ಸಂಬಂಧಸೂಚಕ ಪದಗಳು ಬಂದರೆ

ಅಗಸ + ನ + ದಿನ್ನೆ

ಅಗಸ + ರ + ದಿನ್ನೆ ಆಗಬೇಕು.

ಆದರೆ ಇಲ್ಲಿ ಅಗಸ + ಲ + ದಿನ್ನೆ ಆಗಿರುವುದರಿಂದ -ಲ' ವನ್ನು ತೆಲುಗಿನ -ವಾಳ್ಳ ಎಂಬುದರ ಸವಕಳಿ, ಬಹುವಚನರೂಪ ಬಂದು ಸೇರಿದೆಯೆಂಬುದು ತಿಳಿಯುತ್ತದೆ. ಅದರಂತೆ ಕಳವಲಗುಂಡು, ಕುಂಬಲನೂರು ಎಂಬ ರಚನೆಗಳಿವೆ.

೨. ತಿಪ್ಪ + ಲ + ದೊಡ್ಡಿ:
ಬಸ + ಲ + ದೊಡ್ಡಿ:
ಲಿಂಗ + ಲ + ದಿನ್ನೆ:

ಈ ಮೂರು ಸ್ಥಳನಾಮಗಳಲ್ಲಿ ತಿಪ್ಪ, ಬಸ, ಲಿಂಗ ಎಂಬ ವ್ಯಕ್ತಿವಾಚಿ ಪದಗಳಿಗೆ ದೊಡ್ಡಿ, ದಿನ್ನೆ ಎಂಬ ವಾರ್ಗಿಕಗಳಿವೆ. ಇವುಗಳ ನಡುವೆ ಸಂಬಂಧ ಸೂಚಕ -ಲ ಕಾರವಿದೆ. ಕನ್ನಡದಲ್ಲಿ -ಲ ಕಾರ ಸಂಬಂಧವಾಚಿಯಾಗಿ ವ್ಯಕ್ತಿಗಳಿಗೆ ಬರಲಾರದು. ಕಾರಣ ಇದು ತೆಲುಗಿನ ಪ್ರಭಾವವೆಂದು ಗುರುತಿಸಬಹುದು.

ತಿಪ್ಪವಾಳ್ಳ + ದೊಡ್ಡಿ
ಬಸವಾಳ್ಳ + ದೊಡ್ಡಿ
ಲಿಂಗೋಳ್ಳ + ದೊಡ್ಡಿ

ಎಂಬರೂಪಗಳು -ವಾಳ್ಳು ಪದದ ಸವಕಳಿ -ಲ ವಾಗಿರಬಹುದು.

ತೆಲುಗಿನಲ್ಲಿ ಹೆಚ್ಚಾಗಿ -ವಾರು, ವಾರಿ ಎಂಬ ಬಹುವಚನ ರೂಪಗಳು ಬಳಕೆಯಾಗುತ್ತವೆ. ಇಲ್ಲಿ -ಲ ಬಳಕೆಗೊಂಡಿದೆ.

೩. ಚಿರ್ತ+ ನ + ಪಲ್ಲೆ : (ಚಿರತೆ) ಬಹುಶಃ ಪ್ರಾಣಿವಾಚಿ ಸ್ಥಳನಾಮ. ಚಿರತೆ ಮತ್ತು ಪಲ್ಲಿ ಎಂಬ ಪದಗಳ ನಡುವೆ -ನ ಎಂಬ ವ್ಯಕ್ತಿವಾಚಿ (ಪುರುಷ) ಸಂಬಂಧ ಸೂಚಕವಿದೆ. ತೆಲುಗು ಭಾಷಿಕರು ಚಿರತೆ, ಪಲ್ಲಿಗಳ ನಡುವೆ -ನ ಎಂಬುದನ್ನು ನುಡಿಬೆರಕೆ ಮಾಡಿಕೊಂಡು ಬಳಸಿದ್ದಾರೆಂದು ಗುರುತಿಸಬಹುದು.

ಚಿರ್ತಪ್ಪ' ಚಿರತಯ್ಯ ಎಂಬ ವ್ಯಕ್ತಿನಾಮಗಳು ಅಲ್ಲಲ್ಲಿ ಇವೆ. ಇದರಿಂದಲೂ ಈ ರಚನೆ ಆಗಿರಲೂ ಸಾಧ್ಯವಿದೆ.

೪. ದಿಬ್ಬ + ನ + ದೊಡ್ಡಿ: ದಿಬ್ಬ, ಕುಂಡ (ಕೊಂಡ, ಕುಂದ) ಪದಗಳು ಪ್ರಾದೇಶಿಕ ವೈಲಕ್ಷಣ್ಯ ಸೂಚಿಸುತ್ತವೆ. ದೊಡ್ಡಿ, ಗುತ್ತಿ ಎಂಬ ವಾರ್ಗಿಕಗಳು ಇವೆ. ನಡುವೆ -ನ' ಸಂಬಂಧವಾಚಿ ವ್ಯಕ್ತಿಗೆ ಅನ್ವಯಿಸುತ್ತದೆ. ಇದು ತೆಲುಗು ಭಾಷೆಯಿಂದ ಆಗಿರಬಹುದು. ವ್ಯಕ್ತಿನಾಮಗಳು ಕೊಂಡಪ್ಪ, ಕುಂದಪ್ಪ, ದಿಬ್ಬದಯ್ಯ, ದಿಬ್ಬಣ್ಣ, ಎಂಬ ರೂಪಗಳಿಂದ ಬಂದಿರಲೂ ಬಹುದೆಂದು ಊಹಿಸಬಹುದು.

ಕನ್ನಡ ಸ್ಥಳನಾಮ ರಚನೆಯ ಉತ್ತರ ಪದದ ಅಂತ್ಯದಲ್ಲಿ -ಮ ಕಾರವನ್ನು ಸೇರಿಸಿ ಆ ಘಟಕವನ್ನು ತೆಲುಗೀಕರಣಗೊಳಿಸಿರುವುದು ಕಂಡುಬರುತ್ತದೆ. ಉದಾ :

| | |
|---|---|
| ಕರಡಿಗುಡ್ಡ - ಕರಡಿಗುಡ್ಡಂ<br>ಕಾಜಿಪುರ - ಕಾಜಿಪುರಂ<br>ಕಾಚಾಪುರ - ಕಾಚಾಪುರಂ<br>ಕೌತಾಳ - ಕೌತಾಳಂ<br>ಜಂಪಾಪುರ - ಜಂಪಾಪುರಂ<br>ತಾರಾಪುರ - ತಾರಾಪುರಂ<br>ತಿಮ್ಮಾಪುರ - ತಿಮ್ಮಾಪುರಂ | ಪರ್ವತಾಪುರ - ಪರ್ವತಾಪುರಂ<br>ಬಸಾಪುರ - ಬಸಾಪುರಂ<br>ಮಲ್ಲಾಪುರ - ಮಲ್ಲಾಪುರಂ<br>ರಂಗಾಪುರ - ರಂಗಾಪುರಂ<br>ರಾಮಾಪುರ - ರಾಮಾಪುರಂ<br>ರಾಮದುರ್ಗ - ರಾಮದುರ್ಗಂ<br>ಸಿದ್ದಾಪುರ - ಸಿದ್ದಾಪುರಂ<br>ಹೆಬ್ಬೆಟ್ಟ - ಹೆಬ್ಬಟಂ. |

ಮೇಲಿನ ಉದಾಹರಣೆಗಳಲ್ಲಿ -ಪುರ: -ದುರ್ಗ ಎಂಬ ಸಂಸ್ಕೃತ ಪದಗಳನ್ನು -ಮ ಕಾರ ಅಂತ್ಯಮಾಡಿಕೊಂಡು ತೆಲುಗು ಭಾಷಿಕರು ಬಳಸುತ್ತಾರೆ. ಕರಡಿ + ಗುಡ್ಡ ಎಂಬಲ್ಲಿ -ಗುಡ್ಡ ಎಂಬ ಕನ್ನಡ ವಾರ್ಗಿಕ ರೂಪಕ್ಕೆ -ಮ ಕಾರಾಂತ್ಯ ಸೇರಿಸಿ ತೆಲುಗೀಕರಿಸಿದ್ದಾರೆ. (ಗುಡ್ಡಂ).

ಕನ್ನಡ ಸ್ಥಳನಾಮ ರಚನೆಗೆ ತೆಲುಗಿನ ವಿಶೇಷಣಗಳನ್ನು ಸೇರಿಸಿ ತೆಲುಗೀಕರಣ ಮಾಡಲಾಗಿದೆ. ತೆಲುಗೀಕರಣಗೊಂಡ ಹೆಸರುಗಳೇ ಇಂದು ರೆವಿನ್ಯೂ ದಾಖಲೆಯಲ್ಲಿವೆ.

| ಮೂಲಸ್ಥಳನಾಮ | ತೆಲುಗೀಕರಣಗೊಂಡ ಸ್ಥಳನಾಮ (ಭಾಷಾವಾರು ಪ್ರಾಂತ್ಯ ರಚನೋತ್ತರ) |
|---|---|
| ಚಿಗೋತೂರು | ಚಿನ್ನಹೋತೂರು |
| ಚಿಕ್ಕಹ್ಯಾಟೆ | ಚಿನ್ನಹ್ಯಾಟ |
| ಚಿಕ್ಕಹರಿವಾಣ | ಚಿನ್ನಹರಿವಾಣಂ |
| ಚಿಕ್ಕಕಡಬೂರು | ಚಿನ್ನಕಡಬೂರು |
| ಚಿಕ್ಕತುಂಬಳ | ಚಿನ್ನತುಂಬಳಂ |
| ದೊಡ್ಡಹರಿವಾಣ | ಪೆದ್ದಹರಿವಾಣಂ |
| ಸಣ್ಣಗೊನೆಹಾಳ್ | ಚಿನ್ನಗೊನೆಹಾಳ್ |
| ಹಿರೇಹ್ಯಾಟೆ | ಪೆದ್ದಹ್ಯಾಟೆ |
| ಹಿರೇಹೋತೂರು | ಪೆದ್ದಹೋತೂರು |
| ಹಿರೇತುಂಬಳ | ಪೆದ್ದತುಂಬಳಂ |
| ಹಿರೇಕಡಬೂರು | ಪೆದ್ದಕಡಬೂರು |

ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಭಾಷಾವಾರು ಪ್ರಾಂತ್ಯದ ರಚನೆಯಾಯಿತು. ಈ ಸಂದರ್ಭದಲ್ಲಿ ಕರ್ನೂಲು ಜಿಲ್ಲೆಯ ಆದವಾನಿ - ಆಲೂರು ತಾಲ್ಲೂಕುಗಳಲ್ಲಿ ಅನೇಕ ಕಡೆ ಕನ್ನಡ ಮಾತೃಭಾಷೆಯಾಗಿತ್ತು. ಅನೇಕ ಸ್ಥಳನಾಮಗಳೂ ಕನ್ನಡದ ರಚನೆಯಾಗಿವೆ. ಆಂಧ್ರದ ಆಡಳಿತದಿಂದಾಗಿ ಅಲ್ಲಿನ ಶಿಕ್ಷಣ, ಆಡಳಿತ ಮುಂತಾದುವು ಭಾಷಿಕವಾಗಿ ತೆಲುಗಿಗೆ ಜಗಿಯುವ ಅನಿವಾರ್ಯತೆ ಬಂದಿತು. ಆಂಧ್ರದ ಇನ್ನಿತರ ಭೌಗೋಳಿಕ ಪ್ರದೇಶದಲ್ಲಿ ವ್ಯಾಪಾರ, ಉದ್ಯೋಗ ಮುಂತಾದ ಕಾರಣಗಳಿಂದ ಈ ತಾಲ್ಲೂಕುಗಳಿಗೆ ತೆಲುಗರ ವಲಸೆಯು ಹೆಚ್ಚಾಯಿತು. ಇದರಿಂದಾಗಿ ತೆಲುಗಿನ ಪ್ರಭಾವ ಕನ್ನಡ ಭಾಷೆ ಮತ್ತು ಭೂಗೋಳದ ಮೇಲೆ ತೀವ್ರವಾಗತೊಡಗಿತು. ತೆಲುಗು ಮಾತೃಭಾಷಿಕರು ಸಹಜವಾಗಿಯೇ ಕನ್ನಡದ ಸ್ಥಳನಾಮ ರಚನೆಗಳನ್ನು ತಮ್ಮ ಭಾಷೆಗೆ ತಕ್ಕಂತೆ ಉಚ್ಚರಿಸತೊಡಗಿದರು. ಆಂಧ್ರಪ್ರದೇಶದ ಆಡಳಿತದಿಂದ ಆದವಾನಿ - ಆಲೂರು ತಾಲ್ಲೂಕುಗಳ ಗ್ರಾಮಗಳ ನಾಮಫಲಕಗಳು ತೆಲುಗು ಪ್ರೇರಿತಗೊಂಡು ಬರೆಯಲ್ಪಟ್ಟವು. ಅವು ಸಂಪೂರ್ಣ ಬದಲಾಗದೆ ವಿಶೇಷಣ,

ಉತ್ತರಪದದಲ್ಲಿ ಮಕಾರಾಂತ್ಯ ಇಲ್ಲವೇ ನಿರ್ದಿಷ್ಟ ಮತ್ತು ವಾರ್ಗಿಕಗಳ ನಡುವೆ ಬರುವ ಸಂಬಂಧವಾಚಿ ಪದಗಳು ತೆಲುಗು ಭಾಷೆಯಿಂದ ಬಂದು ಸೇರತೊಡಗಿದವು. ಆಂಧ್ರಪ್ರದೇಶದ ರಸ್ತೆಸಾರಿಗೆ, ಸರಕಾರಿ ಕಛೇರಿ ಮುಂತಾದವು ಈ ಬಗೆಯ ತೆಲುಗು ಮಿಶ್ರಿತ ನಾಮಗಳನ್ನು ರೂಢಿಗೆ ತಂದವು. ಇಂದು ರೆವಿನ್ಯೂ ದಾಖಲೆಗಳಾಗಿಯೂ ಅಂತಹ ರೂಪಗಳೇ ಉಳಿದಿವೆ. ಇದಕ್ಕೆ ಆಂಧ್ರದ ಭಾಷಿಕ ಮತ್ತು ರಾಜಕೀಯ ಒತ್ತಡಗಳೂ ಇವೆಯೆಂಬುದನ್ನು ಗುರುತಿಸಬಹುದು.

ಸಂಪೂರ್ಣ ತೆಲುಗು ರಚನೆಯನ್ನು ಹೊಂದಿರುವ ಸ್ಥಳನಾಮಗಳು ಬಳ್ಳಾರಿ, ಕರ್ನೂಲು ಗಡಿಯಲ್ಲಿ ಕಂಡು ಬರುತ್ತವೆ.

| ಬಳ್ಳಾರಿ ಗಡಿಪ್ರದೇಶ | ಕರ್ನೂಲು ಗಡಿಪ್ರದೇಶ |
|---|---|
| ಕೊತ್ತಲಚಿಂತ | ಎಂಡಪಲ್ಲಿ |
| ಕೊರ್ಲಗುಂಡಿ | ಎರಿಗೇರಿ |
| ಬೊಬ್ಬಕುಂಟ | ಗುಡಿಕಂಬಾಲಿ |
| ತೊಲಮಾಮಿಡಿ | ಗುಮ್ಮನೂರು |
| ಮುಸ್ತಗಟ್ಟ | ಗೋತುಲದೊಡ್ಡಿ |
| ಯರ್ರಗುಡಿ | ದೊಂಬಲದಿನ್ನ |
| | ನಾಂಚರ್ಲ |
| | ಪಲ್ಲಿಪಾಡು |
| | ಪೀಸಲಬಂಡ |
| | ಬಾಪುಲದೊಡ್ಡಿ |
| | ಬೊಮ್ಮಪಲ್ಲೆ |
| | ವಂದವಾಕಿಲಿ |
| | ವೀರಲದಿನ್ನ. |

ಸ್ಥಳನಾಮ ವಾರ್ಗಿಕದಲ್ಲಿ ದ್ರಾವಿಡ ಮೂಲ ಪದವು ತಮಿಳು, ತೆಲುಗು, ಮಲೆಯಾಳಂ, ಕನ್ನಡದಲ್ಲಿ ವಿವಿಧ ರೀತಿಯಲ್ಲಿ ಕೊಂಚ ಬದಲಾವಣೆಯೊಂದಿಗೆ ಬಳಕೆಯಾಗುತ್ತವೆ. ಅದರಂತೆ ಕೆಲವು ಕನ್ನಡ ವಾರ್ಗಿಕ ರೂಪಗಳು ತೆಲುಗಿನಲ್ಲಿ ಆ ಭಾಷಿಕ ಪರಿಸರಕ್ಕೆ ತಕ್ಕಂತೆ ಬದಲಾಗಿವೆ. ತೆಲುಗು ಮಾತೃಭಾಷಿಕರು ಗಡಿಭಾಗದಲ್ಲಿ ಅದಕ್ಕಿರುವ ಮೂಲ ರೂಪವನ್ನು -ಅ ಮತ್ತು -ಮ ಕಾರಾಂತ್ಯವನ್ನಾಗಿ ಉಚ್ಚರಿಸಿ, ಬರೆದು ತೆಲುಗೀಕರಣ ಗೊಳಿಸಿಕೊಂಡಿರುವುದು ತಿಳಿಯುತ್ತದೆ.

| ಕನ್ನಡ | ತೆಲುಗು |
|---|---|
| - ಕುಂದೆ | - ಕುಂದ |
| - ಕುಂಟೆ | - ಕುಂಟ |
| - ಕೆರೆ | - ಕೆರ, ಕೇರಾ |
| - ಕಣಿವೆ | - ಕಣವ |
| - ಕಟ್ಟೆ | - ಕಟ್ಟ |
| - ಕುಪ್ಪೆ | - ಕುಪ್ಪ |
| - ಕೋಟೆ | - ಕೋಟ |
| - ಗುಡ್ಡ | - ಗುಡ್ಡಂ |
| - ಗೇರಿ | - ಗೇರಾ |
| - ಡೊಣೆ | - ದೊಣ |
| - ದಿನ್ನೆ | - ದಿನ್ನ |
| - ದುರ್ಗ - (ಸಂಸ್ಕೃತ) | - ದುರ್ಗಂ |
| - ನಗರ - (ಸಂಸ್ಕೃತ) | - ನಗರಂ |
| - ಪುರ - (ಸಂಸ್ಕೃತ) | - ಪುರಂ |
| - ಬಂಡೆ | - ಬಂಡ |
| - ಹಾಳು | - ಪಾಡು |
| - ಹ್ಯಾಟೆ | - ಹ್ಯಾಟ |

ದುರ್ಗ, ನಗರ, ಪುರ ಎಂಬ ಸಂಸ್ಕೃತ ರೂಪಗಳು ತೆಲುಗಿನಲ್ಲಿ -ಮ ಕಾರಾಂತ್ಯಗೊಂಡುದು ತಿಳಿಯುತ್ತದೆ.

ಶಾಸನಗಳಲ್ಲಿಯೂ ಕನ್ನಡದ ಸ್ಥಳನಾಮಗಳು ತೆಲುಗೀಕರಣಗೊಂಡುದನ್ನು ತಿಳಿಯಬಹುದು.

| ಶಾಸನೋಕ್ತ ಕನ್ನಡ ಸ್ಥಳನಾಮಗಳು | ತೆಲುಗುಪ್ರೇರಿತ |
|---|---|
| ಕೆರೆ ಬೆಳುಗಲ್ಲು - (SII- IX- II) | ಚೆರುವುಬೆಳಗಲ್ಲು |
| ಕೋಟೆಯಕಲ್ಲು - (SII- IX- II) | ಕೋಟಕಲ್ಲು |
| ಚೆಲಿವಿಂಢ್ಲಿ - (SII- IX- II) | ಚೆಲಿವೆಂದಲ |
| ಮ್ರಾನವಿ - (ಕಲ್ಬುರ್ಗಿ ಜಿಲ್ಲೆಯ ಶಾಸನಗಳು - ಹನುಮಾಕ್ಷಿಗೋಗಿ) | ಮಾನುವ |
| ರಾಗನಹಾಳು - (SII- IX- II) | ರಾಘುಲಪಾಡು |
| ಹಾಲ್ವಿ - (ಡಾ.ವಿ.ಶಿವಾನಂದ - ಹೈದ್ರಾಬಾದ್ ಕರ್ನಾಟಕದ ಶಿಲಾಶಾಸನಗಳು) | ಹಾಲುವ. |

"ಕನ್ನಡ ಸ್ಥಳನಾಮಗಳ ಉಚ್ಚಾರಣೆ ತೆಲುಗೀಕರಣಗೊಂಡುದಕ್ಕೆ ಹಾಲ್ವಿ (ಕನ್ನಡ) ಇಲ್ಲಿ ತೆಲುಗಿನ ಪದಾದಿ

| ಪ | ಕಾರ | ಹ | ಕಾರ ಗೊಂಡಿರುವಲ್ಲಿ ಕನ್ನಡದ ಪ್ರಭಾವ ಸ್ಪಷ್ಟ. ಮಾನ್ಸಿ (ಕನ್ನಡ) ಮಾನುವ (ತೆಲುಗು) ರಾಯಿಚೂರು > ರಾಚೂರಿ" (ವಿ.ಶಿವಾನಂದ - ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು - ಪು - ೨೫೧). ವಿಂಡ್ಲಿ - ವೆಂದಲ : ಹಾಳು - ಪಾಡು : ಕೆರೆ - ಚೆರುವು ಎಂಬಂತಹ ಬದಲಾವಣೆಗಳು ಶಾಸನಗಳಲ್ಲಿ ಆಗಿರುವುದು ತಿಳಿಯುತ್ತದೆ. (ಕಾಲ - ೧೨೯೪). ೧೨ ರಿಂದ ೧೩ನೇ ಶತಮಾನದ ಅವಧಿಯಲ್ಲಿಯೇ ಕನ್ನಡದ ಸ್ಥಳನಾಮಗಳು ಗಡಿಭಾಗದಲ್ಲಿ ತೆಲುಗು ಭಾಷೆಯ ಪ್ರಭಾವಕ್ಕೆ ಒಳಗಾಗಿರುವುದು ಗಮನಾರ್ಹ ಅಂಶವಾಗಿದೆ.

**೪.೨೧. ಸ್ಥಳನಾಮ - ಬಳಕೆಯ ವಲಯಗಳು**

ಗಡಿ ಪ್ರದೇಶದಲ್ಲಿ ಇಂದು ರೆವಿನ್ಯೂ ದಾಖಲೆಯಾಗಿರುವ ಸ್ಥಳನಾಮಗಳು ಅನೇಕ ಬದಲಾವಣೆಯೊಂದಿಗೆ ಸಿದ್ಧ ಮಾದರಿಯಲ್ಲಿವೆ. ಬಹುತೇಕ ಇಂದು ವ್ಯವಹಾರಿಕ ಸಂದರ್ಭದಲ್ಲಿ ಅಂದರೆ, ಸರಕಾರಿ ಸಾರಿಗೆ ಇಲಾಖೆ, ಸಾರ್ವಜನಿಕ ಬೋರ್ಡುಗಳು, ಕಛೇರಿ ಫಲಕಗಳು ಮುಂತಾದಲ್ಲಿ ರೆವಿನ್ಯೂ ಇಲಾಖೆಯಲ್ಲಿ ದಾಖಲೆಗೊಂಡ ಹೆಸರುಗಳೇ ಬಳಕೆಯಾಗುತ್ತಿವೆ. ಆದರೆ ಸ್ಥಳೀಯರು ತಮ್ಮ ಆಡುಭಾಷೆಯಲ್ಲಿ ಹೆಸರುಗಳನ್ನು ಬಳಸುವುದು ಸರ್ವೇಸಾಮಾನ್ಯವಾಗಿದೆ. ಇದಕ್ಕಿಂತ ಮುಖ್ಯವಾಗಿ ದ್ವಿಭಾಷಿಕ ವಲಯದಲ್ಲಿ ಆಯಾ ಮಾತೃಭಾಷಿಕರು ತಮ್ಮದೇ ಭಾಷೆಯಲ್ಲಿ ಸ್ಥಳನಾಮಗಳನ್ನು ಕರೆಯುವ ರೂಢಿಯು ಇಲ್ಲಿದೆ. ಅಂತಹ ಕೆಲವು ಮಾದರಿಗಳನ್ನು ಇಲ್ಲಿ ನೀಡಲಾಗಿದೆ.

| ಫಲಕಗಳು / ರೆವಿನ್ಯೂ ದಾಖಲೆಯ ರೂಪ | ತೆಲುಗು ಮಾತೃಭಾಷಿಕರು | ಕನ್ನಡ ಮಾತೃಭಾಷಿಕರು |
|---|---|---|
| ೧. ಈಚಲಾಳ್ | ಈಚಲಪಾಡು | ಈಚಲಾಳ್ |
| ೨. ಉಪ್ಪಾರಹಾಳ್ | ಉಪ್ರಾಲು | ಉಪ್ಪಾರಾಳು |
| ೩. ಎರಿಗೇರಾ | ಎರಿಗೇರಾ | ಎರಿಗೇರಿ |
| ೪. ಚಿನ್ನಹೋತೂರು | ಚಿನ್ನೋತೂರು | ಚಿಗೋತೂರು |
| ೫. ಚಿನ್ನಹ್ಯಾಟ | ಚಿನ್ನಹ್ಯಾಟ | ಚಿಗ್ಯಾಟೆ |
| ೬. ಚಿನ್ನಹರಿವಾಣಂ | ಚಿನ್ನಹರಿವಾಣಂ | ಚಿಕ್ಕಹರಿವಾಣ |
| ೭. ಚಿನ್ನಗೊನೆಹಾಳ್ | ಚಿನ್ನಗೊನೆಹಾಳ್ | ಸಣ್ಣಗೊನಾಳು |
| ೮. ಚಿನ್ನಕಡಬೂರು | ಚಿನ್ನಕಡಬೂರು | ಚಿಕ್ಕಡಬೂರು |
| ೯. ಚಿನ್ನತುಂಬಳಂ | ಚಿನ್ನತುಂಬಳಂ | ಚಿಕ್ಕತುಂಬಳ |
| ೧೦. ಅಗಸಲದಿನ್ನೆ | ಚಾಕಲದಿನ್ನೆ | ಅಗಸಲದಿನ್ನೆ |
| ೧೧. ತಂಗರಡೋಣಾ | ತಂಗರಡೋಣಾ | ತಂಗರಡೊಣೆ |
| ೧೨. ದಯ್ಯಾಲಗುಡ್ಡ | ದಯ್ಯಾಲಗುಡ್ಡ | ದೆವ್ವದಗುಡ್ಡ |
| ೧೩. ದೇಗುಲದಹಾಳ್ | ದೇಗುಲಪಾಡು | ದೇಗುಲ್ದಾಳ್ |
| ೧೪. ನಗರಡೋಣಾ | ನಗರಡೋಣಾ | ನಗರಡೊಣೆ |

| | | |
|---|---|---|
| ೧೫. ಪಲ್ಲಿಪಾಡು | ಪಲ್ಲಿಪಾಡು | ಹಳ್ಳಿಹಾಳು |
| ೧೬. ಪಚ್ಚಾರಹಳ್ಳಿ | ಪಚ್ಚಾರಪಲ್ಲಿ | ಪಚ್ಚಾರಳ್ಳಿ |
| ೧೭. ಹುಲಿಕಣಿವೆ | ಪುಲಿಕಣಿವ | ಹುಲಿಕಣಿವೆ |
| ೧೮. ಪೆದ್ದತುಂಬಳಂ | ಪೆದ್ದತುಂಬಳಂ | (ಹಿರೇ) ದೊಡ್ಡತುಂಬಳ |
| ೧೯. ಪೆದ್ದಕಡಬೂರು | ಪೆದ್ದಕಡಬೂರು | ಹಿರೇಕಡಬೂರು |
| ೨೦. ಪೆದ್ದಹರಿವಾಣಂ | ಪೆದ್ದಹರಿವಾಣಂ | ದೊಡ್ಡಹರಿವಾಣ |
| ೨೧. ಪೆದ್ದಗೊನೆಹಾಳ್ | ಪೆದ್ದಗೊನೆಹಾಳ್ | ಹಿರೇಗೋನಾಳು |
| ೨೨. ಪೆದ್ದಹೋತೂರ್ | ಪೆದ್ದಹೋತೂರ್ | ಹಿರೇಹೋತೂರ್ |
| ೨೩. ಪೆದ್ದಹ್ಯಾಟ | ಪೆದ್ದಹ್ಯಾಟ | ಹಿರೇಹ್ಯಾಟೆ |
| ೨೪. ಬದನೆಹಾಳು | ಬದಲಪಾಡು | ಬದನೆಹಾಳು |
| ೨೫. ಬೆಲ್ಡೋನಾ | ಬೆಲ್ಡೋನಾ | ಬೆಲ್ಡೋಣೆ |
| ೨೬. ಬೊಮ್ಮಗುಂಡನಹಳ್ಳಿ | ಬೊಮ್ಮನಪಲ್ಲೆ | ಬೊಂಬನಹಳ್ಳಿ |
| ೨೭. ಮಡ್ಡಿಲಿಂಗದಹಳ್ಳಿ | ಮಡ್ಡಿಲಿಂಗಂಪಲ್ಲಿ | ಮಡ್ಡಿಲಿಂಗದಹಳ್ಳಿ |
| ೨೮. ಮಲ್ಲಿಕಾರ್ಜುನಹಳ್ಳಿ | ಮಲ್ಲಿಕಾರ್ಜುನಪಲ್ಲಿ | ಮಲ್ಲಿಕಾರ್ಜುನಹಳ್ಳಿ |
| ೨೯. ಮಾರಲುಮಡಿಕೆ | ಮಾರ್ಲಮಡಕ | ಮಾರ್ಲಮಡಿಕೆ |
| ೩೦. ಮೂಸಾನಹಳ್ಳಿ | ಮೂಸಂಪಲ್ಲಿ | ಮೂಸಾನಹಳ್ಳಿ |
| ೩೧. ಮೆದೆಹಾಳು | ಮೆದೆಪಾಡು | ಮೆದೆಹಾಳು |
| ೩೨. ಮೊಲಗಹಳ್ಳಿ | ಮೊಲಗವೇಲಿ | ಮೊಳಗೋಳಿ |
| ೩೩. ಲಿಂಗದಹಳ್ಳಿ | ಲಿಂಗಂಪಲ್ಲಿ | ಲಿಂಗದಳ್ಳಿ |
| ೩೪. ಚೊಕ್ಕನಹಳ್ಳಿ | ಸಕ್ಕನಪಲ್ಲಿ | ಸಕ್ಕನಪಲ್ಲಿ |

ಮೇಲಿನ ಮಾದರಿಯು ಆಂಧ್ರದ ಗಡಿಭಾಗದಲ್ಲಾದ ಸ್ಥಿತ್ಯಂತರವಾಗಿದೆ. ಇಲ್ಲಿ ಹೆಚ್ಚಾಗಿ (ಕರ್ನೂಲು ಜಿಲ್ಲೆಯ ಆಲೂರು - ಆದವಾನಿ) ಕನ್ನಡ ಮಾತೃಭಾಷಿಕರೂ ಅದೇ ತೆರನಾಗಿ ತೆಲುಗು ಮಾತೃಭಾಷಿಕರೂ ಇದ್ದಾರೆ. ಈ ಕಾರಣದಿಂದ ಪರಸ್ಪರ ಎರಡು ಭಾಷೆಯಲ್ಲಿ ಈ ಬದಲಾವಣೆ ಕ್ರಿಯೆ ನಡೆಯುತ್ತಿರುವುದು ಕಂಡುಬರುತ್ತದೆ. ಈ ಪ್ರಕ್ರಿಯೆ ಕರ್ನಾಟಕದ ಗಡಿಭಾಗದ ಬಳ್ಳಾರಿ ಗಡಿಯಲ್ಲಿ ದ್ವಿಭಾಷಿಕರಿದ್ದರೂ ಒಂದೇ ಸ್ಥಳನಾಮವನ್ನು ಎರಡು ಭಾಷೆಯಲ್ಲಿ ಕರೆಯುವ ರೂಢಿ ಆಂಧ್ರದ ಗಡಿಯಷ್ಟು ತೀವ್ರವಾಗಿಲ್ಲ. ಅತ್ಯಂತ ಕಡಿಮೆ ಪ್ರಮಾಣ ಈ ಭಾಗದಲ್ಲಿದೆಯೆನ್ನಬಹುದು.

ಹೀಗೆ ಆಂಧ್ರ - ಕರ್ನಾಟಕ ಗಡಿಭಾಗದ ಸ್ಥಳನಾಮಗಳ ಭಾಷಿಕ ಅಧ್ಯಯನ ಮಹತ್ವ ಪಡೆದಿದೆ. ಭೌಗೋಳಿಕ ಗಡಿಯನ್ನು ಅನುಲಕ್ಷಿಸಿದ ಈ ಪ್ರದೇಶದಲ್ಲಿ ಒಟ್ಟು ಸ್ಥಳನಾಮಗಳು ನಿರ್ದೇಶನಗೊಂಡಿರುವುದು ಕನ್ನಡ ಭಾಷೆಯ

ಮೂಲಕವೇ. ಆಧುನಿಕತೆಯ ಅಂದರೆ ಭಾಷಾವಾರು ಪ್ರಾಂತ್ಯದ ರಚನೋತ್ತರ ಕಾಲದಲ್ಲಾದ ಭಾಷಿಕ ಪ್ರೇರಣೆಯಿಂದ ಆದಂತಹ ಸ್ಥಿತ್ಯಂತರಗಳು ತೆಲುಗಿನ ಪ್ರಭಾವವನ್ನು ಹೇಳುತ್ತವೆ. ಮೂಲತ: ತೆಲುಗು ರಚನೆಯನ್ನು ಹೊಂದಿರುವ ಸ್ಥಳನಾಮಗಳೂ ಕೆಲವು ದೊರೆಯುತ್ತವೆ. ಆದರೆ ಇವು ಕನ್ನಡ ಭಾಷೆಯ ಪ್ರಭಾವಕ್ಕೆ ಒಳಗಾಗಿಲ್ಲವೆಂಬುದು ತಿಳಿಯುತ್ತದೆ. ಇದಕ್ಕೆ ಅನೇಕ ಆಡಳಿತಾತ್ಮಕ ಕಾರಣಗಳು ಇರಬಹುದು. ಈ ಕಾರಣವಾಗಿ ಕನ್ನಡ ಭೌಗೋಳಿಕ ಪರಿಸರವಾದ ಆದವಾನಿ - ಆಲೂರು ತಾಲ್ಲೂಕುಗಳಲ್ಲಿ ಭಾಷಿಕ, ರಾಜಕೀಯ ಒತ್ತಡಗಳು ಅಧಿಕವಾದವು. ಕ್ರಮೇಣ ಸ್ಥಳನಾಮಗಳ ಮೇಲೆಯೂ ಈ ಪ್ರಭಾವವಾಯಿತು. ಕರ್ನಾಟಕದ ಬಳ್ಳಾರಿ ಜಿಲ್ಲೆಯ ಗಡಿಯಲ್ಲಿ ಭಾಷಿಕ (ತೆಲುಗು) ಪ್ರೇರಣೆಗಳು ಇದ್ದರೂ, ರಾಜಕೀಯ (ತೆಲುಗು) ಒತ್ತಡಗಳಿಲ್ಲ. ಕಾರಣ ಅಷ್ಟಾಗಿ ಕನ್ನಡ ಹೆಸರುಗಳ ಮೇಲೆ ತೆಲುಗು ಪ್ರಭಾವ ಬೀರಿಲ್ಲ. ಈ ಎಲ್ಲ ಅಂಶಗಳಿಂದ ದ್ವಿಭಾಷಿಕ ವಲಯದ ಈ ಅಧ್ಯಯನ ಕೆಲವು ಭಾಷಿಕ ಒಳನೋಟಗಳನ್ನು ಅನಾವರಣಗೊಳಿಸುತ್ತದೆ.

❑❑

೫

# ಮೌಖಿಕ ಪರಂಪರೆ ಮತ್ತು ಸ್ಥಳನಾಮಗಳು

## ೫. ಪ್ರವೇಶ

ಜಾನಪದ ಮತ್ತು ಭಾಷಾಶಾಸ್ತ್ರ ಹಲವಾರು ವಿಷಯಗಳಲ್ಲಿ ಸಮಾನ ಆಸಕ್ತಿಯನ್ನು ಹೊಂದಿವೆ. ಆಡುನುಡಿಯ ಬಗೆಗೆ ಎರಡಕ್ಕೂ ವಿಶೇಷ ಒಲವು. ಕ್ಷೇತ್ರ ಮಾಹಿತಿಯಿಲ್ಲದೆ ಇವೆರೆಡರ ವಿಶ್ಲೇಷಣೆಗೆ ಬೆಲೆ ಬರುವುದಿಲ್ಲ. ಜೊತೆಗೆ ಒಂದರ ವಿಶ್ಲೇಷಣಾ ವಿಧಾನಗಳು ಇನ್ನೊಂದರ ತಿಳಿವಿಗೆ ಅವಕಾಶ ಕಲ್ಪಿಸಿವೆ. ಹೀಗಾಗಿ ಇವೆರೆಡೂ ಅಂತರ್ ಶಿಸ್ತಿನ ಅಧ್ಯಯನಕ್ಕೆ ಹೆಸರಾಂತ ನಿದರ್ಶನಗಳಾಗಿವೆ.

ನಾಮಶಾಸ್ತ್ರ ಭಾಷಾಶಾಸ್ತ್ರದ ಒಂದು ಘಟಕ (ಅಂಗ). ಇದು ಜಾನಪದದ ಅಧ್ಯಯನಕ್ಕೆ ಪೂರಕವಾಗಿ ನಿಲ್ಲುತ್ತದೆಂದರೆ ತಪ್ಪಾಗಲಾರದು. ಅನೇಕ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಭಾಷಾಶಾಸ್ತ್ರದಲ್ಲಿ ಅಧ್ಯಯನ ಕೈಗೊಂಡು ಹೆಸರು ಮಾಡಿದ್ದಾರೆ. ಅದರಂತೆ ಅನೇಕ ಭಾಷಾತಜ್ಞರು ಇಂದು ಜಾನಪದ ಕ್ಷೇತ್ರದಲ್ಲಿ ಆಸಕ್ತಿಯನ್ನು ತಳೆದಿದ್ದಾರೆ. ಭಾಷಾಶಾಸ್ತ್ರದ ತತ್ವಗಳು, ಸಿದ್ಧಾಂತಗಳನ್ನು ಮೌಖಿಕ ಸಾಮಗ್ರಿಗಳ ಮುಖೇನ ತುಲಿಸಿ ನೋಡಿ ಮೌಖಿಕ ಭಾಷಾ ಅಧ್ಯಯನದ ಮಾದರಿಗಳನ್ನು ನೀಡುತ್ತಿದ್ದಾರೆ. ನಾಮಶಾಸ್ತ್ರವೂ ಕೂಡ ಭಾಷಾಶಾಸ್ತ್ರದ ಘಟಕವಾಗಿರುವುದರಿಂದ ಜನಪದ ಸಾಮಗ್ರಿಯಲ್ಲಿ ಇದನ್ನು ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಜಾನಪದರಿಗೂ, ಹೆಸರುಗಳಿಗೂ ಗಾಢ ಸಂಬಂಧವಿದೆ. ಕಾರಣ ಸ್ಥಳನಾಮಗಳನ್ನು ಕೇವಲ ಶಿಷ್ಟ ಭಾಷಿಕ ಘಟಕಗಳೆಂದು ಅಧ್ಯಯನ ಮಾಡದೇ, ಮೌಖಿಕ ಘಟಕಗಳನ್ನಾಗಿ ಮಾಡಿಕೊಂಡು ಮತ್ತೊಂದು ದೃಷ್ಟಿಕೋನದಿಂದ ಅಧ್ಯಯನ ಮೊಡುವ ಅಗತ್ಯವಿದೆ. ಆ ಮೂಲಕ ನಾಮಶಾಸ್ತ್ರ ಮತ್ತು ಜಾನಪದಗಳೆರಡರಿಂದ ಉತ್ಪನ್ನಗೊಳ್ಳುವ ಹೊಸ ಆಯಾಮಗಳನ್ನು ಪ್ರತ್ಯೇಕ ಅಧ್ಯಯನಕ್ಕೆ ಒಳಪಡಿಸಬಹುದು.

ಮುಖ್ಯವಾಗಿ ಐತಿಹ್ಯ, ಪುರಾಣ, ಗಾದೆ, ಒಗಟು, ಒಡಪು, ಕಥೆ, ಹಾಡುಗಳು ಮುಂತಾದ ಮೌಖಿಕ ಪರಂಪರೆಯಲ್ಲಿ ದಾಖಲಾದ ಮಾಹಿತಿಗಳಿಂದ ಸ್ಥಳನಾಮಗಳ ಸಾಮಾಜಿಕ ಸಂಗತಿಗಳ ಕಡೆ ಗಮನಹರಿಸಬಹುದು.

"ಸಾಮಾಜಿಕ ಭಾಷಾವಿಜ್ಞಾನ ಸಂಶೋಧನೆಯಲ್ಲಿ ಜಾನಪದ ಭಾಷಾಶಾಸ್ತ್ರ ಕೂಡ ಒಂದಾಗಿದೆ." (ವಿಲಿಯಂ ಬ್ರೈಟ್ ಅವರ ಮಾತು) ಇದರಿಂದ ಈ ರೀತಿಯ ಅಧ್ಯಯನ ಅಗತ್ಯ ಮತ್ತು ಅನಿವಾರ್ಯ. ಜಾನಪದ ಮತ್ತು ಸ್ಥಳನಾಮಶಾಸ್ತ್ರಗಳೆರಡೂ ಕ್ಷೇತ್ರಮಾಹಿತಿಯನ್ನು ಬಯಸುವುದರಿಂದ ಅಧ್ಯಯನ ಗಟ್ಟಿಯಾಗುತ್ತದೆ.

ಸ್ಥಳನಾಮ ಅಧ್ಯಯನದಲ್ಲಿ ಮೌಖಿಕ ಪರಂಪರೆಯೂ ತುಂಬಾ ಮಹತ್ವದ ಪಾತ್ರವನ್ನು ವಹಿಸುತ್ತದೆ. ಅತ್ಯಂತ ಎಚ್ಚರಿಕೆಯಿಂದ ಮೂಲಭಾಷೆ ಮುಕ್ಕಾಗದಂತೆ ದಾಖಲಿಸಿಕೊಂಡು ಅಧ್ಯಯನಗಳಿಗೆ ತುಂಬಾ ನೆರವಾಗುತ್ತದೆ. ಜೀವಂತವಾದ ಆಡುಮಾತಿನಲ್ಲಿ ಭಾಷೆಯ ವಿಶಿಷ್ಟವಾದ ಪ್ರಯೋಗಗಳೂ, ಅದರಲ್ಲೂ ಅವರಿಟ್ಟುಕೊಂಡ ಸ್ಥಳನಾಮಗಳಲ್ಲಿ ಹೇರಳವಾಗಿ ಹುದುಗಿವೆ. ಕಥೆ, ಐತಿಹ್ಯ, ಪುರಾಣ, ಗಾದೆ, ಒಗಟು, ಒಡಪು ಮುಂತಾದ ಮೌಖಿಕ ದಾಖಲೆಗಳಲ್ಲಿ ವಿವಿಧ ಪ್ರದೇಶದ ಶಬ್ದಗಳ ದೊಡ್ಡ ಭಂಡಾರವೇ ಲಭ್ಯವಾಗುತ್ತದೆ. ಆ ಪ್ರಯೋಗಗಳ ರಚನಾ ವೈಖರಿ, ಆ ರಚನೆಗಳಿಗಿರುವ ಅರ್ಥ, ಅವು ನೀಡುವ ವಿಶ್ಲೇಷಣೆ, ಈ ಎಲ್ಲ ದೃಷ್ಟಿಯಿಂದ ಅವುಗಳ ಉಪಯುಕ್ತತೆ ದೊಡ್ಡದು. "ಊರಿಗೆ ಹುಟ್ಟುಗಾರನ ಹಾಗೆ ಆಡಬೇಡ" ಎಂಬ ಮಾತುಗಳನ್ನು ಗಮನಿಸಿದರೆ ಇಲ್ಲಿ ಹುಟ್ಟುಗಾರ ಎಂಬ ಶಬ್ದಕ್ಕೆ ಆ ಊರಿನ ಪ್ರಾಚೀನತೆಯನ್ನು ಹೇಳುವಲ್ಲಿ ವಿಶೇಷವಾದ ಅರ್ಥ ದೊರೆಯುತ್ತದೆ. ಅಂದರೆ ಮೂಲತಃ ಕಾಡುನೆಲದಲ್ಲಿ ತರಗೆಲೆಯನ್ನು ಗುಡಿಸಿ ಮನೆಕಟ್ಟಿಕೊಂಡು, ಒಂದು ಊರನ್ನು ಕಟ್ಟಿದವರಿರುತ್ತಾರೆ. ಅದಕ್ಕೆ ಒಂದು ಹೆಸರು ನೀಡಿದ ಅವರ ಬಗೆಗೆ 'ಊರಿಗೆ ಹುಟ್ಟುಗಾರ' ಎಂಬ ನುಡಿಯು ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿಯೇ ಮೌಖಿಕ ಸಂಪತ್ತನ್ನು ಹೊತ್ತು ತಂದ ಸಮುದಾಯ ತಮ್ಮ ನೆಲೆಗಳಿಗೆ ಪ್ರತ್ಯೇಕವಾದಂತಹ 'ವಾಸ್ತು' ನಿರ್ಮಿಸಿಕೊಂಡಿರುವುದು ತಿಳಿಯುತ್ತದೆ.

### ೫.೧. ಜನಪದ ವಾಸ್ತು ಮತ್ತು ಸ್ಥಳನಾಮ

ವಸ್ತುಗಳಿಂದ ನಿರ್ಮಿತವಾದದ್ದು ವಾಸ್ತು. ಕಟ್ಟಡ ನಿರ್ಮಾಣ, ಪಟ್ಟಣ, ನಗರಗಳ ನಿರ್ಮಾಣವನ್ನು ಇದರ ವ್ಯಾಪ್ತಿಗೆ ಸೇರಿಸಲಾಗಿದೆ. ಈಚಿನ ತಿಳುವಳಿಕೆಯಂತೆ ಕಟ್ಟಡಗಳ ನಿರ್ಮಾಣವನ್ನು ಮಾತ್ರ ವಾಸ್ತು' ಎಂದು ಕರೆಯುತ್ತಾರೆ. ಆದರೆ ಅರಮನೆಗಳ ರಚನೆ, ದೇಗುಲಗಳ ರಚನೆ ಮತ್ತು ಕೋಟೆಗಳ ರಚನೆಯನ್ನೂ ವಾಸ್ತುಶಾಸ್ತ್ರವು ಅಭ್ಯಾಸ ಮಾಡುತ್ತದೆ. ಇದಕ್ಕಿಂತ ಭಿನ್ನವಾಗಿ ಜನಪದ ವಾಸ್ತು, ಜನಪದರ ಮನೆ, ಕೊಟ್ಟಿಗೆ, ಅಂಗಳ, ಬಾವಿ, ಗುಡಿ, ಹಳ್ಳಿ ಮತ್ತಿತರ ವಿಷಯಗಳನ್ನು ತನ್ನ ವ್ಯಾಪ್ತಿಗೆ ಸೇರಿಸಿಕೊಳ್ಳುತ್ತದೆ.

ಜನಪದ ವಾಸ್ತು ಭೌತಿಕ ಜಾನಪದದ ಪ್ರಧಾನ ಅಂಗವಾಗಿದೆ. ಜನಪದರು ವಾಸಿಸುವ ಭೌಗೋಳಿಕ ಪರಿಸರ, ಪ್ರಾದೇಶಿಕತೆ, ಅಲ್ಲಿನ ಸಸ್ಯವರ್ಗ, ಪ್ರಾಣಿವರ್ಗ ಜನರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು, ಉತ್ಪಾದನಾ ವಿಧಾನಗಳು ಕಸುಬುಗಳು ಮತ್ತು ಆಯಾ ಸಮುದಾಯದ ಲೋಕದೃಷ್ಟಿಯನ್ನು ಆಧರಿಸಿಕೊಂಡು ಜಾನಪದರು ತಮ್ಮದೇ ಆದಂತಹ ವಾಸ್ತುಶೈಲಿಯನ್ನು ಬೆಳೆಸಿಕೊಂಡಿದ್ದಾರೆ. ಮನೆಯು ಮೂಲತಃ ಸ್ವತಂತ್ರವಾದ ಘಟಕವೇನೂ ಅಲ್ಲ. ಅದರ ಸುತ್ತಲಿನ ದನಗಳ ಹಟ್ಟಿ, ಕೊಟ್ಟಿಗೆ, ಬಾವಿ, ಅಂಗಳ ಮುಂತಾದುವೆಲ್ಲ ಅದರ ಜೊತೆಗೇ ಸೇರಿಕೊಂಡು ಅದೊಂದು ಸಂಕೀರ್ಣ ಘಟಕ ಆಗುತ್ತದೆ. ಇಂಥಾ ಮನೆಗಳ ಸಮೂಹವೇ

ಊರು, ಗ್ರಾಮಗಳಾಗುತ್ತವೆ. ಇಂಥಾ ಗ್ರಾಮಗಳಿಗೆ ಅದರದೇ ಆದ ವಾಸ್ತು ಇರುತ್ತದೆ. ಊರುಗಳ ನವ ನಿರ್ಮಾಣದಲ್ಲಿ ವಾಸ್ತು ಅನುಸರಿಸಿದರೂ, ತನ್ನಷ್ಟಕ್ಕೆ ತಾನೇ ಬೆಳೆದಿರುವ ಊರುಗಳಿಗೆ ಈ ನಿಯಮ ಕಡ್ಡಾಯವಾಗಿ ಅಲ್ಲದಿದ್ದರೂ, ರಚನೆಯ ದೃಷ್ಟಿಯಿಂದ ವಾಸ್ತು ಶೈಲಿ ಇದ್ದೇ ಇರುತ್ತದೆ. ಈ ಊರುಗಳಿಗೆ ಹೆಸರಿಡುವಲ್ಲಿಯೂ ಜಾನಪದರು ವಿಶೇಷವಾದ ಆಚರಣೆಗಳಲ್ಲಿ ಅವುಗಳೆಲ್ಲವುಗಳ ನಡುವಣ ಬಾಂಧವ್ಯವು ನವೀಕರಿಸಿ, ಜಾತಿ, ವೃತ್ತಿ, ಪ್ರದೇಶ, ರಾಜಕೀಯ ಮತ್ತಿತರ ಅಂಶಗಳನ್ನು ವಾಸ್ತುವಿನ ಮೇಲೆ ಅಳವಡಿಸಿಕೊಂಡು ಗ್ರಾಮಗಳಿಗೆ ನಾಮನಿರ್ದೇಶನ ಮಾಡಿದ್ದುಂಟು. ಕನ್ನಡ ನಾಡಿನ ತುಂಬ ಇಂತಹ ಜಾನಪದ ಗ್ರಾಮನಾಮ ವಾಸ್ತುಗಳ ಕುರಿತು ಹೇರಳವಾಗಿ ಮಾಹಿತಿಗಳು ಲಭ್ಯವಿವೆ. ಇದರಿಂದ ಜಾನಪದರ ಜಾಣ್ಮೆಯು ವ್ಯಕ್ತವಾಗುತ್ತದೆ. "ಜನತೆಯ ಮನೋಧರ್ಮವನ್ನು ಅವರ ಬುದ್ಧಿ ಸಾಮರ್ಥ್ಯವನ್ನು ಅರಿಯುವ ಕಾರಣಕ್ಕಾಗಿಯೂ ಅದಕ್ಕೆ ಬೆಲೆಯಿದೆ. ಹಲವಾರು ಗ್ರಾಮಗಳಿಗೆ ಅಥವಾ ಸ್ಥಳಗಳಿಗೆ ಹೆಸರು ಕೊಟ್ಟವರು ಗ್ರಾಮೀಣರೆಂಬುದನ್ನು ಮರೆಯಲಾಗದು."[೧] ಆದ್ದರಿಂದ ಜಾನಪದ ವಾಸ್ತುವನ್ನಾಧರಿಸಿ ಗ್ರಾಮನಾಮ ನಿರ್ದೇಶನ ನಡೆದಿದೆಯೆಂಬುದೂ ತಿಳಿದುಬರುವ ಸಂಗತಿಯೇ. ಈ ಕಾರಣದಿಂದಾಗಿ ಗ್ರಾಮನಾಮವೆಂಬುದು ಜಾನಪದರ ಚಿಪ್ಪಿನೊಳಗಡೆ ಅವಿತುಕೊಂಡೇ ತನ್ನ ಛಾಪನ್ನು ಮೂಡಿಸುತ್ತಿರುತ್ತದೆ.

ಬಹುತೇಕ ಸ್ಥಳನಾಮಗಳು ಸ್ಥಳೀಯ ಭಾಷಿಕ ಪದಗಳಿಂದಲೇ ರೂಪುಗೊಂಡಿವೆ. ಅವು ಹೆಚ್ಚಾಗಿ ಪ್ರಕೃತಿ ಅಥವಾ ನಿರ್ದಿಷ್ಟ ಸ್ಥಳ ಅಥವಾ ಒಂದು ಘಟನೆಯನ್ನು ವಿವರಿಸುವ ಸ್ವರೂಪದ್ದಾಗಿವೆ. ಈ ಪದಗಳು ದಿನ ಬಳಕೆಯಿಂದ ತಪ್ಪಿಹೋದಾಗ ಜನ ತಮ್ಮ ಕುತೂಹಲದಿಂದ ಅವುಗಳನ್ನು ತಮ್ಮದೇ ಆದ ರೀತಿಯಲ್ಲಿ ವ್ಯುತ್ಪತ್ತೀಕರಿಸುವ ಮೂಲಕ ಅರ್ಥಪೂರ್ಣವಾಗಿಸುತ್ತಾರೆ. ಇದನ್ನು 'ಜನಪದ ನಿರುಕ್ತಿ' ಎಂದು ಕರೆಯಬಹುದು. ಹೆಸರಿಡುವ ಪ್ರಕ್ರಿಯೆ ಹೇಗೆ ನಿರಂತರವೂ, ಸಾರ್ವತ್ರಿಕವೂ ಆಗಿದೆಯೋ ಹಾಗೆಯೇ ಈ ವ್ಯುತ್ಪತ್ತೀಕರಿಸುವ ಪ್ರಕ್ರಿಯೆಯನ್ನು ಸ್ಥಳನಾಮಗಳ ಚರಿತ್ರೆಯ ದೃಷ್ಟಿಯಿಂದ ನಿರಂತರ ಮತ್ತು ಸಾರ್ವತ್ರಿಕವೆಂದೇ ತೆಗೆದುಕೊಳ್ಳಬೇಕಾಗಿದೆ. "ಭೂಮಿಯ ಸೃಷ್ಟಿ, ಅದರ ಇಂದಿನ ಸ್ಥಿತಿ, ಮಾನವನ ಅಸ್ತಿತ್ವ, ಗಾಳಿ, ನೀರು ಮುಂತಾದುವು ಸ್ಥಳನಾಮಗಳಲ್ಲಿ ಐತಿಹ್ಯ ಹಾಗೂ ಪುರಾಣ ಕಲ್ಪನೆಗಳನ್ನೊಳಗೊಂಡ ಘಟನೆಗಳ ಮೇಲೆ ನಿರ್ಮಿತವಾಗಿರುತ್ತವೆ."[೨] ಇಂಥಾ ಕೆಲವು ಕಲ್ಪಿತ ಕಥೆಗಳಿಗೂ ಎಲ್ಲಾ ಸ್ಥಳನಾಮಗಳ ವೈಜ್ಞಾನಿಕ ನಿಷ್ಪತ್ತಿಗೂ ನೇರವಾದ ಸಂಬಂಧ ಇರಲಾರದಾದರೂ ಅವುಗಳನ್ನು ಭಾಷಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಕಡೆಗಣಿಸುವಂತಿಲ್ಲ.

ನಮ್ಮಲ್ಲಿ ಎಷ್ಟೋ ಸ್ಥಳಗಳ, ಊರುಗಳ ಪ್ರಾಚೀನತೆ ಮತ್ತು ನಿಷ್ಪತ್ತಿಯನ್ನು ಖಚಿತವಾಗಿ ಗುರುತಿಸುವುದು ಕಷ್ಟ. ಅದಕ್ಕೆ ತಕ್ಕ ಚಾರಿತ್ರಿಕ ಸಾಕ್ಷ್ಯಾಧಾರಗಳು ದೊರೆಯುವುದಿಲ್ಲ. ಈ ಸಂದರ್ಭದಲ್ಲಿ ಮೌಖಿಕ ಪರಂಪರೆಯನ್ನು ಗಮನಿಸ ಬೇಕಾಗುತ್ತದೆ. ಭೌತಿಕವಾಗಿ ವೈಜ್ಞಾನಿಕ ಯುಗದಲ್ಲಿ ನಿಂತುಕೊಂಡು ಮುಂದಿನ ಅತ್ಯಾಧುನಿಕ ಶತಮಾನಕ್ಕೆ ದಾಪುಗಾಲಿಡಲು ಪ್ರೇರಣೆಗೊಳ್ಳುತ್ತಿರುವ ಜನತೆಯ, ಈಗಿನ ಮತ್ತು ಹಿಂದಿನ ಆಚಾರ - ವಿಚಾರ, ನಂಬಿಕೆ - ನಡೆವಳಿಕೆಗಳೇನು? ಅವರ ಮನಸ್ಸನ್ನು ಆಳುತ್ತಿರುವ ಶಕ್ತಿಗಳಾವುವು? ಹೊರಗಿನ - ಒಳಗಿನ ಈ ಒತ್ತಡದಿಂದ ಏರ್ಪಟ್ಟಿರುವ ದ್ವಂದ್ವ ಎಂಥದ್ದು? ಇದರಿಂದ ಸ್ಥಳನಾಮಗಳ ಮೇಲೆ ಆಗಿರುವ ಪರಿಣಾಮವೇನು? ಇಂಥಾ ಅಧ್ಯಯನ ಪ್ರಸ್ತುತ ನೀಡುವ ಕೊಡುಗೆಯೇನೆಂಬ ಬಗೆಗೆ ಆಲೋಚಿಸಬೇಕಾಗಿದೆ. "ಆಧುನೀಕರಣ ಹಳ್ಳಿಗಳನ್ನು

ಪ್ರವೇಶಿಸುವುದು ಮೇಲ್ನೋಟಕ್ಕೆ ಕಾಣುವಂತಹದು. ಆದರೂ ಅಲ್ಲಿ ಗುಪ್ತವಾಗಿ ಗಟ್ಟಿಯಾಗಿ ಪ್ರಾಚೀನ ಪರಂಪರೆಯನ್ನು ಬಿಟ್ಟುಕೊಡಲಾರದು."[೬] ಆದರಲ್ಲೂ ಮೌಖಿಕ ಪರಂಪರೆಯನ್ನು ಎಂದೂ ಕಳಚಿಕೊಳ್ಳಲಾರದು.

ಈ ಎಲ್ಲಾ ಹಿನ್ನೆಲೆಯೊಂದಿಗೆ ಸ್ಥಳನಾಮಗಳನ್ನು ಮೌಖಿಕ ಪರಂಪರೆಯ ಐತಿಹ್ಯ - ಪುರಾಣ - ಗಾದೆ - ಒಗಟು - ಒಡಪು - ಕಥೆ - ಲಾವಣಿ - ಕೋಲಾಟದ ಪದಗಳು ಜಾನಪದ ರಂಗಭೂಮಿ ಮುಂತಾದ ಮೌಖಿಕ ದಾಖಲಾತಿಗಳ ಮೂಲಕ ಅಧ್ಯಯನ ಮಾಡಿ, ಅದರಿಂದ ಸ್ಥಳನಾಮಗಳಿಗಿರುವ ವಿಭಿನ್ನ ಆಯಾಮಗಳನ್ನು ಕಾಣಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ವರೆಗೆ ನಡೆದಿರುವ ಅಧ್ಯಯನಗಳಲ್ಲಿ ಐತಿಹ್ಯ - ಪುರಾಣಗಳನ್ನು ಗಮನಿಸಲಾಗಿದೆ. ಆದರೆ ಪ್ರಸ್ತುತ ಅಧ್ಯಯನದ ಗುರಿ ಅದನ್ನು ಮೀರಿ ತನ್ನ ವ್ಯಾಪ್ತಿಯನ್ನು ಜಾನಪದದ ವಿವಿಧ ಮಗ್ಗುಲುಗಳಿಗೆ ವ್ಯಾಪಿಸಿಕೊಂಡು ಆ ಮೂಲಕ ಕುತೂಹಲಕಾರಿ ಅಂಶಗಳ ಕಡೆಗೆ ಗಮನ ಸೆಳೆಯುವಂಥದ್ದಾಗಿದೆ. ಅಂತಹ ಕೆಲವು ಮಾದರಿಗಳನ್ನು ಮುಂದಿನ ವಿವರಣೆಗಳಲ್ಲಿ ಕಾಣಿಸುವ ಪ್ರಯತ್ನ ಮಾಡಲಾಗಿದೆ.

### ೫.೨. ಐತಿಹ್ಯ ಮತ್ತು ಸ್ಥಳನಾಮಗಳು

ಒಂದು ನಿರ್ದಿಷ್ಟ ಸ್ಥಳಕ್ಕೆ ಅಂಟಿಕೊಂಡಿರುವ ವಿಶಿಷ್ಟ ಸ್ವರೂಪದ ಕಥಾನಕವೇ ಐತಿಹ್ಯ. ಕೇವಲ "ಸ್ಥಳಕ್ಕಷ್ಟೇ ಅಲ್ಲ, ವ್ಯಕ್ತಿ ಅಥವಾ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧಾರಿತವಾಗಿದೆಯೆಂದು ಭಾವಿಸುವ ಕಥೆಯೇ ಆಗಿದೆ?"[೪] ಐತಿಹ್ಯಗಳು ಬೆಟ್ಟ, ಗುಡ್ಡ, ಮುಂತಾದ ಸ್ಥಳಗಳಿಗೆ, ವಿಶೇಷವಾಗಿ ಅನೇಕ ಪ್ರಸಿದ್ಧ ವ್ಯಕ್ತಿಗಳ ಹೆಸರಿನಲ್ಲಿಯೂ ಐತಿಹ್ಯಗಳು ಆರೋಪಿತವಾಗಿರುತ್ತವೆ. ಅವು ನಿಜವಾಗಿ ನಡೆದ ಘಟನೆಗಳೋ ಎಂಬಂತೆ ಸಾಂಪ್ರದಾಯಿಕ ವಿಷಯಗಳನ್ನೊಳಗೊಂಡು ರೂಪಿತವಾಗಿ ನಿರೂಪಿಸಲ್ಪಡುತ್ತವೆ. ಹಾಗೆಂದು ಇವು ಪೂರ್ಣವಾಗಿ ಕಲ್ಪಿತವಾದವುಗಳೂ ಅಲ್ಲ. ಕೆಲವು ಚಾರಿತ್ರಿಕ ಅಂಶಗಳಿಗೆ ಮಹತ್ವದ ನೆರವನ್ನು ನೀಡುತ್ತವೆ. ಐತಿಹ್ಯಗಳು ಸಾಮಾನ್ಯವಾಗಿ ಎಲ್ಲ ಭೌಗೋಳಿಕ ಪ್ರದೇಶದಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಏಕರೂಪತೆಯನ್ನು ಪಡೆದುಕೊಂಡಿರುತ್ತವೆ. ಐತಿಹ್ಯಗಳನ್ನು ಸ್ಥಳೀಯ ಮತ್ತು ಸಂಚಾರಿ ಐತಿಹ್ಯಗಳೆಂದು ವಿಂಗಡಿಸಲಾಗುತ್ತದೆ.

ಮುಖ್ಯವಾಗಿ ಸ್ಥಳೀಯ ಐತಿಹ್ಯಗಳು ಆಯಾ ಸ್ಥಳದ ವೈಶಿಷ್ಟ್ಯವನ್ನು ಆಕರ್ಷಕವಾಗಿ ಮನಂಬುಗುವಂತೆ ವರ್ಣಿಸುತ್ತವೆ. ಆ ಒಂದು ಸ್ಥಳಕ್ಕೆ ಬದ್ಧವಾಗಿರುತ್ತವೆ. ಕನ್ನಡನಾಡಿನ ಪ್ರಾಚೀನ ಸಂಸ್ಕೃತಿ, ಸಂಪ್ರದಾಯ, ರೀತಿ - ನೀತಿ, ಪದ್ಧತಿ, ನಂಬಿಕೆ, ವಾಸ್ತು ಮುಂತಾದುವುಗಳ ಕುರುಹುಗಳೂ ಈ ಐತಿಹ್ಯಗಳಲ್ಲಿವೆ.

ಸ್ಥಳನಾಮಗಳಿಗೆ ಸಂಬಂಧಿಸಿ ಸ್ಥಳೀಯ ಐತಿಹ್ಯಗಳಿವೆ. "ಸ್ಥಳದ ಹೆಸರೊಂದಕ್ಕೆ ನಿಜವಾದ ನಿಷ್ಪತ್ತಿ ತಿಳಿಯದಿದ್ದಾಗ, ತಪ್ಪು ವ್ಯಾಖ್ಯಾನ ಮಾಡುವುದೇ ಇದು. ಈ ತಪ್ಪು ನಿಷ್ಪತ್ತಿ ಅಪರಿಚಿತ ಹೆಸರಿಗೆ ವಿವರಣೆ ಕೊಡಲು ಕಾರ್ಯಕಾರಣ ಕಥೆಯೊಂದನ್ನು ಸೃಜಿಸುತ್ತದೆ"[೫] ಎಂದು ಕನ್ನಡ ವಿಶ್ವಕೋಶ ವಿವರಿಸುತ್ತದೆ. ಇಲ್ಲಿ ತಪ್ಪು ವ್ಯಾಖ್ಯಾನ ಎಂಬುದು ಪ್ರತಿಯೊಂದು ಐತಿಹ್ಯಕ್ಕೂ ಅನ್ವಯವಾಗಲಾರದು. ಕೆಲವೊಂದು ವೇಳೆ ನಿಜ ನಿಷ್ಪತ್ತಿಗೂ ಈ ಐತಿಹ್ಯಗಳು ಚಾಲನೆ ನೀಡುತ್ತವೆಯೆಂಬುದನ್ನು ಗಮನಿಸಬೇಕಾಗುತ್ತದೆ. ಸ್ಥಳನಾಮಗಳ ಸತ್ಯದ ಶೋಧಕ್ಕೆ ಐತಿಹ್ಯಗಳೂ ಆಕರಗಳೆಂಬುದನ್ನು ಮರೆಯಲಾಗದು.

ಐತಿಹ್ಯಗಳು ಪ್ರಧಾನವಾಗಿ ಪ್ರಕೃತಿ ಜನ್ಯವಾದುವು. ಏಕೆಂದರೆ ಇಲ್ಲಿ ಹೆಚ್ಚು ಸ್ಥಳಕ್ಕೆ ಮಹತ್ವ ಸಂದಾಯವಾಗುತ್ತದೆ. ನಿಸರ್ಗದ ಅನೇಕ ವಸ್ತು ವಿಷಯಗಳೇ ಐತಿಹ್ಯಗಳ ಆರೋಪಕ್ಕೆ ಒಳಗಾಗುತ್ತವೆ. ಇದಕ್ಕೆ ಆಯಾ ಭೌಗೋಳಿಕ ಪರಿಸರದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ತಳಹದಿಯಾಗಿರುತ್ತದೆ. ಒಂದು ಸ್ಥಳಕ್ಕೆ ಇರುವ ಹೆಸರಿನ ವ್ಯುತ್ಪತ್ತಿಯನ್ನು ಇಂತಹ ಐತಿಹ್ಯಗಳು ರಂಜಕವಾಗಿ ಮಾಡುತ್ತವೆ.

ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರಬೇಕಾಗುತ್ತದೆ. ಗಾಢವಾದ ಸ್ಥಳೀಕರಣ ಗುಣವನ್ನು ಹೊಂದಿದ ಐತಿಹ್ಯಗಳು ಆ ಸ್ಥಳದ ಕಾಲ ಮತ್ತು ವ್ಯಕ್ತಿಗಳೊಂದಿಗೆ ಒಂದು ಸೂಕ್ಷ್ಮ ಸಂಬಂಧವನ್ನು ಹೊಂದಿರುತ್ತದೆ. ಇದರಿಂದಾಗಿ ಪ್ರತಿ ಐತಿಹ್ಯಗಳಿಗೆ ಸ್ಥಳೀಯದೇ ಆದ ಒಂದು ಶೈಲಿಯೂ ಲಭ್ಯವಾಗುತ್ತದೆ. ಸ್ಥಳದ ಬದಲಾವಣೆ ಯೊಂದಿಗೆ ಐತಿಹ್ಯದ ಸ್ವರೂಪವೂ ಬದಲಾಗಬಹುದು. ಆದರೆ ಐತಿಹ್ಯದ ನಿರೂಪಕ ಕೊಡುವ ಭೌತಿಕ ಆಧಾರವು ಕಣ್ಣೆದುರಲ್ಲಿ ಇರುತ್ತದೆ. ಆ ಆಧಾರಕ್ಕೂ ನಿರೂಪಣೆಗೂ ಎಷ್ಟೋ ಬಾರಿ ವೈಜ್ಞಾನಿಕ ಸಂಬಂಧವೇ ಇರುವುದಿಲ್ಲ. ಸುಸಂಬದ್ಧ ತರ್ಕಮಾತ್ರ ಇರುತ್ತದೆ. ಅಂದರೆ ಸತ್ಯ, ಅಸತ್ಯಗಳೇನೇ ಇರಲಿ ಕೊಡುವ ಆಧಾರಗಳು ಮಾತ್ರ ಯಾವುದೇ ಅಡೆತಡೆಯಿಲ್ಲದೇ ಹೊಂದಿಕೊಳ್ಳುವಂತಿರುತ್ತವೆ. ಅನೇಕ ಸಂದರ್ಭಗಳಲ್ಲಿ ಅಕ್ಷರಸ್ಥ ಅಥವಾ ಶಿಷ್ಟ ಸಮುದಾಯವೂ ಈ ಬಗೆಯ ವೈರುಧ್ಯದಲ್ಲಿರುತ್ತದೆ. ಶಿಷ್ಟ ಸಮೂಹ ಐತಿಹ್ಯಗಳಂತಹ ಕಥೆಗಳಿಂದ ದೂರವೇನೂ ಉಳಿದಿರುವುದಿಲ್ಲ. ಆದರೆ ಆ ಬಗೆಗೆ ವೈಜ್ಞಾನಿಕ ದೃಷ್ಟಿಕೋನ ಬೀರುತ್ತದೆ. ಐತಿಹ್ಯಗಳನ್ನು ಸೃಜಿಸುವಂತಹ ಮೌಖಿಕ ಸಮುದಾಯ ಅನಕ್ಷರಸ್ಥರಾದರೂ, ತಮ್ಮ ಆಡುಮಾತಿನ ಪ್ರತಿಭಾ ಸಂಪನ್ನತೆಯಿಂದ ಕಲಾತ್ಮಕ ನಿರೂಪಣೆಯನ್ನು ಮಾಡಬಲ್ಲವರಾಗಿರುತ್ತಾರೆ. ಅದುವೇ ಮೌಖಿಕ ಪರಂಪರೆಯ ವಿಶಿಷ್ಟ ಶಕ್ತಿಯಾಗಿದೆ.

ಜನಪದ ಸಮುದಾಯದ ಗಮನಕ್ಕೆ ಬಾರದ ವಿಷಯವೇ ಇಲ್ಲ. ಅವರಲ್ಲಿ ಮೂಡಿದ ಭಾವನೆಗಳು ಅವರ ಶುದ್ಧರೂಪ, ಸ್ವಚ್ಛಂದ ಕಲ್ಪನಾ ಪ್ರತಿಭೆಯ ಮೂಲಕ ಹೊರಬರುವಾಗ ಐತಿಹ್ಯ ಅಥವಾ ಪುರಾಣವಾಗಿ ರೂಪ ಪಡೆಯುತ್ತವೆ. ಈ ಸೃಷ್ಟಿಯ ಬಗೆಗೆ ಅದರ ಹಿಂದಿರುವ ಶಕ್ತಿಯ ಬಗೆಗೆ, ಸ್ವರ್ಗ - ಮರ್ತ್ಯ, ಪಾತಾಳಗಳ ಬಗೆಗೆ ಚಿಂತಿಸಿ, ಅದನ್ನು ತಮ್ಮ ಕಲ್ಪನೆಗೆ ಹೊಳೆದಂತೆ ವಿವರಿಸಿದ್ದಾರೆ. ಹಿಂದೆ ನಡೆದ ಘಟನೆಗಳಿಗೂ ಸಹ ಒಂದು ಕಥೆ ಕಟ್ಟಿ ನಿರೂಪಿಸಿದರು. ಇದರಲ್ಲಿ ಉತ್ಪ್ರೇಕ್ಷೆಗಳು ಸೇರಿಕೊಂಡಿರಬಹುದು. ಆದರೆ ಅದ್ಯಾವುದೂ ಉದ್ದೇಶಪೂರ್ವಕ ವಾಗಿ ಮಾಡಿದ್ದಲ್ಲ. ಅವರಿಂದ ಲಹರಿ ಲಹರಿಯಾಗಿ ಹೊರಹೊಮ್ಮಿದ್ದು. ಇಂಥಾ ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಕಟ್ಟಿಕೊಳ್ಳುವ ಕಥೆಗಳೇ ಐತಿಹ್ಯಗಳು. ಈ ರೀತಿಯ ಕಾಲ್ಪನಿಕ ಕಥೆಗಳ ಎಲ್ಲೆಯನ್ನು ನಿರ್ಧರಿಸುವುದು ಕಷ್ಟ. ಸ್ಥಳಗಳ ಹೆಸರುಗಳಲ್ಲಿ ಈ ರೀತಿಯ ಐತಿಹ್ಯಗಳು ಜಾನಪದರಿಗೆ ರಕ್ತಗತವಾಗಿದೆ. ತನ್ನ ಊರು, ತನ್ನ ಸಮಾಜದ ಬಗೆಗೆ ಅವರಿಗಿರುವ ಅಭಿಮಾನ, ತಿಳುವಳಿಕೆಯೇ ಇಂತಹ ಕಾರ್ಯಪ್ರವೃತ್ತಿಗೆ ಅವರನ್ನು ತೊಡಗಿಸುತ್ತದೆ. "ಒಂದು ಸ್ಥಳಕ್ಕೆ ನಮ್ಮ ಜಾನಪದರು ನೀಡುವ ನಿರುಕ್ತಿ, ಕಥೆಗಳು ಅವರ ಅನುದ್ದೇಶಿತ ಕಲ್ಪನೆಗಳೇ ಹೊರತು ಬೌದ್ಧಿಕ ಕಸರತ್ತಲ್ಲ." ಎಲ್ಲಾ ಸಂದರ್ಭಗಳಲ್ಲಿಯೂ ಜಾನಪದರು ಕಟ್ಟಿದ ಕಲ್ಪನೆಯ ಕಥೆ ಸುಳ್ಳಾಗಲಾರದು. ಶಿಷ್ಟ ಸಂಸ್ಕೃತಿಯ ಚರಿತ್ರೆಯ ದಾಖಲಾತಿಗಾಗಿ ಅಕ್ಷರಸ್ಥರು ಕಂಡುಕೊಂಡ ಲಿಖಿತಚರಿತ್ರೆ ಒಂದೆಡೆಯಾದರೆ, ಮೌಖಿಕ ಚರಿತ್ರೆಯ ದಾಖಲಾತಿಗಾಗಿ ಅಕ್ಷರೇತರ ಸಮುದಾಯ ಕಂಡುಕೊಂಡ ಒಂದು ಸಾಧನವನ್ನಾಗಿಯೂ ಐತಿಹ್ಯವನ್ನು ಪರಿಗಣಿಸಬಹುದು. ಇದರಿಂದ ಐತಿಹಾಸಿಕ ಸಂಗತಿಗಳ ಅನಾವರಣ ಸಾಧ್ಯವಾಗುತ್ತದೆ.

"ಐತಿಹ್ಯಗಳಿಂದ ಸ್ಥಳನಾಮಗಳ ಇತಿಹಾಸವನ್ನು ತಿಳಿಯಬಹುದು. ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿ ಯಾದದ್ದು."[೬] ಚರಿತ್ರೆಯ ನಿರ್ಮಿತಿಯಂತೆ ಇಲ್ಲಿ ಕೂಡ ಭೌತಿಕವಾದ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲಿಯೇ ಹಿಡಿದಿಟ್ಟುಕೊಳ್ಳಲಾಗುವುದು. ಐತಿಹ್ಯಗಳಲ್ಲಿ ಭಾವುಕತೆಯಿದ್ದರೂ ಚಾರಿತ್ರಿಕ ಸಂಗತಿಯೊಂದು ಕಲ್ಪನೆಯಲ್ಲಿ ಹೇಗೆ ಬೇಕೋ ಹಾಗೆ ರೂಪು ಪಡೆಯುತ್ತದೆ. ಏನೇ ಆದರೂ "ಸ್ಥಳನಾಮ ಅಧ್ಯಯನ ಸಂದರ್ಭದಲ್ಲಿ ಜನಪದರ ಮಟ್ಟಿಗೆ ಐತಿಹ್ಯಗಳೇ ಚರಿತ್ರೆಗಳಾಗಿವೆ" ಎಂಬುದು ಗಮನಾರ್ಹ.

ಸ್ಥಳನಾಮಗಳಿಗೆ ಸಂಬಂಧಿಸಿದ ಐತಿಹ್ಯಗಳು ಕರ್ನಾಟಕದ ಸಂದರ್ಭದಲ್ಲಿ ಮಾತ್ರ ಸತ್ಯವನ್ನು ಕಂಡುಕೊಳ್ಳುವಲ್ಲಿ ಒಂದಿಷ್ಟು ಆಧಾರವಾಗಿವೆ ಎನ್ನುವಂತಿಲ್ಲ. ನಮ್ಮಲ್ಲಿ ಹುಟ್ಟಿಕೊಂಡಂತೆ "ಸ್ಥಳನಾಮ ಐತಿಹ್ಯಗಳು ಜಗತ್ತಿನಲ್ಲೆಲ್ಲಾ ವ್ಯಾಪಕವಾಗಿ ಹರಡಿವೆ. ಅವು ಯಥಾರ್ಥವಾಗಿರಬಹುದು ಇಲ್ಲವೇ ಕಾಲ್ಪನಿಕವಾಗಿರಬಹುದು."[೭] ಅದೇನೇ ಇದ್ದರೂ ನಾಮವಿಜ್ಞಾನದ ಅಧ್ಯಯನ ಸಂದರ್ಭದಲ್ಲಿ ಪ್ರಮುಖ ಆಕರಗಳಾಗಿ ಐತಿಹ್ಯಗಳು ನಿಲ್ಲಬಲ್ಲಂಥವುಗಳೆಂಬುದು ಸತ್ಯ ಸಂಗತಿಯಷ್ಟೇ.

ನಮ್ಮ ಗ್ರಾಮೀಣ ಸಮುದಾಯಕ್ಕೆ ಒಂದೊಂದು ವಸ್ತು ಒಂದೊಂದು ತೆರನಾಗಿ ಕಂಡು ಬರುತ್ತದೆ. ಕಾರಣ ಬಹುತೇಕ ಸ್ಥಳನಾಮಕ್ಕೆ ಸಂಬಂಧಿಸಿದ ಐತಿಹ್ಯಗಳು ಕರ್ನಾಟಕದಾದ್ಯಂತ ಒಂದೇ ಮಾದರಿಯಲ್ಲಿರುತ್ತವೆ. ಅಂತಹ ಕೆಲವು ಸಾಮಾನ್ಯ ನಿಯಮಗಳನ್ನು ಈ ರೀತಿ ಸೂತ್ರೀಕರಿಸಬಹುದು.

೧. ನಿಸರ್ಗದ ಚಹರೆಯನ್ನು ಗುರುತಿಸಲು ಇಟ್ಟುಕೊಂಡ ಹೆಸರುಗಳು.

೨. ನಿಸರ್ಗದ ಚಹರೆಗೆ ಪುರಾಣ ಪುರುಷರು, ದೇವತೆಗಳು ಹೆಸರಾಗಿ ಆರೋಪಗೊಂಡಿರುವುದು.

೩. ಭೂತ, ದೆವ್ವ ಮುಂತಾದ ಭಯಾನಕ ಸ್ಥಿತಿಯನ್ನು ವಿವರಿಸುವಂತಹವು.

೪. ಸಾಮಾನ್ಯ ಜನರನ್ನು ಸ್ಥಳದೊಂದಿಗೆ ಸಮೀಕರಿಸಿ ವರ್ಣಿಸುವುದು.

೫. ಚರಿತ್ರೆಯ ಸಂಗತಿಗಳಿಂದ ನಿರೂಪಿತವಾಗಿರುವಂತಹವು.

ಬಹುತೇಕ ಈ ಸಾಮಾನ್ಯ ನಿಯಮಗಳು ಸಾರ್ವತ್ರಿಕವಾಗಿ ವಿವಿಧ ನೆಲೆಯಲ್ಲಿ ಚಿತ್ರಿತವಾಗಿರುವುದನ್ನು ತಿಳಿಯಬಹುದು.

೧. ಎರಡು ಕಲ್ಲುಗಳು ಜೋಡಿಯಾಗಿ ನಿಂತಿದ್ದರೆ ಬಹುಮಟ್ಟಿಗೆ ಅವು ಅಕ್ಕ - ತಂಗಿ - ಅಣ್ಣ - ತಮ್ಮ, ಮುಂತಾಗಿ ಕಂಡು ಬರುವುದು ಸಹಜ.

ಉದಾ : ೧. ಅಕ್ಕತಂಗೇರ ಗುಂಡು    ೨. ಅಪ್ಪಲೋನ ಗುಟ್ಟ

೨. ಯಾವುದಾದರು ಬಂಡೆಯ ಮೇಲೆ ಪ್ರಕೃತಿ ಸಹಜವಾದ ಕೊಳ, ನೀರಿನದೊಣೆ ಇದ್ದರೆ, ಇಲ್ಲವೇ ಬಂಡೆಯ ಮೇಲೆ ಪಾದದ ಗುರುತುಗಳಿದ್ದರೆ ಅವು ಮೌಖಿಕರ ಕಲ್ಪನೆಯಲ್ಲಿ ರಾಮ - ಭೀಮ ಮುಂತಾದ ಪುರಾಣ ಪುರುಷರ ನಿರ್ಮಾಣಗಳೇ ಆಗಿರುತ್ತವೆ.

ಉದಾ : ಪಾದಾಲಗಟ್ಟ : ಭೀಮನಕೊಳ : ರಾಮನತೀರ್ಥ :

ಸೀತೆಸೆರಗು : ಹರಿಶಂಕರ :

೩. ಯಾವುದಾದರೂ ವಸ್ತು ಪ್ರಕೃತಿಯಲ್ಲಿ ಬಿಳಿ ವರ್ಣದಲ್ಲಿ ಕಂಡುಬಂದರೆ ಅದು ಸಾಮಾನ್ಯವಾಗಿ ಹತ್ತಿ, ಬೆಣ್ಣೆ, ಬೆಳ್ಳಿ, ಶಿವನು ರೂಪಿಸಿದ ಯುಭೂತಿ ಮುಂತಾಗಿ ತೋರಿ ಬರುತ್ತದೆ.

ಉದಾ: ಬೆಳಗಲ್ಲು : ಬೆಳ್ಳಿಬೆಟ್ಟ

ಬೆಣ್ಣೆಕಲ್ಲು : ಯುಭೂತಿಗುಡ್ಡ

೪. ಕೆಂಪು ವರ್ಣದಲ್ಲಿ ಕಂಡರೆ ಅದು ತಪ್ಪು ಮಾಡಿದವನೊಬ್ಬ ರಕ್ತಕಾರಿ ಸತ್ತ ಸ್ಥಳವಾಗಿ ಕಂಡುಬರುತ್ತದೆ.

ಉದಾ : ರಕ್ಕಸಿದಿಬ್ಬ : ರಕ್ತಪಡೆ.

೫. ಐದು ಕಲ್ಲುಗಳು ಒಂದೆಡೆಯಿದ್ದರೆ ಅವರು ಪಾಂಡವರು.

ಉದಾ : ಪಾಂಡವಗಲ್ಲು.

೬. ಪ್ರಕೃತಿ ಸಹಜವಾಗಿ ನಿರ್ಮಾಣಗೊಂಡ ಬಂಡೆಗಲ್ಲುಗಳನ್ನು ಸಾಮಾನ್ಯವಾಗಿ ಕೋತಿ, ನವಿಲು, ನರಿ, ಹುಲಿ, ಚಿರತೆ ರೂಪದಲ್ಲಿ ಆರೋಪ ಮಾಡುತ್ತಾರೆ.

ಉದಾ : ಕೋತಿಗುಂಡು, ನವಿಲಕಲ್ಲು, ಹುಲಿಕಣವೆ.

೭. ಯಾವಾಗಲೂ ನೀರು ಹರಿಯುತ್ತಿದ್ದರೆ ಅದು ಗಂಗಾದೇವಿಯ ಮೂಲ ವಾಸಸ್ಥಾನ.

೮. ಅರಳೀಮರ, ಬೇವಿನಮರ ಒಟ್ಟಿಗೆ ಬೆಳೆದಿದ್ದರೆ ಅದು ಶಕ್ತಿದೇವತೆಯ ವಾಸಸ್ಥಾನ.

೯. ಭಯಾನಕವೆಂಬಂತೆ ಕಂಡುಬರುವ ದಟ್ಟವಾದ ಕಾಡು, ಬೆಟ್ಟ, ತೋಪುಗಳು ದೆವ್ವ ಭೂತಗಳ ವಾಸಸ್ಥಾನ.

ಉದಾ : ದಯ್ಯಾಲಗುಡ್ಡ : ಮಗನ ತಿಂದ ಮಹಾರಾಯನದುರ್ಗ.

೧೦. ಸಾಮಾನ್ಯ ಜನರನ್ನು ಕುರಿತು.

ಉದಾ : ಆದಿಬಸಪ್ಪನ ಗುಟ್ಟೆ : ಮರಿಯಮ್ಮನಹಳ್ಳಿ

ರೆಡ್ಡಿಬಯಲು : ಮಾದಿಗನಕೊಳ್ಳ

೧೧. ಎಕನಾತೆಮ್ಮನ ದಿಬ್ಬ, ಬೂದಿದಿಬ್ಬ ಮುಂತಾದವು ಐತಿಹಾಸಿಕ ಸಂಗತಿಯ ಕಡೆ ಗಮನಹರಿಸುತ್ತವೆ.

ಹೀಗೆ ಐತಿಹ್ಯಗಳು ಒಂದು ಸಾಮಾನ್ಯ ನಿಯಮದಲ್ಲಿ ಕರ್ನಾಟಕದಾದ್ಯಂತ ಸೂತ್ರೀಕರಿಸಲ್ಪಟ್ಟಿವೆ. ಈ ಬಗೆಯ ಐತಿಹ್ಯಗಳಿಂದ, ಆಧಾರಗಳಿಲ್ಲದೇ ಚರಿತ್ರೆಯು ಮೌನವಾದಾಗ ಪ್ರಮುಖ ಆಕರಗಳಾಗಿ ತೆಗೆದುಕೊಳ್ಳಬಹುದು. ಕಾಲಮಾನದ ದೃಷ್ಟಿಯಿಂದ, ವಾಸ್ತವತೆಯ ದೃಷ್ಟಿಯಿಂದ ಅಧ್ಯಯನಕಾರರಿಗೆ ಐತಿಹ್ಯಗಳು ಪುರಾಣಗಳಿಗಿಂತ ಹೆಚ್ಚಿನ ಸಹಾಯ ನೀಡಬಲ್ಲವು. ಆದ್ದರಿಂದ ಈ ಅಧ್ಯಯನದಲ್ಲಿ ಕೆಲವು ಮಾದರಿಗಳನ್ನು ನೋಡಲಾಗಿದೆ.

ಬಳ್ಳಾರಿಯನ್ನು ಕುರಿತು ಒಂದು ಐತಿಹ್ಯ ಹೀಗಿದೆ : "It says that at Kolur, which is in the proximity of the district headqurters, there was a shiva bhakta (devote) by name. "Ballesha Mallayya" who would have his food only after was shipping the linga. he great desire was to see the vision of mallesha (shiva) to fulfil the desire of his devote, lord shiva, it is said, revealed himself in a 'Balla' a grain measull, in and around Bellary. The place where Mallesha manifested himself in the 'Balla' was called Ballary. There is an old shiva temple of Malleshwara in the fort."[೮] ಹೀಗೆ ಬಳ್ಳೇಶ ಮಲ್ಲಯ್ಯನಿಂದಾಗಿ ಬಳ್ಳಾರಿಗೆ ಆ ಹೆಸರು ಬಂದಿತೆಂದು ಗೆಝಟಿಯರ್ ಹೇಳುತ್ತದೆ. ಬಳ್ಳಾರಿ ಎಂಬ ಸ್ಥಳಕ್ಕೆ ಮತ್ತೊಂದು ಐತಿಹ್ಯವಿದೆ. ಬಳ್ಳಾರಿ' ಎಂಬ ದೇವತೆಯ ಹೆಸರಿನಿಂದಾಗಿ ಈ ಊರಿಗೆ ಬಳ್ಳಾರಿ ಎಂಬ ಹೆಸರು ಬಂದಿದೆ. ಪ್ರಾಚೀನ ಕಾಲದಲ್ಲಿ 'ಬಳ' ಎಂಬ ರಾಕ್ಷಸನೊಬ್ಬನನ್ನು ದೇವತೆಯು ಕೊಂದದ್ದಕ್ಕಾಗಿ 'ಬಳ್ಳಾರಿ' ಎಂಬ ಹೆಸರು ಬಂದಿದೆ."[೯] ಇಂದಿಗೂ ಬಳ್ಳಾರಿಯಲ್ಲಿ ದುರ್ಗಾ ದೇವತೆಯ ದೇವಸ್ಥಾನವಿದೆ. ಈ ಬಗೆಗೆ ಅನೇಕ ಸಾಹಿತ್ಯ ಕೃತಿಗಳೂ ಮಾಹಿತಿಯನ್ನು ಒದಗಿಸುತ್ತವೆ. ಬಳಾರಿ' ಎಂಬ ದೇವತೆಯ ಕುರಿತಾಗಿ ಬ್ರಹ್ಮಶಿವನೆಂಬ ಕವಿಯು 'ಬನದ ಬಳಾರಿ' ಎಂಬುದನ್ನು ಉಲ್ಲೇಖಿಸಿದ್ದಾನೆ. ಬಳ' ಎಂಬ ರಾಕ್ಷಸನನ್ನು ಕೊಂದವಳೇ ಬಳ್ಳಾರಿ. ಅರಿ - ಎಂದರೆ ವೈರಿ ಬಳನ ವೈರಿಯೇ ಬಳಾರಿ' ಎಂಬಂತಹ ಹೇಳಿಕೆಗಳು ಪಂಡಿತರಿಂದ ತಿಳಿಯುತ್ತದೆ. ಬಳಾರಿ ಎಂಬುದು 'ಭಟಾರಿ' ಶಬ್ದದಿಂದ ಬಂದಿದೆ. ಅಂದರೆ ದುಷ್ಟ ಶಕ್ತಿಯ ವೈರಿ ಎಂದು ಅರ್ಥ. ಆದರೆ ಇದೆಲ್ಲವನ್ನು ನಾವು ಜಾನಪದ ನಿವೃತ್ತಿಯೊಳಗೆ ಸೇರಿಸಬಹುದು. ಚಾರಿತ್ರಿಕವಾದಂತಹ ಕೆಲವು ಪೂರಕ ಅಂಶಗಳನ್ನು ಮೇಲಿನ ಐತಿಹ್ಯಗಳು ನೀಡಿದರೂ, ಇದಕ್ಕೆ ಬೇರೊಂದು ನಿಷ್ಪತ್ತಿಯನ್ನು ಕೊಡುವ ಪ್ರಯತ್ನ ಮಾಡಬಹುದು. ಬಹುತೇಕ ಸ್ಥಳನಾಮಗಳಿಗೆ ಪ್ರಾಕೃತಿಕ ಅಂಶಗಳೇ ಕಾರಣವಾಗಿರುವುದನ್ನು ನಮ್ಮ ನಾಡಿನಾದ್ಯಂತ ಗುರುತಿಸಬಹುದು. ಇದರಿಂದಾಗಿ ಬಳ್ಳಾರಿಗೂ ಇಂಥ ಅಂಶಗಳನ್ನು ಅಳವಡಿಸಿ ನಿಷ್ಪತ್ತಿಯನ್ನು ಹೇಳಲು ಅವಕಾಶವಿದೆ. ಶಾಸನಗಳಲ್ಲಿ ಬಳ್ಳಾರಿಯ ಹೆಸರು ಬಳ್ಳಾರೆ, ಬೆಳ್ಳಾರೆ[೧೦] ಎಂದು ಉಕ್ತವಾಗಿದೆ. ಬೆಳ್ ಎಂದರೆ ಬಿಳಿ ಬಣ್ಣ ಅಥವಾ ನೀರು, ಅರೆ ಎಂದರೆ ಕಲ್ಲು, ಬಂಡೆ ಎಂಬರ್ಥಗಳಿವೆ. ಬಳ್ಳಾರಿಯ ಸುತ್ತಮುತ್ತಲೂ ಬಿಳಿದಾದ ಕಲ್ಲುಗಳಿದ್ದು, ಪಕ್ಕದಲ್ಲೇ ವೇದಾವತಿ ನದಿಯು ಹರಿಯುತ್ತಿದೆ. ಈ ನೈಸರ್ಗಿಕ ಅಂಶಗಳಿಂದಲೂ ಬೆಳ್ಳಾರೆ' ಎಂಬ ಹೆಸರು ಬಂದಿರಲೂಬಹುದು.

ಸಿರುಗುಪ್ಪ ತಾಲ್ಲೂಕಿನ 'ಕೆಂಚನಗುಡ್ಡ' ಎಂಬ ಗ್ರಾಮಕ್ಕೆ ಐತಿಹ್ಯಗಳು ಹೀಗಿವೆ : "ಈ ಊರಿನ ಅಧಿದೇವತೆ ಕೆಂಚಮ್ಮದೇವಿ. ಇವಳನ್ನು ಕಾಂಚನಾಂಬಿಕ ಎಂದು ಕರೆಯುತ್ತಾರೆ. ಹಳ್ಳಿಗರ ಬಾಯಿಯಲ್ಲಿ ಕೆಂಚಮ್ಮ ಎಂಬ ನಾಮವನ್ನು ದೇವತೆಯು ಪಡೆದಿದ್ದಾಳೆ. ಪಾಳೆಯಗಾರರ ಆಡಳಿತದಲ್ಲಿ ಮಂತ್ರಾಲಯದ ರಾಘವೇಂದ್ರಸ್ವಾಮಿಗಳಿಗೆ ಕೆಂಚಮ್ಮ ದೇವತೆಯು ಭೆಟ್ಟಿಯಾಗಿ ಮಾತನಾಡಿದಳು. ಮುಂದೆ ಆ ಊರಿಗೆ ಕೆಂಚಮ್ಮನಗುಡ್ಡ ಎಂದಾಯಿತು. ಪಂಡಿತರು ಇದನ್ನು 'ಕಾಂಚನಗಡ' ಎಂದೇ ಕರೆಯುತ್ತಾರೆ. ಈ ಸ್ಥಳದಲ್ಲಿ ಕೆಂಚಮ್ಮ ವಾಸವಾಗಿದ್ದಾಳಾದ್ದರಿಂದ ಊರಿನ ಮಣ್ಣಿನಲ್ಲಿ ಬಂಗಾರ ದೊರೆಯುವಂತಾಯಿತು. ಕಾಂಚನ ಎಂದರೆ ಬಂಗಾರ. ಇಲ್ಲಿ ಎಲ್ಲಿ ನೋಡಿ ಕೈಯಿಟ್ಟರೂ ಬಂಗಾರ ದೊರೆಯುತ್ತಿತ್ತು. ಇಲ್ಲಿನ ಬೆಟ್ಟಗಳು ಬಂಗಾರದಿಂದ ಕೂಡಿದ್ದವಂತೆ. ಈಗಲೂ ಇಲ್ಲಿ ಬಂಗಾರ ದೊರೆಯುತ್ತಿದೆ. ಇದರಿಂದಾಗಿ 'ಕಾಂಚನಗಡ' ಎಂದು ಕರೆಯಲಾಗುತ್ತದೆ."[೧೧]

ಈ ಐತಿಹ್ಯವು ನಮ್ಮ ಜಾನಪದರು ಎಲ್ಲಿಯೂ ಊರಿನ ಹೆಸರಿಗೆ ಧಕ್ಕೆ ಬಾರದಂತೆ ಕಥೆಯನ್ನು ಕಟ್ಟಿಕೊಡುತ್ತಾರೆಂಬುದನ್ನು ತಿಳಿಸುತ್ತದೆ. ಈ ಗ್ರಾಮದ ಹೆಸರಿನ ಬಗೆಗೆ ಗೆಝೆಟಿಯರ್ "The place contains two forts. A lower fort in which most of its inhabitants used to reside formerly and an upper one on the top of the rock called Kenchanagudda, which gives the village its name and on which Kenchanagowda, a local chief, has mansion."[೧೨] ಎಂದು ಸ್ಥಳೀಯ ಚಾರಿತ್ರಿಕ ಆಡಳಿತಗಾರನೊಬ್ಬನ ಹೆಸರನ್ನು ದಾಖಲಿಸುತ್ತದೆ. ಇಂದು 'ಕೆಂಚನಗುಡ್ಡ' ಎಂಬ ರೂಪವೇ ಪ್ರಮಾಣಿತ ರೂಪವಾಗಿ ಬಳಕೆಯಲ್ಲಿದೆ. ಐತಿಹ್ಯದ ಪ್ರಕಾರ 'ಕೆಂಚವ್ವನಗುಡ್ಡ' ಎಂಬುದು ಸ್ತ್ರೀವಾಚಿ ಸ್ಥಳನಾಮ. ಇದು ಸಂಸ್ಕೃತಾನುಕರಣದಿಂದಾಗಿ 'ಕಾಂಚನಗಡ' ಎಂದು ಬದಲಾಗಿದೆ. ಕೆಂಚನಗುಡ್ಡ ಎಂಬ ಪುರುಷವಾಚಿಗೆ ಇದು ಯಾವುದೇ ಸಾಮ್ಯವನ್ನು ಹೊಂದಲಾರದು. ಕಾರಣ ಐತಿಹ್ಯವನ್ನು ಕೈಬಿಟ್ಟು ಅದರ ನಿಜನಿಷ್ಪತ್ತಿಯನ್ನು ಸ್ವೀಕರಿಸಬೇಕಾಗುತ್ತದೆ.

ಆಂಧ್ರದ ಆಲೂರು ತಾಲ್ಲೂಕಿನ ಹತ್ತಿಬೆಳಗಲ್ಲು ಎಂಬ ಗ್ರಾಮಕ್ಕೆ ಐತಿಹ್ಯವೊಂದು ಹೀಗಿದೆ : "ಈ ಊರು ಹಿಂದೆ ಹತ್ತಿಯ ಬೆಳೆಗೆ ಬಹಳ ಹೆಸರಾಗಿತ್ತಂತೆ. ಈ ಊರಿಗೆ ಸುತ್ತಮುತ್ತಲಿನ ಅನೇಕ ಜನ ಹತ್ತಿಯನ್ನು ಬಿಡಿಸಲು ಬರುತ್ತಿದ್ದರು. ಇದರಿಂದ ಅವರ ಉಪಜೀವನ ನಡೆಯುತ್ತಿತ್ತು. ಬೆಳೆದ ಹತ್ತಿಯನ್ನು ಮಾರುವುದೂ ತೊಂದರೆಯಾಗಿತ್ತು. ಒಬ್ಬ ವ್ಯಾಪಾರಿ ಈ ಗ್ರಾಮಕ್ಕೆ ಹತ್ತಿಯನ್ನು ಕೊಂಬಲು ಬಂದ. ಮೊದ ಮೊದಲು ದುಡ್ಡನ್ನು ಕೊಟ್ಟು ಜನರನ್ನು ನಂಬಿಸಿದ. ಮುಂದೆ ಎಲ್ಲಾ ಬೆಳೆಯನ್ನು ಅವನಿಗೆ ನೀಡಿದರು. ಜನರು ದುಡ್ಡು ಕೇಳಿದಾಗ ಆ ಊರಿನ ಗುಡ್ಡದಲ್ಲಿ ಹತ್ತಿ ಇರುವುದಾಗಿ ಬಿಳಿಯಕಲ್ಲುಗಳನ್ನು ದೂರದಿಂದಲೇ ತೋರಿಸುತ್ತಿದ್ದ. ಜನರು ಅದನ್ನು ನಂಬಿದರು. ಒಂದು ದಿನ ವ್ಯಾಪಾರಿ ಜನರಿಗೆ ಮೋಸಮಾಡಿ, ಊರನ್ನು ಬಿಟ್ಟು ಹೋದ. ಅವನು ಹೋಗುವಾಗ ಬೆಟ್ಟದಲ್ಲಿ ಒಂದು ಕಲ್ಲನ್ನು ನಿಲ್ಲಿಸಿ, ಅದಕ್ಕೆ ತಕ್ಕಡಿಯಂತೆ ಇರುವ ಕಲ್ಲನ್ನು ನಿಲ್ಲಿಸಿದ. ಜನರು ಗಾಬರಿಯಿಂದ ವ್ಯಾಪಾರಿಯನ್ನು ಹುಡುಕಿದರು. ಅವನು ಸಿಗಲಿಲ್ಲ. ಬೆಟ್ಟವನ್ನು ಹತ್ತಿ ನೋಡಲು ಅಲ್ಲಿ ಏನೂ ಇರಲಿಲ್ಲ. ಈ ಘಟನೆಯನ್ನು ಕಂಡಂತಹ ಅಕ್ಕ ಪಕ್ಕದ ಗ್ರಾಮದ ಜನತೆಯು 'ಬೆಳಗಲ್ಲು' ಎಂಬ ಊರಿನವರನ್ನು ಹತ್ತಿಬೆಳಗಲ್ಲು ಜನ ಎಂದು ಕರೆಯತೊಡಗಿದರು. ಈ ಕಾರಣದಿಂದ ಅದೇ ಹೆಸರು ಬಂತು."[೧೩] ಈ ಐತಿಹ್ಯಕ್ಕೆ ಸರಿಹೊಂದುವಂತೆ ಇಂದಿಗೂ ಈ ಗ್ರಾಮದಲ್ಲಿ ಬೆಟ್ಟದ ಮೇಲೆ ನಿಂತಿರುವ ಕಲ್ಲು ತಕ್ಕಡಿ ಹಿಡಿದು ನಿಂತಿರುವಂತೆಯೇ ಕಂಡು ಬರುತ್ತದೆ. ಸುತ್ತಲೂ ಹತ್ತಿಯಂತೆ ಭಾಸವಾಗುವ ಚಿಕ್ಕ - ಚಿಕ್ಕ ಬಿಳಿಯ ಕಲ್ಲುಗಳಿವೆ.

ಹತ್ತಿಬೆಳಗಲ್ಲು ಗ್ರಾಮಕ್ಕೆ ಆ ಊರಿನ ಕೈಫಿಯತ್ತು ಹೀಗೆ ವ್ಯಾಖ್ಯಾನ ನೀಡುತ್ತದೆ. "ಹತ್ತಿಬೆಳಗಲ್ಲುಯಂದು ಹೆಸರು ಆದದ್ದಕ್ಕೆ ಕಾರಣಯಿಂತೆಂದರೆ, ವೊಬ್ಬ ವರ್ತಕನು ಯೀ ದೇಶದಲ್ಲಿ ಹತ್ತಿ ವರ್ತಕ ಮಾಡಿಕೊಂಡು ಯಿರಲಾಗಿ ಕೆಲವು ವರ್ತಕರ ಕಡೆಯಿಂದಾ ಲಕ್ಷಾಂತ್ರ ಹಣವನ್ನು ತೆಗೆದುಕೊಂಡು ಗುತ್ತಿದುರ್ಗದ ಮ್ಯಾಲೆಯೇರಿ ಆ ವರ್ತಕರಿಗೆ ಯೀ ವೂರು ಬೆಳಕಲ್ಲು ಗುಡ್ಡಾ ತೋರಿಸಿ, "ಯಿ ಸ್ಥಳದಲ್ಲೂ ಹತ್ತಿ ರಾಶಿ ಹಾಕಿಯಿದ್ದೇನೆ" ಯೆಂದು ಹೇಳಿ, ಅವರ ಕಡೆಯಿಂದಾ ಹಣವನ್ನು ತೆಗೆದುಕೊಂಡು, ಯೀತಗೆ ಕಡಾ ಬಾಳ ದೇಶದಲ್ಲು ಆದ್ದರಿಂದ,

ಅವರಿಗೆ ಕೆಲವು ಹಣವನ್ನು ಕೊಟ್ಟು ತಾನು ಯೀ ದೇಶಬಿಟ್ಟು ಪರದೇಶಕ್ಕೆ ಹೊರಟು ಹೋದನು. ಯೀತಗೆ ಹತ್ತಿ ಬಗ್ಯೆ ರೊಕ್ಕ ಕೊಟ್ಟ ವರ್ತಕನು ಯೀ ಸ್ಥಳಕ್ಕೆ ಬಂದು, ಯಿಲ್ಲಿ ನಮ್ಮ ಸಂಗಡ ಕರಾರು ಮಾಡಿ ರೊಕ್ಕ ತೆಗೆದುಕೊಂಡು ಬಂದ ವರ್ತಕಾ ಹತ್ತಿ ಶೇರಿಸಿಯಿಟ್ಟ ಸ್ಥಳ ನೋಡಲಾಗಿ, ಹತ್ತಿ ಕಾಣದೆ ಬಿಳಗಲ್ಲುಯಂಬಾ ಗುಡ್ಡ ಕಂಡು, ವರ್ತಕನು ಫಲಾಯನ ಮಾಡಿ ಹೋದದ್ದು ಕೇಳಿ, ಹತ್ತಿಬೆಳಗಲ್ಲುಯೆಂಬ ಹೆಸರು ಪ್ರಸಿದ್ಧವಾಯಿತು. ಬಹು ವರ್ತಕರು ರೊಕ್ಕ ಕೊಟ್ಟು ಕೆಟ್ಟು ಹೋದದ್ದರಿಂದ ವರ್ತಕರು ಇಟ್ಟ ಹೆಸರು ಹತ್ತಿಬೆಳಗಲ್ಲುಯಂದು ಪ್ರಖ್ಯಾತಿಯಾಗಿ ಹೆಸರಾಯಿತು."[೧೪]

ಮೇಲಿನ ಎರಡೂ ಐತಿಹ್ಯಗಳು ಕೊಂಚ ವ್ಯತ್ಯಾಸದೊಂದಿಗೆ ಒಂದೇ ಕಥೆಯನ್ನು ನಿರೂಪಿಸುತ್ತವೆ. ಸತ್ಯದಿಂದ ಈ ಐತಿಹ್ಯ ದೂರವಿರಬಹುದು. ಆದರೆ ಗ್ರಾಮೀಣರು ತಮ್ಮ ಕಲ್ಪನೆಯ ಮೂಲಕ ಯಾವುದೇ ಚ್ಯುತಿಬಾರದಂತೆ ಗ್ರಾಮನಾಮದ (ಹೆಸರಿನ) ಗುಂಟ ನಿಷ್ಪತ್ತಿಯನ್ನು ಹೆಣೆದಿರುವುದು ಅವರ ಪ್ರತಿಭೆಯನ್ನು ಹೇಳುತ್ತದೆ.

**ಆಲೂರು ತಾಲ್ಲೂಕಿನ 'ಕುರುಕುಂದೆ'** ಎಂಬ **ಗ್ರಾಮಕ್ಕೆ** ಒಂದು ಐತಿಹ್ಯವಿದೆ. "ಈ ಊರು ಕುಂತಳನಗರವೆಂದು ಪ್ರಸಿದ್ಧವಾಗಿದೆ. ಈ ಊರಿಗೆ ಕುರುಕುಂದೆ ಎಂದು ಹೆಸರು ಬರಲು ಕಾರಣವೆಂದರೆ ಹಿಂದೆ ಮಹಾಭಾರತದ ಕಾಲಕ್ಕೆ ಪಾಂಡವರು ತಮ್ಮ ಸೈನ್ಯ ಸಮೇತ ಯುದ್ಧಕ್ಕೆ ಬಂದರು. ಕೌರವರ ಭೂಮಿಯ ಒಂದು ಭಾಗ ಅಂದರೆ ಕುರುಕ್ಷೇತ್ರ ಈ ಊರಾಗಿತ್ತು. ಕೌರವರೊಂದಿಗೆ ಯುದ್ಧ ಮಾಡುವಾಗ ಪಾಂಡವರು ಈ ಊರಿನಲ್ಲಿ ಜಯವನ್ನು ಪಡೆದರು. ಅದರ ನೆನಪಿಗಾಗಿ ಈ ಗ್ರಾಮದಲ್ಲಿ ಗುರುತಿಗಾಗಿ ಒಂದು ಧ್ವಜವನ್ನು (ಅರ್ಜುನನ ರಥದ ಮೇಲಿನ ಧ್ವಜ) ಬಿಟ್ಟುಹೋದರು. ಕುರು' ಎಂದರೆ ಕುರುಹು - ಕುಂದ ಎಂದರೆ ಪತಾಕೆ. ಕುರುಕ್ಷೇತ್ರದ ಕುರುಹು ಇಲ್ಲಿರುವುದರಿಂದ 'ಕುರುಕುಂದೆ' ಎಂಬ ಹೆಸರು ಪ್ರಾಪ್ತವಾಯಿತು. ಚಂದ್ರಹಾಸ ಮಹಾರಾಜನು ಕೂಡ ಇಲ್ಲಿಗೆ ಬೇಟೆಯಾಡಲು ಬರುತ್ತಿದ್ದ. ಇದರಿಂದ 'ಕುಂತಳನಗರ' ಎಂದೂ ಈ ಗ್ರಾಮ ಪ್ರಸಿದ್ಧವಾಗಿತ್ತು. ಕುರುಕುಂದೆ + ಬಲ್ಲಕುಂದೆ + ಉರುಕುಂದೆ ಎಂಬ ಮೂರು ಊರುಗಳಿಗೆ ಒಂದೇ ಕುಂದೆ ಇರುವುದರಿಂದ ಈ ಪ್ರದೇಶವೆಲ್ಲಾ ಕುಂತಳನಗರವೆಂದು ಪ್ರಖ್ಯಾತಿಗಳಿಸಿದೆ."[೧೫] ಈ ಐತಿಹ್ಯ ಕಲ್ಪನಾತ್ಮಕತೆಯಿಂದ ಜನಿಸಿದ್ದು ಸತ್ಯಕ್ಕೆ ಬಹುದೂರವಿದೆಯೆನಿಸುತ್ತದೆ. 'ಕುಂತಳನಗರ' ಅಥವಾ 'ಕುಂತಳ' ಎಂಬ ಪ್ರದೇಶದ ಬಗೆಗೆ ವಿದ್ವಾಂಸರಲ್ಲಿ ಯಾವುದೇ ಒಮ್ಮತ ಅಭಿಪ್ರಾಯವಿಲ್ಲ. ಕಾವ್ಯ, ಶಾಸನಗಳಲ್ಲಿ ಉಲ್ಲೇಖವಾದ ಕುಂತಳ'ದ ಬಗೆಗೆ ಈ ಐತಿಹ್ಯ ಕೆಲವು ಎಳೆಗಳನ್ನು ನೀಡುತ್ತದೆ. ಬಹುಶಃ ಈ ಪ್ರದೇಶವೇ ಕುಂತಳನಾಡಾಗಿರಬಹುದೆಂಬ ಅನುಮಾನವನ್ನೂ ವ್ಯಕ್ತಪಡಿಸಲು ಅವಕಾಶವಿದೆ. ಏಕೆಂದರೆ ಬಲ್ಲಕುಂದೆ - ೩೦೦, ಸಿಂಧವಾಡಿ - ೧೦೦೦ ದ ನಾಡು ಇದಾಗಿದ್ದರಿಂದ ಈ ಸಾಧ್ಯತೆಗಳಿಗೆ ಇಂಥಾ ಐತಿಹ್ಯಗಳು ಪುರಾವೆಯಾಗಬಲ್ಲವು. "ಕುಂತಳನಗರ = ಈ ಗಣ ಆದವಾನಿ ಪ್ರಾಂತ ಸಮೀಪದ ಪ್ರಾಚೀನಕಾಲದ ಒಂದು ದೇಶ."[೧೬] ಎಂಬ ವಿದ್ವಾಂಸರ ಮಾತಿನಿಂದ ಮತ್ತಷ್ಟು ಈ ಐತಿಹ್ಯಕ್ಕೆ ಸತ್ಯದ ಹಾದಿ ಒದಗಿಬಂದಂತಾಗುತ್ತದೆ. ಕುರುಕ್ಷೇತ್ರ ನಾಡು ಇದಾಗಿತ್ತೆಂಬುದು ಸುಳ್ಳಾದರೂ, ಕುಂತಳನಾಡು' ಎಂಬುದಕ್ಕೆ ಐತಿಹ್ಯದ ಜೊತೆಗೆ ಅನೇಕ ಚಾರಿತ್ರಿಕ ಸಂಗತಿಗಳೂ ಆಧಾರಗಳಾಗಿ ನಿಲ್ಲುತ್ತವೆ. ಕಾರಣ ಐತಿಹ್ಯಗಳು ಅತಿಯಾದ ರಂಜಕತೆ, ಕಲ್ಪನೆಯಿಂದ ಕೂಡಿದ್ದರೂ, ಕೆಲವು ಬಾರಿ ಅಪ್ಪಟ ಚಾರಿತ್ರಿಕ ಆಧಾರಗಳಾಗಿ ಕಂಡುಬರುತ್ತವೆ.

ಕರ್ನಾಟಕದಲ್ಲಿ ಹೇರಳವಾಗಿ ದೊರೆಯುವ ಐತಿಹ್ಯಗಳು ಕರ್ನಾಟಕದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಐತಿಹ್ಯಗಳು ತಾವು ಜನಿಸಿದ ಕಾಲದ ಜನಜೀವನ, ಕಾಲಧರ್ಮ, ಸ್ಥಳ, ಜನತೆಯ ಮನೋಧರ್ಮದ ಪ್ರತೀಕಗಳಾಗಿರುತ್ತವೆ. ಈ ದೃಷ್ಟಿಯಿಂದ ಐತಿಹ್ಯಗಳು ಸ್ಥಳೀಯ ಸಂಸ್ಕೃತಿಯ ಪ್ರತಿಫಲನಗಳು. ಒಂದೊಮ್ಮೆ ಐತಿಹ್ಯಗಳು ಸ್ಥಳೀಯತೆಯ ದೃಷ್ಟಿಯಿಂದ ಸಾರ್ವತ್ರಿಕ ಗುಣವನ್ನು ಪಡೆದು, ಸ್ವಲ್ಪ ಬದಲಾವಣೆಯೊಂದಿಗೆ ಏಕತೆಯನ್ನು ಪಡೆದುಕೊಂಡಿರುತ್ತವೆ. ಎಲ್ಲಾ ಕಡೆ ಒಂದೇ ಬಗೆಯ ಸ್ಥಳನಾಮ ನಿರ್ದೇಶನವನ್ನು ಮಾಡುವ ಜನರ ಮನೋಬುದ್ಧಿಯೂ ಏಕರೀತಿಯಲ್ಲಿ ಆಲೋಚಿಸುತ್ತಿರುತ್ತದೆನ್ನಬಹುದು. ಉದಾಹರಣೆಗೆ ಭೀಮನಕೊಳ, ಸೀತೆಸೆರುಗು, ಅಕ್ಕತಂಗೇರಗುಂಡು, ಅಗಸನೂರು - ಅಗಸನೂರು ಬೆಳಗಲ್ಲು - ಬೆಳಗಲ್ಲು: ಕುರುವಳ್ಳಿ - ಕುರುವಳ್ಳಿ ಇಂತಹ ಒಂದೇ ರೀತಿಯ ಹೆಸರುಗಳು ಸಾಮಾನ್ಯವಾಗಿ ಒಂದೇ ಸಂಸ್ಕೃತಿಯೊಳಗಡೆ ನಿರ್ದೇಶಿಸಲು ಕಾರಣಗಳೇನು? ಎಂಬುದನ್ನು ಕಂಡುಕೊಳ್ಳುವುದು ಸುಲಭವಲ್ಲವಾದರೂ, ಸಂಸ್ಕೃತಿಯೆಂಬ ಒಂದೇ ಮರದಡಿ ಒಂದೇ ಭಾಷೆ, ಒಂದೇ ಜನಜೀವನ ವಿಧಾನ, ಪ್ರಾಕೃತಿಕ ಪರಿಸರ, ಜಾನಪದರ ಏಕರೀತಿಯ ನಂಬಿಕೆಗಳು ಅವರು ಕಟ್ಟುವ ಕಥೆ, ಪವಾಡಗಳು ಇದಕ್ಕೆ ಪ್ರೇರಣೆಯಾಗಬಲ್ಲವು. ಜನಾಂಗಗಳ ಏಕರೀತಿಯ ಜೀವನ ಶೈಲಿಗಳು ಸ್ಥಳನಾಮ ನಿರ್ದೇಶನದಲ್ಲೂ ಪ್ರಾದೇಶಿಕ, ಭೌಗೋಳಿಕ ಮಟ್ಟದಲ್ಲಿ ಅಂತರ (ಹೆಚ್ಚಾಗಿದ್ದರೂ) ಏಕರೂಪ ಸಾಮ್ಯತೆಯನ್ನು ಇಲ್ಲಿ ಕಾಣುತ್ತೇವೆ.

ಹೀಗಾಗಿ ಗ್ರಾಮನಾಮ ಅಥವಾ ಸ್ಥಳನಾಮ ಐತಿಹ್ಯಗಳಿಂದಲೂ ಕರ್ನಾಟಕದ ಸಂಸ್ಕೃತಿಯೆಡೆಗೆ ಗಮನ ಹರಿಸುವುದು ಅಗತ್ಯ ಮತ್ತು ಮುಖ್ಯವೆನಿಸುತ್ತದೆ. "ಸಾಮಾನ್ಯವಾಗಿ ಇಂತಹ ಕತೆಗಳ ಉದ್ದೇಶ, ಆಯಾ ವ್ಯಕ್ತಿತ್ವಗಳು, ಸ್ಥಳಗಳು, ಅಸಾಮಾನ್ಯವಾದುವು, ಶ್ರೇಷ್ಠವಾದುದು, ವಿಶಿಷ್ಟವಾದುವು ಎಂಬುದನ್ನು ಜಗಜ್ಜಾಹೀರು ಪಡಿಸುವುದು. ಅವುಗಳನ್ನು ಪೂರ್ಣವಾಗಿ ತಿರಸ್ಕರಿಸಲಾಗದು. ಏಕೆಂದರೆ ಅಷ್ಟಿಷ್ಟು ನಡೆದ ಘಟನೆಗಳನ್ನಾಧರಿಸಿ ಇನ್ನಷ್ಟು, ಮತ್ತಷ್ಟು ವಿಚಾರಗಳನ್ನು ಸೇರಿಸಿ ಪ್ರಚಾರಮಾಡಿರುತ್ತಾರೆ. ಇಲಿಹೋದರೆ ಹುಲಿಹೋಯಿತು ಎಂದಿರುತ್ತಾರೆ ಅಷ್ಟೇ. ಐತಿಹ್ಯಗಳನ್ನು, ದಂತ ಕಥೆಗಳನ್ನು ಪವಾಡಗಳನ್ನು ನಾವು ಈ ನೆಲೆಯಲ್ಲಿಯೇ, ಈ ಪರಿಮಿತಿಯಲ್ಲಿಯೇ ಗ್ರಹಿಸಬೇಕಾಗುತ್ತದೆ."[೬] ಸ್ಥಳದ ಸಂಬಂಧವಾಗಿರುವ ಇಂಥಾ ಐತಿಹ್ಯಗಳನ್ನು ಪರಿಶೀಲಿಸಿದಾಗ ನಿಜಕ್ಕೂ ಅವು ಒಂದು ನೆಲೆಯಲ್ಲಿ ನಮ್ಮ ಜಾನಪದರ, ಮೌಖಿಕ ಪರಂಪರೆಯ ಜೀವನದೃಷ್ಟಿಯನ್ನು ಪ್ರಸ್ತುತ ಪಡಿಸುತ್ತಿರುತ್ತವೆ. ಆ ಮೂಲಕ ಒಂದು ನಾಡಿನ ಚರಿತ್ರೆಯ, ಸಂಸ್ಕೃತಿಯ ವ್ಯಾಖ್ಯಾನಕ್ಕೆ, ಅಧ್ಯಯನಕ್ಕೆ ಅಪಾರ ನೆರವನ್ನು ನೀಡುತ್ತವೆಯೆಂಬುದು ಗಮನಾರ್ಹ ಸಂಗತಿಯಾಗಿದೆ.

### ೫.೩. ಪುರಾಣ ಮತ್ತು ಸ್ಥಳನಾಮಗಳು

"ಪುರಾಣ ಎನ್ನುವುದು ಚರಿತ್ರೆಯ ಮಾತೃಕೆ." ಐತಿಹ್ಯ ತನ್ನ ಸುತ್ತಲಿನ ಜನಸಾಮಾನ್ಯರನ್ನು, ವಿಶೇಷ ವ್ಯಕ್ತಿಗಳನ್ನು ಒಳಗೊಂಡು ಹೆಣೆದುಕೊಂಡಿದ್ದಾದರೆ, ಪುರಾಣ ದೈವೀ ಪುರುಷರನ್ನು ಹೆಣೆದುಕೊಂಡಿರುತ್ತದೆ. ಕಾರಣ ಐತಿಹ್ಯ ಮತ್ತು ಮತಧರ್ಮಗಳೊಡನೆ ಪುರಾಣದ ಸಂಬಂಧವನ್ನು ಅತ್ಯಂತ ನಿಕಟವೆಂದು ಹೇಳಬಹುದು. "ಚರಿತ್ರೆಯ

ಅಂಶ ಐತಿಹ್ಯಕ್ಕೆ ಆಧಾರವಾದರೆ, ಐತಿಹ್ಯ ಪುರಾಣಕ್ಕೆ ಆಧಾರ.''[೧೮] ಇವೆರೆಡರ ನಡುವೆ ಎಳೆಯಷ್ಟು ಭಿನ್ನತೆಯಿದೆಯಷ್ಟೆ. ಇದರಿಂದ ಪೌರಾಣಿಕ ಸ್ಥಳನಾಮಗಳ ಅಧ್ಯಯನ ಕುತೂಹಲಕರವಾಗುತ್ತದೆ.

ರಾಮಾಯಣ - ಮಹಾಭಾರತ - ಭಾಗವತದ ಅನೇಕ ವ್ಯಕ್ತಿಗಳು ನಮ್ಮ ಜಾನಪದರ ಗ್ರಾಮಗಳಿಗೆ, ಸ್ಥಳಗಳಿಗೆ ಹೆಸರಾಗಿ ನಿಲ್ಲುತ್ತಾರೆ. ಇದರ ಪರಿಣಾಮವಾಗಿ ಕನ್ನಡನಾಡಿನ ಅನೇಕ ಗ್ರಾಮಗಳಿಗೆ ಈ ರೀತಿಯ ಪುರಾಣಪ್ರಜ್ಞೆ ಬೆಳೆದು ಉಳಿದು ಬಂದಿದೆ. ಈ ಸಂದರ್ಭದಲ್ಲಿ ಸ್ಥಳನಾಮ ಅಧ್ಯಯನಕಾರರಿಗೆ ಸತ್ಯವೇ ದೊರೆಯುತ್ತದೆಂದು ಭಾವಿಸಬಾರದು. ಹಾಗೆಂದು ಸಂಪೂರ್ಣ ತಿರಸ್ಕರಿಸಲೂ ಬಾರದು.

ಆಂಧ್ರ - ಕರ್ನಾಟಕ ಗಡಿ ಪ್ರದೇಶಕ್ಕೆ ಸಂಬಂಧಿಸಿ ಇಂತಹ ನೂರಾರು ಪುರಾಣಾತ್ಮಕ ಸ್ಥಳನಾಮಗಳು ದೊರೆಯುತ್ತವೆ. ಅಂತಹ ಕೆಲವು ಮಾದರಿಯನ್ನು ಇಲ್ಲಿ ಗಮನಿಸಬಹುದು.

ಮಹಾಭಾರತದಿಂದ ಪ್ರಸಿದ್ಧವಾಗಿರುವ ಕ್ಷೇತ್ರ ಕುರುಕ್ಷೇತ್ರ. ಬಹಳ ಹಿಂದೆ ಕುರುಕ್ಷೇತ್ರಕ್ಕೆ 'ಶಮಂತಪಂಚಕ'ವೆಂಬ ಹೆಸರಿತ್ತು. ಮುಂದೆ 'ಕುರು' ಇಲ್ಲಿ ತಪಸ್ಸು ಮಾಡಿ ಪವಿತ್ರಗೊಳಿಸಿದ್ದರಿಂದ ಈ ಸ್ಥಳಕ್ಕೆ ಕುರುಕ್ಷೇತ್ರವೆಂದು ಹೆಸರಾಯಿತು.''[೧೯]

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಗುತ್ತಿ' ಎಂಬ ಊರಿಗೆ ಈ ಹಿಂದೆ 'ಚಂದ್ರಗುತ್ತಿ' ಎಂಬ ಹೆಸರಿದ್ದಿತಂತೆ. ಈ ಗುತ್ತಿಯಲ್ಲಿ ಸುಂದರವಾದ, ಬೃಹತ್ತಾದ ಕೋಟೆಯಿದೆ. ದೊಡ್ಡದಾದ ಬೆಟ್ಟವಿದೆ. ಬಹು ಎತ್ತರದ ಈ ಊರಿನ ಬೆಟ್ಟವು ಆಕಾಶದಲ್ಲಿರುವ ಚಂದ್ರನಿಗೆ ಅಡ್ಡವಾಯಿತಂತೆ. ಚಂದ್ರನು ಆಕಾಶದಲ್ಲಿ ಓಡಾಡುವಾಗ ಅವನ ಚಲನೆಗೆ ತೊಂದರೆಯಾಯಿತು. ಮತ್ತು ಕೃಷ್ಣ, ಜರಾಸಂಧರು ಇಲ್ಲಿ ಯುದ್ಧ ಮಾಡುತ್ತಿದ್ದಾಗ ಶ್ರೀಕೃಷ್ಣನು ಓಡಿಬಂದು ಈ ಬೃಹತ್ತಾದ ಬೆಟ್ಟದಲ್ಲಿ ಅಡಗಿಕೊಂಡು ಕುಳಿತನು. ಜರಾಸಂಧನು ಅವನನ್ನು ಬಹುವಾಗಿ ಹುಡುಕಿದರೂ ಸಿಗಲಿಲ್ಲ. ಇದರಿಂದ ಬೇಸತ್ತ ಜರಾಸಂಧನು ಕೃಷ್ಣನನ್ನು ಹುಡುಕಲಾಗದೇ ಇಡೀ ಬೆಟ್ಟವನ್ನೇ ಎತ್ತಿದನು. ಇದನ್ನು ಕಂಡು ಚಂದ್ರನು ಆಕಾಶದಿಂದ ನಕ್ಕನು. ಇದರಿಂದ ಈ ಊರಿಗೆ 'ಚಂದ್ರಗುತ್ತಿ' ಎಂದು ಹೆಸರಾಯಿತೆಂದು ಅಲ್ಲಿನ ಸ್ಥಳಪುರಾಣದಿಂದ ತಿಳಿಯುತ್ತದೆ.''[೨೦] ಈಗ ಇದು ಗುತ್ತಿ'ಯೆಂದು ಮಾತ್ರ ಕರೆಯಲ್ಪಡುತ್ತಿದೆ. ಗುತ್ತಿ' ಎಂಬುದಕ್ಕೆ 'ಗೊಂಚಲು', 'ಗೋಡೆ', 'ಪೌಳಿ', 'ಪ್ರಾಕಾರ' ಎಂದು ಶಬ್ದಕೋಶಾರ್ಥವಿದೆ. ಕರ್ನಾಟಕದಲ್ಲಿ ಕೆಸರಗುತ್ತಿಯಿದೆ. ಅದರಂತೆ ಕೇವಲ 'ಗುತ್ತಿ' ರೂಪದಿಂದ ಆರಂಭ ಆಗುವ ಸ್ಥಳನಾಮಗಳು ಇವೆ.

| | | | |
|---|---|---|---|
| ಉದಾ : | ಗುತ್ತಿ | - ಹಳಿಯಾಳ - ತಾಲ್ಲೂಕು | - ಉತ್ತರಕನ್ನಡ - ಜಿಲ್ಲೆ |
| | ಗುತ್ತಿ | - ಮೂಡಿಗೆರೆ | - ಚಿಕ್ಕಮಗಳೂರು |
| | ಗುತ್ತಿನಾಡು | - ಚಿತ್ರದುರ್ಗ | - ಚಿತ್ರದುರ್ಗ |
| | ಗುತ್ತಿದುರ್ಗ | - ಜಗಳೂರು | - ಚಿತ್ರದುರ್ಗ |
| | ಗುತ್ತೂರು | - ಹರಿಹರ | - ಚಿತ್ರದುರ್ಗ |

| | | |
|---|---|---|
| ಗುತ್ತಿಕಟ್ಟೆ | - ಹೊಸದುರ್ಗ | - ಚಿತ್ರದುರ್ಗ |
| ಗುತ್ತಲ | - ಹಾವೇರಿ | - ಹಾವೇರಿ |
| ಗುತ್ತಿ | - ಬಸವಕಲ್ಯಾಣ | - ಬೀದರ |
| ಗುತ್ತಿ | - ಬೆಳಗಾಂ | - ಬೆಳಗಾಂ |
| ಗುತ್ತಿನಕರೆ | - ಅರಸಿಕೆರೆ | - ಹಾಸನ |

ಇವೆಲ್ಲವೂ ಒಂದಲ್ಲ ಒಂದು ಬಗೆಯಲ್ಲಿ ನಿಷ್ಪತ್ತಿಯಿಂದ ಸಾಮ್ಯತೆಯನ್ನು ಪಡೆದುಕೊಂಡಿರಬಹುದು. ಅಥವಾ ಕೊಂಚ ಭಿನ್ನತೆಯಿಂದ ಆಯಾ ಪ್ರಾದೇಶಿಕತೆಯ ಕಥಾನಕವನ್ನು ಮೈಗೂಡಿಸಿಕೊಂಡಿರುತ್ತದೆ.

ಆಲೂರು ತಾಲ್ಲೂಕಿನ ದೇವರಗುಡ್ಡ ಎಂಬ ಕ್ಷೇತ್ರದಲ್ಲಿ 'ಪಾದಾಲಗಟ್ಟ' ಎಂಬುದೊಂದು ನಿರ್ವಸಿತ ಸ್ಥಳನಾಮವಿದೆ. ಇದಕ್ಕೆ ಸಂಬಂಧಿಸಿದಂತೆ ಪೌರಾಣಿಕ ಐತಿಹ್ಯವೊಂದು ಹೀಗಿದೆ. "ದೇವರಗುಡ್ಡದ ಒಡೆಯ ಶ್ರೀ ಮಲ್ಲೇಶ್ವರ. ಒಂದು ದಿನ ಆ ಅರಣ್ಯದಲ್ಲಿ ತನ್ನ ದೇವಾಲಯದಿಂದ ಮನುಷ್ಯ ರೂಪದಲ್ಲಿ ಎದ್ದು ವಿಹಾರಕ್ಕೆಂದು ಹೊರಟನು. ದಾರಿಯಲ್ಲಿ ಒಬ್ಬ ಭಕ್ತ ಎದುರಾದನು. ಭಕ್ತನು ಆಶ್ಚರ್ಯದಿಂದ ನೋಡಿದ. ಆಗ ಆ ಮುದುಕ ಮಗೂ ಮುದುಕನಾದ ನನ್ನನ್ನು ಕೈ ಹಿಡಿದು ಓಡಾಡಿಸು ಇಲ್ಲವಾದರೆ ಜೋಲಿ ಬರುತ್ತದೆ ಎಂದನು. ಭಕ್ತನು ಕೈಹಿಡಿದು ವಿಹಾರಕ್ಕೆಂದು ಕರೆದೊಯ್ದನು. ಒಂದು ವಿಶಾಲವಾದ ಬಂಡೆಯ ಮೇಲೆ ನಿಂತಿರಲು ಇದ್ದಕ್ಕಿದ್ದಂತೆ ಮುದುಕ ವೇಷದ ಮಲ್ಲಯ್ಯನಿಗೆ ಜೋಲಿ ಬಂದು ಪಾದವನ್ನು ಜೋರಾಗಿ ಬಂಡೆಗೊತ್ತಿದ. ಇದರಿಂದ ಬಂಡೆಯು ಮೂರುಹೆಜ್ಜೆ ಮೂಡಿ ಗುಳಿಯಾಯಿತು. ಆಶ್ಚರ್ಯಗೊಂಡು ಭಕ್ತನು ಮುದುಕನನ್ನು ನೋಡುತ್ತಿದ್ದಂತೆಯೇ ವೇಷಧಾರಿ ಶ್ರೀ ಮಲ್ಲಯ್ಯ ಮಾಯವಾಗಿದ್ದ. ಇಂದಿಗೂ ಆ ಪಾದಗಳನ್ನು ಜನರು ಭಕ್ತಿಯಿಂದ ಪೂಜಿಸುತ್ತಾರೆ. ಇದನ್ನು 'ಪಾದಾಲಗಟ್ಟ' ಎಂದು ಕರೆಯುತ್ತಾರೆ."[೨೧] ಕನ್ನಡದಲ್ಲಿ 'ಪಾದದಕಟ್ಟೆ' ಎನ್ನುತ್ತಾರೆ.

ಹಂಪೆಯ ಪರಿಸರದಲ್ಲಿ 'ಸೀತೆಯಸೆರಗು' ಎಂಬುದೊಂದು ಇಂತಹ ಪೌರಾಣಿಕ ಐತಿಹ್ಯಕ್ಕೆ ಸೇರಬಲ್ಲಂತಹ ನಿರ್ವಸಿತ ಸ್ಥಳನಾಮವಿದೆ. "ರಾಮಾಯಣದ ಸೀತೆಯು ತನ್ನ ಪತಿ ರಾಮನ ಆಜ್ಞೆಯ ಮೇರೆಗೆ ವನವಾಸಕ್ಕೆ ಬಂದಿರಲು, ಆ ಅರಣ್ಯದಲ್ಲಿ ವಾಸಿಸುವಾಗ ಒಂದು ದಿನ ಲಂಕೆಯ ರಾಜನಾದ ರಾವಣನು ಇವಳ ಸೌಂದರ್ಯಕ್ಕೆ ಮೋಹಿತನಾದ. ಇವಳನ್ನು ಅಪಹರಿಸಬೇಕೆಂದು ಭಿಕ್ಷುಕ ವೇಷದಲ್ಲಿ ಬಂದು ಅಪಹರಿಸಿ ಎಳೆದೊಯ್ಯುವ ಸಂದರ್ಭದಲ್ಲಿ ಸೀತೆಯ ಸೀರೆಯ ಸೆರಗು ಅಲ್ಲಿರುವ ವಿಶಾಲ ಬಂಡೆಯ ಮೇಲೆ ಮೂಡಿತಂತೆ. ಇಂದಿಗೂ ಗ್ರಾಮೀಣ ಅಥವಾ ಬಹುತೇಕ ಶಿಷ್ಟರು ಇದನ್ನು 'ಸೀತೆಯ ಸೆರಗು' ಎಂದೇ ಗುರುತಿಸುತ್ತಾರೆ."[೨೨]

ಆಂಧ್ರದ ಗಡಿ ಪ್ರದೇಶದ ಆಲೂರು ತಾಲ್ಲೂಕಿನ ಕುರುಕುಂದೆ ಗ್ರಾಮವು ಈ ಹಿಂದೆ ಕುಂತಳ ನಗರ'ವೆಂದು ಪ್ರಸಿದ್ಧವಾಗಿತ್ತಂತೆ. ಮಹಾಭಾರತದಲ್ಲಿ ಪ್ರಸಿದ್ಧರಾದ ಪಾಂಡವರೈವರು ತಮ್ಮ ವನವಾಸದ ಕಾಲಾವಧಿಯಲ್ಲಿ ಅಡವಿಯನ್ನು ತಿರುಗುತ್ತಾ ಈ ಕಡೆ ಬಂದರಂತೆ. ಬರುವಾಗ ಕುರುಕುಂದೆ ಗ್ರಾಮದ ಮೂಲಕವಾಗಿ ದೇವರಗುಡ್ಡವನ್ನು ಹಾಯ್ದು ಬಂದರು. ಇದೇ ಪರಿಸರದಲ್ಲಿರುವ ವಿರಾಟನಗರ'ಕ್ಕೆ ಬರುವಾಗ (ಇಂದಿನ ಹಿರೇಹ್ಯಾಟಿ ಗ್ರಾಮ) ಭೀಮನನ್ನು ಹೊರತುಪಡಿಸಿ ಉಳಿದ ನಾಲ್ಕು ಮಂದಿ ಪಾಂಡವರಿಗೆ ಅತೀವ ನೀರಡಿಕೆ ಉಂಟಾಯಿತು. ಭೌಗೋಳಿಕವಾಗಿ

ಬಯಲು ಮತ್ತು ಬೆಟ್ಟಗಳಿಂದ ಕೂಡಿದ ಈ ಪರಿಸರದಲ್ಲಿ ನೀರಿನ ಕೊರತೆಯಿದೆ. ಭೀಮನು ಸುತ್ತಲೂ ನೀರನ್ನು ಹುಡುಕುತ್ತಾ ಹೊರಟನು. ಎಲ್ಲಿಯೂ ಸಿಗಲಿಲ್ಲ. ಕೊನೆಗೆ ದೇವರಗುಡ್ಡದ ಹತ್ತಿರಬಂದು ಬೇಸತ್ತ ಭೀಮಸೇನ ಕೋಪದಿಂದ ತನ್ನ ಗದೆಯನ್ನೆತ್ತಿ ಭೂಮಿಗೆ ಕುಕ್ಕಿದ. ಅಲ್ಲಿ ತಕ್ಷಣವೇ ಜಲ ಮೂಡಿತು. ನೀರಡಿಸಿಕೊಂಡ ಪಾಂಡವರು ತೃಪ್ತರಾದರು. ಅಂದಿನಿಂದ ಇದು "ಭೀಮನಕೊಳ"ವಾಯಿತು."[೨೩] ಇಂದು ಇದನ್ನು 'ವಕ್ರಾಣಿ' ಎಂದು ಕರೆಯಲಾಗುತ್ತಿದೆ.

ಇದೇ ಪರಿಸರದಲ್ಲಿ 'ರಾಕ್ಷಸಪಡೆ', 'ರಕ್ತಪಡೆ', 'ರಕ್ಸ್ ಪಡೆ' ಎಂದು ಕರೆಯಿಸಿಕೊಳ್ಳುವ ನಿರ್ವಸಿತ ಸ್ಥಳನಾಮವೊಂದಿದೆ. "ದೇವರ ಗುಡ್ಡದ ಶ್ರೀ ಮಲ್ಲಯ್ಯನು ತನ್ನ ಸತಿ ಮಾಳಮ್ಮನೊಂದಿಗೆ ಭಕ್ತರನ್ನು ಹರಸುತ್ತಾ ಸುಖದಿಂದಿರಲು, ಶ್ರೀ ಕ್ಷೇತ್ರ ಮೀನಗೊಂದಿಗೆ ಮಲ್ಲಾಸುರ, ಮಣಿಕಾಸುರರೆಂಬ ರಾಕ್ಷಸರು ಆಗಮಿಸಿದರು. ಅಲ್ಲಿದ್ದ ಅನೇಕ ಭಕ್ತಾದಿಗಳಿಗೆ ತೊಂದರೆ ನೀಡಿ, ದಿನಕ್ಕೊಬ್ಬರನ್ನು ತಿನ್ನುತ್ತಿದ್ದರು. ರಕ್ತವನ್ನು ಹೀರುತ್ತಿದ್ದರು. ಭಯಗೊಂಡು ಸಮಸ್ತ ಭಕ್ತಗಣ ಮಲ್ಲಯ್ಯ - ಮಾಳಮ್ಮರನ್ನು ಪ್ರಾರ್ಥಿಸಿ, ಸಂಕಟ ಪರಿಹರಿಸಬೇಕೆಂದು ಬೇಡಿದರು. ಅಭಯ ನೀಡಿ, ಮಲ್ಲಯ್ಯನು ಮಲ್ಲಾಸುರ, ಮಣಿಕಾಸುರರನ್ನು ಘೋರವಾದ ಯುದ್ಧದಲ್ಲಿ ಸಂಹರಿಸಿದ. ಆ ರಾಕ್ಷಸರಿದ್ದ ಒಂದು ದೊಡ್ಡ ಕಲ್ಲಿನ ಗವಿಯನ್ನು 'ರಾಕ್ಷಸಪಡೆ' ಎಂದು ಕರೆಯಲಾಗುತ್ತದೆ."[೨೪] ಮಹಾನವಮಿಯ ದಿನದಂದು ಜನರು ಸಾಂಕೇತಿಕವಾಗಿ ಕೆಲವು ಹನಿ ರಕ್ತವನ್ನು ಈ ಗವಿಯ ಹತ್ತಿರ ಸಲ್ಲಿಸುತ್ತಾರೆ. ರಕ್ತದ ಹನಿಗಳನ್ನು 'ಗೊರವಯ್ಯ' ನೀಡುವುದು ಇಂದಿನ ಪದ್ಧತಿಯಾಗಿದೆ.

ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕೆಲವು ಪೌರಾಣಿಕ ಸ್ಥಳನಾಮಗಳ ಸಂಕ್ಷಿಪ್ತ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

೧. ಅಮರಾಪುರ : ಪೂರ್ವಕಾಲದಲ್ಲಿ ದೇವಾನುದೇವತೆಗಳ ಒಡೆಯನಾದ ದೇವೇಂದ್ರನು ಅಮರಾವತಿಯೆಂಬ ತನ್ನ ಪಟ್ಟಣದಿಂದ, ಭೂಮಿಗೆ ಬಂದಿಳಿದು ಅಮರಾವತಿಯ ತೆರನಾಗಿ ಇಲ್ಲೊಂದು ಪಟ್ಟಣ ನಿರ್ಮಿಸಿ ಹೋದನು. ಇದರಿಂದಾಗಿ ಇದು ಅಮರಾಪುರ ಎಂದು ಹೆಸರು ಪಡೆಯಿತು.[೨೫]

೨. ಅಮೃತಾಪುರ : ೧. ಪ್ರಾಚೀನ ಕಾಲದಲ್ಲಿ ದೇವತೆಗಳು, ರಾಕ್ಷಸರು ಸಮುದ್ರ ಮಥನವನ್ನು ಮಾಡಿದರು. ಆಗ ಅಮೃತವನ್ನು ದೇವತೆಗಳು ಕುಡಿದರು. ಅದರ ಒಂದು ಹನಿ ಈ ಊರಿನ ಮೇಲೆ ಬಿದ್ದಿತ್ತು.[೨೬]

೨. ಶ್ರೀ ರೇಣುಕೆ ಎಲ್ಲಮ್ಮ ದೇವಿಯು ಬೇವಿನ ಮರಕ್ಕೆ ಅಮೃತವನ್ನು ಎರೆದು, ಈ ಅಮೃತ ಸಿಂಚನವಾದ ಎಲೆಯನ್ನು ತಿಂದವರಿಗೆ ಸಕಲ ರೋಗಗಳು ಮುಕ್ತವಾಗಲೆಂದು ಹಾರೈಸಿದಳು. ಈ ಊರಿನಲ್ಲಿಯೂ ಅನೇಕ ಬೇವಿನಮರಗಳಿವೆ. ಅದರ ಪ್ರತೀಕವಾಗಿಯೇ ಈ ಊರನ್ನು ಅಮೃತಾಪುರ ಎಂದು ಕರೆಯುತ್ತಾರೆ.[೨೭]

೩. ಕಪಿಲಕ್ಷೇತ್ರ : ಮೀನಗೊಂದಿ ಎಂದು ಕರೆಯಲ್ಪಡುವ ಇಂದಿನ ದೇವರಗುಡ್ಡ ಕ್ಷೇತ್ರದಲ್ಲಿ ಪ್ರಾಚೀನ ಕಾಲದಲ್ಲಿ 'ಕಪಿಲಮುನಿ' ಎಂಬ ಋಷಿವರ್ಯರು ಪರಮ ತಪಸ್ವಿಗಳಾಗಿ ನೆಲೆನಿಂತಿದ್ದರು. ತರುವಾಯ ಅನೇಕ ಶಿಷ್ಯರಿಗೆ ದೀಕ್ಷೆಯನ್ನು ನೀಡಿ, ಮೋಕ್ಷ ಸಂಪಾದಿಸಿದರು. ಇದರಿಂದಾಗಿ ಈ ಕ್ಷೇತ್ರಕ್ಕೆ 'ಕಪಿಲಕ್ಷೇತ್ರ' ಎಂಬ ಹೆಸರಾಯಿತು.[೨೬]

೪. ಕಾಂಚನಗಡ : ಕೆಂಚನಗುಡ್ಡ ಎಂದು ಕರೆಯಲ್ಪಡುವ ಈ ಊರಿಗೆ "ಕಾಂಚನಾಂಬಿಕ ಎಂಬ ದೇವತೆಯು ಇಲ್ಲಿ ನೆಲೆನಿಂತು ಭಕ್ತಾದಿಗಳನ್ನು ಉದ್ಧರಿಸಿದಳು. ಈ ನೆಲದಲ್ಲಿ ಧನ - ಕನಕಾದಿಗಳು ದೊರೆಯುವಂತೆ ಕರುಣಿಸಿದಳು. ಕಾರಣವಾಗಿ 'ಕಾಂಚನಗಡ' ಎಂದು ಕರೆಯಲ್ಪಟ್ಟಿದೆ.[೨೮]

೫. ಕುರುಕುಂದೆ : ಪಾಂಡವರೈವರು ಕುರುಕ್ಷೇತ್ರ ಯುದ್ಧಕ್ಕೆ ಹೋಗುವಾಗ ಅರ್ಜುನನ ರಥದ ಮೇಲಿನ ಪತಾಕೆಯನ್ನು ಈ ಊರಿನಲ್ಲಿ ಬಿಟ್ಟು ಹೋಗಿದ್ದರಿಂದ ಕುರುಕುಂದೆ ಎಂಬ ಹೆಸರು ಬಂದಿದೆ.[೨೯]

೬. ಕುಂತಳ ನಗರ : ಚಂದ್ರಹಾಸ ಮಹಾರಾಜನು ಆಳುತ್ತಿದ್ದ ಪ್ರದೇಶವಿದು. ಕುಳಿಂದಕ ರಾಜನ ಪಟ್ಟಣವೇ ಕುಂತಳ ನಗರ. ಇದು ಇಂದು ಗುರುತಿಸಲಾಗದ ಪ್ರದೇಶವಾಗಿ, ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.[೩೦]

೭. ಕಿಷ್ಕಿಂಧೆ : ರಾಮಾಯಣದ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಇದ್ದಿತೆನ್ನಲಾದ ಒಂದು ಪಟ್ಟಣ. ಹಂಪಿಯ ಪರಿಸರದಲ್ಲಿ ಇಂದಿಗೂ 'ಕಿಷ್ಕಿಂಧೆ' ಇರುವುದು ತಿಳಿಯುತ್ತದೆ. ಈ ಪಟ್ಟಣದ ರಾಜರಾದ ವಾಲಿ ಮತ್ತು ಸುಗ್ರೀವರು ಘೋರವಾದ ಯುದ್ಧಮಾಡಿ, ರಾಮನ ಪರವಹಿಸಿದ ಸುಗ್ರೀವ ತನ್ನ ಅಣ್ಣನನ್ನು ಮೋಸದಿಂದ ಕೊಂದನೆಂಬ ಐತಿಹ್ಯಾತ್ಮಕ ಪುರಾಣವಿದೆ. ಈ ಇಬ್ಬರ ರಾಜಧಾನಿಯೇ ಕಿಷ್ಕಿಂಧಾನಗರ' ಎಂಬ ಉಲ್ಲೇಖಗಳಿವೆ. ಅಂತೆಯೇ ಹಂಪಿ ಪರಿಸರದಲ್ಲಿ ಮತಂಗಪರ್ವತ, ಜಾಂಬುವಂತಬೆಟ್ಟ ಮುಂತಾದ ರಾಮಾಯಣದ ಕಥಾನಕವನ್ನು ವಿವರಿಸುವ ಸ್ಥಳಗಳಿವೆ.[೩೧]

೮. ಚಿಪ್ಪಗಿರಿ : ೧. ಅಪ್ರತಿಮ ಶಿಲ್ಪಕಲಾ ಚಾತುರ್ಯನಾದ ಜಕಣಾಚಾರಿಯು ಈ ಊರಿನ ಬೆಟ್ಟದಲ್ಲಿದ್ದುಕೊಂಡು ಶಿಲ್ಪಗಳನ್ನು ಕೆತ್ತುತ್ತಿದ್ದನು. ಮುಂದೆ ಇದಕ್ಕೆ 'ಶಿಲ್ಪಗಿರಿ' ಎಂದೇ ಹೆಸರಾಯಿತು.

೨. ವಿಜಯನಗರವನ್ನು ಸ್ಥಾಪಿಸಲು ಮೊದಲು ಹಕ್ಕಬುಕ್ಕರು ಹುಳೇಬೀಡಿಗೆ ಹೋದರು. ಅಲ್ಲಿಂದ ಈ ಊರಿಗೆ ಬಂದು ಸ್ಥಳವನ್ನು ನೋಡಿದರು. ಇಲ್ಲಿ

ಬರೀ ಕಲ್ಲು, ಶಿಲ್ಪ ಇದ್ದುದರಿಂದಾಗಿ, ನೀರಿನ ಅನುಕೂಲ ಇರಲಿಲ್ಲ. ಕೆಲವು ದಿವಸ ಇಲ್ಲಿಯೇ ನೆಲೆಯೂರಿದ್ದರು. ಬಾವಿ, ಹಳ್ಳಗಳಲ್ಲಿ ಚಿಪ್ಪಿನಿಂದ ನೀರು ತೆಗೆಯುವ ಪರಿಸ್ಥಿತಿ ಬಂದಿತಾದ್ದರಿಂದ ಈ ಊರಿಗೆ 'ಚಿಪ್ಪಗಿರಿ' ಎಂಬ ಹೆಸರು ಬಂತು. ಹಕ್ಕಬುಕ್ಕರು ಹಂಪೆಯಲ್ಲಿ ರಾಜ್ಯವನ್ನು ಸ್ಥಾಪಿಸಿದರು.[೩೨]

೯. ದಯ್ಯಾಲಗುಡ್ಡ : ಪೂರ್ವಕಾಲದಲ್ಲಿ ಈ ಊರಿಗೆ ಒಬ್ಬ ಸಂತನು ಬಂದು ವಾಸಿಸಿದನು. ಅನೇಕ ಭಕ್ತಾದಿಗಳಿಗೆ ದೀಕ್ಷೆಯನ್ನು ನೀಡಿದನು. ಬೆಟ್ಟದಲ್ಲಿ ತಪಸ್ಸು ಮಾಡುತ್ತಿದ್ದ ಈ ಸಂತನಿಗೆ ಕೆಲವು ರಾಕ್ಷಸರು ತೊಂದರೆ ನೀಡಿದರು. ದುಷ್ಟರಿಂದ ದೂರವಿರಬೇಕೆಂದು ಸಂತನು ಬೆಟ್ಟವನ್ನು ಬಿಟ್ಟು ತೆರಳಿದನು. ಮುಂದೆ ಈ ಬೆಟ್ಟದಲ್ಲಿ ದೆವ್ವ, ಭೂತಾದಿಗಳು ವಾಸಿಸ ತೊಡಗಿದವು. ದೈವಲಬೆಟ್ಟ ವಾಗಿದ್ದ ಈ ಊರು ದೆವ್ವಗಳ ಬೆಟ್ಟವಾಯಿತು.[೩೩]

೧೦. ದೇಗುಲದಹಾಳ್ : ಸೃಷ್ಟಿಕರ್ತನಾದ ಬ್ರಹ್ಮನು, ಒಬ್ಬ ಶಿಲ್ಪಕಾರನನ್ನು ಸೃಷ್ಟಿಸಿ ಭೂಮಿಯ ಮೇಲೆ ಭಕ್ತಿಯು ನಶಿಸಿಹೋಗುತ್ತಿದೆ. ಕಾರಣ ದೇವಾಲಯಗಳನ್ನು ನಿರ್ಮಿಸಿ ಅವರಲ್ಲಿ ಭಕ್ತಿಯನ್ನು ಉಂಟುಮಾಡಬೇಕೆಂದು ಹೇಳಲು ಅವನು ಈ ಗ್ರಾಮದಲ್ಲಿಯೂ ದೇಗುಲಗಳನ್ನು ಕಟ್ಟಿದನು. ಇದರಿಂದ ಈ ಊರಿಗೆ ಆ ಹೆಸರು ಬಂದಿತು.[೩೪]

೧೧. ಬಾಣಾಪುರ : ೧. ಪ್ರಾಚೀನಕಾಲದಲ್ಲಿ ಬಾಣ ಮಹಾರಾಜನು ಅಪ್ರತಿಮ ಶಿವಭಕ್ತ ನಾಗಿದ್ದನು. ಈ ಊರಿನಲ್ಲಿ ಬಂದು ಕೆಲವು ದಿವಸ ಇದ್ದುದರಿಂದಾಗಿ 'ಬಾಣಾಪುರ' ಎಂಬ ಹೆಸರು ಪ್ರಾಪ್ತವಾಯಿತು.

೨. ಮಹಾಭಾರತದ ಯುದ್ಧಕ್ಕೆ, ಈ ಊರಿನಲ್ಲಿ ಸೈನಿಕರು ಉಳಿದುಕೊಂಡು ಬಾಣಗಳನ್ನು ತಯಾರು ಮಾಡುತ್ತಿದ್ದರು. ಇದರಿಂದಾಗಿ ಬಾಣಾಪುರ ಎಂಬ ಹೆಸರು ಬಂದಿತು.[೩೫]

೧೨. ಬೂದಿಗುಪ್ಪ : ಪೂರ್ವಕಾಲದಲ್ಲಿ ರತಿ ಮನ್ಮಥರು ಈ ನೆಲದಲ್ಲಿ ವಾಸಿಸುತ್ತಿದ್ದರು. ಮನ್ಮಥನು ತನ್ನ ಅಹಂಕಾರದಿಂದ ಶಿವನ ತಪಸ್ಸಿಗೆ ಭಂಗವನ್ನು ತಂದನು. ಇದರಿಂದ ಕೋಪಗೊಂಡ ಮುಕ್ಕಣ್ಣ ಅವನನ್ನು ಭಸ್ಮ ಮಾಡಿದ. ಅದರ ಬೂದಿಯೇ ಈ ಊರಿನ ಹೆಸರಾಯಿತೆಂದು ಹಿರಿಯರು ಹೇಳುತ್ತಾರೆ.[೩೬]

೧೩. ಮದ್ದಿನಮನೆ : ಇದೊಂದು ನಿರ್ವಸಿತ ಸ್ಥಳನಾಮ. ಹಿಂದೆ ಮಣಿಕಾಸುರ, ಮಲ್ಲಾಸುರ ಕಾಳಗದಲ್ಲಿ ಈ ಕಲ್ಲುಗಳಿಂದ ನಿರ್ಮಿಸಿದ ಗವಿಯಲ್ಲಿ ಮದ್ದು ಬಾಣಗಳನ್ನು ತಯಾರಿಸುತ್ತಿದ್ದರು. ಇದರಿಂದ ಈ ಮನೆಗೆ 'ಮದ್ದಿನಮನೆ' ಎಂದು ಕರೆಯುತ್ತಾರೆ.[೩೭]

೧೪. ವಿರಾಟನಗರ : ಮಹಾಭಾರತದ ಅವಧಿಯಲ್ಲಿ ಪಾಂಡವರು ವನವಾಸದಲ್ಲಿದ್ದಾಗ, ವಿರಾಟರಾಯನ ಆಶ್ರಯದಲ್ಲಿರುತ್ತಾರೆ. ಆಗ ಅವರ ಹೆಸರಿನಿಂದ ಇದ್ದಂತಹ ಪಟ್ಟಣವೇ ವಿರಾಟನಗರ. ಇಂದು ಇದನ್ನು ಹಿರೇಹ್ಯಾಟಿ, ಹಿರೇಹಟ್ಟಿ (ವೀರ ಅಟವಿ) ಎಂದು ಕರೆಯಲಾಗುತ್ತದೆ.[೬೮]

೧೫. ಶಂಕರಬಂಡೆ : ಈ ಊರಿನ ಒಂದು ದೊಡ್ಡ ಕಲ್ಲು ಬಂಡೆಯ ಮೇಲೆ ಪ್ರಾಚೀನಕಾಲದಲ್ಲಿ ಶಿವನು ಬಂದು ಹುಣ್ಣಿಮೆಯದಿನ ತಾಂಡವ ಮಾಡುತ್ತಿದ್ದ. ಆದ್ದರಿಂದ ಶಿವನ ನಾಮಧೇಯವಾದ ಶಂಕರ ಎಂಬುದನ್ನೇ ಈ ಗ್ರಾಮಕ್ಕೆ ನಾಮಾಂಕಿತ ಗೊಳಿಸಲಾಯಿತೆಂದು ನಮ್ಮ ಪೂರ್ವಿಕರು ಹೇಳುತ್ತಿದ್ದರು.[೬೯]

ಹೀಗೆ ಪೌರಾಣಿಕ ಸ್ಥಳನಾಮಗಳು ಹೆಚ್ಚಾಗಿ ಮಹಾಭಾರತ, ರಾಮಾಯಣ, ಭಾಗವತ ಅಲ್ಲದೇ ಶಿವ, ವಿಷ್ಣು, ಕೆಲವು ರಾಕ್ಷಸರು ಮುಂತಾದವರ ಹೆಸರಲ್ಲಿ ಕಲ್ಪಿತ ಕಥೆಗಳಾಗಿ ಸೃಜನಗೊಂಡಿರುತ್ತವೆ.

ಪೌರಾಣಿಕ ಸ್ಥಳನಾಮಗಳ ಅವಲೋಕನದಿಂದ ಈ ಕೆಳಕಾಣಿಸಿದ ಅಂಶಗಳು ಪ್ರಧಾನವಾಗಿ ವ್ಯಕ್ತವಾಗುತ್ತವೆ.

ಅ. ಪೌರಾಣಿಕ ಸ್ಥಳನಾಮಗಳು ಹೆಚ್ಚಾಗಿ ಸಂಸ್ಕೃತಮೂಲವೇ ಆಗಿರುತ್ತವೆ. ಇಲ್ಲವೇ ಸಂಸ್ಕೃತ ಭಾಷೆಯ ಪ್ರೇರಣೆಯನ್ನು ಪಡೆದುಕೊಂಡಿರುತ್ತವೆ.

ಆ. ಪೌರಾಣಿಕ ಸ್ಥಳನಾಮಗಳನ್ನು ನಿರ್ದೇಶಿಸಿದವರಲ್ಲಿ ಅಕ್ಷರಸ್ಥರೇ ಹೆಚ್ಚಾಗಿರುತ್ತಾರೆ.

ಇ. ವ್ಯಕ್ತಿನಾಮಗಳೇ (ಪುರಾಣದ ವ್ಯಕ್ತಿಗಳು) ಹೆಚ್ಚಾಗಿವೆ. ಒಂದು ಊರಿಗೆ ಈ ಮುಂಚೆ ಇದ್ದ ಹೆಸರನ್ನು ಅಳಿಸಿ ಪೌರಾಣಿಕ ನಾಮಗಳು ಪುನರ್ ನಾಮಕರಣಗೊಂಡಿರಬಹುದು. ಅಥವಾ ಹೊಸ ವಾಸ್ತವ್ಯಕ್ಕೆ ಈ ಬಗೆಯ ಪೌರಾಣಿಕ ಹೆಸರನ್ನು ಕರೆದಿರಬಹುದು.

ಈ. ಘಟನೆಯನ್ನು ಆಧರಿಸಿ ಇಲ್ಲವೇ ಪ್ರಾಕೃತಿಕ ಪರಿಸರದೊಂದಿಗೆ ಪುರಾಣದ ಅಂಶಗಳನ್ನು ಬೆಸೆಯುವ ಮೂಲಕ ಪೌರಾಣಿಕ ಸ್ಥಳನಾಮಗಳು ಜನಿಸಿರಬಹುದು.

ಉ. ಪೌರಾಣಿಕ ಸ್ಥಳನಾಮಗಳಲ್ಲಿ ಸ್ತ್ರೀವಾಚಿ ನಾಮಗಳು ಕಡಿಮೆ ಇವೆ.

ಊ. ರಾಮಾಯಣ, ಮಹಾಭಾರತ ಕಾವ್ಯಗಳ ಪೌರಾಣಿಕ ವ್ಯಕ್ತಿಗಳೇ ಹೆಚ್ಚು ಪ್ರೇರಣೆಗೊಂಡಿದ್ದಾರೆ.

ಐತಿಹ್ಯವೂ ಈ ಬಗೆಯ ಪೌರಾಣಿಕ ಸಂಗತಿಗಳನ್ನು ಹೇಳಿದರೂ, ಕೆಲವು ಚಾರಿತ್ರಿಕ ಅಂಶಗಳನ್ನು ತಿಳಿಸುತ್ತದೆ. ಆದರೆ ಪೌರಾಣಿಕ ಸ್ಥಳನಾಮಗಳು ಸಂಪೂರ್ಣ ಕಲ್ಪಿತ ಕಥೆಗಳಾಗಿದ್ದು, ಇವು ಒಬ್ಬೊಬ್ಬರ ಬಾಯಿಯಲ್ಲಿ ಒಂದೊಂದು ತೆರನಾಗಿ ಅನಾವರಣಗೊಳ್ಳುತ್ತಿರುತ್ತವೆ. ಜೊತೆಗೆ ಪರಿಸರದಿಂದ ಪರಿಸರಕ್ಕೆ ತುಂಬಾ ವ್ಯತ್ಯಾಸದಿಂದ ವಿವರಣೆಗೆ ಒಳಪಡುತ್ತವೆ. ನಿಜನಿಷ್ಪತ್ತಿಗೆ ಯಾವ ಬಗೆಯಲ್ಲೂ ಇವು ಸಹಾಯವಾಗಲಾರವು. ಆದರೆ ಹೆಸರನ್ನು ಧಕ್ಕೆಯಿಲ್ಲದೇ ಪುರಾಣ ಪಾತ್ರಗಳೊಂದಿಗೆ ಸಮೀಕರಿಸುತ್ತದೆಯಷ್ಟೇ. ಎಷ್ಟೋ ಸಾರಿ ಪೌರಾಣಿಕ ಹೆಸರುಗಳನ್ನು ಕೇವಲ ಕಟ್ಟುಕಥೆಯೆಂದು ತಿರಸ್ಕರಿಸಲೂ ಬಾರದು. ಅಪ್ರತ್ಯಕ್ಷ ನೆಲೆಯಲ್ಲಿ ಸಮಕಾಲೀನ ಸಂದರ್ಭದ ವಾಸ್ತವಿಕ ಘಟನೆಗಳನ್ನು ಮುಸುಕಿಕೊಂಡಿರುವ ಸಾಧ್ಯತೆಯೂ ಇರಬಹುದು. ವೈಚಾರಿಕ ನೆಲೆಯಲ್ಲಿ ಇಂತಹ ರಹಸ್ಯ, ಕಲ್ಪಿತ

ಕಥೆಗಳನ್ನು ಬಿಡಿಸಿದರೆ ಮೌಖಿಕ ಸಂಪ್ರದಾಯದಲ್ಲಿ ಅಡಗಿಕೊಂಡ ಭಾವಕೋಶದ ನಿಜಾಂಶಗಳನ್ನು ಕಂಡುಕೊಳ್ಳಬಹುದು. ಅಂತಹ ನಿಜಾಂಶಗಳ ಪ್ರತಿಮೆಗಳೆಂದು ಪೌರಾಣಿಕ ಸ್ಥಳನಾಮಗಳನ್ನು ಎಣಿಸುವುದಾದರೆ ಸಮಾಜವಿಜ್ಞಾನಿ; ಮಾನವಶಾಸ್ತ್ರಜ್ಞ, ಭಾಷಾವಿಜ್ಞಾನಿಗಳ ಸಂಶೋಧನೆಗೆ ಇವು ಪ್ರತ್ಯೇಕ ಆಕರಗಳಾಗಿ ದೊರೆಯುತ್ತವೆನ್ನಬಹುದು.

**೫.೪. ಗಾದೆಗಳು ಮತ್ತು ಸ್ಥಳನಾಮಗಳು**

ಸಾರ್ವತ್ರಿಕತೆ ಜಾನಪದ ಲಕ್ಷಣಗಳಲ್ಲಿ ಒಂದು. ಈ ಕಾರಣದಿಂದ ಸಾಂಸ್ಕೃತಿಕ, ಸಾಮಾಜಿಕ, ಐತಿಹಾಸಿಕ ಅಧ್ಯಯನಗಳಿಗೆ ಗಾದೆಗಳೂ ಮೂಲ ಸಾಮಗ್ರಿಯಾಗಿ ನೆರವಾಗುತ್ತವೆ. ಗಾದೆಯ ಹಿನ್ನೆಲೆ, ಮೂಲಗಳನ್ನು ಶೋಧಿಸ ಹೊರಟರೆ ಹಲವಾರು ಹೊಸ ಸಂಗತಿಗಳು ತಿಳಿಯುತ್ತವೆ. ನಾಡಿನ ತುಂಬಾ ದೊರೆಯುವ ಗಾದೆಗಳಲ್ಲಿ ಏನೆಲ್ಲಾ ಸಂಗತಿಗಳು ಅಡಗಿವೆ. ಅಂತೆಯೇ ನಮ್ಮ ನಾಡಿನಲ್ಲಿ ಪ್ರಚಲಿತವಿರುವ ಅನೇಕ ಗಾದೆಗಳು ಅನೇಕ ಸ್ಥಳನಾಮಗಳನ್ನು ಒಳಗೊಂಡಿವೆ. ಒಂದೊಂದು ಗಾದೆಯು ಒಂದೊಂದು ಸಂಸ್ಕೃತಿಯನ್ನೂ ನಮ್ಮ ಜನರ ವಾಸದ ನೆಲೆಗಳನ್ನು ವಿಶದ ಪಡಿಸಬಲ್ಲವು.

ಸಾಮಾನ್ಯವಾಗಿ ಗಾದೆಗಳು ಗ್ರಾಮನಾಮ ಅಥವಾ ಸ್ಥಳನಾಮಗಳ ವಾರ್ಗಿಕಗಳನ್ನು ಬಹುತೇಕ ಒಳಗು ಮಾಡಿಕೊಂಡಿವೆ.

- *ಊರು* ಸೇರಿದ ಮೇಲೆ ದಾರಿ ತೀರಿತು
- *ಊರು* ಗುದ್ದಲಿತಂದು *ನಾಡ* ಕಾವಲಿಕಾದ
- ಒಳ್ಳೆಯವರ ಮಾನ *ಹಳ್ಳೀಲಿ* ಹೋಯ್ತು
- ಕೋಟೆ ಹೋದ ಮೇಲೆ *ಪಹರೆ* ಕಾದರು
- *ಗ್ರಾಮದ* ಶಾಂತಿಗೆ ತಳವಾರ ತಲೆಬೋಳಿಸಿಕೊಂಡ

ಎಂಬ ಗಾದೆಗಳಲ್ಲಿ ಊರು, ನಾಡು, ಹಳ್ಳಿ, ಕೋಟೆ, ಪಹರೆ, ಗ್ರಾಮ ಹೀಗೆ ಅನೇಕ ವಾರ್ಗಿಕಗಳು ದೊರೆಯುತ್ತವೆ. ಗಾದೆಗಳ ಹುಟ್ಟು ಇತ್ತೀಚಿನದಲ್ಲ. ಅತೀ ಪ್ರಾಚೀನವೆಂದು ನಂಬಿರುವ ಈ ಗಾದೆಗಳಲ್ಲಿ ವಾರ್ಗಿಕಗಳ ಪ್ರಾಚೀನತೆಯೂ ಅಷ್ಟೇ ಹಿಂದಕ್ಕೆ ಹೋಗುತ್ತದೆ. ಇದರಿಂದ ಒಂದು ಸ್ಥಳಕ್ಕೆ ಹೆಸರು ಕರೆಯುವುದು ಕೂಡ ಇಂದು ನಿನ್ನೆಯದಲ್ಲವೆಂಬುದು ತಿಳಿಯುತ್ತದೆ. ಗಾದೆಗಳಲ್ಲಿ ವಾರ್ಗಿಕಗಳು ಮಾತ್ರವಲ್ಲ ಅನೇಕ ವಸತಿ, ನಿರ್ವಸತಿ ಸ್ಥಳ, ಗ್ರಾಮನಾಮಗಳು ನಿರೂಪಿತವಾಗಿರುವುದರಿಂದ ಪ್ರಾದೇಶಿಕವಾಗಿ ದೊರೆಯುವ ಗಾದೆಗಳು ಆಯಾ ಸ್ಥಳ ಸಂಸ್ಕೃತಿ, ಆ ಕಾಲದ ಸಮಕಾಲೀನ ಸಾಮಾಜಿಕ - ಸಾಂಸ್ಕೃತಿಕ ಜೀವನದ ಪ್ರತಿಬಿಂಬವಾಗಿ ನಿಲ್ಲುತ್ತವೆ. ಕೆಲವು ಮಾದರಿಗಳನ್ನು ಗಮನಿಸುವ ಮೂಲಕ ಅದನ್ನು ತಿಳಿಯಬಹುದು.

೧. ಅಗ್ರಹಾರಕ್ಕೋದರೂ ದುರಾಗ್ರಹ ಬಿಡಲಿಲ್ಲ

ಎಂಬ ಗಾದೆಯಲ್ಲಿ ಒಂದು ಕಾಲಕ್ಕೆ ಅಗ್ರಹಾರ ಬೌದ್ಧಿಕವಾಗಿ ಸಬಲವಾದ, ಸುಸಂಸ್ಕೃತರ ನೆಲೆಯಾಗಿತ್ತು. ಅಲ್ಲಿಗೆ ಹೋಗುವ ಮೂಲಕ ಅಸಂಸ್ಕೃತನೂ ನಾಗರೀಕನಾಗಬೇಕು. ಅದನ್ನು ಕಲಿಯದವನು ಅಗ್ರಹಾರಕ್ಕೋದರೂ ಫಲವಿಲ್ಲ. ಎಂಬುದನ್ನು ನೆಲೆ, ಎಡೆಗಳ ಮೂಲಕ ವಿವರ ನೀಡುತ್ತದೆ.

೨. ಬಳ್ಳಾರಿ ಸುತ್ತಮುತ್ತ ಬಾಳೆಕಾಯೋಟು ಬರ
ಕುರುಗೋಡು ಸುತ್ತಮುತ್ತ ಕುಂಬಳಕಾಯೋಟು ಬರ.

ಪ್ರಾದೇಶಿಕವಾಗಿ ಬಯಲುಭೂಮಿಯಿಂದ ಕೂಡಿದ ಬಳ್ಳಾರಿಯ ಭೌಗೋಳಿಕ ಪರಿಸರವನ್ನು ಮತ್ತು ಸ್ಥಳನಾಮಗಳನ್ನು ಈ ಗಾದೆ ನಿರೂಪಿಸುತ್ತದೆ. ಬಾಳೆಕಾಯಿ ಮತ್ತು ಕುಂಬಳಕಾಯಿಗಳು ಬರದ ಗಾತ್ರವನ್ನು ಆಯಾ ಪ್ರದೇಶಕ್ಕೆ ಸೀಮಿತಗೊಳಿಸುತ್ತವೆ. ಇದಕ್ಕೆ ಪೂರಕವಾಗಿ ಮತ್ತೊಂದು ಗಾದೆ ಹೀಗಿದೆ -

೩. ಬಳ್ಳಾರಿಗೆ ಹೆಣ್ಣು ಕೊಡಬಾರದು : ಆದವಾನಿಗೆ ಕತ್ತೆ ಕೊಡಬಾರದು

ಬರಗಾಲ, ಬಿಸಿಲು ಇರುವಂತಹ ಬಳ್ಳಾರಿಗೆ ಹೆಣ್ಣುಕೊಟ್ಟರೆ ಸುಖಪಡಲಾರಳು. ಆದವಾನಿಯೂ ಭೌಗೋಳಿಕವಾಗಿ ನೀರಿಲ್ಲದ ಪರಿಸರ. ನೀರಿಗಾಗಿ ಪರದಾಡಿ ಅಗಸರು ಕತ್ತೆಯನ್ನು ಸುಮಾರು ಮೈಲು ದೂರ ಹೊಡೆದುಕೊಂಡು ಹೋಗಿ ತಮ್ಮ ವೃತ್ತಿಯನ್ನು ಮಾಡಬೇಕಾಗುತ್ತದೆಂದು ಹೇಳುತ್ತದೆ.

೪. ಚಿಂತಕುಂಟೆ ಜೋಗೇರೋನು ಇದ್ದಂಗ ಇವನು.

೫. ಏರೂರು ಎಲ್ಲಟೋ ಮೊಂಡಿವೆಲೆಸಿನಟ್ಲು (ಏರೂರು ಎಲ್ಲೆಯಲ್ಲಿ ಮೊಂಡನು ಮರೆದಂಗ)

೬. ಎರುಕಲಮ್ಮ ಏರೂರಿಕಿ ಚುಟ್ಟಮಾ (ಎರುಕಲಮ್ಮ ಏರೂರಿಗೆ ನೆಂಟಳೇ)

ಎಂಬಂತಹ ಗಾದೆಗಳು ಚಿಂತಕುಂಟೆಯಲ್ಲಿ ಜೋಗಿಯವರು ಎಂಬ ಸಮುದಾಯ ವಾಸಿಸುವುದು ವಿಶೇಷ. ಈ ಗಾದೆಮಾತು ಪ್ರಾದೇಶಿಕವಾಗಿ ಆಲೂರು ತಾಲ್ಲೂಕಿನ ಭೌಗೋಳಿಕ ಪರಿಸರದಲ್ಲಿ ಪ್ರಚಲಿತವಿದೆ. ಇದನ್ನು ಜಾನಪದರು ಎಂದೂ ಮರೆಯಲಾರರು. ಜೋಗಿ ಜನಾಂಗದ ಜನಜೀವನ ಅವರ ನೆಲೆಯನ್ನು ಈ ಗಾದೆಯು ಹೇಳುತ್ತದೆ. ಅದೇ ರೀತಿಯಾಗಿ ಆಲೂರು ತಾಲ್ಲೂಕಿನ ಪರಿಸರದಲ್ಲಿಯೇ ಬರುವ ಏರೂರು ಮೊಂಡ ಜನಾಂಗ ವಾಸಿಸುವ ಪ್ರತ್ಯೇಕ ಗ್ರಾಮವಾಗಿತ್ತು. ಕಾರಣ ಮೊಂಡರಿಗೆ ಸಂಬಂಧಿಸಿದ ಗಾದೆಯು ಜನಿಸಿದೆ. ಹೀಗೆ ಜನಾಂಗದ ವಿಶೇಷತೆಯೊಂದಿಗೆ ಕೆಲವು ಸ್ಥಳನಾಮಗಳು ಗಾದೆಗಳಲ್ಲಿ ಉಲ್ಲೇಖಗೊಂಡಿರುವುದು ಅಧ್ಯಯನದ ದೃಷ್ಟಿಯಿಂದ ಮಹತ್ವದ ಆಕರವೆನಿಸುತ್ತವೆ. ಅಲ್ಲದೆ -

- ಅಯ್ಯನಳ್ಳಿಗಿಂತ ತಯ್ಯಂಬೋ ಮೆಳ್ಳಿ ಮೇಲು.
- ಅಂಟವಾಳದ ಕಾಯಿಗೆ ಕುಂಟನಾಳಿಗೆ ಹೋಗಬೇಕಾ.
- ಅತ್ತಗೆ ಅಗಸನೂರು ಸೊಸೆಗೆ ಬಸವನೂರು.
- ಆಳ್ಳಗಡ್ಡ ಬಾಂಬು ಶಬ್ದ ಆದಂಗ ಆಗತೈತಿ.
- ಇವನಾ ಬೊಲ್ಲೂರು ಮಿಂಡ, ಸಾಮಾನ್ಯನಾ.
- ಉಪ್ಪಾರಹಾಳಾಗ ಮುಪ್ಪಿನೋರು ಯಾರಂತ ಹೇಳತೀಯ.
- ಏ ಹಿರ‍್ಯಾಟೆ ಜೋಗಮ್ಮನಂತೋನೆ.
- ಏ ಭಾರಿ ಈತ ಬಂಡ್ರಾಳು ಭಂಡಪೋ.

- ಏ ಅದೇನು ಪುಳ್ಳೆ ಗುಳೇದ ಜಾತ್ರ್ಯಾಗ ಜೋಗಮ್ಮ ನಡೆದಂಗಾಗತೈತಿ.
- ಏ ಅವಂದೇನು ಹೊಳಗುಂದಿ ಗೌಡ್ರು ಸಂಪತ್ತಾ.
- ಕಲ್ಲಿಗುಡ್ಡದ ಜಾತ್ರ ಅಂದ್ಕಂಡಿಯಾ ಸಂಸಾರಂದ್ರ.
- ಕಂಬ್ರಚೇಡಿಗೆ ಸೂಜಿ ಕೊಂಡೊಯ್ದಂಗ.
- ಗಿರಿಯಾಗ ಗಿರಿ ಮೇಲ್ ಗಿರಿ ಮೀನಗೊಂದಿಗಿರಿ.
- ಚಿಗ್ಯಾಟೇ'ರು ಚಿಂತೆಗೆ ಅತ್ತರೆ ಕಂಚ ತನ್ನ ಗುದಿಗಗೆ ಅತ್ತನಂತೆ.
- ತಾಳೂರಿಗೆ ತಿಳಿದವನೇ ಗೌಡ, ಊಳೂರಿಗೆ ಉಳಿದವನೇ ಗೌಡ.
- ಬಲ್ಲಂತೋರಿಗೆ ಬಲ್ಲೂರು.
- ಮಂತ್ರಾಲಯದಗ ಕಂತ್ರಿ ಕೆಲಸ ಮಾಡತಾರಾ.
- ಯಾಕಂಗ ಮಾಡತೀಯಲೇ ಕೂಡ್ಲೂರು ಅಡಕ.
- ಸುಳ್ಳು ಸುಳುವಾಯಿ, ಹೊನ್ನಕುಳ್ಳಳ್ಳಿ, ಹೊಟ್ಟೆಕಿಚ್ಚಿನ ಹೊಳಗುಂದಿ.
- ಸೂಳೆಕೆರೆಗೊಬ್ಬಳೇ ಸೂಳೆ ಪದ್ಮಾವತಿ.[೪೦]

ಹೀಗೆ ಗಾದೆಗಳಲ್ಲಿ ಒಂದು ಘಟನೆ, ಒಂದು ಗ್ರಾಮದ ವಿಶೇಷತೆ, ಒಂದು ಸ್ಥಳದ ಮಹಿಮೆ, ಆ ಸ್ಥಳದ ಹಿರಿಮೆ, ಪ್ರಾದೇಶಿಕ ವೈವಿಧ್ಯತೆ, ಪ್ರತ್ಯೇಕವಾದ ಭೌಗೋಳಿಕ ಗುಣ, ಒಬ್ಬ ವ್ಯಕ್ತಿಯ ನಡೆ, ನುಡಿ, ದೈಹಿಕ ಚಹರೆ, ಆ ಪರಿಸರದ ಜಾತ್ರಾವಿಶೇಷಗಳು, ಆ ಊರುಗಳ ಗುಣದೋಷಗಳು, ಸಮುದಾಯದ ವಾಸದ ನೆಲೆಗಳು, ಅವರ ಬುದ್ಧಿವಂತಿಕೆ ಇತ್ಯಾದಿ ವಿಷಯಗಳು ಒಂದೊಂದು ಗ್ರಾಮಕ್ಕೆ ಒಂದೊಂದು ಅಂಶ ಮುಖ್ಯವಾಗಿ ಘಟಿಸಿ ಮತ್ತೊಂದು ಪರಿಸರಕ್ಕೆ, ಆ ಪರಿಸರದ ದೈನಂದಿನ ಜೀವನ ವಿಧಾನದಲ್ಲಿ ಆ ಘಟನೆಗಳು ಅವರ ಬಾಯ್ಮಾತಿನಲ್ಲಿ ಹೊರಡುತ್ತವೆ. ಇಂಥಲ್ಲಿ ಆಯಾ ಸ್ಥಳದ ಹೆಸರುಗಳನ್ನು ಹೇಳುವುದು ಅತಿ ಮುಖ್ಯವಾಗಿದೆ. ಇಲ್ಲಿ ಸ್ಥಳಗಳ ವೈಶಿಷ್ಟ್ಯವನ್ನು ಜಾನಪದರು ತಮ್ಮ ನಾಲಿಗೆಯಿಂದ ಎಂದೂ ಮರೆಯಲಾರರು. ಯಾವುದೇ ಕಾರಣಕ್ಕೆ ವ್ಯಕ್ತಿಯೊಬ್ಬ ಭಂಡ್ರಾಳು ಗ್ರಾಮದಲ್ಲಿ ತನ್ನ ಮೊಂಡುತನವನ್ನು ತೋರಿಸಿ ಆ ಘಟನೆಗೆ ಪ್ರಮುಖನಾದರೆ, ಅಕ್ಕಪಕ್ಕದ ಊರುಗಳ ಜನ ತಮ್ಮಲ್ಲಿ ಯಾರಾದರೂ ಆ ವರ್ತನೆ ಮಾಡಿದರೆ "ಭಂಡ್ರಾಳು ಭಂಡಪ್ಪ ಈತ" ಎನ್ನುತ್ತಾರೆ. ಇಂಥಾ ಅನೇಕ ಗಾದೆಗಳು ಸ್ಥಳಗಳ ಉಲ್ಲೇಖವನ್ನು ಸಾರ್ವತ್ರಿಕಗೊಳಿಸಿವೆ.

ಸ್ಥಳನಾಮ ಅಧ್ಯಯನದಲ್ಲಿ ಇಂತಹ ಗಾದೆಗಳನ್ನು ಆಕರಗಳಾಗಿ ಪರಿಗಣಿಸಿದಲ್ಲಿ ಆ ಮೂಲಕ ಗ್ರಾಮನಾಮಗಳ ಮೂಲ ಹೆಸರು, ಅದರ ಹಿಂದಿನ ಸಾಂಸ್ಕೃತಿಕ ಸಾಮಾಜಿಕ ಸಂಗತಿಗಳ ಕಡೆ ಹೋಗಲು ಸಹಾಯವಾಗುತ್ತದೆ. ಗಾದೆಗಳಲ್ಲಿ ಅದೆಷ್ಟೋ ಸ್ಥಳನಾಮಗಳು ಅಡಗಿವೆ. ಇದಕ್ಕೆ ಒಂದು ಪ್ರತ್ಯೇಕ ಅಧ್ಯಯನವನ್ನೇ ಆಳವಡಿಸಬಹುದು. ಕರ್ನಾಟಕದಾದ್ಯಂತ ದೊರೆಯುವ ಗಾದೆಗಳನ್ನು ಸಂಗ್ರಹಿಸಿ ಆ ಮೂಲಕ ಸ್ಥಳ ಸಂಸ್ಕೃತಿಯ ಹೊಸ ಜಗತ್ತನ್ನು ಸೃಷ್ಟಿಸಲು ಸಾಧ್ಯವಿದೆ.

### ೫.೫. ಒಗಟುಗಳು ಮತ್ತು ಸ್ಥಳನಾಮ

ಒಗಟು ಜನಪದ ಸಾಹಿತ್ಯದ ಬಹುಮುಖ್ಯ ಪ್ರಕಾರಗಳಲ್ಲೊಂದು. ಇಂಥಾ ಜಾನಪದ ಅಂಶವೊಂದರೊಳಗಡೆ ಒಂದು ಭಾಷೆ, ಭಾವನೆ, ಜನರು ವಾಸಿಸುವ ನೆಲೆಗಳು, ಊಟ, ಉಪಚಾರ, ನಡೆವಳಿಕೆ, ಆಚಾರ - ವಿಚಾರ, ಕಲೆ - ಸಾಹಿತ್ಯ, ಸಂಸ್ಕಾರ, ದೃಷ್ಟಿಧೋರಣೆಗಳೆಲ್ಲ ಇರುತ್ತವೆ. ಅನೇಕ ವಸ್ತು ವೈವಿಧ್ಯವನ್ನು ಹೊಂದಿದ ಒಗಟುಗಳಲ್ಲಿ ಸ್ಥಳನಾಮಗಳು ನಿರೂಪಿತವಾಗಿವೆ. ಅಂತಹ ಕೆಲವು ಮಾದರಿಗಳು ಇಲ್ಲಿವೆ.

೧. **ಅಲ್ಲಿ ಪಳಪಳ ಇಲ್ಲಿ ಪಳಪಳ ಕಲ್ಯಾಣದ ತನಕ ಪಳಪಳ**

"ಎಂಬ ದೂರಾನ್ವಯ ಒಗಟು ಕುರಿಯ ಹಿಕ್ಕಿಯಲ್ಲಿ ಲಿಂಗ ಕಂಡ ಗೊಲ್ಲಾಳನನ್ನು ನಿರ್ದೇಶಿಸುತ್ತದೆ."[೪೧] ಇಲ್ಲಿ ಕಲ್ಯಾಣದ ತನಕ ಎಂಬ (ಪದ) ಸ್ಥಳನಾಮ ಶರಣರನ್ನು ನೆನಪುಮಾಡುವ ಮೂಲಕ ಜನಪದರು ಆ ಗ್ರಾಮಕ್ಕೆ ನೀಡಿದ ಮಹತ್ವ ಮತ್ತು ಶರಣರ ಗ್ರಾಮದಲ್ಲಿ ಕ್ರಾಂತಿಯಾದದ್ದನ್ನು ಪ್ರತ್ಯೇಕವಾಗಿ "ಪಳ ಪಳ" ಎಂಬ ಪದ ಸೂಚಿಸುತ್ತದೆ. ಇಂಥಲ್ಲಿ ಸಾಮಾಜಿಕವಾಗಿ 'ಕಲ್ಯಾಣ' ನಗರದ ಕ್ರಾಂತಿ, ಅಂದು ಅದು ಪಡೆದಿದ್ದ ಖ್ಯಾತಿಯನ್ನು ಮೌಖಿಕ ಪರಂಪರೆ ದಾಖಲಿಸಿಕೊಂಡು ಮುಂದುವರೆದಿದೆ. ಈ ಒಗಟು ಆಂಧ್ರದ ಗಡಿಯ ಆದವಾನಿ - ಆಲೂರು ತಾಲ್ಲೂಕುಗಳಲ್ಲಿ ಪ್ರಚಲಿತವಿದೆ. ಇದರಿಂದ "ಕಲ್ಯಾಣ ಪಟ್ಟಣಕ್ಕೆ" ಇದ್ದ ಸಾರ್ವತ್ರಿಕ ಮಹತ್ವ ತಿಳಿಯುತ್ತದೆ.

೨. **ಅಂಕು ಡೊಂಕಿನ ಬಾವಿ | ಶಂಕುಚಕ್ರದ ಬಾವಿ | ಆದವಾನಿ ಬಾವಿ**
**ಸಿದ್ದೆಂಕಣ್ಣನ ಬಾವಿ | ಇಣುಕಿ ನೋಡಿದರೆ ಒಂದನಿ ನೀರಿಲ್ಲ"[೪೨] - (ಕಿವಿ)**

ಎಂಬ ಒಗಟಿನಲ್ಲಿ ಅರ್ಥವು ಬೇರೆಯದೇ ಆದರೂ ನಮಗೆ ಮುಖ್ಯವಾಗುವುದು 'ಆದವಾನಿ'ಯನ್ನು ಉಲ್ಲೇಖಿಸುತ್ತದೆಂಬುದು. ಸ್ಥಳನಾಮಗಳು ಗಾದೆ, ಒಡಪುಗಳಲ್ಲಿ ಉಕ್ತವಾದಷ್ಟು ಒಗಟಿನಲ್ಲಿ ಆಗಿಲ್ಲ. ಏಕೆಂದರೆ ಇವು ಪ್ರಶ್ನೋತ್ತರ ರೂಪದವು. ಅಧ್ಯಯನ ಕ್ಷೇತ್ರದಲ್ಲಿ ದೊರೆತ ಇನ್ನು ಕೆಲವು ಒಗಟುಗಳು ಇಲ್ಲಿವೆ.

೩. **ಹುಳೇರಾಯನ ಪಟ್ನ**
**ಹುಣಸೇಹಣ್ಣು ಜಟ್ನ**
**ಕೊಂಬೋರುಂಟು ತಿಂಬೋರಿಲ್ಲ"[೪೩] - (ಮದ್ದುಣಿಕೆ ಕಾಯಿ)**

೪. **ಸಿರಿಗಾಪ್ರುಮನೇದಿ ಸಿಂಗಾರಂ**
**ಬಳ್ಳಾರಿ ಅನೇದಿ ಬಂಗಾರಂ**
**ಸುಂಕ್ಲು ಸುರುಂಗ್ಲು ಉಂಡಾಯಿ**
**ಚೂಸೇವಾರು ಲೇದು, ಕಾಸೇವಾರುಲೇದು"[೪೪] - (ನಕ್ಷತ್ರಂ)**

೫. **ವೀರಾಪುರದ ದಿನ್ನೆಮ್ಯಾಲೆ**
**ಆಮುರಾಪುರದ ತಿಮ್ಮಕ್ಯಾಳ**
**ಸಿಟುಗುಟ್ಟಿದರೆ ಕರಕಂಬಾ**
**ಇಲ್ಲದಿದ್ರೆ ಬಿಟ್ಟುಬಾ"[೪೫] - (ಔಡಲಕಾಯಿ)**

೬. ಬುಡ ಕೆಳಗ

ನಡ ಗ್ಯಾದ್ಗೆಗೆ

ಕೊನೆ ಬಳ್ಳಾರಿ ಪ್ಯಾಟ್ಯಾಗ"[೪೬] - (ಜೋಳದದಂಟು)

೭. ಇಲ್ಲಿ ಮುಡಿದದ್ದು

ಬಳ್ಳಾರಿಗೆ ಹೋದರೂ ಬಾಡಲ್ಲ"[೪೭] - (ಹಣ)

೮. ಇಟಗಿ ಎಮ್ಮೆ

ಕಟಗಿ ಮೇಯುತ್ತೆ"[೪೮] - (ಒಲೆ)

೯. ಆಲೂರು ಬೇಲೂರು

ಬೇಲೂರು ಕೆರೆಏರಿ

ಏರಿಮ್ಯಾಗಿನ ಮಿರ್ಗ

ಮಿರ್ಗ ಒಡೆದವನಿಗೆ ಅಡಿಕೆತೋಟ

ಆರುಸಾವಿರ ಎಲೆತೋಟ

ಮೈಸೂರು ಬೀದೀಲಿ ಒಂದು ಬೀದಿ"[೪೯] - (ಬಸವನಹುಳು)

ಎಂಬಂತಹ ಒಗಟುಗಳಲ್ಲಿ ಒಂದಲ್ಲ ಒಂದು ಬಗೆಯಲ್ಲಿ ಗ್ರಾಮನಾಮ ಉಕ್ತವಾಗಿವೆ. ಅದರಂತೆ ಶಕುನದ ಒಗಟುಗಳೆಂಬ ಪ್ರಕಾರದಲ್ಲಿ ಸ್ಥಳನಾಮಗಳ ಉಲ್ಲೇಖದಿಂದಲೇ ಭವಿಷ್ಯದಲ್ಲಿ ಸಂಭವಿಸುವ ವಿಪತ್ತನ್ನು ಈ ಒಗಟುಗಳು ವಿವರಿಸುತ್ತಿರುತ್ತವೆ. ಅಂತಹ ಒಂದು ಉದಾಹರಣೆ -

೧೦. ಕಲ್ಲುಕೋಳಿ ಕೂಗಬೇಕು ಕೇಳಿರಣ್ಣಾ

- - - - - - - - - -

ಹಂಪೀ ಗೋಪುರದ ಮ್ಯಾಲ

ಗುಬ್ಬಿಕುಂತು ನೀರ ಕುಡಿಯಬೇಕು."[೫೦]

ಮೇಲಿನ ಪದ್ಯಭಾಗವನ್ನು ಒಗಟು ಎಂದು ಗುರುತಿಸಲಾಗದಾದರೂ ಜಾನಪದ ಅಧ್ಯಯನಕಾರರು ಈವರೆಗೆ ಇದನ್ನು ಆ ಪ್ರಕಾರದಲ್ಲಿಯೇ ವರ್ಗೀಕರಿಸಿದ್ದಾರೆ.

ಅದರಂತೆ ವೀರಭದ್ರದೇವರ ಒಡಬುಗಳಲ್ಲಿ ಒಗಟು ಮಾದರಿಯ ಕಥಾನಕಗಳಲ್ಲಿ ಬರುವ ಸ್ಥಳನಾಮಗಳು ಊಹಾತ್ಮಕವಾಗಿರುವುದನ್ನು ಗುರುತಿಸಬಹುದು. ಈ ಸ್ಥಳನಾಮಗಳು ಭೂಮಿಯ ಮೇಲೆ ಇರಲಾರವು.

ಉದಾ : ೧೧. ಅಹಹಾವೀರ ..........

ಕೋಣನ ಕೊಂಬಿನ ಮೇಲೆ

ಕಠೋರವೆಂಬ ಪಟ್ಟಣ ಹುಟ್ಟಿತ್ತು

ಸೊಣಗನ ಕಿವಿಯಮೇಲೆ

ಕಾವಿಯೆಂಬ ನಗರ ಹುಟ್ಟಿತ್ತು

ಕಾವಿಯೆಂಬ ನಗರದೊಳಗೆ

ನಿಷ್ಕಾಮನೆಂಬ ಬೀದಿ [೫೯]

ಪ್ರಮುಖವಾಗಿ ಈ ರೀತಿಯ ಸ್ಥಳನಾಮಗಳು ಹುಟ್ಟಿಕೊಂಡದ್ದು ಆಧ್ಯಾತ್ಮಿಕ ವಲಯದಲ್ಲಿ. ಶರಣರು ದಾಸರು, ಸೂಫಿಗಳು ಮುಂತಾದವರು ತಮ್ಮ ಉಪದೇಶವನ್ನು ನೀಡುವಾಗ, ಸಾಮಾಜಿಕ ಜೀವನದಲ್ಲಿ ಬದುಕುವ ಮನುಷ್ಯರ ಗುಣ - ದೌರ್ಬಲ್ಯಾದಿಗಳನ್ನು ಉಪಮೆ, ರೂಪಕ, ಪ್ರತಿಮೆಗಳಾಗಿ ಹೇಳುವಾಗ ಇಂತಹ ಕಲ್ಪಿತ ಸ್ಥಳನಾಮಗಳನ್ನು ಹೇಳಲಾಗಿದೆ. ಬೆಡಗಿನ ವಚನಗಳಲ್ಲಿ ಇಂತಹ ಸ್ವಕಲ್ಪಿತ ಊರುಗಳ ಹೆಸರು ಹೆಚ್ಚಾಗಿ ಬಂದಿರುವುದನ್ನು ಗಮನಿಸಬಹುದು. ವ್ಯಕ್ತಿಯ ಗುಣ - ದೋಷಗಳನ್ನು ಒಂದು ಊರು, ಪಟ್ಟಣ, ನಗರಗಳಿಗೆ ಆರೋಪಿಸಿ ಪ್ರತಿಮೆಗಳನ್ನು ಹೇಳಿದ್ದಿದೆ. ಈ ಬಗೆಯ ಸ್ಥಳನಾಮಗಳಿಂದ ಸಂಸ್ಕೃತಿಯ ನಿರ್ವಚನಕ್ಕೆ ಹೆಚ್ಚು ಸಹಾಯ ಒದಗಲಾರದು.

ಒಟ್ಟಾರೆ ಒಗಟುಗಳು ಸ್ಥಳನಾಮಗಳನ್ನು ಹೊತ್ತುಕೊಂಡು ಬಾಯಿಂದ ಬಾಯಿಗೆ ಹರಿದು ಬರುವುದರಿಂದ ನಾಮಾಧ್ಯಯನಕ್ಕೆ ಸಹಾಯಕವಾಗಿವೆ.

### ೫.೬. ಒಡಪುಗಳು ಮತ್ತು ಸ್ಥಳನಾಮಗಳು

ಜನಪದ ಸಾಹಿತ್ಯವು ಗ್ರಾಮ ಜೀವನದ ವಿವಿಧ ಅನುಭವಗಳ ಸುಂದರವಾದ ಮತ್ತು ಪ್ರಾಮಾಣಿಕವಾದ ಅಭಿವ್ಯಕ್ತಿ. ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ ಬೆಳೆದು - ಉಳಿದು ಬಂದಿರುವ ಒಡಪು, ಉತ್ತರ ಕರ್ನಾಟಕದ ಪ್ರಾದೇಶಿಕ ವೈಶಿಷ್ಟ್ಯವಾಗಿದೆ. ಈ ಒಡಪುಗಳನ್ನು ಎದುರಿಗಿಟ್ಟುಕೊಂಡು ಸೂಕ್ಷ್ಮವಾಗಿ ಅವಲೋಕಿಸಿದರೆ ಹಳ್ಳಿಗರ ಭಾವಸ್ಪಂದನದಿಂದ ಬಂದ ಕೆಲವು ಸ್ಥಳನಾಮಗಳನ್ನು ಗುರುತಿಸಬಹುದು. ಇಲ್ಲಿ ಉಲ್ಲೇಖವಾದಂತಹ ಬಹುತೇಕ ಸ್ಥಳನಾಮಗಳು ಯಾವುದೋ ಒಂದು ಕಾರಣಕ್ಕೆ ಪ್ರಸಿದ್ಧಿಯನ್ನು ಪಡೆದಿರುತ್ತವೆ. ಕೆಲವೊಮ್ಮೆ ತಮ್ಮ ಊರಿನ ಅಭಿಮಾನ ಮೆರೆಯಲು ಆಯಾ ಊರಿನ ಹೆಸರುಗಳು ಉಕ್ತಮಾಡುವ ಪರಿಪಾಠವಿದೆ. ಇಂತಹ ಸಾಂದರ್ಭಿಕವಾಗಿ ಬಳಸಲ್ಪಟ್ಟ ಸ್ಥಳನಾಮಗಳು ಯಾವುದೇ ಕಾರಣಕ್ಕೆ ಮಾಸಲಾರವು. ತಲೆಮಾರಿನಿಂದ ಹರಿದು ಬಂದು ಜೀವಂತಿಕೆಯನ್ನು ಪಡೆದಿರುತ್ತವೆ. ಇದರಿಂದಾಗಿ ಒಡಪುಗಳನ್ನು ಉಪೇಕ್ಷಿಸುವಂತಿಲ್ಲ. ಭಾಷಾಧ್ಯಯನದ ದೃಷ್ಟಿಯಿಂದ ಒಡಪುಗಳಿಗೆ ಪ್ರಮುಖ ಸ್ಥಾನವಿದೆ. ಇವು ಭಾಷಾಭಿವ್ಯಕ್ತಿಯ ಸ್ಥಿರರೂಪಗಳು. ಆಡುನುಡಿಯ ಅನೇಕ ರೂಪಗಳು ಒಡಪುಗಳಲ್ಲಿ ಪ್ರಯೋಗಗೊಂಡಿವೆ. ಒಡಪು ಕಟ್ಟಿ ಹೇಳುವಾಗ ಭಾಷಿಕ ಪ್ರಭೇದದಿಂದ ಸ್ಥಳನಾಮಗಳೂ ಕೂಡ ರೂಪ

ಪರಿವರ್ತನೆಯನ್ನು ಹೊಂದುತ್ತವೆ. ಒಡಪುಗಳನ್ನಿಟ್ಟುಕೊಂಡು ಸ್ಥಳನಾಮ ಅಧ್ಯಯನವನ್ನು ಕೈಗೊಳ್ಳುವುದು ಕಷ್ಟಕರವೆಂದೂ ಸಂದೇಹ ಬಂದರೂ ಸೂಕ್ಷ್ಮವಾಗಿ ಅವಲೋಕಿಸಿದರೆ ಒಡಪುಗಳಲ್ಲಿ ಕೆಲವು ವೈಶಿಷ್ಟ್ಯಗಳು ಗೋಚರಿಸುತ್ತವೆ. ಅಂಥಾ ಒಂದು ಮಾದರಿ ಇಲ್ಲಿದೆ.

೧. 'ಇಜಾಪೂರ ಸುತ್ತ ಗೋದಿ ಕಡಲಿ ಬಿತ್ತ
ನಾನೂರ ನತ್ತು ಮುನ್ನೂರ ಬುಗಡಿ
- - - - - - - - - -
- - - - - - - - - -
ದಾರಿಬಿಡಂದರ ಮಾರಿನೋಡತಾನ''[೫೨]

ಎಂಬಲ್ಲಿ ನಮ್ಮ ಜಾನಪದರು ಬಿಜಾಪುರದ ಪ್ರಕೃತಿಯಲ್ಲಿ ಬೆಳೆಯುವ ಗೋದಿ, ಕಡಲೆಯ ಪ್ರಸಿದ್ಧಿಯನ್ನು ಹೇಳುತ್ತಲೇ ತಮ್ಮ ಸಂತಸದ ಕ್ಷಣಗಳನ್ನು ಹಂಚಿಕೊಳ್ಳುತ್ತಾರೆ. ಇಲ್ಲಿ ಮುಖ್ಯವಾಗಿ ಬಿಜಾಪುರ ಎಂಬ ಸ್ಥಳನಾಮ ವಿಜಾಪುರ > ಇಜಾಪುರ ಆಗಿದೆ. ಇದು ಆಡುನುಡಿಯಲ್ಲಾಗುವ ಸಹಜ ವ್ಯತ್ಯಾಸ. ಅಲ್ಲದೆ ವಾರ್ಗಿಕದಲ್ಲಿ ಪುರ > ಪೂರ ವಾಗಿ ಆದಿ ಅಕ್ಷರ ದೀರ್ಘವಾಗಿರುವುದನ್ನು ಗಮನಿಸಬಹುದು. ಭೌಗೋಳಿಕ ವಿವರವನ್ನು ನೀಡಿದ ಈ ಒಡಪು ನಿರಂತರವಾಗಿ ಮುಂದುವರೆಯುತ್ತಿರುತ್ತದೆ.

೨. ''ಇಳಕಲ್ಲ ದಡಿ ಸೀರಿ
ಕಿಮ್ಮತ್ತು ಬಲೆ ಭಾರಿ
ಅವ ತರಲಿಲ್ಲ ನಾ ಉಡಲಿಲ್ಲ''[೫೩]

ಎಂಬಲ್ಲಿ 'ಇಳಕಲ್ಲು' ಪ್ರಾದೇಶಿಕವಾಗಿ ಕರ್ನಾಟಕದಲ್ಲಿ ಸೀರೆಯ ಉತ್ಪಾದನೆಗೆ ಹೆಸರು ಪಡೆದಿದೆ. ಅದರಂತೆ

೩. ''ಮೈಸೂರು ಮಲ್ಲಿಗೆ ಮುಡಕಂಡು
ಕಂಚಿ ಸೀರೆ ಹುಟ್ಕೊಂಡು
ಮಂಚಕ್ಕೆ ಬಾ ಅಂದರೆ
ಕೊಂಚ ದೂರ ಹೋಗ್ತಾಳೆ''[೫೪]

ಎಂಬಲ್ಲಿಯೂ ಆಯಾ ಊರುಗಳು ಕೆಲವು ವಸ್ತುಗಳಿಗೆ ಹೆಸರು ಮಾಡಿದ್ದನ್ನು ವಿವರಿಸಿದೆ.

೪. ''ದೇವೇಂದ್ರ ಇರೋದು ಅಮರಾವತಿ ಪಟ್ನ
ನಮ್ಮರಾಯರಿರೋದು ಆದವಾನಿ ಪಟ್ನ
ಆದವಾನ್ಯಾಗ ಕುಂತಗಂಡು ಹತ್ಯಾಕ ಕರೀತಾನ''[೫೫]

೫.    "ಬಳ್ಳಾರಿ ಅಂಬೋದು ಬಡಿವಾರ
ಮುತ್ತಿನಂಥ ಬಜಾರ
ಒಂಟಿ ಮ್ಯಾಲ ಕುಂತಾನ
ಕಂಠೀಸರ ಹಿಡಿದಾನ
ಬಾಗಲಾಗ ನಿಂತಾನ
ಬಾಳೆಗೊನೆ ಹಿಡಿದಾನ"[೫೬]

ಎಂಬ ಒಡಪುಗಳಲ್ಲಿ ಆಯಾ ಪ್ರಾದೇಶಿಕ ಗ್ರಾಮಗಳು, ಪಟ್ಟಣಗಳು ಯಾವುದೋ ಕಾರಣಕ್ಕೆ ಪ್ರಸಿದ್ಧಿಯನ್ನು ಪಡೆದು ಜನರಿಗೆ ಹತ್ತಿರವಾದಂತವುಗಳು. ಅಮರಾವತಿಯೆಂಬುದು ಜಾನಪದರ ಕಾಲ್ಪನಿಕ ಪಟ್ಟಣ. ಅದರೊಂದಿಗೆ 'ಆದವಾನಿ' ಯನ್ನು ಸಮೀಕರಿಸುವುದೇ ಇಲ್ಲಿಯ ವೈಶಿಷ್ಟ್ಯ. ಒಡಪುಗಳಲ್ಲಿ ನಿರಂತರವಾಗಿ ಆಯಾ ಪ್ರಾದೇಶಿಕ ವೈಶಿಷ್ಟ್ಯ ಪಡೆದ ಊರುಗಳು, ವಾಣಿಜ್ಯ ಕೇಂದ್ರಗಳು, ದೇವತೆಗಳಿರುವ ವಾಸಸ್ಥಾನಗಳು, ಕಾಲ್ಪನಿಕ ನಿರ್ವಸಿತ ಸ್ಥಳಗಳು ಎಡೆಪಡೆದಿವೆ. ಆ ಮೂಲಕ ಗ್ರಾಮನಾಮಗಳ ಶುದ್ಧರೂಪ ಮೌಖಿಕ ಸಂಪ್ರದಾಯದಲ್ಲಿ ಉಳಿದು ಬರುತ್ತದೆ. ಹೆಚ್ಚೆಂದರೆ ಅಕ್ಷರ - ಧ್ವನ್ಯಾತ್ಮಕ ವ್ಯತ್ಯಾಸವಾಗಬಹುದಷ್ಟೆ. ಈ ದೃಷ್ಟಿಯಿಂದ ಒಡಪುಗಳು ಸಹಾಯ ನೀಡಬಲ್ಲವು.

### ೫.೭. ಜಾನಪದ ಕಥೆ ಮತ್ತು ಸ್ಥಳನಾಮಗಳು

"ಹಳ್ಳಿಗಳ ಹೆಸರುಗಳ ಬಗ್ಗೆ ಸ್ಥಳಪುರಾಣ, ಕಟ್ಟುಕಥೆಗಳು ನಿರ್ಮಾಣವಾಗಿರುತ್ತವೆ. ಮತ್ತು ಹಳ್ಳಿಯ ಜನ ಅವನ್ನು ಹೇಳಲು ಬಹಳ ಉತ್ಸುಕರಾಗಿರುತ್ತಾರೆ. ಕಟ್ಟು ಕಥೆಗಳು ಊರಿನ ಹೆಸರನ್ನು ವಿವರಿಸಲು ಪ್ರಯತ್ನಿಸುತ್ತವೆ ನಿಜ. ಊರಿನ ಹೆಸರಿನ ಬಗ್ಗೆ ಜನ ತೋರಿದ ಸಹಜಕುತೂಹಲ, ಕಂಡುಕೊಂಡ ಉತ್ತರಕ್ಕೆ ಸಂಕೇತವೇ ಅವಾಗಿರುತ್ತವೆ."[೫೭] ಇದೊಂದು ರೀತಿಯಲ್ಲಿ ಐತಿಹ್ಯ, ಸ್ಥಳಪುರಾಣಕ್ಕೆ ಸಮೀಪವರ್ತಿ ಎನಿಸಿದರೂ, ಇವುಗಳ ಸ್ವರೂಪವೇ ಬೇರೆ. ಕಥೆ ಹೇಳುವ ಜನರು ಆ ಕಥೆಯಲ್ಲಿ ಘಟನೆಗಳನ್ನು ವಿವರಿಸುತ್ತಾ ಅನೇಕ ಸ್ಥಳನಾಮಗಳನ್ನು ಹೇಳುತ್ತಾರೆ. ಅವುಗಳು ಪ್ರಸಿದ್ಧ ಊರುಗಳೇ ಆಗಿರುತ್ತವೆ. ಅಲ್ಲಿ ರಾಜನೇ ಆಳುತ್ತಿರುತ್ತಾನೆಂಬುದು ಗಮನಾರ್ಹ.

ಕಥೆಗಳು ಊರ ಹೆಸರಿನ ಮೇಲೆ ಅತ್ಯಂತ ಪ್ರಭಾವ ಬೀರುವ ಅಂಶಗಳಾಗಿವೆ. ಇವು ಹೆಚ್ಚಿನಂಶ ವಸ್ತುಸ್ಥಿತಿಯನ್ನು ಕುರಿತವುಗಳಾಗಿದ್ದು, ವ್ಯಕ್ತಿಗತ, ಭೌಗೋಳಿಕ ಪರಿಸರ ಮತ್ತು ಘಟನಾತ್ಮಕ ವಿಶಿಷ್ಟತೆಯನ್ನು ಪಡೆದುಕೊಂಡಿರುತ್ತವೆ. ಈ ಕಥೆಗಳು ಒಂದು ಜನಾಂಗದ ನಡೆವಳಿಕೆ, ನಂಬಿಕೆಗಳನ್ನು ಪ್ರತಿನಿಧಿಸುತ್ತಿದ್ದು ಪುನರಾವರ್ತನೆಯ ಮೂಲಕ ಪರಂಪರೆಯ ಉಳಿಯುವಿಕೆಗೆ, ನೆನಕೆಗೆ ಕಾರಣವಾಗುತ್ತವೆ. ಅಂದರೆ ಸಮಾಜದ ಮೇಲೆ ಒಳ್ಳೆಯವರ ಮತ್ತು ಕೆಟ್ಟವರ ಪ್ರಭಾವ, ಅವರು ಭೇಟಿ ಕೊಟ್ಟ, ತಂಗಿದ್ದ ನೆಲೆಸಿದ ಸ್ಥಳಗಳ ಸಂಗತಿ, ಗಾಳಿ, ಪಿಶಾಚಿ, ಭಯಂಕರ ರೋಗರುಜಿನಗಳು, ಗ್ರಾಮಕ್ಕೆ ಊರಿಗೆ ಬಡಿದಾಗ ಮಧ್ಯೆ ಸಂಭವಿಸುವ ಆಶ್ಚರ್ಯಕರ ಅಸಾಮಾನ್ಯ ಘಟನೆಗಳನ್ನು ಬಾಯಿಂದ ಬಾಯಿಗೆ ಹರಡುವುದರ ಮೂಲಕ ಪರಂಪರೆಯ ರಕ್ಷಣೆಯ ಕಾರ್ಯವನ್ನು ಅವು ನಿರ್ವಹಿಸುತ್ತವೆ. ಇದರಿಂದಾಗಿ ಕಥೆಗಳನ್ನೂ ಸ್ಥಳನಾಮ ಅಧ್ಯಯನಕ್ಕೆ ಅಳವಡಿಸುವ ಮೂಲಕ ಜಾನಪದ ಮತ್ತು ಸ್ಥಳನಾಮಗಳ ಬಂಧವನ್ನು ಮತ್ತಷ್ಟೂ ಗಟ್ಟಿಗೊಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಮೌಖಿಕ ಕಥಾ ಪರಂಪರೆಯಲ್ಲಿ ಯಾವುದೇ ಕಥೆಯು "ಒಂದು ಊರಾಗ" ಎಂಬ ವಾಸದ ನೆಲೆಯ ಉಲ್ಲೇಖದಿಂದಲೇ ಆರಂಭವಾಗುತ್ತದೆ. ಆಯಾ ಹಳ್ಳಿ, ಪಟ್ಟಣ, ನಗರ, ಗ್ರಾಮ, ಊರು ಮುಂತಾಗಿ ಹೆಸರುಗಳು ಇಲ್ಲಿ ಬರುತ್ತವೆ. ಮುಖ್ಯವಾಗಿ ಸ್ಥಳಗಳ ಹೆಸರಿನಿಂದಲೇ ಆರಂಭವಾಗುವ ಕಥೆಗಳಿವೆ. "ಹೀಂಗ ಒಂದಾನೊಂದು ಕಾಲಾದಾಗ *ಹಂಪೆಯೆಂಬೋ* ಪಟ್ಟಣದಾಗ ....."[೫೮] ಎಂದು ಸ್ಥಳದ ಹೆಸರಿನಿಂದ ಆರಂಭವಾಗುತ್ತದೆ. ಕಥೆಯು ಬೆಳೆಯುತ್ತಾ ಹೋದಂತೆ ನಡುವೆ "ಆಗ ಆ ರಾಜನಿಗೆ ಬ್ಯಾಸರ ಆಗಿತ್ತು. ಸುತ್ತ ಮುತ್ತ ನೋಡ್ದ *ಹುಳೇರಾಯನ ಪಟ್ಟಣ* ಎಂಬ ಊರು ಕಾಣಿಸ್ತು ....."[೫೯] ಎಂದು ಮುಂದುವರೆಯುತ್ತದೆ. ಹೀಗೆ ಕಥೆಯಲ್ಲಿ ಬೇರೆ ಬೇರೆ ದೇಶಗಳೂ ಬಂದು ಹೋಗುತ್ತವೆ. ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ ಒಂದೆರಡು ಉದಾಹರಣೆ ಇಲ್ಲಿವೆ. "*ಧರ್ಮಾವತಿ ಪಟ್ಟಣ*. ಅಲ್ಲಿ ದಾನವಂತ ರಾಜ. ಅವನಿಗೆ ಇಬ್ಬರು ರಾಣಿಯರು. ............ಮುಂದೆ ಬಳ್ಳಾರಿಯಂಥದೊಂದು ಪಟ್ಟಣ"[೬೦] "*ಶನೀವತಿ ಪಟ್ಟಣ*. ಅದನ್ನು ಆಳುವವನೊಬ್ಬರಾಜ."[೬೧] "ರಾಜ ಪ್ರಧಾನಿ ದೇಶ ಸಂಚಾರಕ್ಕೆ ಹೊರಟರು. ಅಲ್ಲಿ *ಹಿರೇತುಂಟೂರು ಚಿಕ್ಕತುಂಟೂರು* ಎಂಬ ಎರಡು ಊರುಗಳು ಕಂಡವು."[೬೨]

ಹೀಗೆ ಜಾನಪದ ಕಥೆಗಳಲ್ಲಿಯೂ ಪ್ರಾದೇಶಿಕವಾಗಿ ಅನೇಕ ಸ್ಥಳನಾಮಗಳು ದಾಖಲುಗೊಂಡಿರುವುದನ್ನು ಗುರುತಿಸಬಹುದು. ಮೂಲ ನಿಷ್ಪತ್ತಿಯೂ ಇಂತಹ ಕಥೋಲ್ಲೇಖಿತ ಹೆಸರುಗಳಲ್ಲಿ ಉಳಿದುಕೊಂಡಿರುತ್ತದೆ. ಕಥೆಗಳಲ್ಲಿ ದಾಖಲುಗೊಂಡ ಸ್ಥಳ ಹಾಗೂ ಗ್ರಾಮನಾಮಗಳ ಸಮಗ್ರ ಮಾಹಿತಿಯನ್ನು ಸಂಗ್ರಹಿಸಿದಲ್ಲಿ ಇದೊಂದು ಪ್ರತ್ಯೇಕ ಅಧ್ಯಯನವೇ ಆಗುತ್ತದೆ. ಈ ದೃಷ್ಟಿಯಿಂದ ನಾಮಾಧ್ಯಯನದಲ್ಲಿ ಜಾನಪದ ಕಥೆಗಳಿಗೆ ಮಹತ್ವವಿದೆ.

## ೫.೮. ಜಾನಪದ ಹಾಡುಗಳು ಮತ್ತು ಸ್ಥಳನಾಮ

ಕರ್ನಾಟಕದ ಮೌಖಿಕ ಪರಂಪರೆಯ ಸಂಪತ್ತಿನಲ್ಲಿ ಹಾಡಿನ ಪ್ರಕಾರ ಒಂದು ಅತಿ ಮುಖ್ಯವಾದುದು. ಎಲ್ಲೆಡೆ ಜಾನಪದರಲ್ಲಿ ಅಡಗಿ ಕುಳಿತ ಲಾವಣಿ - ತ್ರಿಪದಿ - ಕೋಲಾಟದ ಪದಗಳು - ಶಿಶುಪ್ರಾಸ - ಹಂತಿಯಹಾಡು - ಗರತಿಯಹಾಡು ಮುಂತಾದ ಹಾಡುಗಳಲ್ಲಿ ಸ್ಥಳನಾಮ - ಗ್ರಾಮನಾಮಗಳು ಹಾಸು ಹೊಕ್ಕಾಗಿವೆಯೆಂಬುದು ಗಮನಾರ್ಹ. ಕೆಲವು ಹಾಡುಗಳಲ್ಲಿ ಒಂದೊಂದು ಸ್ಥಳನಾಮದ ಐತಿಹ್ಯವೂ ಅಡಗಿದೆ. ಬಹುತೇಕ ಹಾಡುಗಳಲ್ಲಿ ಅದರಲ್ಲಿಯೂ ಕೋಲಾಟ ಮತ್ತು ಲಾವಣಿಗಳಲ್ಲಿ ಸ್ಥಳನಾಮಗಳು ತಪ್ಪದೇ ಬರುವುದುಂಟು. ಲಾವಣಿ ಪ್ರಕಾರದಲ್ಲಿ ಲಾವಣಿ ಹಾಡಿದವನ ಹೆಸರು - ಊರು ಮತ್ತು ಲಾವಣಿಯ ಘಟನೆಯ ಚಿತ್ರದಲ್ಲಿ ಅನೇಕ ಗ್ರಾಮನಾಮಗಳು ಅಡಗಿವೆ. ಕೋಲಾಟದ ಪದಗಳಲ್ಲಿಯೂ ಆಯಾ ಪ್ರಾದೇಶಿಕ ಭೌಗೋಳಿಕ ಪರಿಸರದಲ್ಲಿ ನಡೆಯುವ ಸಾಮಾಜಿಕ ಸಾಂಸ್ಕೃತಿಕ ಜೀವನ ಚಿತ್ರಣ ನೀಡುವ ಮೂಲಕ ಸ್ಥಳನಾಮಗಳೂ ನಿರೂಪಿಸಲ್ಪಟ್ಟಿವೆ.

ನಮ್ಮ ನಾಡಿನ ಅನೇಕ ದೇವರುಗಳ ಬಗ್ಗೆ ಕಟ್ಟಿದ ಹಾಡುಗಳಲ್ಲಿಯೂ ಸ್ಥಳ ಚರಿತ್ರೆ, ಸ್ಥಳವಿಶೇಷ, ಐತಿಹ್ಯ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ. ಕೇವಲ ವಸತಿಯನ್ನು ಹೊಂದಿದ ಸ್ಥಳನಾಮಗಳಲ್ಲದೇ, ನಿರ್ವಸತಿ ಸ್ಥಳನಾಮಗಳೂ ಇಂಥಲ್ಲಿ ವಿಶೇಷವಾಗಿರುವುದು ಗಮನಿಸಬೇಕಾಗುತ್ತದೆ. ಅಂಥಾ ಕೆಲವು ಮಾದರಿಯ ಹಾಡುಗಳನ್ನು ಗಮನಿಸುವ ಮೂಲಕ ಇಲ್ಲಿ ಸ್ಥಳಗಳ ಉಲ್ಲೇಖವನ್ನು ಕಂಡುಕೊಳ್ಳಲಾಗಿದೆ.

ಆಂಧ್ರದ ಗಡಿಭಾಗವಾದ ಆಲೂರು ತಾಲ್ಲೂಕಿನ ಪ್ರಸಿದ್ಧ ಕ್ಷೇತ್ರವಾದ ದೇವರಗುಡ್ಡ (ಮೀನಗೊಂದಿ) ಮಲ್ಲಯ್ಯಸ್ವಾಮಿಯಿಂದಾಗಿ ಪ್ರಸಿದ್ಧವಾಗಿದೆ. ಗೊರವ ಸಂಪ್ರದಾಯಕ್ಕೆ ಸೇರಿದ ಈ ದೇವರ ಕುರಿತಾದ ಪ್ರಾಚೀನ ಹಾಡುಗಳಲ್ಲಿ ಸ್ಥಳನಾಮಗಳು ಧಾರೆಧಾರೆಯಾಗಿ ಮೂಡಿಬಂದಿವೆ. ಒಂದನ್ನು ಗಮನಿಸಬಹುದು. -

ನೆರಣೀಕಿ ಸ್ವಾಮೇರು
ಕಾರಣಿಕಿ ಹೇಳ್ಯಾರು
ಮಲ್ಲಯ್ಯನ ಪಾದ ಸತ್ಯ ಎಂದಾರು
ಬಹುಪರಾಕ್ ಮಲ್ಲಯ್ಯ
ತುಪ್ಪದಾ ಮಾಳಮ್ಮ
ಏಳುಕೋಟಿ ಮಲ್ಲಯ್ಯ ಸಲಹೋನನ್ನಯ್ಯ||
ಯಳ್ಯಾರ್ತಿಯೆಂಬೋದು ವಿದ್ಯಾದ ನಗರವೂ
ಆರತಿಹಚ್ಯಾರ ಮಲ್ಲಯ್ಯಗಾ
ಸುಳುವಾಯಿಯೆಂಬೋದು ಸುಗುಣರಾನಗರವೂ
ಸುರಿವಾರು ಮಲ್ಲೀಗಿ ಮಲ್ಲಯ್ಯಗಾ
ಹರಿಕೇರಿಯೆಂಬೋದು ಹಚ್ಚನಾ ಊರು
ಹರಿಸ್ಯಾರು ಪಾದಕ್ಕ ಗಂಗಮ್ಮನಾ
ಲಿಂಗದಳ್ಳಿಯೆಂಬೋದು ಲಿಂಬೆಯಾನಾಡಣ್ಣ
ಲಿಂಗಾಕ ಸೇವೆಯ ಮಾಡ್ಯಾರು
ನೆರಣಿಕಿಯೆಂಬೋದು ಕರಣೀಕರ ಊರು
ಪರಮರಕಿ ಮಾಡ್ಯಾರು ಮಲ್ಲಯ್ಯಗಾ
ಆಲೂರುಯೆಂಬೋದು ಭಕ್ತರಾ ಪಟ್ಟಣಾ
ಪಾದವಾ ತೊಳೆದಾರು ಮಲ್ಲಯ್ಯಗಾ
ಮುದ್ದನಗೇರಿಯು ಮದ್ದನಮಲ್ಲಿಗೆ ಊರು
ಮದ್ದಾನೆ ತಂದಾರು ಮಲ್ಲಯ್ಯಗಾ
ಕರಡಿಗುಡ್ಡ ಅಂಬೋದು ಮಂಗಮ್ಮನ ನಾಡು
ಕತ್ತೀಯ ನೀಡ್ಯಾರು ಗೊರವಯ್ಯಗಾ
ಹೆಬ್ಬಾಟಯೆಂಬೋದು ಹಿರಿದಾದ ನಾಡಯ್ಯ
ಬೈಕೆ ಬುತ್ತಿ ತಂದಾರು ಮಾಳವ್ವಗಾ

ಪಂದವಾಗಲಿಯೆಂಬೋದು ಪಂದನೆಯ ಊರು

ಪಂದೇಸರಿಗೆ ನೀಡ್ಯಾರು ಭಂಡಾರವ

ಹೊಳಗುಂದಿಯೆಂಬೋದು ಹಿರಿದಾದ ಪಟ್ಟಣ

ರಾಜಪಂಪನಗೌಡ ನೀಡ್ಯಾನು ಕುದರೀಯ

ಆದವಾನಿಯೆಂಬೋದು ನವಾಬರನಾಡು

ಮದ್ವಾನೆ ನೀಡ್ಯಾರು ಮಲ್ಲಯ್ಯಗಾ

ಕುರುಕುಂದೆಯೊಂಬೋದು ಕುಂತಲನಗರವೂ

ಕುರುಬತೆವ್ವಗ ನೀಡ್ಯಾರು ಮೂಗುತೀಯ

ಬಲ್ಲೂರುಯೆಂಬೋದು ಬಲ್ಲಂಥವರ ಊರು

ಒಡೆಯರು ಬಂದಾರು ದರುಶನಕ

ಚಿಗ್ಯಾಟೆಯೆಂಬೋದು ಚಿನ್ನದಾ ಊರು

ಚಿಗರೆಯ ನೀಡ್ಯಾರು ಮಾಳವ್ವಗಾ

ಹಿರ್‍ಯಾಟೆಯೆಂಬೋದು ವಿರಾಟನಗರವು

ಹೆಜ್ಜೆಯ ಹಾಕ್ಯಾರು ದರುಶನಕ

ಬೊಂಬಾನಹಳ್ಳಿಯು ಬೆಂಬಲದ ಊರು

ಬೆಂಬಲ ನೀಡ್ಯಾರ ಸದ್ಭಕ್ತರಿಗೆ

ಕುರುಬರು ಬಂದಾರ ಕಣೆಕಣೆಯೆಂದಾರ

ಗೊರವರು ಕೂಡ್ಯಾರ ಗೊಗ್ಗರಿಕೆ ಹಾಡ್ಯಾರ

- - - - - - - - - - - - - -

- - - - - - - - - - - - - -

- - - - - - - - - - - - - -

ಪಾವನವಾಯಿತು ಭೂಮಿಯು ನನ್ನಯ್ಯ

ಏಳುಕೋಟಿ ಬಹುಪರಾಕ್ ಮಲ್ಲಯ್ಯ ಮಲ್ಲಯ್ಯ॥ ೬೩

ಎಂಬ ವಿಸ್ತೃತ ಮಲ್ಲಯ್ಯನ ಹಾಡಿನಲ್ಲಿ ಸುಮಾರು ಹದಿನೆಂಟು ಗ್ರಾಮಗಳ ಉಲ್ಲೇಖವಿದೆ. ಅದರೊಂದಿಗೆ ಕುರುಕುಂದೆಯ ಮೂಲಹೆಸರು ಕುಂತಲನಗರವೆಂದೂ ಹಿರೇಹ್ಯಾಟೆಯ ಮೂಲಹೆಸರು ವಿರಾಟನಗರಯೆಂಬುದನ್ನು ಉಲ್ಲೇಖಮಾಡುತ್ತದೆ. ಇದರಂತೆ ಎಷ್ಟೋ ಹಾಡುಗಳಲ್ಲಿ ಸ್ಥಳನಾಮಗಳ ಮೂಲರೂಪಗಳು, ಸಂಸ್ಕೃತೀಕರಣ ಗೊಂಡ ರೂಪಗಳಿರುವುದು ತಿಳಿಯುತ್ತದೆ. ಇದರಿಂದ ನಮ್ಮ ಮೌಖಿಕ ಪರಂಪರೆಯ ಹಾಡುಗಳನ್ನು ಕಡೆಗಣಿಸದೇ ಸೂಕ್ಷ್ಮವಾಗಿ ಗಮನಿಸಿ ಅಧ್ಯಯನಿಸಿದಾಗ ಇಂಥಾ ಹೊಳಹುಗಳು ನಮಗೆ ಗೋಚರವಾಗುತ್ತದೆ.

ತ್ರಿಪದಿ : [೪೪] ತಿರುಪತಿಗೆ ಹೋದೇನು ತಿದ್ದಣ್ಣ ಹೋರೀಯ
ಗೆಜ್ಜೆ ಸರಪಣಿಯ ಬಿಗಿಸಣ್ಣ - ಮೂಡಲನಾಡು
ದೊಡ್ಡೋರಿಗೆ ದಂಡು ನಡೆದೇನು.

ಹೆಸರೀಗೆ ಶಿಲ್ಪಗಿರಿ ಮೊಸರೀಗಿ ನೀರಿಲ್ಲ
ಕುಸಲದ ಸಿಂಬಿ ಬರಿಗೊಡ್ಡ ಬಾಲ್ಯಾರು
ಉಸ್ಸೆಂದು ಬಾವಿ ಇಳಿದಾರ.

ಯಳ್ಯಾರ್ತಿ ಬಣಜೀಗ ಎಳ್ಳು ಕೇಳುತ ಬಂದ
ಎಳ್ಳುಂಟೇ ನಾರ್‍ಯೊಂದ್ ಹಣವಿಗೆ - ತಂದನು
ತಾನಂದನೋ ತಂದಾನಾನೋ - ತನುತಾ.

ಗುಡ್ಡದಾ ಮಲ್ಲಯ್ಯ ಗುಡಿಗೀಲಿ ಮಿಂಚೀದ
ಆಲೂರಿನಾ ಸುತ್ತ ಮಳೆ ಬಿದ್ದು ಗುಳೇವು ಗಾದಿಲಿಂಗನ
ತೇರಿನ ಮೇಲೆ ಹನಿಬಿದ್ದು|

ಸ್ತುತಿ ಪದ್ಯ : ಬಾಗೇವಾಡಿಯ ಬಸವ, ಬಹಳ ದೊಡ್ಡವನೆಂದು
ಬೆಳ್ಳೀಯ ಮಗಡ ಮಾಡ್ಸೇನೊ| ಬಸವಣ್ಣ
ಹೊನ್ನ ಹಣೆಕಟ್ಟ ಬಿಗಿಸೇನೋ||

ತ್ರಿಪದಿ, ಸ್ತುತಿಪದ್ಯ, ಶಿಶುಪ್ರಾಸ ಹೀಗೆ ಅನೇಕ ರೀತಿಯ ಹಾಡುಗಳಲ್ಲಿ ಈ ಸ್ಥಳನಾಮಗಳು ಒಂದಲ್ಲ ಒಂದು ರೀತಿಯಲ್ಲಿ ಎಡೆಪಡೆದಿರುತ್ತವೆ. ಇಲ್ಲಿ ಮುಖ್ಯವಾದ ಗ್ರಾಮಗಳ ಉಲ್ಲೇಖಮಾತ್ರ ಇರುವುದು ವಿಶೇಷವಷ್ಟೇ. ಆದರೆ ಪ್ರಾದೇಶಿಕ ಮಟ್ಟದಲ್ಲಿ ಒಡಪು, ಗಾದೆಗಳಂತೆ ವ್ಯತ್ಯಾಸವನ್ನು ತ್ರಿಪದಿ, ಹೊಂದುವುದಿಲ್ಲ.

ಮೊಹರಂ ಪದಗಳಲ್ಲಿಯೂ ಸ್ಥಳನಾಮಗಳನ್ನೂ ಗುರುತಿಸಬಹುದು. ಅಂಥಾ ಒಂದು ಮಾದರಿ ಇಲ್ಲಿದೆ :

"ಮೋಪಿಡಿ ಮುಷ್ಠೂರು ಮೊದಲಾಮಿದಾಲ
ದಿನ ಮಿಂದ ಕೊಟ್ಟಾಲ ದಿಗುವ ಪಾಪಿಲಿ
ರಾಂಪುರಪು ರಾಸೆರ್ಲ ರಾಮಸಾಗ್ರಾಮು
ಪೇರ್‍ನೆನ ರಾಕೆಟ್ಲ ಪೀರ್ಲದೇವುಳ್ಳು
ಪೆನ್ನೇಟಿ ರೇವುಲೋ ಪೆದ್ದ ವುರುಸಮ್ಮ
- - - - - - - - - - - -
- - - - - - - - - - - -
ಮೊಕ್ಕಿ ತೆಚ್ಚುಕುಂಟೆ ಮುತ್ತಯಿದ ತನಮೂ"[೪೫]

ಮೇಲಿನ ತೆಲುಗು ಮೊಹರಂ ಹಾಡಿನಲ್ಲಿ ಕೆಲವು ಸ್ಥಳನಾಮಗಳಿವೆ. ಇವುಗಳ ವಿಶೇಷವೆಂದರೆ ಭೌಗೋಳಿಕ ವರ್ಣನೆಯನ್ನೂ ಹೊಂದಿರುವುದು. ದಿಗುವ ಪಾಪಿಲಿ ಎಂಬಲ್ಲಿ ತಗ್ಗಿನಲ್ಲಿರುವ ಪ್ಯಾಪಿಲಿ, ದಿನ್ನೆಮೇಲಿರುವ ಕೊಟ್ಟಾಲ ಹೀಗೆ ಅದರ ವಿವರಣೆ ಕೊಡುತ್ತದೆ. ಹೀಗೆ ಸ್ಥಳನಾಮಗಳನ್ನು ಹಾಡುಗಳಲ್ಲಿ ಅರಸುತ್ತಾ ಹೋದಂತೆ ನಮಗೆ ಲಾವಣಿ - ಕೋಲಾಟದ ಪದ - ತ್ರಿಪದಿ - ಮೊಹರಂ ಪದ - ಕೆಲವು ದೈವವನ್ನು ಕುರಿತಾದ ಹಾಡುಗಳು. ಹೀಗೆ ರಾಶಿರಾಶಿಯಾಗಿರುವ ಹಾಡಿನಲ್ಲಿ ಸ್ಥಳನಾಮಗಳನ್ನು ಕಂಡುಕೊಳ್ಳಬಹುದಾಗಿದೆ.

### ೫.೯. ಬಯಲಾಟದ ಮುದ್ರಿಕೆಗಳಲ್ಲಿ ಸ್ಥಳನಾಮ ಉಲ್ಲೇಖಗಳು

ಕರ್ನಾಟಕದ ಜನಪದ ರಂಗಕಲೆಯ ಹಲವು ಪ್ರಕಾರಗಳಲ್ಲಿ ದೊಡ್ಡಾಟ ಮತ್ತು ಸಣ್ಣಾಟ, ಯಕ್ಷಗಾನ ಇವು ಪ್ರಮುಖವಾದವುಗಳು. ಬಯಲಾಟ ಅಥವಾ ಮೂಡಲಪಾಯ ಎಂಬ ಜಾನಪದ ರಂಗಪ್ರಕಾರ ಬಳ್ಳಾರಿ ಮತ್ತು ಕರ್ನೂಲು, ಅನಂತಪುರ ಜಿಲ್ಲೆಯ ಕೆಲವು ಪ್ರದೇಶಗಳನ್ನೊಳಗೊಂಡಂತೆ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದೆ.

ಬಯಲಾಟ ಒಂದು ಪ್ರದರ್ಶನ ಕಲೆ. ಜಾನಪದರು ತಮ್ಮ ಮನೋಶ್ರಮವನ್ನು ಬಯಲುಮಾಡಿಕೊಳ್ಳಲು ಇಂಥಾ ಕಲೆಗಳನ್ನು ಸೃಷ್ಟಿಸಿಕೊಂಡರು. ಬಯಲಾಟವು ಮೊದ - ಮೊದಲು ವಾಚಿಕ (ಮೌಖಿಕ) ಸಂಪ್ರದಾಯದ ಹಾಡುಗಾರಿಕೆಯ ಮೂಲಕ ಪ್ರಯೋಗವಾಗುತ್ತಿತ್ತು. ಈ ಕಾರಣದಿಂದ ಇದನ್ನು ಜಾನಪದ ರಂಗಭೂಮಿ ಎಂದು ಕರೆಯಲಾಗುತ್ತದೆ. ನಂತರದ ಅವಧಿಯಲ್ಲಿ ಕೆಲವು ಅಕ್ಷರಸ್ಥ ಜನತೆ ತಮ್ಮ ಮೂಲ ಜನಪದ ಸೊಗಡನ್ನೇ ಮೈಗೂಡಿಸಿಕೊಂಡು ರಾಮಾಯಣ - ಭಾರತಾದಿ ಕಥೆಗಳನ್ನು ತಮ್ಮ ಭಾಷಾ ಕಲ್ಪನೆಯ ಮೂಲಕ ಹೆಣೆದು ಅಕ್ಷರಗಳಲ್ಲಿ ಹೊಂದಿಸಿ ಇಟ್ಟರು. ಇವುಗಳನ್ನು ಬರೆಯುವಾಗ ಲಿಪಿಕಾರರು ತಮ್ಮ ಪ್ರದೇಶ - ಊರುಗಳ ವಿಳಾಸ ಬರೆಯುವುದು ಮರೆಯುತ್ತಿರಲಿಲ್ಲ. ಇದರಿಂದಾಗಿ ಅಲ್ಲಿಯ ಬಯಲಾಟದ ಕಥೆಗಳಲ್ಲಿ ಪ್ರಾದೇಶಿಕ ಸಂಸ್ಕೃತಿ ಉಳಿದು ಬಂದಿದೆ. ಇಂಥ ಮುದ್ರಿಕೆಗಳಲ್ಲಿ ನಮೂದಾದ ಸ್ಥಳದ ಹೆಸರುಗಳ ಅಧ್ಯಯನ ತುಂಬಾ ವಿಶೇಷವಾದುದು ಮತ್ತು ಕುತೂಹಲಕಾರಿಯಾದುದು.

ಬಯಲಾಟದ ಮುದ್ರಿಕೆಗಳಲ್ಲಿ ಸ್ಥಳನಾಮಗಳನ್ನು ಹೆಕ್ಕಿ ತೆಗೆಯುವ ಮೂಲಕವೂ ಪ್ರಾದೇಶಿಕ ಸಂಸ್ಕೃತಿಯ ಕೆಲವು ಮೌಲ್ಯಗಳನ್ನು ತಿಳಿಯಬಹುದು. ಜೊತೆಗೆ ಸ್ಥಳನಾಮಗಳ ಮೂಲರೂಪ, ಬದಲಾದ ರೂಪ, ಜಾನಪದರಲ್ಲಾದ ವ್ಯತ್ಯಾಸಗಳನ್ನು ಆ ಮೂಲಕ ಸಂಸ್ಕೃತೀಕರಣವೂ ಕೂಡ ಆದ ಸ್ಥಳಗಳ ಚರಿತ್ರೆಯನ್ನು ತಿಳಿಯಬಹುದು. ಇಲ್ಲಿಯವರೆಗೆ ಕನ್ನಡದ ಯಾವುದೇ ಸ್ಥಳನಾಮಾಧ್ಯಯನ ಸಂದರ್ಭಗಳಲ್ಲಿ ಈ ವಿಷಯ ಕುರಿತಾದ ಚರ್ಚೆಗಳನ್ನು ಗಮನಿಸಿರುವ ಬಗ್ಗೆ ಮಾಹಿತಿಯಿಲ್ಲ. ಅಂಥಾ ಒಂದು ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಆರಾಧ್ಯ ದೈವದ ಹೆಸರಿನಲ್ಲಿ ಕೃತಿಗಳನ್ನು ಅಂಕಿತಮಾಡುವ ಪರಂಪರೆ ಹಿಂದಿನಿಂದಲೂ ಇದೆ. ಇದು ಭಕ್ತಿಪಂಥದ ಬೆಳೆವಣಿಗೆಯ ಕಾಲದಿಂದೀಚೆಗೆ ಹೆಚ್ಚಿದೆ. ನಿದರ್ಶನಕ್ಕೆ ಕುಮಾರವ್ಯಾಸ ಕವಿಯು 'ವೀರನಾರಾಯಣನೇ

ಕವಿ, ಲಿಪಿಕಾರ ಕುವರವ್ಯಾಸ' ಎಂದು ಹೇಳಿದ್ದಾನೆ. ತನ್ನ ಇಷ್ಟ ದೈವಕ್ಕೆ ಕೃತಿಯನ್ನು ಸಮರ್ಪಿಸಿದ ರೂಢಿ ಪ್ರಾಯಶಃ ಭಾರತೀಯ ಸಾಹಿತ್ಯಕ್ಕೆ ವಿಶಿಷ್ಟವಾಗಿದೆ. ಕನ್ನಡ ಸಾಹಿತ್ಯದಲ್ಲಿ ಈ ಪರಂಪರೆ ವಚನಕಾರರಿಂದ ಮೊದಲಾಯಿತೆನ್ನ ಬಹುದು. "ದಾಸಪಂಥದ ಹರಿದಾಸರನ್ನು ಹೆಚ್ಚಾಗಿ ಅನುಸರಿಸಿ ಬಯಲಾಟ ಕವಿಗಳು ತಮ್ಮ ಕೃತಿಗಳಿಗೆ ಆರಾಧ್ಯ ದೈವದ ಮುದ್ರಿಕೆಗಳನ್ನು ತೊಡಿಸುತ್ತಾ ಬಂದಿದ್ದಾರೆ."[೬೬] ಈ ಮುದ್ರಿಕೆಗಳು ಕವಿಯು ಬದುಕಿದ ಸ್ಥಳ ಮತ್ತು ಆತನ ದೈವದ ಹೆಸರನ್ನು ಒಳಗೊಂಡಿರುತ್ತವೆ.

ಬಳ್ಳಾರಿ - ಅನಂತಪುರ - ಕರ್ನೂಲು ಜಿಲ್ಲೆಯ ಗಡಿಪ್ರದೇಶದ ಬಯಲಾಟ ಕವಿಗಳೂ ಸಹ ಇದೇ ಪಾರಂಪರಿಕ ಧೋರಣೆಯುಳ್ಳವರು. ಇಲ್ಲಿ ಕವಿಗಳ ಜೀವನ ವಿವರಗಳು ಏನೂ ಗೊತ್ತಾಗದಿದ್ದರೂ ಅವರ ಹೆಸರುಗಳು ತಿಳಿಯುತ್ತವೆ. ಮುದ್ರಿಕೆಗಳಲ್ಲಿ ಒಂದಷ್ಟು ಚಾರಿತ್ರಿಕ ಅಂಶಗಳೂ ದೊರೆಯುತ್ತವೆ. ಮುದ್ರಿಕೆಗಳ ರಚನೆಯಲ್ಲಿ ಪೂರ್ವ ಭಾಗದಲ್ಲಿ ಸ್ಥಳನಾಮ ಘಟಕವನ್ನೂ ಹಾಗೂ ಪರದಲ್ಲಿ ಸ್ಥಳದೈವ ಘಟಕವನ್ನೂ ಸಂಯೋಜಿತಗೊಳಿಸು ತ್ತಾರೆ. ಇಷ್ಟ ದೈವದ ಹೆಸರನ್ನು ಸಂಸ್ಕೃತದಲ್ಲೇ ಹೇಳುವ ಭಾವನಿಷ್ಠತೆಯಿಂದಾಗಿ ಬಯಲಾಟ ಕವಿಗಳೇ ಸ್ಥಳನಾಮ ಘಟಕವನ್ನು ಸಂಸ್ಕೃತಾನುಕರಣಗೊಳಿಸಿದ್ದಾರೆ. ಅಥವಾ ಪಂಡಿತ ಪ್ರಿಯ ಲಿಪಿಕಾರರು ಹೀಗೆ ಮಾಡಿರಲು ಸಾಧ್ಯವಿದೆ. ಜನಸಾಮಾನ್ಯರ ಮಧ್ಯೆಇದ್ದ ಈ ಬಯಲಾಟ ಕವಿಗಳು ಈ ಊರುಗಳನ್ನು ಸಂಸ್ಕೃತ ಭೂಯಿಷ್ಠಗೊಳಿಸುವುದರ ಅಗತ್ಯ ಬಹುಶಃ ಅದು ಪಂಡಿತರ ಭಾಷೆ, ಅದನ್ನು ಬಳಸಿದರೆ ಹೆಗ್ಗಳಿಕೆ ಉಂಟಾಗುತ್ತದೆ ಎಂಬ ಕಾರಣವಿರಬಹುದು.

ಇವರು ತಮ್ಮ ಹೆಸರಿನೊಡನೆ ತಮ್ಮ ಗ್ರಾಮವನ್ನು ಹೆಸರಿಸಿ ಸ್ತುತಿ ಪದ್ಯದ ಮೂರನೆಯ ನುಡಿಯನ್ನು ಕೂಡಿಸಿ ಹಾಡುವರು. ಅಂದರೆ ಮೊದಲು ಗಣಸ್ತುತಿಯಾಗುವುದು ಅದರಲ್ಲಿ ಮೂರು ನುಡಿಗಳಿರುತ್ತವೆ. ಮೂರನೆಯ ನುಡಿಯಲ್ಲಿ ಆಯಾ ಗ್ರಾಮಗಳು ಉಲ್ಲೇಖಗೊಂಡಿರುವುದು ತಿಳಿಯುತ್ತದೆ. ಬಹುತೇಕ ಬಯಲಾಟ ಸ್ತುತಿ ಪದ್ಯಗಳಲ್ಲಿ ಇರುವ ಮಾದರಿ ಹೀಗಿದೆ.

"ಪೊಡವಿಯೊಳ್ ಕುಡುತಿನಿಯು
ಒಡೆಯಾ ಭೀಮೇಶನ್ನ - - -"[೬೭]

"ಪೊಡವಿಯೊಳ್ ಗರುಡಪುರದೊಡೆಯನೆ ಚರಣದಾಣೆ"[೬೮]

ಎಂಬಲ್ಲಿ ಸ್ಥಳನಾಮ ಉಲ್ಲೇಖಗಳಿರುವುದನ್ನು ಗುರುತಿಸಬಹುದು. ಕುಡುತಿನಿಯು ಕೆಲವು ಸ್ತುತಿ ಪದ್ಯಗಳಲ್ಲಿ 'ಕುಡುತಣಿ' ಎಂದು ಉಲ್ಲೇಖವಾಗಿದೆ. ಶಾಸನೋಕ್ತ 'ಕೊಟ್ಟತೊಣೆ' ಎಂಬ ರೂಪಕ್ಕೆ ಇದು ಹತ್ತಿರವಾದುದು. ಇಂತಹ ಉಲ್ಲೇಖಗಳಿಂದ ಗ್ರಾಮನಾಮಗಳ ಮೂಲರೂಪವನ್ನು ಶೋಧಿಸಬಹುದು. ಅಲ್ಲದೆ ಭಾಷಿಕವಾಗಿ ಕಾಲಾನುಕ್ರಮದಲ್ಲಿ ಉಂಟಾಗಿರಬಹುದಾದ ಧ್ವನಿವ್ಯತ್ಯಾಸ ರೂಪವ್ಯತ್ಯಾಸಗಳನ್ನು ಅಕ್ಷರಾತ್ಮಕ ಬೇಧವನ್ನು ತಿಳಿಯಲು ಸಾಧ್ಯ. ಅಂತೆಯೇ 'ಪೊಡವಿ' ಎಂಬಲ್ಲಿ 'ಪ' ಕಾರ (ಅಡವಿಗೆ) ಬಳಕೆಯಲ್ಲಿದೆ. ಇದು ಕನ್ನಡ ಭಾಷೆಯ ಅವಸ್ಥಾಬೇಧಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಹಳಗನ್ನಡ ಕಾಲದ ಈ 'ಪ' ಕಾರ ಬಳಕೆ ಕ್ರಿಯೆಯು ಆಧುನಿಕರಲ್ಲೂ, ಅದರಲ್ಲಿ ಬಯಲಾಟ ಕೃತಿಗಳಲ್ಲಿ ಬಳಕೆಯಲ್ಲಿರುವುದು ವಿಶೇಷ.

ಕೆಲವು ಬಯಲಾಟ ಕೃತಿಗಳಲ್ಲಿ ಮುದ್ರಿಕೆಯೊಡನೆ ಸೇರಿದ ಊರ ಹೆಸರುಗಳನ್ನು (ಈಗಿನ ಸ್ಥಳನಾಮಗಳೊಡನೆ) ಕೆಳಗೆ ಪಟ್ಟಿ ಮಾಡಲಾಗಿದೆ. ಬಯಲಾಟ ಕವಿಗಳ ಸಂಸ್ಕೃತ ನಿಷ್ಠತೆಯನ್ನು ಇದರಿಂದ ಗುರುತಿಸಬಹುದು.

| ಮೂಲ ಹೆಸರುಗಳು | ಮುದ್ರಿಕೆಗಳಲ್ಲಿ ಸಂಸ್ಕೃತಾನುಕರಣ ಗೊಂಡ ಹೆಸರುಗಳು |
|---|---|
| ಎಮ್ಮಿಗನೂರು | ಮಹಿಷಪುರ |
| ಎತ್ತಿನಬೂದಿಹಾಳು | ಗೋರಕ್ಷಪುರ |
| ಕಂಪಲಿ | ಕಂಪಲಿಪುರ |
| ಗರುಡಚೇಡು (ಕಣೇಕಲ್ಲು - ತಾಲ್ಲೂಕು) | ಖಗಪುರ |
| ತಾಳೂರು (ತಾಳಿಊರು) ? | ಮಾಂಗಲ್ಯಪುರ |
| ಬಳಗಾನೂರು (ರಾಯಚೂರು ಜಿಲ್ಲೆ) | ಬಂಧುಶತಪುರ |
| ಬೆಳಗಲ್ಲು | ಸಿತಸಿಲ, ಶ್ವೇತ ಶಿಲ |
| ಯಳ್ಳಾರ್ತಿ (ಆಲೂರು - ತಾಲ್ಲೂಕು) | ತಿಲಪುರಿ |
| ರಾರಾವಿ | ರಾರಾವಿಪುರ |
| ರಾಮಸಾಗರ | ರಾಮಾಬ್ಧಿಪುರ |
| ಸಿಂದವಾಳ | ಸಿಂಧೂಪುರ |
| ಹಾವಳಿಗೆ (ಗುತ್ತಿ - ತಾಲ್ಲೂಕು) | ಹಾವಳಿಗೆ |

ಮೂಲ ಹೆಸರುಗಳು ಸಂಸ್ಕೃತಾನುಕರಣ ಹೊಂದುವಾಗ ಶುದ್ಧರೂಪ ಉಳಿಯುವುದಿಲ್ಲ. ಅಥವಾ ಒಂದೊಮ್ಮೆ ಶುದ್ಧರೂಪದ ಜೊತೆಯಲ್ಲಿ ಪುರ, ಪಟ್ಟಣ ಈ ರೀತಿಯ ವಾರ್ಗಿಕಗಳು ಬಂದು ಸೇರಿರುವುದು ತಿಳಿಯುತ್ತದೆ. ಮುಖ್ಯವಾಗಿ ಗಮನಿಸಬೇಕಾದುದೆಂದರೆ ಮೂಲಹೆಸರಿನಲ್ಲಿಯೇ ಸಂಸ್ಕೃತ ಪದಗಳು ಇರುವುದನ್ನು ದೇಸೀ ಪದದಿಂದ ಕರೆಯಲ್ಪಟ್ಟ ಸ್ಥಳನಾಮಗಳು ಸಂಸ್ಕೃತಾನುಕರಣಗೊಂಡಾಗ ಕೆಲವೊಮ್ಮೆ ಅರ್ಥಕೆಡುತ್ತದೆ. ಅಥವಾ ಮೂಲ ಹೆಸರಿಗೆ ಯಾವುದೇ ಸಂಬಂಧವಿರುವುದಿಲ್ಲ. ಇಲ್ಲಿ ಬಂದಿರುವ' 'ಎಮ್ಮಿಗನೂರು' ಎಂಬುದನ್ನು ಬಯಲಾಟದ ಮುದ್ರಿಕೆಯಲ್ಲಿ 'ಮಹಿಷಪುರ' ಎಂಬುದಾಗಿ ಸಂಸ್ಕೃತೀಕರಿಸಲಾಗಿದೆ. ಆದರೆ 'ಯಮ್ಮಿಗನೂರು' ಎಂಬುದು ವ್ಯಕ್ತಿವಾಚಿ ಗ್ರಾಮನಾಮ. 'ಇಗ' ಪ್ರತ್ಯಯ ಇಲ್ಲಿ ಸೇರಿದೆ. "ಕರ್ನಾಟಕದಲ್ಲಿ ಎಮ್ಮೆಯಿಂದ ಬಂದ ಎಮ್ಮಿಗನೂರು, ಎಮ್ಮೆಹಟ್ಟಿ, ಎಮ್ಮೆದೊಡ್ಡಿ, ಕೋಣನೂರು, ಎಂಬ ಊರ ಹೆಸರುಗಳು ಹಲವಾರಿವೆ. ನೀಲಗಿರಿಯ ತೊದವರು ಪೂಜಿಸುವ ಪ್ರಾಣಿ ಎಮ್ಮೆ."[೪] ಅದರಂತೆ 'ಎಮ್ಮೆತಮ್ಮನಗುಂಡು' ಎಂಬ ಸ್ಥಳನಾಮ ಪ್ರಸಿದ್ಧವಾಗಿದೆ. ಎಮ್ಮೆತಮ್ಮಣ್ಣ ಒಬ್ಬ ಜಾನಪದ ಸಾಂಸ್ಕೃತಿಕ ವೀರ, ಇವನು ಅನೇಕ ಕಡೆ ಉಲ್ಲೇಖಗೊಂಡಿದ್ದಾನೆ. ದೇಜಗೌ ಅಭಿಪ್ರಾಯ ಪಡುವಂತೆ ಪ್ರಾಣಿಮೂಲ ಇರಬಹುದಾದರೂ, ವ್ಯಕ್ತಿವಾಚಿಯಾಗಿ ಅದನ್ನು ಗಮನಿಸಿದರೆ ಹೆಚ್ಚು ಸೂಕ್ತವೆಂದು ತೋರುತ್ತದೆ. ಇದೇ ರೀತಿಯಲ್ಲಿ 'ತಾಳೂರು' ಎಂಬುದು 'ಮಾಂಗಲ್ಯಪುರ' ಎಂದು ಆಗಿರುವುದು ಅಸ್ಪಷ್ಟವಿದೆ. ತಾಳೂರಿನ ಸ್ಥಳೀಯರು "ಹೆಚ್ಚು ತಾಳ್ಮೆಯಿಂದ, ಭಕ್ತಿ, ಶ್ರದ್ಧೆಯಿಂದ ಈ ಗ್ರಾಮದ ಸಮಸ್ತ

ಜನರು ಇರುತ್ತಾರೆ. ಆದ್ದರಿಂದ 'ತಾಳೂರು' ಎಂದಾಗಿದೆ."[೬೦] ಎನ್ನುತ್ತಾರೆ. ಈ ಗ್ರಾಮದ ಅಕ್ಕಪಕ್ಕದಲ್ಲಿ ತಾಳೆಯ ಮರಗಳು ಕಂಡು ಬರುತ್ತವೆ. ಈ ಮರಗಳು ಪ್ರಾಚೀನ ಕಾಲದಿಂದ ಇವೆಯೋ ಇಲ್ಲವೋ ತಿಳಿಯದು. ಆದರೆ ಈ ಕಾರಣದಿಂದ ಪ್ರಾಕೃತಿಕ ಸೂಚಿಯಾಗಿ ಬಂದಿದೆಯೆಂದು ಊಹಿಸಬಹುದು.

ಏನೇ ಆದರೂ ಗ್ರಾಮನಾಮ ನಿರ್ದೇಶನದಲ್ಲಿ ಆಯಾ ಗ್ರಾಮಮಟ್ಟದಲ್ಲಿ ಅಕ್ಷರಸ್ಥ ಮುಂತಾದ ಪಂಡಿತರಿಂದ ಆಗುವ ಈ ಬಗೆಯ ಸಂಸ್ಕೃತಾನುಕರಣದ ಮೋಹಕ್ಕೆ ನಮ್ಮ ಬಯಲಾಟ ಕವಿಗಳೂ ಒಳಗಾಗಿದ್ದಾರೆ. ಈ ಸಂದರ್ಭದಲ್ಲಿ ಸ್ಥಳನಾಮ ಶೋಧಕನಿಗೆ ಎಚ್ಚರವಿರಲೇ ಬೇಕಾಗುತ್ತದೆ. ಸ್ಥಳನಾಮಗಳನ್ನು ತನ್ನ ಮಡಿಲಲ್ಲಿ ಅಡಗಿಸಿಟ್ಟುಕೊಂಡಂತಹ ಬಯಲಾಟ ಮುದ್ರಿಕೆಗಳ ಈ ಕ್ಷೇತ್ರಕ್ಕೆ ಮುಖ್ಯ ಆಕರಗಳಾಗಿ ನಿಲ್ಲುತ್ತವೆ. ಕಾಲಾಂತರದಲ್ಲಿ ಲಿಪಿಕಾರರ ಬದಲಾವಣೆಯಿಂದ ನಾಮವು ವಿವಿಧ ರೂಪ - ಸ್ವರೂಪವನ್ನು ಪಡೆಯುವ ಸಾಧ್ಯತೆಯಿದೆ. ಹೆಚ್ಚಾಗಿ ಲಿಪಿಕಾರರು ಬರೆಯುವಾಗ ಬದಲಾವಣೆ ಸಂಭವಿಸಬಹುದು. ಮೂಲ ಕವಿಯ ಊರು ಮತ್ತು ಲಿಪಿಕಾರನ ಊರು ಎರಡನ್ನು ಮುದ್ರಿಕೆಗಳಲ್ಲಿ ನಮೂದಿಸಿರುವ ಉದಾಹರಣೆಗಳಿವೆ.

"ಕುಡುತಣಿ ಭೀಮೇಶಕೃತ ಪಾಂಡು ವಿಜಯವನ್ನು ತಪ್ಪಿಲ್ಲದೇ ಎತ್ತಿ
ಬರೆದವರು ಯಳ್ಳಾರ್ತಿಯ ಬಯಲಾಟದ ಬ್ರಹ್ಮನೆನಿಸಿದ ವೀರಭದ್ರೇಶ್ವರ"[೬೧]

ಇಂಥಲ್ಲಿ ಎರಡೆರಡೂ ಸ್ಥಳನಾಮಗಳು ಉಕ್ತವಾಗಿವೆ. ಈ ಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ.

ಗಡಿನಾಡಿನಲ್ಲಿ ಬರುವ ಬಳ್ಳಾರಿ - ಸಿರುಗುಪ್ಪ ಭಾಗದ ಕನ್ನಡ ಭಾಷೆಗೆ ಕೊಂಚ ತೆಲುಗು ಭಾಷೆಯ ಪ್ರಭಾವ ಇರುವುದರಿಂದ ಭಾಷೆಯಲ್ಲಿ ತೆಲುಗು ಮಿಶ್ರಿತಗೊಂಡಿದೆ. ಬಯಲಾಟಗಳು ಇಲ್ಲಿ ಪ್ರಯೋಗ, ಪ್ರದರ್ಶನವಾಗುವ ಸಂದರ್ಭದಲ್ಲಿ ಆಯಾ ಭಾಗದ ಪ್ರಾದೇಶಿಕ ಭಾಷಾ ಪ್ರಭಾವವನ್ನು ಪಡೆದುಕೊಳ್ಳುತ್ತವೆ. ಈ ಸಂದರ್ಭದಲ್ಲಿ ಬಯಲಾಟ ಕವಿಗಳು ಆಂಧ್ರದವರಾಗಿದ್ದರೆ ಸಹಜವಾಗಿ ತಮ್ಮ ಊರಿನ ಮೋಹದಿಂದಾಗಿ, ಊರಿನ ಹೆಸರಿನೊಂದಿಗೆ ತನ್ನ ಹೆಸರು, ದೈವದ ಹೆಸರು ಮುದ್ರಿಕೆಯೊಡನೆ ಕೊಡುತ್ತಾರೆ. ಇಂಥಲ್ಲಿ ಅವರ ಮಾತೃಭಾಷಾ ಉಚ್ಚಾರಣೆಯ ಪ್ರೇರಣೆಯಿಂದ ಸ್ಥಳನಾಮಗಳಲ್ಲಿ ರೂಪ ಬದಲಾವಣೆಯಾದ ನಿದರ್ಶನಗಳಿವೆ.

ಆಂಧ್ರದ ಗಡಿಪ್ರದೇಶಕ್ಕೆ ಹೊಂದಿಕೊಂಡಿರುವ ರಾಯದುರ್ಗ ತಾಲ್ಲೂಕಿನ *ಹನಕನಹಾಳು*, ಬಳ್ಳಾರಿ ತಾಲ್ಲೂಕಿನ '*ಎಮ್ಮಿಗನೂರು*', ಆಲೂರು ತಾಲ್ಲೂಕಿನ *ಹೊಳಗುಂದ*, ಸಿರುಗುಪ್ಪ ತಾಲ್ಲೂಕಿನ *ಬೆಳಗಲ್ಲು*, ಕಲ್ಯಾಣದುರ್ಗ ತಾಲ್ಲೂಕಿನ *ಗರುಡಚೇಡು* ಮುಂತಾದ ಊರುಗಳು ಬಯಲಾಟ ಹಸ್ತಪ್ರತಿಗಳಿಗೆ ಪ್ರಸಿದ್ಧವಾಗಿವೆ. ಜೊತೆಗೆ ಈ ಪ್ರದೇಶಗಳು ದ್ವಿಭಾಷಾ ವಲಯದಲ್ಲಿರುವುದರಿಂದ, ಹಸ್ತಪ್ರತಿಗಳೂ ದ್ವಿಭಾಷಿಕ ಸತ್ವವನ್ನು ಮೈಗೂಡಿಸಿಕೊಂಡಿರುವುದು ತಿಳಿಯುತ್ತದೆ. ಮುಂದೆ ಒಬ್ಬ ದ್ವಿಭಾಷಾ ಕವಿ ಲಿಪಿಮಾಡುವಾಗ ತೆಲುಗು ಅಥವಾ ಕನ್ನಡ ಭಾಷಾ ಪ್ರಭಾವದಿಂದ ಸ್ಥಳನಾಮ ಮುದ್ರಿಕೆ ಹಾಕುತ್ತಾನೆ. ಈ ಸಂದರ್ಭಗಳಲ್ಲಿ ಸ್ಥಳನಾಮಗಳ ಮೇಲಾದಂತಹ ಭಾಷಿಕ ಪ್ರಭಾವವನ್ನು ಕೆಳಗಿನಂತೆ ಗುರುತಿಸಬಹುದು.

| ಸ್ಥಳನಾಮ (ಕನ್ನಡ) | ತೆಲುಗುಪ್ರಭಾವ | ಸ್ಥಳನಾಮ (ತೆಲುಗು) | ಕನ್ನಡಪ್ರಭಾವ |
|---|---|---|---|
| ಬಳ್ಳಾರಿ | ಬಳ್ಳಾರಿ | ಉರವಕೊಂಡ (ಉರುಕೊಂಡ) | ಉರುಕುಂದ |
| ಬೆಳಗಲ್ಲು | ಬೆಳಕಲ್ಲು | ಕುರುಕುಂದಾ | ಕುರುಕುಂದ |
| ಮಾನವಿ (ಮಾನ್ವಿ) | ಮಾನುವ | ಗರುಡಚೆರುವು | ಗರುಡಚೇಡು |
| ಹನಕನಹಾಳು | ಹನಕನಪಾಡು | ಹೊಳಗುಂದಾ | ಹೊಳಗುಂದ |

ಇದು ದ್ವಿಭಾಷಾ ಕವಿಯಲ್ಲಾಗುವ ಬದಲಾವಣೆ ಪ್ರಕ್ರಿಯೆ ಅಷ್ಟೆ. ಸಂಪೂರ್ಣ ಭಾಷಿಕ ಬದಲಾವಣೆಯಾಗಿಲ್ಲ. ಹೀಗೆ ಬಯಲಾಟ ಕವಿಗಳ ಮುದ್ರಿಕೆಯಲ್ಲಿ ಸ್ಥಳನಾಮಗಳನ್ನು ಅಧ್ಯಯನ ಮಾಡುವುದು ಭಾಷಿಕ, ಸಾಂಸ್ಕೃತಿಕ, ಸಾಮಾಜಿಕ ದೃಷ್ಟಿಯಿಂದ ಮುಖ್ಯವಾದುದು.

ಶಾಸ್ತ್ರೀಯ ವಿಷಯಗಳನ್ನು ಜಾನಪದದೊಂದಿಗೆ ನೋಡುವಾಗ ಎಷ್ಟೋ ಸಾರಿ ನಮಗೆ ಅಪಾರ ಸತ್ಯದ ಹೊಳಹುಗಳು ದೊರೆಯುತ್ತವೆ. ಜಾನಪದ ಅಥವಾ ಮೌಖಿಕ ಸಂಪತ್ತು ಚಾರಿತ್ರಿಕ ಸಂಗತಿಗಳಿಂದ ದೂರ ಉಳಿಯುತ್ತವೆ. ಎಂಬ ಅಭಿಪ್ರಾಯ ಒಂದಿದೆ. ಆದರೆ ಅದಕ್ಕಿಂತ ಮಿಗಿಲಾಗಿ ಜಾನಪದೀಯ ಕುರುಹುಗಳು, ಆಧಾರಗಳು, ಅವರು ಕಟ್ಟಿದ ಕಥಾನಕ ತನ್ನದೇ ಆದಂತಹ ಭೂಮಿಕೆಯನ್ನು ನಿರ್ಮಿಸಿಕೊಂಡಿದೆಯೆಂಬುದು ಅಷ್ಟೇ ವಾಸ್ತವ. ಸ್ಥಳೀಯ ಚರಿತ್ರೆಯ ಕೊರತೆ ನಮ್ಮಲ್ಲಿದೆ. ಇದನ್ನು ಸಮರ್ಥವಾಗಿ ಕಟ್ಟಿಕೊಡಬಲ್ಲಂಥದ್ದು ಮೌಖಿಕ ಸಂಪ್ರದಾಯ. ಮೌಖಿಕ ಚರಿತ್ರೆಯ ನಿರ್ಮಾಣದಲ್ಲಿ ಐತಿಹ್ಯ - ಪುರಾಣ - ಕಥೆ - ಗಾದೆ - ಒಗಟು - ಒಡಪು - ಹಾಡು ಮುಂತಾದ ಅಂಶಗಳು ತಮ್ಮ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುತ್ತವೆ. ಇವುಗಳನ್ನು ಗಮನಿಸದೇ ಇದ್ದಲ್ಲಿ ಸಂಶೋಧನೆಯು ಕೆಲವು ಕೊರತೆಯನ್ನು ಅನುಭವಿಸುತ್ತದೆಂದರ್ಥ. ಕಾರಣ ಈ ಎಲ್ಲ ಭೂಮಿಕೆಗಳೊಡನೆ ಸ್ಥಳನಾಮಗಳ (ಭಾಷಾಶಾಸ್ತ್ರದಂತಹ) ಶಾಸ್ತ್ರೀಯ ವಿಷಯಗಳ ವ್ಯಾಖ್ಯಾನ ಸಶಕ್ತವಾಗುತ್ತದೆ. ಇದಕ್ಕೆ ಮಿತಿಯೂ ಇದೆ. ಐತಿಹ್ಯ - ಪುರಾಣಗಳಂತಹ ಪುರಾವೆಗಳೊಂದಿಗೆ ಅಧ್ಯಯನದಲ್ಲಿ ಸತ್ಯ ಹುಡುಕುವಾಗ ಅಪಾಯಗಳನ್ನು ಎಚ್ಚರದಿಂದ ನೋಡಬೇಕು. ಜಾನಪದರ ಕಲ್ಪನಾ ಲಹರಿಯಲ್ಲಿ ಪೋಷಣೆಗೊಂಡ ಈ ಪುರಾವೆಗಳಲ್ಲಿ ಕೆಲವೊಮ್ಮೆ ಸತ್ಯಕ್ಕಿಂತ ದೂರವಾದ ಅನೇಕ ಸಂಗತಿಗಳು ಇದ್ದಿರಬಹುದು. ಇದು ಮೌಖಿಕ ಪರಂಪರೆಯ ಒಂದು ಲಕ್ಷಣವೂ ಹೌದು. ಈ ಮೌಖಿಕ ಸಂಪನ್ಮೂಲ ವ್ಯಕ್ತಿಗಳು ಊರಿನ, ಸ್ಥಳದ ಹೆಸರಿನ ಬಗೆಗೆ ತೋರಿದ ಸಹಜ ಮನೋಭಾವನೆಗಳು ಸತ್ಯಕ್ಕೆ ಭಿನ್ನವೆಂಬಂತೆ ತೋರಬಹುದು. ಇದನ್ನು ಗಮನಿಸಿ ನಡೆದಲ್ಲಿ ಸತ್ಯದ ಹಾದಿಗೆ ಬೆಳಕನ್ನು ಕಂಡುಕೊಳ್ಳಬಹುದು.

ಅಡಿಟಿಪ್ಪಣಿಗಳು

೧. ದೇಜಗೌ, ಸ್ಥಳನಾಮವ್ಯಾಸಂಗ, ಪು. ೧೧೧
೨. ಡಾ.ವಿಶ್ವನಾಥ, ಸ್ಥಳನಾಮಗಳು, ಪು. ೬೩
೩. ಚಿದಾನಂದಮೂರ್ತಿ ಎಂ, ಗ್ರಾಮೀಣ, ಪು. ೧೧೩
೪. ಕನ್ನಡ ವಿಶ್ವಕೋಶ, ಸಂ - ೩, ಪು. ೨೫೨
೫. ಅದೇ, ಪು. ೨೫೭ - ೨೫೮

೬. ಉಧೃತ, ಲಕ್ಕಪ್ಪಗೌಡ ಎಚ್.ಜೆ, ಜಾನಪದ ಕೈಪಿಡಿ, ಪು. ೨೮
೭. ದೇಜಗೌ, ಸ್ಥಳನಾಮವ್ಯಾಸಂಗ, ಪು. ೧೧೧ - ೧೧೨
೮. ಗೆಝೆಟಿಯರ್ ಆಫ್ ಇಂಡಿಯಾ, ಮೈಸೂರು ಸ್ಟೇಟ್, ಬಳ್ಳಾರಿಜಿಲ್ಲೆ, ಪು. ೧
೯. ನಾಗಯ್ಯ ಜಿ.ಎಂ, ಬಳ್ಳಾರಿಜಿಲ್ಲೆಯಶಾಸನಗಳು, ಪು. ೩
೧೦. ಚೈಲೂರುಶಾಸನ, ೧೧೩೧ನೇ ಇಸ್ವಿ
೧೧. ವೆಂಕಟೇಶರಾಜ ಪುರೋಹಿತ ಅರ್ಚಕರು, ಸಂದರ್ಶನ, ೧೨-೧೧-೨೦೦೦, ಕೆಂಚನಗುಡ್ಡ
೧೨. ಗೆಝೆಟಿಯರ್ ಆಫ್ ಇಂಡಿಯಾ, ಮೈಸೂರು ಸ್ಟೇಟ್, ಬಳ್ಳಾರಿಜಿಲ್ಲೆ, ಪು. ೬೯೩
೧೩. ಮಸ್ತಾನ್‌ಸಾಬ್ ಉಪಾಧ್ಯಾಯರು, ಸಂದರ್ಶನ, ೧೭-೦೯-೨೦೦೦, ಆಲೂರು
೧೪. ಕಲ್ಬುರ್ಗಿ ಎಂ.ಎಂ, ಕರ್ನಾಟಕದ ಕೈಫಿಯತ್ತುಗಳು, ಹತ್ತಿಬೆಳಗಲ್ಲು ಕೈಫಿಯತ್ತು, ಪು. ೫೫೫
೧೫. ಶ್ರೀಶೈಲಾಚಾರಿ, ಸಂದರ್ಶನ, ೧೪-೦೯-೨೦೦೦, ಕುರುಕುಂದೆ
೧೬. ಸಂ. ಶಿವರಾಮಕಾರಂತ, ಸಿರಿಗನ್ನಡ ಅರ್ಥಕೋಶ, ಪು. ೧೨೫
೧೭. ನಾಗರತ್ನ ಟಿ.ಎನ್, ಕನಕದಾಸ, ಸಾಹಿತ್ಯಅಕಾಡೆಮಿ, ೨೦೦೦, ಪು. ೯೫
೧೮. ಉಧೃತ, ಲಕ್ಕಪ್ಪಗೌಡ ಎಚ್.ಜೆ, ಜಾನಪದ ಕೈಪಿಡಿ, ಪು. ೩೦೧
೧೯. ದೇಜಗೌ, ಜಾನಪದ ಅಧ್ಯಯನ, ಪು. ೨೦೬
೨೦. ಸಂ. ಚಂದ್ರಶೇಖರ ಕಂಬಾರ, ಜಾನಪದ ವಿಶ್ವಕೋಶ, ಸಂ - ೧, ಪು. ೪೫೨
೨೧. ಮಲ್ಲಿಕಾರ್ಜುನರೆಡ್ಡಿ ಅವರ ಭೇಟಿಯಿಂದ ತಿಳಿದದ್ದು.
೨೨. ಹಂಪೆಯ ಸೀತೆಯಸೆರಗು' ಕುರಿತು ಬಹುತೇಕ ಜನರು ಈ ಐತಿಹ್ಯವನ್ನು ಹೇಳುತ್ತಾರೆ.
೨೩. ಶ್ರೀ ಮಲ್ಲಿಕಾರ್ಜುನ ಆಚಾರ್ಯ ಯಳ್ಳಾರ್ತಿ ಅವರಿಂದ ತಿಳಿದದ್ದು.
೨೪. ದೇವರಗುಡ್ಡ ಪರಿಸರದಲ್ಲಿ ಅನೇಕ ಜನರಲ್ಲಿ ಈ ಐತಿಹ್ಯ ಬಳಕೆಯಲ್ಲಿದೆ.
೨೫. ಗಂಗಪ್ಪ, ಸಂದರ್ಶನ, ೦೮-೦೪-೨೦೦೧, ವಯಸ್ಸು ೪೮, ಅಮರಾಪುರ
೨೬. ಅದೇ.
೨೭. ಒಡೆಯರ್, ಸಂದರ್ಶನ, ೨೬-೧೦-೨೦೦೧, ವಯಸ್ಸು ೫೫, ದೇವರಗುಡ್ಡ
೨೮. ವೆಂಕಟೇಶ ರಾಜ ಪುರೋಹಿತ ಅರ್ಚಕರು, ಸಂದರ್ಶನ, ೧೨-೧೧-೨೦೦೦, ಕೆಂಚನಗುಡ್ಡ
೨೯. ಶ್ರೀಶೈಲಾಚಾರಿ, ಸಂದರ್ಶನ, ೧೪-೦೯-೨೦೦೦, ಕುರುಕುಂದೆ
೩೦. ಅದೇ.
೩೧. ಹಂಪಿ ಪರಿಸರ ಹಾಗೂ ಸುತ್ತಮುತ್ತಲ ಅನೇಕ ಕಡೆ ಈ ನಂಬಿಕೆಯಿದೆ.
೩೨. ಭೋಗನಗೌಡ, ಸಂದರ್ಶನ, ೦೧-೦೫-೨೦೦೧, ಚಿಪ್ಪಗಿರಿ
೩೩. ದತ್ತಾತ್ರೇಯ, ಸಂದರ್ಶನ, ೧೮-೦೯-೨೦೦೦, ಕವಿತಾಳ
೩೪. ಮುದಿಮಲ್ಲನಗೌಡ, ಸಂದರ್ಶನ, ೧೮-೦೯-೨೦೦೦, ವಯಸ್ಸು ೪೮, ಚಿಂತಕುಂಟೆ
೩೫. ಮರಿರುದ್ರಗೌಡ, ಸಂದರ್ಶನ, ೧೭-೦೨-೨೦೦೨, ವಯಸ್ಸು ೬೬, ಬಸರಕೋಡು
೩೬. ಖಾಜಾಸಾಬು, ಸಂದರ್ಶನ, ೧೭-೦೨-೨೦೦೨, ವಯಸ್ಸು ೨೯, ಬೂದಿಗುಪ್ಪ
೩೭. ಲಿಂಗಾರೆಡ್ಡಿ, ಸಂದರ್ಶನ, ೨೭-೦೧-೨೦೦೨, ವಯಸ್ಸು ೭೦, ಮುದ್ದನಗೇರಿ
೩೮. ಶೇಷಗಿರಿಯಪ್ಪ, ಸಂದರ್ಶನ, ೧೪-೦೯-೨೦೦೦, ವಯಸ್ಸು ೭೦, ಯಳ್ಳಾರ್ತಿ
೩೯. ಅದೇ.
೪೦. ಗಾದೆಗಳು ಮತ್ತು ಸ್ಥಳನಾಮ ಎಂಬ ಅಧ್ಯಾಯದಲ್ಲಿ ಬಳಸಿಕೊಂಡ ಎಲ್ಲಾ ಗಾದೆಗಳು ಬಳ್ಳಾರಿ - ಕರ್ನೂಲು ಗಡಿಪ್ರದೇಶದಲ್ಲಿ ಜನಸಾಮಾನ್ಯರಲ್ಲಿ ಚಾಲ್ತಿಯಲ್ಲಿವೆ.
೪೧. ಡಾ.ಸೋಮಶೇಖರ ಇಮ್ರಾಪೂರ, ಜನಪದ ಒಗಟುಗಳು, ಪು. ೯೫
೪೨. ಶ್ರೀಮತಿ ಜಾಜಿ ನೀಲಮ್ಮ, ಸಂದರ್ಶನ, ೦೮-೦೪-೨೦೦೧
೪೩. ಶ್ರೀಮತಿ ಪಾರ್ವತಮ್ಮ ಶರಭಣ್ಣ, ಸಂದರ್ಶನ, ೧೭-೧೨-೨೦೦೨, ವಯಸ್ಸು ೪೬, ಯಳ್ಳಾರ್ತಿ
೪೪. ಅದೇ.

೪೫. ಅದೇ.

೪೬. ಮೈಲಹಳ್ಳಿ ರೇವಣ್ಣ, ಜಂಬುನೇರ್ಲ ಹಣ್ಣು ಜಗ್ಗಿ ಬಿದ್ದಾವೆ, ಪು. ೫೫

೪೭. ಅದೇ, ಪು. ೧೩

೪೮. ಅದೇ, ಪು. ೧೩

೪೯. ಅದೇ, ಪು. ೧೨

೫೦. ಸೋಮಶೇಖರ ಇಮ್ರಾಪುರ, ಜನಪದ ಒಗಟುಗಳು, ಪು. ೯೭

೫೧. ಶರಣಬಸಪ್ಪ, ಸಂದರ್ಶನ, ೨೨-೦೯-೨೦೦೨, ವಯಸ್ಸು ೬೦, ಹೊಸಪೇಟೆ

೫೨. ಜ್ಯೋತಿ ಹೊಸೂರು, ಹೆಸರ ಹೇಳತೇನ ಒಡಪಕಟ್ಟಿ, ಪು. ೩೦

೫೩. ಅದೇ, ಪು. ೫೪

೫೪. ಶ್ರೀಮತಿ ಲಕ್ಷ್ಮಮ್ಮ, ಸಂದರ್ಶನ, ೦೧-೦೫-೨೦೦೧, ವಯಸ್ಸು ೬೨,

೫೫. ಅದೇ.

೫೬. ಅದೇ.

೫೭. ಚಿದಾನಂದಮೂರ್ತಿ ಎಂ. ವಾಗರ್ಥ, ಪು. ೩೮

೫೮. ಶ್ರೀಮತಿ ಉದ್ದಾನಮ್ಮ ಅವರು ಹೇಳಿದ ಕಥೆಯಿಂದ ಆಯ್ದುಕೊಂಡದ್ದು. ಬಾಲ್ಯದಿಂದ ಈ ಕಥೆ ನನ್ನ ಕಿವಿಯ ಮೇಲಿತ್ತು.

೫೯. ಅದೇ.

೬೦. ಬಸವರಾಜ ಮಲಶೆಟ್ಟಿ, ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು, ಪು. ೧೧೭ - ೧೧೮

೬೧. ಅದೇ, ಪು. ೮೧

೬೨. ಅದೇ, ಪು. ೪೫

೬೩. ದಿವಂಗತ ಗೊರವರ ಪೂಜಾರಿಗಂಗಣ್ಣ ಕಟ್ಟಿದ ಹಾಡು, ಸಂಗ್ರಹ ೧೯೯೬

೬೪. ಇಲ್ಲಿ ಬಳಸಿಕೊಂಡ ತ್ರಿಪದಿ ಮತ್ತು ಸ್ತುತಿಪದ್ಯ ಸಾಂದರ್ಭಿಕವಾಗಿ ಗಡಿಪ್ರದೇಶದ ಭೌಗೋಳಿಕ ಪರಿಸರದಲ್ಲಿ ಆಗಾಗ ಸಂಗ್ರಹಿಸಿದ್ದು.

೬೫. ತೂಮಾಟಿ ದೋಣಪ್ಪ, ಜಾನಪದ ಕಳಾಸಂಪದಮು, ಪು. ೩೦೧

೬೬. ದುರ್ಗಾದಾಸ ಕೆ.ಆರ್, ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಪು. ೯೦

೬೭. ಶಿರಹಟ್ಟಿ. ಸ.ಮಾ. ಜಾನಪದ ಜಗತ್ತು, ಪು. ೧೪

೬೮. ದುರ್ಗಾದಾಸ ಕೆ.ಆರ್, ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಪು. ೮೬

೬೯. ದೇಜಗೌ, ಸ್ಥಳನಾಮ ವ್ಯಾಸಂಗ, ಪು. ೨೪

೭೦. ಬಸವರಾಜ, ಸಂದರ್ಶನ, ೨೨-೦೯-೨೦೦೨, ವಯಸ್ಸು ೨೮, ಊಳೂರು

೭೧. ಎಚ್.ಎಂ.ವೀರಭದ್ರಯ್ಯ, ಬಯಲಾಟ ಮಾಸ್ತರು ಮತ್ತು ಬಯಲಾಟ ಕೃತಿಗಳು ಮರು ಲಿಪಿಕಾರ, ಸಂದರ್ಶನ, ೧೦-೧೨-೨೦೦೦, ಯಳ್ಳಾರ್ತಿ.

** ಬಯಲಾಟ ಮುದ್ರಿಕೆಗಳಲ್ಲಿ ಸ್ಥಳನಾಮ ಉಲ್ಲೇಖಗಳು ಭಾಗಕ್ಕೆ ಕೆ.ಆರ್.ದುರ್ಗಾದಾಸ್ ಅವರ 'ಬಳ್ಳಾರಿ ಜಿಲ್ಲೆಯ ಬಯಲಾಟಗಳು' ಕೃತಿಯ ಹೆಚ್ಚು ಭಾಗ ಬಳಸಿಕೊಳ್ಳಲಾಗಿದೆ.

❑ ❑

# ೬

# ಚರಿತ್ರೆ ಮತ್ತು ಸ್ಥಳನಾಮಗಳ ಹಿನ್ನೆಲೆಯಲ್ಲಿ ಭಾಷೆಯ ಅವಸ್ಥಾಂತರದ ಕುರುಹುಗಳು

## ೬. ಪ್ರವೇಶ

ಸ್ಥಳನಾಮಗಳನ್ನು ನಾವು ವಿಶಿಷ್ಟ ಐತಿಹಾಸಿಕ ಆಕರಗಳಾಗಿ ಪರಿಗಣಿಸಲು ಸಾಧ್ಯ. ಏಕೆಂದರೆ ಸಾಮಾನ್ಯವಾಗಿ ಯಜಮಾನ ಸಂಸ್ಕೃತಿಯಿಂದ ಇತರ ಎಲ್ಲಾ ವಿಚಾರಗಳಂತೆ ಶಾಸನಗಳೂ ಸಹ ಪ್ರಭಾವಿತವಾಗಿದ್ದರೂ, ಸ್ಥಳನಾಮ ಅಥವಾ ಗ್ರಾಮನಾಮ ಹಾಗೆ ಆಗಲಾರವು. ಒಂದೊಮ್ಮೆ ಯಾವುದೋ ಹಳ್ಳಿಗೆ ಅಲಂಕಾರಿಕವಾದ, ಕೃತಕವಾದ ಹೆಸರಿಡುವ ಕ್ರಮವಿದ್ದರೂ, (ಅಂದರೆ 'ತಾಳೂರು' ಎಂಬ ಊರಿಗೆ ಮಾಂಗಲ್ಯಪುರವೆಂತಲೊ, ಹಗರಿಬೊಮ್ಮನಹಳ್ಳಿಯನ್ನು ಸೆಕೆಂಡ್ ಬಾಂಬೆಯೆಂತಲೋ) ಅವು ತಾತ್ಕಾಲಿಕವಾಗಿರುತ್ತವೆ. ಜನರು ಅವುಗಳನ್ನು ವ್ಯಾಪಕವಾಗಿ ಸ್ವೀಕರಿಸುವುದಿಲ್ಲ. ಯಾವುದು ಅವರ ಬಾಳಿನಲ್ಲಿ ಹಾಸು ಹೊಕ್ಕಾಗಿರುತ್ತದೆಯೋ ಅದು ಮಾತ್ರ ಉಳಿದುಕೊಂಡು ಬರುತ್ತದೆ. ಈ ದೃಷ್ಟಿಯಿಂದ ಚರಿತ್ರೆಯೊಂದಿಗೆ ಬೆಸೆದುಕೊಂಡ ಸ್ಥಳನಾಮಗಳನ್ನು ಆಂಧ್ರ-ಕರ್ನಾಟಕ ಗಡಿಭಾಗದ ಉದಾಹರಣೆಗಳ ಮೂಲಕ ಇಲ್ಲಿ ಅಧ್ಯಯನ ಮಾಡಲಾಗಿದೆ.

ಚರಿತ್ರೆಯೊಂದಿಗೆ ಸ್ಥಳನಾಮಗಳ ಅಧ್ಯಯನವೆಂದರೆ ಬಹುತೇಕ ನಮ್ಮ ಮಾರ್ಗ ಇತಿಹಾಸ ಹೇಳುವುದು ಎಂದು ಭಾವಿಸುವಂತೆ ಮಾಡುತ್ತದೆ. ಇದೊಂದು ರೀತಿಯಲ್ಲಿ ಸತ್ಯವಾದರೂ, ಮುಖ್ಯವಾಗಿ ಸ್ಥಳನಾಮಗಳ ಚಾರಿತ್ರಿಕ ಅಧ್ಯಯನದಲ್ಲಿ ಎರಡು ಬಗೆಯ ವಿಶ್ಲೇಷಣೆ ಸಾಧ್ಯವಾಗುತ್ತದೆ. ಸ್ಥಳನಾಮಗಳ ಮೂಲಕ ಭಾಷೆಯ ಚಾರಿತ್ರಿಕ ಅಧ್ಯಯನ ಹಾಗೂ ಸ್ಥಳನಾಮಗಳಿಂದ ಚರಿತ್ರೆಯ ನಿರ್ವಚನ ಮಾಡುವುದು ಒಂದು ಕ್ರಮವಾದರೆ, ಇತಿಹಾಸದ ಮೂಲಕ ಸ್ಥಳನಾಮಗಳನ್ನು ಅವಲೋಕಿಸುವುದು ಮತ್ತೊಂದು ಕ್ರಮ. ಒಂದು ಸ್ಥಳದ ಹೆಸರನ್ನು ಅಥವಾ ಅದರ ರೂಪವನ್ನು ನೋಡಿ ಪ್ರಾದೇಶಿಕ ಚರಿತ್ರೆಯನ್ನು ಊಹಿಸುವುದು, ಅದರಂತೆ ಆ ಸ್ಥಳನಾಮಗಳಲ್ಲಿ ಉಂಟಾದಂತಹ

ಕಾಲಾಂತರದ ಭಾಷಿಕ ಬದಲಾವಣೆಗಳನ್ನು ಗುರುತಿಸುವುದು ಈ ಎರಡು ಕ್ರಮಗಳಲ್ಲಿ ಮಾಡಬೇಕಾದ ಅತಿಮುಖ್ಯ ಅಂಶಗಳಾಗಿರುತ್ತವೆ. ಎರಡನೆಯ ಕ್ರಮದಲ್ಲಿ ಇತಿಹಾಸದ ಮುಖೇನ ಸ್ಥಳನಾಮಗಳನ್ನು ಅಧ್ಯಯನ ಮಾಡಬಹುದು. ಅಂದರೆ ಈ ಮಾದರಿಯಲ್ಲಿ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಡೆದಂತಹ ರಾಜಪ್ರಭುತ್ವ, ಯಜಮಾನಿಕೆ, ಆಡಳಿತ ವಿಭಾಗಗಳು, ಆಯಾ ರಾಜ ಪ್ರಭುತ್ವದಲ್ಲಿ ನಡೆದಂತಹ ಬದಲಾವಣೆ, ಅವರ ನಾಡಿನ ಬದಲಾವಣೆ, ಉದ್ಭವವಾದ ನಾಡಿನ ವಿಭಾಗಗಳು, ಅವುಗಳಿಗೆ ಇಟ್ಟ ಕಾಲಕ್ರಮದ ಹೆಸರುಗಳು, ಇಟ್ಟ ಹೆಸರು ಅಳಿಸಿ ಪ್ರತಿನಾಮಕರಣ ಮಾಡಿದ ಬಗೆ, ಹೊಸ ಹೊಸ ಗ್ರಾಮಗಳ ನಿರ್ಮಾಣ, ಗ್ರಾಮಗಳಿಗೆ ನೀಡಿದ ದಾನ - ದತ್ತಿಗಳ ವಿವರ, ಹೀಗೆ ಹಲವಾರು ಸಂದರ್ಭಗಳು, ಆಯಾ ಕಾಲದ ಸಾಮಾಜಿಕ ಜನಜೀವನವನ್ನು ಚಿತ್ರಿಸುವ ಪ್ರಾತಿನಿಧಿಕ ಸ್ಥಳನಾಮಗಳಿವೆ. ಅವೆಲ್ಲವೂ ಇಲ್ಲಿ ಸಮಾವೇಶಗೊಳ್ಳುತ್ತವೆ.

ಗಡಿಭಾಗದ ಸ್ಥಳನಾಮಾಧ್ಯಯನ ಸಂದರ್ಭದಲ್ಲಿ ಚಾರಿತ್ರಿಕ ಅಧ್ಯಯನ ಮತ್ತಷ್ಟು ವಿಶಿಷ್ಟವಾಗುತ್ತದೆ. ಎರಡು ಪ್ರಾದೇಶಿಕ ಚರಿತ್ರೆಯ ಸಂಗತಿಗಳಿಂದ ಪ್ರೇರಿತವಾದ ಭೌಗೋಳಿಕ ಪರಿಸರದಲ್ಲಿ ಪರಸ್ಪರ ಸಾಂಸ್ಕೃತಿಕ ಕೊಡು ಕೊಳೆಗಳಿಂದ ಸ್ಥಳನಾಮಗಳು ಇತಿಹಾಸದ ಅತ್ಯಂತ ಮಹತ್ವದ ಕೊಡುಗೆಯಾಗಿ ನಿಲ್ಲುತ್ತವೆ.

ಐತಿಹಾಸಿಕ ಮಹತ್ವವುಳ್ಳ ಸ್ಥಳನಾಮಗಳ ಚಾರಿತ್ರಿಕ ಅಧ್ಯಯನವೆಂದರೆ ಅದೊಂದು ರೀತಿಯಲ್ಲಿ ಸಾಂಸ್ಕೃತಿಕ ಅಧ್ಯಯನ. ಒಂದು ಗ್ರಾಮದ ಅಥವಾ ಸ್ಥಳದ ಹೆಸರು, ಅದರ ನಿರ್ಮಾಣ ಬೆಳವಣಿಗೆಯಲ್ಲಿ ಐತಿಹಾಸಿಕ, ಭಾಷಿಕ, ಸಾಮಾಜಿಕ ಸಾಮಗ್ರಿಯಿರುತ್ತದೆ. ಇದರಿಂದ ಒಂದು ಸಂಸ್ಕೃತಿಯ ಅನಾವರಣ ಸಾಧ್ಯವಾಗುತ್ತದೆ. ದೇಶದ ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಗ್ರಾಮಗಳ ಪಾತ್ರ ಬಹುಪಾಲು ಇದೆ. ವಿಶಿಷ್ಟ ಪರಿಸರ, ವಿಶೇಷ ಘಟನೆ, ಅದರ ಹಿನ್ನೆಲೆಯಲ್ಲಿ ರಚಿತಗೊಂಡ ಪ್ರತಿಗ್ರಾಮವೂ ಇತಿಹಾಸ ಕೋಶವನ್ನು ನೇಯುತ್ತವೆ. ಐತಿಹಾಸಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಬೆಳೆದುನಿಂತ ಗ್ರಾಮಗಳ ಅಧ್ಯಯನ ಇಂದು ಅತ್ಯವಶ್ಯ ಮತ್ತು ಅನಿವಾರ್ಯವೂ ಆಗಬೇಕಿದೆ.

ಸ್ಥಳನಾಮಗಳು ಪ್ರಾಚೀನ ಸಾಂಸ್ಕೃತಿಕ ಅಧ್ಯಯನಕ್ಕೆ ಬಹುಮಟ್ಟಿನ ಆಕರಗಳಾಗಿ ನಿಂತಿವೆ. ಸಾಂಸ್ಕೃತಿಕ ಇತಿಹಾಸ ರಚನೆಗೆ ಶಾಸನಗಳು ಮತ್ತು ಕಾವ್ಯಗಳು ಕ್ರಮವಾಗಿ ಪ್ರಥಮ ಹಾಗೂ ಆನುಷಂಗಿಕ ಆಕರಗಳಾಗಿವೆ. ಇವುಗಳಂತೆ ಸ್ಥಳದ ಹೆಸರುಗಳೂ ಮೂಲ ಆಕರಗಳಾಗಿ ಪ್ರಬಲ ಆಧಾರಗಳನ್ನು ನೀಡಬಲ್ಲವು. "ಸ್ಥಳ ನಾಮಗಳಂತಹ ಸಾಮಾನ್ಯ ವಿಷಯದಲ್ಲಿ ಅಪೂರ್ವವಾದ ಸಂಗತಿಗಳು ಹುದುಗಿಕೊಂಡಿವೆ. ಅದೆಷ್ಟು ಅಜ್ಞಾತ ವಿಷಯಗಳು ಬೆಳಕಿಗೆ ಬರಲಿವೆ. ಸೂಕ್ಷ್ಮವಾಗಿ ವಿಮರ್ಶಿಸಿದಷ್ಟೂ ಹಿಂದೆ ಆಗಿಹೋದ ಅನೇಕ ಪ್ರಾಚೀನ ಐತಿಹಾಸಿಕ ಘಟನೆಗಳಿಗೆ ಶಾಸನಾದಿಗಳಲ್ಲಿ ದೊರೆಯದ ಆಧಾರಗಳು ಎಡೆಗಳ ಹೆಸರಿನಲ್ಲಿ ಸಿಕ್ಕುತ್ತವೆ. ಇತಿಹಾಸವು ಯಾರ ಹೆಸರನ್ನು ಕಡೆಗಣಿಸಿ ತೀರಾ ಸಾಮಾನ್ಯರೆಂದು ಅವರನ್ನು ಉಲ್ಲೇಖಿಸುವುದಿಲ್ಲವೋ ಅಂತಹ ಅನೇಕಾನೇಕ ಅರಸರು, ನಾಯಕರು, ಗೌಡರು, ಗೌಡತಿಯರು, ಪ್ರಾದೇಶಿಕ ವೀರರು, ಕುರುಬರು, ಗೊಲ್ಲರು ಮೊದಲಾದವರು ತಮ್ಮ ಹೆಸರಿನ ಹಟ್ಟಿಯನ್ನು ಕಟ್ಟಿಕೊಂಡು ತಮ್ಮ ಮಟ್ಟಿಗೆ ಅಜರಾಮರರಾಗಿದ್ದಾರೆ. ಪುರಾಣಗಳಿಗೆ ಪೋಷಕವಾದ ಅನೇಕ ಯಾತ್ರಾಸ್ಥಳಗಳ ವಿವರಗಳು ಧರ್ಮಸಂಸ್ಕೃತಿಗಳ ಮಹಾಪ್ರವಾಹದ ಕುರುಹುಗಳನ್ನು ಎಡೆಗಳಿಂದ

ತಿಳಿದುಕೊಳ್ಳಬಹುದು."[11] ಎನ್ನುವಲ್ಲಿ ಸ್ಥಳನಾಮಗಳನ್ನು ಸಾಮಾನ್ಯ ವಿಷಯ ಎಂದು ಜೋಶಿಯವರು ಕರೆದಿರುವುದು, ಅವುಗಳನ್ನು ಹಾಗೆ ಭಾವಿಸಲಾಗಿದೆ ಎಂಬ ಅರ್ಥದಲ್ಲಿ. ಇತಿಹಾಸಕಾರರ ಅವಜ್ಞೆಗೆ ಒಳಗಾದ ಈ ರೀತಿಯ ಸಾಮಾನ್ಯ ಎಂದು ಭಾವಿಸಲಾದ ಮಾಹಿತಿಗಳಿಂದ ಚರಿತ್ರೆಯನ್ನು, ಸಂಸ್ಕೃತಿಯನ್ನು ಕಟ್ಟುವುದು ತುಂಬಾ ಸಫಲವಾಗಿ ಫಲಿತ ನೀಡಿದ್ದು ಶಂಬಾ ಜೋಷಿಯವರಲ್ಲಿ. ಒಂದು ಪ್ರಾದೇಶಿಕ ಚರಿತ್ರೆ, ಅಲ್ಲಿನ ನಾಯಕರು, ಪಾಳೆಯಗಾರರು, ಹಲವಾರು ಸಮುದಾಯಗಳು ಕಟ್ಟಿಕೊಂಡ ಊರುಗಳು, ನಿರ್ಮಿಸಿದ ಕೋಟೆ, ಕೊತ್ತಲ, ಕೆರೆ, ಕಾಲುವೆ ಮುಂತಾದುವು ಅವರ ಬದುಕಿನ ಅಂಗವಾಗಿ, ಅವರು ಅವುಗಳಿಗೆ ತಮ್ಮದೇ ಆದ ಪ್ರಾದೇಶಿಕ, ಪ್ರಾತಿನಿಧಿಕ ನಾಮಕರಣ ಮಾಡಿದ್ದಾರೆ. ಸಾಂಸ್ಕೃತಿಕ ಬದುಕಿನ ಒಟ್ಟು ನೋಟವನ್ನು ಸ್ಥಳನಾಮಗಳ ಇತಿಹಾಸದಿಂದಲೇ ಅಳೆಯುವುದು ಸಾಧ್ಯವಿಲ್ಲವಾದರೂ, ಪ್ರಾಮಾಣಿಕವಾಗಿ ತನ್ನ ಮಟ್ಟಿನ ಬೆಳಕನ್ನು ಚರಿತ್ರೆಯ ಮೇಲೆ ಬೀರುತ್ತವೆ.

ಒಂದು ದೇಶದ ಇತಿಹಾಸ ನಿರ್ವಚನದ ಸಂದರ್ಭದಲ್ಲಿ ಈವರೆಗೆ ಇತಿಹಾಸಕಾರರ ಗಮನಕ್ಕೆ ಸ್ಥಳನಾಮಗಳು ಮಹತ್ವದ ಆಕರಗಳಾಗಿ ತೋರಿಬಂದಿಲ್ಲವೆನ್ನಬಹುದು. ಬಹುಶಃ ಇಂತಹ ಸಾಮಗ್ರಿಯನ್ನು ಮೂಲ ಆಕರಗಳೆಂದು ಭಾವಿಸಿದಂತಿಲ್ಲ. ಆದರೆ ಈಚೆಗೆ ಭಾಷಾತಜ್ಞರು ಸ್ಥಳನಾಮಗಳ ಅಧ್ಯಯನ ಆರಂಭಿಸಿ, ಇದರಿಂದ ಒಂದು ಕಡೆ ಭಾಷಿಕ ಅಧ್ಯಯನ ಅದೇ ವೇಳೆಗೆ ನಾಡಿನ ಸಾಂಸ್ಕೃತಿಕ ಅಧ್ಯಯನಕ್ಕೆ ಬಹುಮುಖ್ಯ ಫಲಿತ ನೀಡಬಲ್ಲ ಆಕರಗಳೆಂದು ಪರಿಗಣಿಸಿದ್ದಾರೆ. ಈ ದೃಷ್ಟಿಯಿಂದ ಇಲ್ಲಿ ಸ್ಥಳನಾಮಗಳ ಚಾರಿತ್ರಿಕ ಅಧ್ಯಯನದ ಒಂದು ಮಾದರಿಯನ್ನು ನೀಡುವ ಪ್ರಯತ್ನ ಮಾಡಲಾಗಿದೆ.

### ೬.೧. ಆಂಧ್ರ - ಕರ್ನಾಟಕ ಗಡಿ ಪ್ರದೇಶದ ಸಂಕ್ಷಿಪ್ತ ಇತಿಹಾಸ

ಈಗಿನ ಆಂಧ್ರ ಪ್ರದೇಶದ ಗಡಿಭಾಗವನ್ನೂ ಒಳಗೊಂಡಿದ್ದ ಹಿಂದಿನ ವಿಶಾಲ ಕರ್ನಾಟಕದ ಭೌಗೋಳಿಕ ವ್ಯಾಪ್ತಿಯಿಂದ ಈ ಪ್ರದೇಶದ ಗಡಿ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಅವಲೋಕಿಸಬಹುದು. ಬಳ್ಳಾರಿ - ಕರ್ನೂಲು - ಅನಂತಪುರ ಜಿಲ್ಲೆಗಳನ್ನೊಳಗೊಂಡ ಈ ಭಾಗದ ಪೂರ್ವೇತಿಹಾಸ ಭಾರತದ ಚರಿತ್ರೆಯಲ್ಲಿ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಪ್ರಾಚೀನ ಪುರಾತತ್ವ ನೆಲೆಗಳಾದ ಕಪ್ಪಗಲ್ಲು - ಗಾದಿಗನೂರು - ಚಿಪ್ಪಗಿರಿ - ಬಳ್ಳಾರಿ - ಸಂಗನಕಲ್ಲು ಮುಂತಾದುವು ಆದಿಶಿಲಾಯುಗ - ಮಧ್ಯ ಶಿಲಾಯುಗ - ಆಧುನಿಕ ಶಿಲಾಯುಗ ಮತ್ತು ಕಬ್ಬಿಣ ಯುಗದ ಕುರುಹುಗಳಾಗಿ ನಿಂತಿವೆ. ಆದಿ ಶಿಲಾಯುಗದ ತಾಮ್ರದ ಬೆಟ್ಟಗಳು ಇದ್ದ ಬಗೆಗೆ ಬಳ್ಳಾರಿ ತಾಲ್ಲೂಕಿನ ಗಾದಿಗನೂರು - ದೇವರಗುಡ್ಡ - ಬಾದನಹಟ್ಟಿ - ಬೇಡರಬೆಳಗಲ್ಲು - ಹಲಕುಂದಿಯಲ್ಲಿರುವ ಕುರುಹುಗಳಿಂದ ತಿಳಿಯುತ್ತದೆ. ನವಶಿಲಾಯಗದ ನೆಲೆಯಾದ ಸಂಗನಕಲ್ಲು ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಇದನ್ನು ಸಾಬೀತುಪಡಿಸುವ ಪುರಾವೆಗಳು ಆ ಊರಿನ 'ನವಿಲುಗುಡ್ಡ'ದ ಮೇಲಿರುವ ಕುರುಹುಗಳಲ್ಲಿ ಕಾಣುತ್ತೇವೆ. ಬಳ್ಳಾರಿ ಗಡಿಯಲ್ಲಿರುವ ಬ್ರಹ್ಮಗಿರಿ - ಸುವರ್ಣಗಿರಿ - ಸಿದ್ಧಾಪುರಗಳಲ್ಲಿ ನವಶಿಲಾಯುಗಕ್ಕೆ ಸಂಬಂಧಿಸಿದ ನೆಲೆಗಳಿರುವುದಾಗಿ ತಿಳಿಯುತ್ತದೆ.

ನವ ಶಿಲಾಯುಗದ ಕೈಗಾರಿಕಾ ಪ್ರದೇಶವಾಗಿ ಗಡಿಭಾಗವು ಮಹತ್ವವನ್ನು ಪಡೆದುಕೊಂಡಿದೆ. ಕೊಡಲಿ ಮುಂತಾದ ಅನೇಕ ಕೃಷಿ ಬಳಕೆಯ ಕಬ್ಬಿಣದ ಉಪಕರಣಗಳು, ಪಾತ್ರೆಗಳು ದೊರೆಯುತ್ತವೆ. ಇದರಿಂದ

ಕೈಗಾರಿಕೋದ್ಯಮದ ಕುರುಹುಗಳು ದೊರೆಯುತ್ತವೆ. ಕೈಗಾರಿಕೆಯನ್ನು ಹೊಂದಿದ್ದ ಸ್ಥಳಗಳಿಗೆ ಅದಕ್ಕೆ ಸಂಬಂಧಿಸಿದ ಸ್ಥಳನಾಮ ನಿರ್ದೇಶನವನ್ನೂ ಮಾಡಿರುವುದು ತಿಳಿಯುತ್ತದೆ. ಗಡಿಭಾಗದಲ್ಲಿರುವ ಅಂತಹ ಕೆಲವು ಸ್ಥಳನಾಮಗಳು ಹೀಗಿವೆ.

| | |
|---|---|
| ಇಂಗಳದಹಾಳ್ | - ಆಲೂರು - ತಾಲ್ಲೂಕು |
| ಇಂಗಳಿಗೆ | - ಹೊಸಪೇಟೆ - ತಾಲ್ಲೂಕು |
| ಕಮ್ಮರಚೇಡು | - ಬಳ್ಳಾರಿ - ತಾಲ್ಲೂಕು |
| ಕಮ್ಮರಚೇಡು | - ಆಲೂರು - ತಾಲ್ಲೂಕು |
| ತೆಗ್ಗಿನ ಬೂದಿಹಾಳು | - ಬಳ್ಳಾರಿ - ತಾಲ್ಲೂಕು |
| ಪಾತ್ರೆ ಬೂದಿಹಾಳು | - ಬಳ್ಳಾರಿ - ತಾಲ್ಲೂಕು |
| ಬೂದಿಗುಂಪ | - ಸಿರುಗುಪ್ಪ - ತಾಲ್ಲೂಕು |

ಮುಂತಾದ ಸ್ಥಳನಾಮಗಳು ಲೋಹ ಕೈಗಾರಿಕಾ ನೆಲೆಗಳಾಗಿದ್ದವೆಂಬುದನ್ನು ಸ್ಥಳೀಯ ಅವಶೇಷಗಳಿಂದ ಗುರುತಿಸಲಾಗಿದೆ. ಈ ಸ್ಥಳಗಳಲ್ಲಿ ಕೈಗಾರಿಕಾ ನೆಲೆಯನ್ನು ೩೦ x ೪೦ ಪ್ರದೇಶದ ವಿಸ್ತೀರ್ಣದಲ್ಲಿ ಸಂಬಂಧಿಸಿದ ಕುರುಹುಗಳನ್ನು ಇತ್ತೀಚೆಗೆ ಗುರುತಿಸಲಾಗಿದೆ. ಈ ಸ್ಥಳಗಳು ಹೆಚ್ಚಾಗಿ ನದಿ, ಹಳ್ಳ, ಹಗರಿಯಂತಹ ಜಲ ಸೌಕರ್ಯ ಇರುವಂತಹ ಪ್ರದೇಶದಲ್ಲಿವೆ. ಕೈಗಾರಿಕೆಯ ಪ್ರಗತಿಗೆ ಪೂರಕವೆಂದು ತಿಳಿಯಬಹುದು. ಹಾಗೆಯೆ ಕುಡುತಿನಿ - ಕುರೇಕುಪ್ಪೆ - ನಿಂಬಾಪುರ - ಶಾನವಾಸಪುರ - ಹಲಕುಂದಿ ಮುಂತಾದ ಕಡೆ ದೊರೆತಂತಹ ಬೂದಿದಿಬ್ಬಗಳಿಂದ ಇಲ್ಲಿನ ಬೂದಿಹಾಳು, ಬೂದಿಗುಂಪ ಎಂಬ ಸ್ಥಳನಾಮಗಳು ಉದಯಿಸಿವೆ. ಇವುಗಳ ಆಧಾರದ ಮೇಲೆಯೂ ಪ್ರಾಚೀನ - ಅರ್ವಾಚೀನ ಇತಿಹಾಸವು ತಿಳಿದು ಬರುತ್ತದೆ. ಗಡಿಭಾಗದಲ್ಲಿರುವ ಸಂಗನಕಲ್ಲು ಬೆಟ್ಟಗಳು, ಆಲೂರು ತಾಲ್ಲೂಕಿನ ದೇವರಗುಡ್ಡ, ರಾಮಲಿಂಗೇಶ್ವರನ ಗುಡ್ಡ, ಚಿಪ್ಪಗಿರಿಯ ಬೆಟ್ಟಗಳಲ್ಲಿ ಪ್ರಾಚೀನ ವರ್ಣಚಿತ್ರಗಳು ದೊರೆಯುತ್ತವೆ. ಹಂಪಿಯಂತಹ ಊರುಗಳಿಂದ ರಾಮಾಯಣ ಕಾಲದ ಸಾಂದರ್ಭಿಕ ಚರಿತ್ರೆಯು ದೊರೆಯುತ್ತದೆ. ಗಡಿ ಭಾಗದಲ್ಲಿ ಆಳ್ವಿಕೆ ನಡೆಸಿದಂತಹ ರಾಜಪ್ರಭುತ್ವಗಳ ಹಿನ್ನೆಲೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಯಬಹುದು.

### ೬.೧.೧. ಮೌರ್ಯರು

ಈ ಪ್ರದೇಶದಲ್ಲಿ ದೊರೆಯುವ ಅಶೋಕನ ಶಿಲಾಶಾಸನಗಳಿಂದ ಮೌರ್ಯರ ನೇರ ಆಡಳಿತ ಇಲ್ಲಿದ್ದದ್ದು ತಿಳಿಯುತ್ತದೆ. ನಿಟ್ಟೂರು - ಬ್ರಹ್ಮಗಿರಿಗಳಂತಹ ಪ್ರದೇಶಗಳಲ್ಲದೇ, ಆಂಧ್ರದ ಕರ್ನೂಲು ಜಿಲ್ಲೆಯ ಜೊನ್ನಗಿರಿ, ಯರ್ರಗುಡಿ ಎಂಬ ಗ್ರಾಮಗಳೂ ಅಶೋಕನ ಆಡಳಿತಕ್ಕೆ ಒಳಪಟ್ಟಿದ್ದವು. ಬ್ರಹ್ಮಗಿರಿಯ ಶಾಸನದಲ್ಲಿ ಬಂದಿರುವ 'ಸುವರ್ಣಗಿರಿ' ಎಂಬ ಸ್ಥಳನಾಮವೇ ಈ ಜೊನ್ನಗಿರಿಯೆಂದೂ, ಒಟ್ಟು ಬಳ್ಳಾರಿ ಪ್ರದೇಶವೇ ಸುವರ್ಣಗಿರಿ' ಎಂದೂ ನಂಬಲಾಗುತ್ತಿದೆ. ಇಲ್ಲಿ ದೊರೆಯುವ ಒಂದು ಶಾಸನದಲ್ಲಿ 'ಇಸಿಲ' ಎಂಬ ಪದ ಪ್ರಯೋಗವಿದೆ. ಇದು ಒಂದು ಗ್ರಾಮನಾಮವೆಂದು ತಿಳಿಯುತ್ತದೆ. ಇದು ಕನ್ನಡ ಶಾಸನೋಕ್ತ ಪ್ರಥಮ ಗ್ರಾಮವೆಂದೂ ಹೇಳಬಹುದು.

೬.೧.೨. ಶಾತವಾಹನರು

ಶಾತವಾಹನರ ಆಡಳಿತಕ್ಕೆ ಈ ಪ್ರದೇಶ ಸೇರಿದ್ದಿರಬಹುದಾದರೂ ಅವರ ಯಾವ ಶಾಸನಗಳೂ ಇಲ್ಲಿ ದೊರೆತಿಲ್ಲ. ಹಿರೇಹಡಗಲಿಯ ಪ್ರಾಕೃತದ ಶಾಸನವೊಂದರಲ್ಲಿ 'ಶಾತವಾಹನಿರಠ್ಠ' ಎಂಬ ಉಲ್ಲೇಖವಿದೆ. ಶಾತವಾಹನೀ ರಾಷ್ಟ್ರದ "ಚೆಲ್ಲರೇಕ ಕೋಡುಂಕೆ" ಎಂಬ ಗ್ರಾಮವನ್ನು ಆಳುತ್ತಿದ್ದ ಬಗ್ಗೆ ತಿಳಿಯುತ್ತದೆ.

೬.೧.೩. ಪಲ್ಲವರು

ಶಾತವಾಹನರ ಬಳಿಕ ಇಲ್ಲಿ ಪಲ್ಲವರು ಆಡಳಿತ ನಡೆಸಿದರು. ಹಿಂದಿನ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆಲೂರು ತಾಲ್ಲೂಕಿನ 'ಮ್ಯಾಕಡೋಣಿ' ಶಾಸನವು ಈ ಮಾಹಿತಿಯನ್ನು ನೀಡುತ್ತದೆ. ಈ ಶಾಸನದಲ್ಲಿ ಉಲ್ಲೇಖಿತವಾಗಿರುವ "ಚೆಲ್ಲರೇಕ ಕೋಡುಂಕೆ" ಗ್ರಾಮವನ್ನು ಗುರುತಿಸುವುದು ಕಷ್ಟಕರವಾಗಿದೆ. ಎಂದು ವಿದ್ವಾಂಸರು ಹೇಳುತ್ತಾರೆ. ಬಹುಶಃ ಈ ಗ್ರಾಮ ಇಂದಿನ 'ಚಲ್ಲಕೂಡಲೂರು' - ಸಿರುಗುಪ್ಪ ತಾಲ್ಲೂಕು ಆಗಿರಬಹುದೆಂದು ಊಹಿಸಲು ಸಾಧ್ಯವಿದೆ.

೬.೧.೪. ಬಾದಾಮಿಯ ಚಾಲುಕ್ಯರು

ಕರ್ನಾಟಕವನ್ನು ಆಳಿದ ಮೊದಲ ಚಕ್ರವರ್ತಿಗಳಾದ ಬಾದಾಮಿಯ ಚಾಲುಕ್ಯರ ಅತ್ಯಂತ ಪ್ರಾಚೀನ ಶಾಸನವು ಅನಂತಪುರ ಜಿಲ್ಲೆಯ 'ಪೆದ್ದವಡಗೂರು' ಎಂಬಲ್ಲಿದೆ. ಇವರಿಗೆ ಸಂಬಂಧಿಸಿದ ಕನ್ನಡ ಶಾಸನಗಳು ಅಲಂಪುರ, ಉಲ್ಚಲ, ಕುರುಕುಂದಿ, ಕುರ್ನೂರು, ಚಿಪ್ಪಗಿರಿ, ದಾನವುಲಪಾಡು, ನಗರೂರು, ನೀಲೂರು, ಬೇತಪಲ್ಲಿ ಗ್ರಾಮಗಳಲ್ಲಿ ದೊರೆತಿವೆ. ಇದರಿಂದಾಗಿ ಇಂದಿನ ಆಂಧ್ರದ ಭಾಗದಲ್ಲಿರುವ ಬಾದಾಮಿ ಚಾಲುಕ್ಯರ ಆಡಳಿತ ಪ್ರಭಾವ ಗಡಿಭಾಗದಲ್ಲಿ ಪ್ರಭಾವಶಾಲಿಯಾಗಿತ್ತು. ಕುರುಗೋಡಿನ ಶಾಸನವೊಂದರಲ್ಲಿ ಸತ್ಯಾಶ್ರಯನ ಉಲ್ಲೇಖ ಬಂದಿರುವುದರಿಂದ ಬಳ್ಳಾರಿ ಭಾಗದಲ್ಲೂ ಇವರ ಆಳ್ವಿಕೆಯು ವಿಸ್ತರಿಸಿತ್ತೆಂಬುದಾಗಿ ತಿಳಿಯುತ್ತದೆ.

೬.೧.೫. ರಾಷ್ಟ್ರಕೂಟರು

ಬಳ್ಳಾರಿಯ ಗಡಿಭಾಗದ ಕುಡುತಿನಿ ಮತ್ತು ಕೊಳಗಲ್ಲು ಗ್ರಾಮಗಳಲ್ಲಿ ದೊರೆಯುವ ಶಾಸನಗಳಿಂದ ರಾಷ್ಟ್ರಕೂಟರ ಆಡಳಿತ ಬಗೆಗೆ ತಿಳಿಯುತ್ತದೆ. ಕ್ರಿ.ಶ. ೯೪೭ರ ಶಿಲಾಶಾಸನದಲ್ಲಿ ಮೂರನೇ ಕೃಷ್ಣನ ಕಾಲದಲ್ಲಿ ಕುರುಗೋಡಿನ ಮಹಾಜನರು 'ಕೊಟ್ಟಿತೊಣೆ'ಯ (ಕುಡುತಿನಿ) ದೇಕಮ್ಮನ ದೇವಾಲಯಕ್ಕೆ ದಾನ ನೀಡಿದಂತಹ ವಿವರ ಇದೆ. ಕ್ರಿ.ಶ. ೯೬೭ರ ಶಾಸನವು (ಕೊಳಗಲ್ಲು ಶಾಸನ) ಮೂರನೇ ಕೃಷ್ಣನ ಅಂತ್ಯದ ಬಗೆಗೆ ಹೇಳುತ್ತದೆ. ಈ ಘಟನೆಯ ಸ್ಮರಣೆಗಾಗಿ ಗೌಡದೇಶದ ವರೇಂದ್ರಿ ಪ್ರದೇಶದ 'ತಡ' ಎಂಬ ಗ್ರಾಮದವನು ಕೊಳಗಲ್ಲಿನಲ್ಲಿ ಕಾರ್ತಿಕೇಯನನ್ನು ಸ್ಥಾಪಿಸಿದನೆಂದು ತಿಳಿಯಪಡಿಸುತ್ತದೆ. ರಾಷ್ಟ್ರಕೂಟರ ಮಹತ್ವದ ಶಾಸನಗಳು ಅಲಂಪುರ, ಕೊಲನುಪಾಕಂ, ತುಮ್ಮಲಗೂಡೆಂ ಎಂಬಲ್ಲಿ ದೊರೆಯುತ್ತವೆ.

೬.೧.೬. ಕಲ್ಯಾಣದ ಚಾಲುಕ್ಯರು

ಅನಂತಪುರ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಇವರಿಗೆ ಸಂಬಂಧಿಸಿದ ಅನೇಕ ಶಿಲಾಶಾಸನಗಳಿವೆ. ಕ್ರಿ.ಶ. ೯೭೬ರ, ೨ನೇ ತೈಲಪನ ಶಾಸನವೇ ಬಳ್ಳಾರಿ ಜಿಲ್ಲೆಯಲ್ಲಿ ದೊರೆತ ಕಲ್ಯಾಣದ ಚಾಲುಕ್ಯರ ಮೊದಲ ಶಾಸನ. ೯೮೧ರ ಕಂಬುಗಾರ ಬೆಳಗಲ್ಲು, ಬಲ್ಲಕುಂದೆ - ೩೦೦, ಮಲ್ಲಯ್ಯನಗುಡ್ಡ ಶಾಸನಗಳಲ್ಲಿ ಬಲ್ಲಕುಂದೆನಾಡು, ಸಿಂದವಾಡಿನಾಡು, ಕುಂತಲನಾಡು ಮುಂತಾದ ಬಗೆಗೆ ರಾಜ್ಯವಿಸ್ತಾರದ ಮಾಹಿತಿಯಿದೆ. ಆಂಧ್ರದ ಆಯಿಜೆ - ೩೦೦, ನಾಡನ್ನು ಗದ್ವಾಲ್ ತಾಲ್ಲೂಕಿನ 'ಪುಡೂರು' ಎಂಬ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಚಾಲುಕ್ಯರ ಇನ್ನೊಂದು ವಂಶವೂ ಇದೆ. ಕನ್ನಡದಲ್ಲಿ ಶಾಸನವನ್ನು ಬರೆಯಿಸಿದ ಇವರು ಕಣೆಯಕಲ್ಲು - ೩೦೦, ಕಲ್ಯಾಣದುರ್ಗ, ಗುತ್ತಿನಾಡು, ಮಡಕಸಿರಾ, ರಾಯದುರ್ಗ ಪ್ರಾಂತ್ಯಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಸಿಂದವಾಡಿ ನಾಡಿನ ಮಹಾ ಮಂಡಲೇಶ್ವರ ಕಲ್ಯಾಣದ ಚಾಲುಕ್ಯರ ಮೂರನೇ ಸೋಮೇಶ್ವರನ ಮಗ ಯುವರಾಜ ತೈಲಪದೇವನು ಪಾದಪದ್ಮೋಪಜೀವಿಯಾಗಿದ್ದ' ಎಂಬುದನ್ನು ಆದವಾನಿಯ ತುಂಬುಳದ ಶಾಸನದಲ್ಲಿ ಅವನ ವಂಶದ ವಿವರಣೆಯು ಬರುತ್ತದೆ. ತೈಲಪನು ಗುತ್ತಿದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು.

ಕಲ್ಯಾಣದ ಚಾಲುಕ್ಯರ ತರುವಾಯ ಬಳ್ಳಾರಿ ಪ್ರದೇಶವನ್ನು ಕಳಚೂರ್ಯ ಅರಸರೂ ಆಳ್ವಿಕೆ ನಡೆಸಿದ ಬಗೆಗೆ ಈ ಪ್ರದೇಶದಲ್ಲಿ ದೊರೆಯುವ ಅವರ ನಾಲ್ಕು ಶಿಲಾಶಾಸನಗಳಿಂದ ತಿಳಿದುಬರುತ್ತದೆ.

೬.೧.೭. ನೊಳಂಬರು

ಕಂಪಿಲಿ'ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ನೊಳಂಬರು ಬಲ್ಲಕುಂದೆ, ಕಂಚುಗಾರ ಬೆಳ್ಗಲಿ, ಮಲ್ಲಯ್ಯನಗುಡ್ಡ, ಕಲ್ಕಂಭ, ಓರುವಾಯಿ, ಸಿರಿವಾರ ಮುಂತಾದಲ್ಲಿ ದೊರೆತ ಶಾಸನಗಳಿಂದ ತಮ್ಮ ರಾಜಕೀಯ, ಸಾಂಸ್ಕೃತಿಕ ಚರಿತ್ರೆಯನ್ನು ಬಿತ್ತರಿಸಿದ್ದಾರೆ. ನೊಳಂಬವಾಡಿ - ೩೨೦೦೦ ಎಂಬ ದೊಡ್ಡನಾಡಿಗೆ ಈ ಪ್ರದೇಶಗಳು ಒಳಪಟ್ಟಿದ್ದವು.

ನೊಳಂಬರ ತರುವಾಯ ಮಹಾಬಲಿ ವಂಶೀಯರು, ಬ್ರಹ್ಮಾಧಿರಾಯರು, ವೈದುಂಬರು, ಗುತ್ತವಂಶೀಯರು ಇಲ್ಲಿ ಆಳಿದ್ದಾರೆ. ಅನಂತಪುರ ಜಿಲ್ಲೆಯ 'ಗುತ್ತಿ' ಎಂಬ ಊರು ಬಹುಶಃ ಗುತ್ತ ವಂಶೀಯರಿಂದ ಬಂದಿರಬಹುದೆಂದು ಊಹಿಸಲು ಸಾಧ್ಯವಿದೆ. ಆದರೆ ಈ ಮುಂಚೆಯೇ ಈ ಊರಿನ ಉಲ್ಲೇಖ ಶಾಸನಾದಿಗಳಲ್ಲಿ ದೊರೆಯುತ್ತದೆ.

೬.೧.೮. ಸಿಂದರು

ಬಳ್ಳಾರಿ ಪ್ರದೇಶದಲ್ಲಿ ಕಂಡು ಬರುವ ಪ್ರಮುಖ ಮಾಂಡಳೀಕ ವಂಶಗಳಲ್ಲಿ ಸಿಂದರದೂ ಒಂದು. ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ್ದರಿಂದಾಗಿ ಇವರಿಗೆ ಕುರುಗೋಡಿನ ಸಿಂದರು ಎಂದು ಕರೆಯಲಾಗುತ್ತದೆ. ಬಲ್ಲಕುಂದೆ - ೩೦೦, ಸಿಂದವಾಡಿನಾಡನ್ನೂ ಆಳಿದ್ದಾರೆ. ಇವರಿಗೆ ಸಂಬಂಧಿಸಿ ಸಿಂದಗೆರೆ, ಸಿಂದವಾಳ, (ಬಳ್ಳಾರಿ ತಾಲ್ಲೂಕು), ಸಿಂಧನೂರು (ರಾಯಚೂರು ಜಿಲ್ಲಾ) ಎಂಬಂತಹ ಸ್ಥಳನಾಮಗಳು ಅವರ ವಂಶದ ಹೆಸರಿನಿಂದಲೇ ಕರೆಯಲ್ಪಟ್ಟವುಗಳೆಂದು ತಿಳಿಯುತ್ತದೆ.

ಸಿಂದರ ತರುವಾಯ ಈ ಪ್ರದೇಶವನ್ನು ಪಾಂಡ್ಯರು ಆಡಳಿತಕ್ಕೆ ಬಂದು, ಪ್ರಬಲವಾಗಿ ಬೆಳೆದರು. ನಂತರ ಹೊಯ್ಸಳರು ಆಡಳಿತಕ್ಕೆ ಬಂದರು. ಇವರ ನಂತರ ಯಾದವರು ಆಳ್ವಿಕೆಗೆ ಬಂದರು. ದೇವಗಿರಿಯ ಯಾದವರು ಆಳುತ್ತಿದ್ದ ಕಾಲದಲ್ಲಿ ಈಗಿನ ಆದವಾನಿಯನ್ನು 'ಯಾದವಗಿರಿ' ಎಂದು ಕರೆಯಲಾಗುತ್ತಿತ್ತೆಂಬುದಾಗಿ ಸ್ಥಳೀಯ ದಾಖಲೆಗಳಿಂದ ತಿಳಿದು ಬರುತ್ತದೆ. ಯಾದವರು ಮೂಲತಃ ದೇವಗಿರಿಯವರು. ಇವರಿಗೆ ಸಂಬಂಧಿಸಿ ಯಾದಗಿರಿ, ಯಾದವಗಿರಿ, ದೇವಗಿರಿ, ಮುಂತಾದ ಸ್ಥಳನಾಮಗಳು ಹುಟ್ಟಿಕೊಂಡಿರುವುದನ್ನು ಗುರುತಿಸಬಹುದು.

**೬.೧.೯. ವಿಜಯನಗರದ ಅರಸರು**

ವಿಜಯನಗರದ ಅರಸರ ತವರು ಜಿಲ್ಲೆಯಾದ ಬಳ್ಳಾರಿಯಲ್ಲಿ ಅನೇಕ ಶಾಸನಗಳು ಅವರ ವಂಶದ ಚರಿತ್ರೆಯನ್ನು ನಿರ್ವಚಿಸುತ್ತವೆ. ಅಲ್ಲದೇ ಅನಂತಪುರ, ಕರ್ನೂಲು ಮುಂತಾದ ಆಂಧ್ರಪ್ರದೇಶದಾದ್ಯಂತ ಅಲ್ಲಲ್ಲಿ ಇವರಿಗೆ ಸಂಬಂಧಿಸಿದ ಶಾಸನಗಳಿವೆ. ಕೃಷ್ಣದೇವರಾಯ, ಸದಾಶಿವರಾಯ, ಅಚ್ಯುತದೇವರಾಯನ ಕಾಲದ ಶಾಸನಗಳೇ ಈ ಭಾಗದಲ್ಲಿ ದೊರೆತಿವೆ. ದೊರೆತ ಶಾಸನಗಳೆಲ್ಲ ಬಹುತೇಕ ದಾನಶಾಸನಗಳಾಗಿದ್ದು ಕೆರೆ, ಗ್ರಾಮ, ದೇವಾಲಯಗಳ ನಿರ್ಮಾಣದ ಬಗೆಗೆ ಹಾಗೂ ಅವುಗಳ ನವೀಕರಣ, ಪುನರ್ ನಾಮಕರಣ, ಜೀರ್ಣೋದ್ಧಾರ ಮುಂತಾದ ವಿವರಗಳನ್ನು ಒದಗಿಸುತ್ತವೆ. ವಿಜಯನಗರದ ಅರಸರ ಕಾಲದಲ್ಲಿ ಅನೇಕ ಗ್ರಾಮಗಳು ನಿರ್ಮಾಣಗೊಂಡವು. ಆ ಗ್ರಾಮಗಳಿಗೆ ಆಳರಸರ ಹೆಸರುಗಳನ್ನೂ ನೀಡಲಾಯಿತು. ಅದರಂತೆ ಮುಂಚೆ ಕೆಲವು ಗ್ರಾಮಗಳಿದ್ದು, ಅವುಗಳಿಗಿದ್ದ ಹೆಸರನ್ನು ಪ್ರತಿನಾಮಕರಣ ಮಾಡಿದರು. ಕಮಲಾಪುರ, ನಾಗಲಾಪುರ, ನಾಗೇನಹಳ್ಳಿ, ನಾಗಸಮುದ್ರ, ದೇವಲಾಪುರ, ವಿಠಲಾಪುರ, ಹೊಸಪೇಟೆ ಮುಂತಾದ ಹೊಸ ಗ್ರಾಮಗಳು ಆ ಕಾಲಾವಧಿಯಲ್ಲಿ ನಿರ್ಮಾಣಗೊಂಡವೆಂದು ತಿಳಿಯುತ್ತದೆ. ಈ ಗ್ರಾಮಗಳು ಶಾಸನಗಳಲ್ಲಿಯೂ ಉಕ್ತಗೊಂಡಿವೆ.

ಆಂಧ್ರದ ರಾಯುಲ ಸೀಮೆಯ ಭಾಗದಲ್ಲಿ ದೊರೆತಿರುವ ವಿಜಯನಗರ ದೊರೆಗಳ ಶಾಸನಗಳಲ್ಲಿ ಸಾಮ್ರಾಜ್ಯನಿಷ್ಠರಾದ ಸೇವಕರಿಗೆ, ನಾಯಕತನ, ಗೌಡಿಕೆ, ತಳವಾರಿಕೆ ಮುಂತಾದ ಸ್ಥಾನಮಾನ ಹಾಗೂ ದತ್ತಿದಾನವನ್ನು ನೀಡಿದ ಪ್ರಸ್ತಾಪಗಳಿವೆ. ಕ್ರಿ.ಶ. ೧೩೪೦ ರಿಂದ ೧೬೦೪ ರವರೆಗೂ ಇಲ್ಲಿ ಸುಮಾರು ೧೫೦ ಶಿಲಾಶಾಸನಗಳು ಲಭ್ಯವಾಗಿವೆ. ವಿಜಯನಗರದ ಅತ್ಯಂತ ಪ್ರಾಚೀನ ಶಾಸನ ಕರ್ನೂಲು ಜಿಲ್ಲೆಯ 'ಕೋಡುಮೂರು' ಎಂಬಲ್ಲಿದೆ. ಪೆನುಗೊಂಡೆಯೊಂದಿಗೆ ವಿಜಯನಗರದ ಅರಸರು ಅವಿನಾಭಾವ ಸಂಬಂಧವನ್ನು ಹೊಂದಿದ್ದರು. ಆಂಧ್ರದಲ್ಲಿ ಒಂದೇ ವಿಷಯವನ್ನು ನಿರೂಪಿಸುವ ಕನ್ನಡ ಮತ್ತು ತೆಲುಗು ಎರಡೂ ಭಾಷೆಯ ಶಾಸನಗಳು ಇವರ ಕಾಲದಲ್ಲಿ ರಚನೆಗೊಂಡಿವೆ.

ಅನಂತಪುರ ಜಿಲ್ಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ದಟ್ಟವಾದ ಪ್ರಭಾವವಿರುವುದು ತಿಳಿಯುತ್ತದೆ. ಅನೇಕ ಸ್ಥಳನಾಮಗಳು ಈ ಅರಸರ ಪ್ರತಿನಾಮಕರಣ ಕ್ರಿಯೆಗೆ ಒಳಪಟ್ಟಿವೆ. ಅನಂತಪುರ, ಕೃಷ್ಣರಾಯಪುರ, ಯಿಂಮಡಿ ಕಾಚಾಪುರ, ವೀರನರಸಿಂಹರಾಯಪುರ, ಬುಕ್ಕ ಸಮುದ್ರ ಮುಂತಾದ ಸ್ಥಳನಾಮಗಳು ಇಲ್ಲಿವೆ.

ವಿಜಯನಗರ ಅರಸರ ತರುವಾಯ ಬಿಜಾಪುರದ ಸುಲ್ತಾನರು ಆದವಾನಿ, ತೊರಗಲ್ಲು, ಸಿರುಗುಪ್ಪ ಮುಂತಾದ ಪ್ರದೇಶಗಳನ್ನು ಆಳಿದರು. ಇಲ್ಲಿ ದೊರೆಯುವ ಪರ್ಶಿಯನ್, ಕನ್ನಡ, ತೆಲುಗು ಶಾಸನಗಳಿಂದ ಇದು ತಿಳಿಯುತ್ತದೆ.

ಹೈದರಾಲಿ, ಟಿಪ್ಪುಸುಲ್ತಾನರು ಈ ಪ್ರದೇಶವನ್ನು ಆಳಿದ ಬಗೆಗೆ ಕ್ರಿ.ಶ. ೧೭೮೦ರ ಕುರುಗೋಡಿನ ಶಾಸನವು ಆದವಾನಿಯನ್ನು ಟಿಪ್ಪುಸುಲ್ತಾನರು ವಶಪಡಿಸಿಕೊಂಡಿದ್ದನೆಂದು ತಿಳಿಸುತ್ತದೆ. ಅಲ್ಲದೆ ಗೆಝಟಿಯರ್ ಈ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಆದವಾನಿಯು ಮುಸಲ್ಮಾನರ ದೊರೆಗಳು, ನವಾಬರ ಆಡಳಿತಕ್ಕೆ ಒಳಗಾಗಿತ್ತು. ಇಲ್ಲಿ ದೊರೆಯುವ ಗುಂಬಜ್‌ಗಳು, ದರ್ಗಾಗಳು ಇದನ್ನು ತಿಳಿಸುತ್ತವೆ. ಅಲ್ಲದೇ ಆದವಾನಿಯ ನವಾಬ 'ಸಿದ್ದಿಮಸೂದ್ ಖಾನ್' ಎಂಬುವವನ ಹೆಸರಿನಲ್ಲಿ ಒಂದು ಬಾವಿಯನ್ನು ನಿರ್ಮಿಸಲಾಯಿತು. ಇಂದು ಅದನ್ನು ಆದವಾನಿಯ ಸಿದ್ದಿ ವೆಂಕಣ್ಣನ ಬಾವಿ ಎಂದು ಕರೆಯಲಾಗುತ್ತದೆ. ಸಿರುಗುಪ್ಪ ತಾಲ್ಲೂಕಿನಲ್ಲಿ ಕೆಲವು ಬುರುಜುಗಳು ಮುಸ್ಲಿಂ ದೊರೆಗಳ, ಆಡಳಿತಗಾರರ ಹೆಸರಿನಲ್ಲಿ ಕರೆಯಲ್ಪಡುತ್ತಿವೆ. ಹುಸೇನಿ ಬುರ್ಜು, ಸಾಹೇಬ ಬುರ್ಜುಗಳು ಇಂದಿಗೂ ಇವೆ.

ಮುಸ್ಲಿಂ ಆಡಳಿತದ ನಂತರ ಈ ಪ್ರದೇಶದಲ್ಲಿ ಹಂಡೆಯಪಾಳೆಗಾರರು ಅನಂತಪುರದಿಂದ ಆಳ್ವಿಕೆಯನ್ನು ಆರಂಭಿಸಿ, ಬಳ್ಳಾರಿಯನ್ನೂ ಆಳಿದರು. ಈ ಕಾಲಕ್ಕೆ ಆಂಗ್ಲರ ಆಗಮನವಾಯಿತು. ಆಂಗ್ಲರು ತಮ್ಮ ಆಳ್ವಿಕೆಯನ್ನು ಈ ಪ್ರದೇಶಕ್ಕೂ ವಿಸ್ತರಿಸಿ, ಬಳ್ಳಾರಿಯನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿದರು. ಇವರ ಕಾಲಾವಧಿಯಲ್ಲಿ ಸ್ಥಳನಾಮಗಳು ಬಹಳಷ್ಟು ಪ್ರಭಾವವನ್ನು ಹೊಂದಿ, ಇಂಗ್ಲಿಶ್ ಭಾಷೆಯನ್ನು ದುಡಿಸಿಕೊಂಡವು. ಮುಂದೆ ಸ್ವಾತಂತ್ರ್ಯ ನಂತರದಲ್ಲಿ ದೇಸೀಯವಾಗಿ ೧೯೫೩ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯ ಹೋರಾಟಗಳು ಆರಂಭವಾದವು. ಈ ಹಿನ್ನೆಲೆಯಲ್ಲಿ ೧೯೫೬ರಲ್ಲಿ ಕರ್ನಾಟಕ ರಾಜ್ಯ ಏಕೀಕರಣವಾಯಿತು. ಭಾಷಾವಾರು ಪ್ರಾಂತ್ಯದ ರಚನೆಯಿಂದ ಅಚ್ಚಗನ್ನಡದ ಅನೇಕ ಪ್ರದೇಶಗಳು ವಿವಿಧ ರಾಜ್ಯಗಳಲ್ಲಿ ಉಳಿದುಕೊಂಡವು. ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು, ಕಲ್ಯಾಣದುರ್ಗ, ಮಡಕಶಿರಾ, ರಾಯದುರ್ಗ ಪ್ರಾಂತಗಳು ಆಂಧ್ರದಲ್ಲಿಯೇ ಉಳಿದವು. ನಂತರ ಭಾಷಿಕ ಗಡಿಯನ್ನು ಹೊರತುಪಡಿಸಿ, ರಾಜಕೀಯ ಗಡಿಯಿಂದಾಗಿ ಅನೇಕ ಸ್ಥಿತ್ಯಂತರಗಳು ಗ್ರಾಮನಾಮ, ಸ್ಥಳನಾಮಗಳಲ್ಲಿ ಉಂಟಾಗಿವೆ.

## ೬.೨. ಶಾಸನೋಕ್ತ ಸ್ಥಳನಾಮಗಳು

ಸೃಷ್ಟಿಯ ಪ್ರತಿಯೊಂದು ಪದಾರ್ಥಕ್ಕೂ ಒಂದು ಹಿನ್ನೆಲೆ, ಇತಿಹಾಸವಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ, ಪ್ರತಿಯೊಂದು ಊರಿಗೂ ಚರಿತ್ರೆಯಿರುತ್ತದೆ. ವ್ಯಕ್ತಿಯ ಹೆಸರು, ಊರಿನ ಹೆಸರು ಬರಿಯ ಹೆಸರುಗಳಲ್ಲ. ಆ ಹೆಸರುಗಳ ಉಸಿರಲ್ಲಿ, ಬಸಿರಲ್ಲಿ ಆತ್ಮಚರಿತ್ರೆ ಇರುತ್ತದೆ."[೨] ಅಂತಹ ಆತ್ಮಚರಿತ್ರೆಯನ್ನು ಸಂಗ್ರಹಿಸುವಲ್ಲಿ ಶಾಸನಗಳಿಗೆ ಮಹತ್ವವಿದೆ. "ಶಾಸನಗಳು ಐತಿಹಾಸಿಕ ದಾಖಲೆಗಳಷ್ಟೇ ಅಲ್ಲ, ಸ್ಥಳನಾಮಕೋಶಗಳೂ ಅಹುದು."[೩] ಸ್ಥಳನಾಮಗಳು ಶಾಸನಗಳಿಗಿಂತ ಸಾವಿರಾರು ವರ್ಷದ ಪೂರ್ವದ ಇತಿಹಾಸವನ್ನೂ ಕಟ್ಟಿಕೊಡುತ್ತವೆ. ಇಂತಹ ಸ್ಥಳನಾಮಗಳ ಸಂಪೂರ್ಣ ಮಾಹಿತಿಯು ನಂತರದ ತಲೆಮಾರಿನ ಜನರಿಗೆ ಇಲ್ಲದೇ ಹೋಯಿತು. ಇದಕ್ಕೆ ಕಾರಣ ಅವರು ಆ ಕಡೆ ಗಮನ ಹರಿಸದೇ ಹೋದುದು. ನಂತರ ತಮ್ಮ ವಾಸದ ನೆಲೆಯ ಹೆಸರುಗಳ ಕುರಿತಾದ ಜ್ಞಾನ ಮೂಡಿದಾಗಿನಿಂದ ಅಧಿಕೃತವಾಗಿ ಅವರವರ ಹಟ್ಟಿ, ಹಾಡಿ, ಗ್ರಾಮ, ಊರು, ಪಟ್ಟಣ, ನಗರಗಳ ಚರಿತ್ರೆಯು ವಿಕಸನ ಹೊಂದುತ್ತಾ ಬಂದುದು ನಮ್ಮೆದುರಿಗಿರುವ ಸತ್ಯ. ಇದು ಆರಂಭವಾದ ತದನಂತರದಲ್ಲಿ ಪ್ರಭುತ್ವದ

ಚೌಕಟ್ಟಿನೊಳಗೆ ಬದುಕನ್ನು ನಿರ್ಮಿಸಿಕೊಂಡ ಜನತೆಯು ಇತಿಹಾಸದ ಸ್ಪಷ್ಟ ದಾಖಲೆಗಳ ಕಡೆ ಗಮನಹರಿಸಿದರು. ರಾಜ, ಸಾಮಂತ, ಮಂತ್ರಿ, ಗಾವುಂಡಾದಿಗಳು ವಿಶೇಷವೆನಿಸಬಹುದಾದ ಅಥವಾ ಆಜ್ಞೆಯರೂಪದ, ಕುರುಹಿನ ಸವಿನೆನಪಿನ ಸಲುವಾಗಿ ಶಾಸನ, ಕಾವ್ಯಾದಿಗಳಲ್ಲಿ ಚರಿತ್ರೆಯನ್ನು ಕಟ್ಟಿಡುವ ಪ್ರಯತ್ನ ಮಾಡಿದರು. ಇಲ್ಲಿಂದಲೇ ಸ್ಥಳನಾಮಗಳ ಅಧಿಕೃತ ದಾಖಲಾತಿಯು ಆರಂಭವಾಯಿತು. ಈ ಮುಂಚೆ ಮೌಖಿಕ ಪರಂಪರೆಯಲ್ಲಿ ಅಡಗಿ ಕುಳಿತಿದ್ದ ಹೆಸರುಗಳು, ಕಾಲಕ್ರಮದಲ್ಲಿ ನಾಶವಾಗುವ ಹಂತದಿಂದ, ಬರವಣಿಗೆಯಲ್ಲಿ ರಕ್ಷಿಸುವ ಕೆಲಮಟ್ಟಿನ ಕೆಲಸ ಆರಂಭವಾಯಿತು. ಈ ಕಾರಣದಿಂದಲೇ ಶಾಸನ ಮತ್ತು ಸ್ಥಳನಾಮಗಳಿಗೆ ಅವಿನಾಭಾವ ಸಂಬಂಧವಿದೆ. "ಶಾಸನಗಳಿಲ್ಲದ ಊರುಗಳು ಅಪರೂಪವಾಗಿ ಸಿಗಬಹುದಾದರೂ, ಊರುಗಳ ಉಲ್ಲೇಖಗಳಿಲ್ಲದ ಶಾಸನಗಳು ಇಲ್ಲವೆಂದೇ ಹೇಳಬೇಕು. ರಾಜ್ಯಾಡಳಿತ, ಯುದ್ಧ, ದೇವಾಲಯನಿರ್ಮಾಣ, ದಾನಧರ್ಮ ಇವೇ ಮೊದಲಾದ ಹಲವಾರು ವಿಷಯಗಳ ಚಲಾವಣೆ ಸಾಧ್ಯವಿಲ್ಲದ್ದರಿಂದ ಅನೇಕ ಭೌಗೋಳಿಕ ಹಾಗೂ ಚಾರಿತ್ರಿಕಾಂಶಗಳು ಶಾಸನಗಳಲ್ಲಿ ದೊರೆಯುವುದರಿಂದ, ಸ್ಥಳನಾಮ ಅಧ್ಯಯನಕ್ಕೆ ಅವು ತುಂಬಾ ನೆರವಾಗುತ್ತವೆ. ಅವುಗಳ ಸಹಾಯದಿಂದ ಊರುಗಳ ಗಡಿಗಳನ್ನೂ ಸಂದೇಹಕ್ಕೆಡೆಯಿರದಂತೆ ನಿರ್ಣಯಿಸಬಹುದು. ರಾಜರ ಇತಿಹಾಸದ ಜತೆಗೆ ಊರುಗಳ ಇತಿಹಾಸಕ್ಕೂ ಅವೇ ಆಕರವೆನ್ನಬಹುದು. ಅವುಗಳ ಸ್ಥಾನಮಾನ, ಏರಿಳಿತಗಳೂ ಕಾಲಕಾಲಕ್ಕೆ ಅವು ಪಡೆದ ಪ್ರತಿನಾಮಗಳ ವಿವರಗಳೂ ಆಗಾಗ್ಗೆ ಪ್ರಾಪ್ತವಾದ ಉಚ್ಚರಣಾ ವ್ಯತ್ಯಾಸಗಳೂ ಶಾಸನಗಳಿಂದ ತಿಳಿಯುತ್ತವೆ."[೪]

ಕಾಲಾನುಕ್ರಮದಲ್ಲಿ ರಚಿಸಿ, ರಕ್ಷಿಸಲ್ಪಟ್ಟ ಶಿಲಾಶಾಸನ, ಲೋಹಶಾಸನಗಳಲ್ಲಿ ದಾಖಲಾದ ಆಂಧ್ರ - ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳಲ್ಲಿ ಅನೇಕ ವಿಶೇಷತೆಗಳಿವೆ. ಭೂತಕಾಲದ ದಾಖಲೆಗಳಾಗಿ ಉಳಿದ ಈ ಶಾಸನಗಳಲ್ಲಿ ಉಕ್ತವಾದ ಸ್ಥಳನಾಮಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ. ಮುಖ್ಯವಾಗಿ ಇಲ್ಲಿನ ಶಾಸನೋಕ್ತ ಸ್ಥಳನಾಮಗಳು ೯ನೇ ಶತಮಾನದಿಂದ ಆರಂಭವಾಗಿ ೧೭ನೇ ಶತಮಾನದವರೆಗಿನ ಶಾಸನಗಳನ್ನು ಆಧರಿಸಿವೆ. ಶಾಸನೋಕ್ತ ಸ್ಥಳನಾಮಗಳ ಪಟ್ಟಿಯಲ್ಲಿ ಆಲೂರು, ಆದವಾನಿ, ಬಳ್ಳಾರಿ, ಸಿರುಗುಪ್ಪ ತಾಲ್ಲೂಕುಗಳು ಒಳಪಟ್ಟಿವೆ. ಆ ಪಟ್ಟಿ ಕೆಳಗಿನಂತಿದೆ.

## ಆಲೂರು ತಾಲ್ಲೂಕು - ALR

| ಕ್ರ.ಸಂ. | ಶಾಸನೋಕ್ತ ಸ್ಥಳನಾಮಗಳು | ಶಾಸನದ ಕಾಲ (ಕ್ರಿ.ಶ) | ರಾಜವಂಶ |
|---|---|---|---|
| ೧. | ಅರೆಕೆಜೆ | ೧೨೮೭ | ಯಾದವ |
| ೨. | ಕಮ್ಮಾಱ ಚೆಱುವು (ಕಮ್ಮರಚೇಡು) | ೧೦೫೪ | ಚಾಲುಕ್ಯ |
| ೩. | ಕುಱುಕುಂದೆ | - | ಚಾಲುಕ್ಯ |
| ೪. | ಚಿಪ್ಪಗಿರ್ಯಾ | - | ಚಾಲುಕ್ಯ |
| ೫. | ಛತ್ರದ ಹಳ್ಳಿ (ಛತ್ರಗುಡಿ) | ೧೫೫೯ | ವಿಜಯನಗರ |
| ೬. | ನಗರೂರು | - | ಚಾಲುಕ್ಯ |
| ೭. | ನೆರಣಿಕೆ (ನೇರಳಿಕೆ) | ೧೨೭೬ | ಸಿಂಧರು? |

| | | | |
|---|---|---|---|
| ೮. | ಬೆಂಬಗುಡಿ | ೧೨೮೭ | ಯಾದವ |
| ೯. | ಬೆಳುದೊಣೆ (ಬೆಳ್ಳೋನಾ) | ೧೫೯೨ | ವಿಜಯನಗರ |
| ೧೦. | ಮೀನಗೊಂದಿ | ೧೫೨೧ | ವಿಜಯನಗರ |
| ೧೧. | ರಾಮದುರ್ಗ | - | ರಾಷ್ಟ್ರಕೂಟ |
| ೧೨. | ವಿರುಪ ಸಮುದ್ರ | ೧೫೧೯ | ವಿಜಯನಗರ |
| ೧೩. | ಹಾಲಹರಿವಿ | ೯೩೧ | ರಾಷ್ಟ್ರಕೂಟ |
| ೧೪. | ಹುಳೇಬೀಡು | ೧೦೫೫ | ಚಾಲುಕ್ಯ |
| ೧೫. | ಹೊಳಲಗುಂದಿ | ೧೧೨೫ | ಚಾಲುಕ್ಯ |

## ಆದವಾನಿ ತಾಲ್ಲೂಕು - ADN

| ಕ್ರ.ಸಂ. | ಶಾಸನೋಕ್ತ ಸ್ಥಳನಾಮಗಳು | ಶಾಸನದಕಾಲ (ಕ್ರಿ.ಶ) | ರಾಜವಂಶ |
|---|---|---|---|
| ೧. | ಆದವಾನಿ - ೫೦೦ | ೧೧೪೨ | ಚಾಲುಕ್ಯ |
| ೨. | ಕಂತರಿಕೆ (ಕಾತರಿಕಿ) | ೧೧೮೪ | ಚಾಲುಕ್ಯ |
| ೩. | ಕಜೆಕಂಠದೇವರಪುರ | ೧೧೪೮ | ಚಾಲುಕ್ಯ |
| ೪. | ಕೋಟೆಯಕಲ್ಲು | ೧೫೪೨ | ವಿಜಯನಗರ |
| ೫. | ಕೋಸಗಿಯಹಾಳು | ೧೧೬೪ | ಕಳಚೂರ್ಯ |
| ೬. | ಕವತಾಳ - ೧೨ (ಕೌತಾಳಂ) | - | ಚಾಲುಕ್ಯ |
| ೭. | ಗುರುಜಾಲ | ೧೧೧೧ | ಚಾಲುಕ್ಯ |
| ೮. | ಚಿನ್ನತುಂಬಳಂ | ೧೦೫೨ | ಚಾಲುಕ್ಯ |
| ೯. | ಚಿಕ್ಕಬನವಸೆ | ೧೧೦೬ | ಚಾಲುಕ್ಯ |
| ೧೦. | ತುಂಬಳಬೀಡು - ೩೦ | ೧೧೪೮ | ಚಾಲುಕ್ಯ |
| ೧೧. | ದೇವರಬೆಟ್ಟ | ೧೨೧೧ | ಸಿಂಧರು |
| ೧೨. | ದೊಡ್ಡಿಮಾಕಲ | ೯೩೧ | ರಾಷ್ಟ್ರಕೂಟ |
| ೧೩. | ನಂದವರಂ | ೧೧೮೬ | ಚಾಲುಕ್ಯ |
| ೧೪. | ನಂದಾವುರ | ೧೧೮೬ | ಚಾಲುಕ್ಯ |
| ೧೫. | ನೀಲಗುಂದ | ೧೧೦೭ | ಚಾಲುಕ್ಯ |
| ೧೬. | ಪಿರಿಯಸೋಗೆಯನೂರು | ೧೦೯೨ | ಚಾಲುಕ್ಯ |
| ೧೭. | ಪೆದ್ದ ಕೊಟ್ಟಲಿಕಿ | ೧೨೦೨ | ಯಾದವ |
| ೧೮. | ಪೆದ್ದತುಂಬಳಂ | ೧೧೦೬ | ಚಾಲುಕ್ಯ |
| ೧೯. | ಬದಲಪಾಳು | ೧೦೫೫ | ಚಾಲುಕ್ಯ |
| ೨೦. | ಬಸರುಕೋಡು | ೧೨೭೮ | ಯಾದವ |
| ೨೧. | ಬಡಗಿಕುಂಟೆ | ೧೧೦೬ | ಚಾಲುಕ್ಯ |
| ೨೨. | ಬಾಪುರಂ | ೧೧೭೨ | ಕಲಚೂರ್ಯ |
| ೨೩. | ಬೂದೂರು | ೧೫೬೦ | ವಿಜಯನಗರ |
| ೨೪. | ಬೊಮ್ಮಲಾಪುರ | ೧೫೩೮ | ವಿಜಯನಗರ |
| ೨೫. | ಮಂಚಾಲ, ಮಂಚಾಳ | ೮೯೩ - ೯೪ | ರಾಷ್ಟ್ರಕೂಟ |
| ೨೬. | ಮಲಕಾಪುರ | ೧೧೮೪ | ಚಾಲುಕ್ಯ |
| ೨೭. | ಸಾಂಬುಕಲ್ಲು | ಕ್ರಿ.ಶ. ೧೨೭೮ | ಯಾದವ |

## ಬಳ್ಳಾರಿ ತಾಲ್ಲೂಕು - BLR

| ಕ್ರ.ಸಂ. | ಶಾಸನೋಕ್ತ ಸ್ಥಳನಾಮಗಳು | ಶಾಸನದಕಾಲ (ಕ್ರಿ.ಶ) | ರಾಜವಂಶ |
|---|---|---|---|
| ೧. | ಅರಕೆರೆ | ೧೧೭೩ | - |
| ೨. | ಅರಳಿಯಹಾಳ್ | ೧೧೭೩ | - |
| ೩. | ಕಗ್ಗಲ್ಲು | ೧೫೬೩ | ವಿಜಯನಗರ |
| ೪. | ಕಪ್ಪೆಕಲ್ಲೂರು, ಕಪ್ಪೆಕಲ್ಲು, ಕಪ್ಪಗಲ್ಲು | ೧೦೪೪ | ಚಾಲುಕ್ಯ |
| ೫. | ಕಂಪಿಲೆ | ೧೨೧೭ | - |
| ೬. | ಕಟಹಳ್ಳಿ | ೧೧೯೫ | - |
| ೭. | ಕುಱುಂಗೋಡು, ಕುಱುಗೋಡು (ಅಭಿನವ ದ್ವಾರವತಿಪುರ) | ೧೧೧೭ | - |
| ೮. | ಕುಱುಗೋಡುದುರ್ಗ | ೧೧೭೬ | ಕಲಚೂರ್ಯ |
| ೯. | ಕೊಟ್ಟಿತೊಣೆ (ಕುಡುತಣಿ) | ೧೧೪೮ | ಕಲ್ಯಾಣದ ಚಾಲುಕ್ಯ |
| ೧೦. | ಕೊತ್ತಲಜಿಂತೆ, ಕೊಟ್ಟಲ ಜಿನ್ತ್ರಗ್ರಾಮ | ೧೧೭೩ | ಸಿಂಧುವಂಶ (ರಾಚಮಲ್ಲ) |
| ೧೧. | ಕೊಳ್ಗಲ | ೯೬೪ | ರಾಷ್ಟ್ರಕೂಟ |
| ೧೨. | ಕೋಳೂರು | ೧೧೧೭ | - |
| ೧೩. | ಕೊಂಕಣಗೇರಿ | ೧೨೧೦ | - |
| ೧೪. | ಕೊಂಚಗೆರೆ | ೧೧೭೬ | - |
| ೧೫. | ಗೋಱನಹಾಳ್ | ೧೧೭೩ | - |
| ೧೬. | ಚಿಹನಪಟ್ಟಿ, ಚಿಯನಪಟ್ಟಿ | ೧೦೨೮ | ನೊಳಂಬ ಪಲ್ಲವ |
| ೧೭. | ಚಿಟಿಕಿನಹಾಳ್ | - | ವಿಜಯನಗರ |
| ೧೮. | ಚಿನಕುಂಟೆ | ೧೫೪೩ | ವಿಜಯನಗರ |
| ೧೯. | ಜಂತೆಗೆಲ | - | - |
| ೨೦. | ತಡಗ್ರಾಮ | ೯೬೭ | - |
| ೨೧. | ದಮ್ಮೂರ, ದಂಮರ, ದಮ್ಮೂರು | ೧೧೦೬ - ೦೭ | ಚಾಲುಕ್ಯ |
| ೨೨. | ದೊಂಡವಟ್ಟಿ, ದೊಣ್ಣವಟ್ಟಿ, ದೊಂಡವಟಿ, ದೊಡವಟ್ಟಿ | ೧೧೭೩, ೧೦೪೫, ೧೫೩೪ | ವಿಜಯನಗರ |
| ೨೩. | ನೆರಣ್ಣೆಗಲ್ಲು | ೧೦೨೫ | ವಿಜಯನಗರ |
| ೨೪. | ಬಳ್ಳರೆ, ಬಳ್ಳಾರೆ | ೧೧೪೭ | - |
| ೨೫. | ಬಾಡನಹಟ್ಟಿ | ೧೧೭೩ | - |
| ೨೬. | ಬಿಳುಕುಂಟೆ | ೧೨೧೦ | - |
| ೨೭. | ಬೀಯನಹಟ್ಟಿ | ೧೧೭೩ | - |
| ೨೮. | ಬೆಳುಗಲ್ಲು | ೧೫೬೩ | ವಿಜಯನಗರ |
| ೨೯. | ಭಟ್ಟತಳಗ್ರಾಮ, ಭಟ್ಟತಱುಗ್ರಾಮ | ೯೭೧ | ಸ್ಕಂಧರಾಜ |
| ೩೦. | ಮಹಾವಿನಾಹಾಳ್ | ೧೧೭೬ | - |
| ೩೧. | ಮಣಿವೂರ | ೧೧೭೩ | - |
| ೩೨. | ಮುರುಡನೂರು | ೧೫೨೯ | - |
| ೩೩. | ಮೆದೆಯಹಳ್ಳಿ (ಮೆದೆಯಹಟ್ಟಿ) | ೧೧೩೦ | - |

| | | | |
|---|---|---|---|
| ೩೪. | ಮೋಕ (ಮಲುಕಣ) | ೧೪೩೧ | ವಿಜಯನಗರ |
| ೩೫. | ಯಾಳವೆ (ಯಳವ್ವೆ) | - | ವಿಜಯನಗರ |
| ೩೬. | ಯೋರುವಾಯಿ, ಓರವಾಯಿ | ೧೦೩೬ | ಚಾಲುಕ್ಯ |
| ೩೭. | ರೂಪಲಗುಡಿ | - | - |
| ೩೮. | ಲಿಂಗದೇವನಹಳ್ಳಿ | - | - |
| ೩೯. | ಶ್ರೀಪುರವನಗ್ರಹಾರ | ೧೧೭೩ | ಸಿಂಧುವಂಶ |
| ೪೦. | ಶ್ರೀಪುರ | ೧೧೭೩ | ಸಿಂಧುವಂಶ |
| ೪೧. | ಸಿಂದವಾಡಿ | ೧೧೭೬ | - |
| ೪೨. | ಸಿಂದವೊಳಲ (ಸಿಂಧಪೊಬಲ) | ೧೧೩೦ | - |
| ೪೩. | ಸಿಂದಗೆಜೆ | ೧೧೪೧ | - |
| ೪೪. | ಸಿಜಿಗೆಜೆ | ೧೧೭೬ | - |
| ೪೫. | ಸೂಗೂರ | ೧೧೭೩ | - |
| ೪೬. | ಸೋಮಸಮುದ್ರ | ೧೫೫೬ | ವಿಜಯನಗರ |
| ೪೭. | ಹಟ್ಟಣ | ೧೧೩೦ | - |
| ೪೮. | ಹರಂದಗೆಜ಼್, ಹರದಂಗೆಜೆ > ಹರ್ದಗೇರಿ | ೧೧೩೧ | - |
| ೪೯. | ಹಗರಿ | ೧೫೬೩ | ವಿಜಯನಗರ |
| ೫೦. | ಹಾಳಹನ್ನಸಿ | ೯೭೧ | - |
| ೫೧. | ಹಾಹೆಕಲ್ಲು | ೧೧೭೩ | - |
| ೫೨. | ಹೂಜೆಹಾಳ್ | ೧೫೧೨ | - |
| ೫೩. | ಹೊಲವೇರಿ | ೧೧೭೩ | - |
| ೫೪. | ಹೊಸಕುತ್ತಕನೂರು | ೧೧೪೯ | ಚಾಲುಕ್ಯ |

## ಸಿರುಗುಪ್ಪ ತಾಲ್ಲೂಕು - SRP

| ಕ್ರ.ಸಂ. | ಶಾಸನೋಕ್ತ ಸ್ಥಳನಾಮಗಳು | ಶಾಸನದಕಾಲ (ಕ್ರಿ.ಶ) | ರಾಜವಂಶ |
|---|---|---|---|
| ೧. | ಅಕ್ಕತಂಗೇರಹಾಳ್ | ೧೬ನೇ ಶತಮಾನ | - |
| ೨. | ಆಸಗನೂರು (ಅಗಸೂರು) | ೧೫೫೧ | ವಿಜಯನಗರ |
| ೩. | ಕರಿವೂರು (ಕರೂರು) | ೯೫೭ | ರಾಷ್ಟ್ರಕೂಟ |
| ೪. | ಕಜ್ಜಾಗಾರ ಬೆಳ್ಗಲಿ | ೯೮೧ | ಚಾಲುಕ್ಯ |
| ೫. | ಕಲ್ಲುಕುಟಗನಹಾಳ್ (ಕಲ್ಲುಕುಟಿ) | ೧೦೬೮ | (ದೇವರಸ ಮಹಾಮಂಡಲೇಶ) |
| ೬. | ಕನ್ನರಿಕ | ೧೦ನೇ ಶತಮಾನ | ಗಜಜೀವಿವಂಶ |
| ೭. | ಕರಿವಿಡಿ - ೩೦ | ೧೦೧೭ | ಚಾಲುಕ್ಯ |
| ೮. | ಕುದಿಯ ಪರಿವಿ - ೭೦ | ೧೦೧೭ | ಚಾಲುಕ್ಯ |
| ೯. | ಕೂಟುಗನೂರು | ೧೦೯೧ | ಚಾಲುಕ್ಯ |
| ೧೦. | ಕೂಡಲೂರು | ೧೭ನೇ ಶತಮಾನ | - |
| ೧೧. | ಕೊಳನೂರು | ೧೦೯೧ | ಚಾಲುಕ್ಯ |
| ೧೨. | ಕೌಂಚಗೆರೆ, ಕೌಚಂಗೆರೆ | ೧೧೨೦ | ಚಾಲುಕ್ಯ |
| ೧೩. | ಗುಂಡಿಗೆನೂರ, ಗುಂಡಗೆನುರ | ೧೫೪೨ | ವಿಜಯನಗರ |

| | | | |
|---|---|---|---|
| ೧೪. | ತೆಕ್ಕೆಕಲ್ಲು - ೧೨ | ೧೦೯೧ | ಚಾಲುಕ್ಯ |
| ೧೫. | ತೊಂಡಹಾಳ್ | ೧೦೨೨ | ಜಯಸಿಂಘದೇವನ ಆಳ್ವಿಕೆ |
| ೧೬. | ನಂದಿಪುರ ಗ್ರಾಮ | ೧೪೬೩ | - |
| ೧೭. | ಪಟ್ಟೊಳ್ಳಿ (ಪಟ್ಟಳ) - ೧೦೦ | ೧೦೪೪ | ಚಾಲುಕ್ಯ |
| ೧೮. | ಪಾಪೆಕಲ್ಲು, ಪಾಪೆಕಲ್ಲೂರು | ೧೦೨೦ | ಘಟೆಯಂಕಾರ ರಾಜನ ಆಳ್ವಿಕೆ |
| ೧೯. | ಪಿರಿಯ ಬೆಳ್ಳಹಾವಿ | ೧೧೧೨ | ಚಾಲುಕ್ಯ |
| ೨೦. | ಬಗ್ಗವೂರ | ೧೧ನೇ ಶತಮಾನ | - |
| ೨೧. | ಬಲ್ಲಕುಂದೆ - ೩೦೦, ಬಲ್ಲಕುನ್ನನಾಡು | ೧೦೯೧ | ಚಾಲುಕ್ಯ |
| ೨೨. | ಮಣುವೂರು | - | ಪೆನುಗೊಂಡೆ ವೆಂಕಟಪತಿದೇವನ ಆಳ್ವಿಕೆ |
| ೨೩. | ಚಾಜಾವಿ (ರಾರಾವಿ) | ೧೧ನೇ ಶತಮಾನ | - |
| ೨೪. | ಜಾವಿಹಾಳ | ೧೫೫೪ | ವಿಜಯನಗರ |
| ೨೫. | ಶಾಲಿಗನೂರು | ೧೬೩೫ | - |
| ೨೬. | ಶಿರುಗುಪ್ಪೆ, ಸಿರಿಕುಪ್ಪೆ | ೧೦೯೧ | ಚಾಲುಕ್ಯ |
| ೨೭. | ಸಿರಿಗೆರೆ, ಶಿರಿಗೆರೆ | ೧೬೦೫ | - |
| ೨೮. | ಸೂಗೂರು | ೧೬೯೬ | - |

೬.೨.೧. ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳವಣಿಗೆ

ಶಾಸನಗಳಲ್ಲಿ ಉಕ್ತವಾಗಿರುವ ಸ್ಥಳನಾಮಗಳನ್ನು ಅನುಲಕ್ಷಿಸಿ, ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸಬಹುದು. ಆಯಾ ಕಾಲದಲ್ಲಿ ಬದಲಾದ ಭಾಷೆಯು ಸಹಜವಾಗಿ ಸ್ಥಳನಾಮಗಳ ಮೇಲೆಯೂ ಪ್ರಭಾವ ಬೀರಿರುವುದನ್ನು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಭಾಷೆಯ ಚಾರಿತ್ರಿಕ ಬೆಳವಣಿಗೆಯ ಅಧ್ಯಯನದಲ್ಲಿ ಈ ರೀತಿಯ ಮಾದರಿಯೂ ಕೂಡ ಪ್ರಮುಖವೆಂದು ತಿಳಿಯಬಹುದು. ಇದಕ್ಕೆ ಉದಾಹರಣೆಯಾಗಿ ಕೆಳಕಾಣಿಸಿರುವ ಅಂಶಗಳನ್ನು ನೋಡಬಹುದು.

೬.೨.೨. ಶಕಟರೇಫ ಮತ್ತು ೞ

ಹಳಗನ್ನಡ ಭಾಷೆಯಲ್ಲಿ ಕಾವ್ಯದಲ್ಲಿ ಬಳಕೆಯಾಗಿರುವ ೞ, ಱ ಕಾರಗಳು ಶಾಸನಗಳಲ್ಲಿಯೂ ಬರೆಯಲ್ಪಟ್ಟಿವೆ. ಸ್ಥಳನಾಮಗಳೂ ಈ ಅಕ್ಷರಗಳಿಂದ ಉಲ್ಲೇಖಿಸಲ್ಪಟ್ಟಿವೆ.

| | | | |
|---|---|---|---|
| ೞ : | ಅರಕೆಱೆ | ಕ್ರಿ.ಶ. ೧೧೭೩ | - ALR |
| | ಕಮ್ಮಱ ಚೆರುವು | ಕ್ರಿ.ಶ. ೧೦೫೪ | - ALR |
| | ಕೞೆಕಂಠದೇವಪುರ | ಕ್ರಿ.ಶ. ೧೧೪೮ | - ADN |
| | ಕುೞುಗೋಡು | ಕ್ರಿ.ಶ. ೧೧೧೭ | - BLR |
| | ಕುೞುಕುಂದೆ | - | - ALR |
| | ಕೊಂಚಗೞೆ | ಕ್ರಿ.ಶ. ೧೧೭೬ | - SRP |
| | ಗೊೞನಹಾಳ್ | ಕ್ರಿ.ಶ. ೧೧೭೩ | - BLR |

| | | |
|---|---|---|
| ಭಟ್ಟಿತಜೂಗ್ರಾಮ | ಕ್ರಿ.ಶ. ೯೭೧ | - BLR |
| ಜಾಜಾವಿ | ಕ್ರಿ.ಶ. ೧೧ನೇ ಶತಮಾನ | - SRP |
| ಜಾವಿಹಾಳ್ | ಕ್ರಿ.ಶ. ೧೫೫೪ | - SRP |
| ಸಿಂದಗೆಜೆ | ಕ್ರಿ.ಶ. ೧೧೪೧ | - BLR |
| ಸಿರಿಗೆಜೆ | ಕ್ರಿ.ಶ. ೧೧೭೬ | - BLR |
| ಹರಂದಗೆಜೆ | ಕ್ರಿ.ಶ. ೧೧೩೦ | - BLR |
| ಟ : ಕೂಟಿಗನೂರು | ಕ್ರಿ.ಶ. ೧೦೯೧ | - SRP |
| ಪಿರಿಯ ಬೆಟ್ಟಹಾವಿ | ಕ್ರಿ.ಶ. ೧೧೧೨ | - SRP |

ಮೇಲಿನ ಉದಾಹರಣೆಗಳಿಂದ ಮುಖ್ಯವಾಗಿ ತಿಳಿಯುವುದೆಂದರೆ ೯ನೇ ಶತಮಾನದಿಂದ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಶಕಟರೇಫ ಮತ್ತು ರಳ ಎಂಬ ಎರಡು ವರ್ಣಗಳ ಬಳಕೆಯು ೧೧ನೇ ಶತಮಾನದ ಉತ್ತರಾರ್ಧದವರೆಗೂ ಮುಂದುವರೆದದ್ದು ಶಾಸನಗಳಿಂದ ತಿಳಿಯುತ್ತದೆ. ಅದೇ ವೇಳೆಗೆ 'ರ' ಕಾರವೂ ಜೊತೆ ಜೊತೆಗೆ ಬಳಕೆಯಾಗಿದೆ.

| | | |
|---|---|---|
| ಉದಾ: ಅ\|ರ\|ಕೆ\|ಜೆ\| | ಕ್ರಿ.ಶ. ೧೧೭೩ | - ALR |
| ಕಮ್ಮಾ\|ಱ\|ಚೆ\|ರು\|ವು | ಕ್ರಿ.ಶ. ೧೧೪೮ | - ALR |
| ಹ\|ರ\|ಂದಗೆ\|ಜೆ\| | ಕ್ರಿ.ಶ. ೧೧೩೦ | - BLR |

ಎಂಬ ಸ್ಥಳನಾಮಗಳಲ್ಲಿ 'ರ' ಕಾರ ಮತ್ತು ಶಕಟರೇಫೆ ಎರಡೂ ಒಟ್ಟಿಗೆ ಬಳಸಿರುವುದು ತಿಳಿಯುತ್ತದೆ. ಈ ಕಾರಣದಿಂದ ೧೧ನೇ ಶತಮಾನದಿಂದ ಈಚೆಗಾಗಲೇ ಕನ್ನಡ ಭಾಷೆಯಲ್ಲಿ ಎರಡುರೀತಿಯ ರ' ಕಾರಗಳ ಬೆಳವಣಿಗೆಯು ಚಾಲ್ತಿಯಲ್ಲಿದ್ದುದು ಗಮನಾರ್ಹ.

ಅದರಂತೆ ರಳವೂ ೧೦ನೇ ಶತಮಾನದ ಉತ್ತರಾರ್ಧದಿಂದ ಬಳಕೆಯಾಗುವುದು. ಇದರೊಂದಿಗೆ 'ಳ' ಕಾರವೂ ಬಂದಿದೆ. ಉದಾ : ಪಿರಿಯ ಬೆಟ್ಟಹಾಳ - ಕ್ರಿ.ಶ. ೧೧೧೨ -ಎಂಬ ಸ್ಥಳನಾಮದಲ್ಲಿ 'ಟ್ಟ' ರಳದ ಒತ್ತಕ್ಷರವಾಗಿ ಕುಳ ಬಳಕೆಯಾಗಿರುವುದನ್ನು ಗಮನಿಸಬಹುದು.

೬.೨.೩. ಸಬಿಂದುಕ ಮತ್ತು ಅಬಿಂದುಕಗಳು

ಶಾಸನೋಕ್ತ ಸ್ಥಳನಾಮಗಳಲ್ಲಿ ಕೆಲವು ಗ್ರಾಮಗಳು, ನಿರ್ವಸಿತ ಹೆಸರುಗಳು ಹೆಚ್ಚಾಗಿ ಸಬಿಂದುಕಗಳಾಗಿಯೇ ಬಳಕೆಯಾಗಿವೆ. ಇಂದು ಕೆಲವು ಗ್ರಾಮಗಳಿಗಿರುವ ಹೆಸರು ಶಾಸನಗಳಲ್ಲಿ ಸಬಿಂದುಕವಾಗಿ ಬರೆಯಲ್ಪಟ್ಟಿವೆ. ಇನ್ನು ಕೆಲವು ಗ್ರಾಮಗಳ ಹೆಸರುಗಳು ಶೂನ್ಯಕ್ಕೆ ಪರ್ಯಾಯವಾಗಿ 'ನ' ಕಾರವನ್ನು ಪಡೆದುಕೊಂಡಿವೆ. ಶೂನ್ಯ ಸಹಿತವಾಗಿ ಬಳಕೆಯಾದ ಸ್ಥಳನಾಮಗಳು (ಕೆಲವು) ಇಂದು ಶೂನ್ಯವನ್ನು ಹೊರುತಪಡಿಸಿಕೊಂಡು ಪ್ರಮಾಣಿತ ರೂಪಗಳಾಗಿ ಮಾರ್ಪಟ್ಟಿವೆ. ಅಂತಹ ಕೆಲವು ಉದಾಹರಣೆಗಳು ಇಲ್ಲಿವೆ.

ಶೂನ್ಯಕ್ಕೆ ಪರ್ಯಾಯವಾಗಿ 'ನ' ಕಾರ ಬಂದಿರುವುದಕ್ಕೆ ಉದಾಹರಣೆ

| | | |
|---|---|---|
| ಕಂದರಿಕ - ಕನ್ದರಿಕ | ಕ್ರಿ.ಶ. - ೧೦ನೇ ಶತಮಾನ | - SRP |
| ಜಿಂತೆಗ್ರಾಮ - ಜಿನ್ತೆಗ್ರಾಮ | ಕ್ರಿ.ಶ. - ೧೧೭೩ | - BLR |
| ದೊಂಡವಟ್ಟಿ - ದೊನ್ನವಟ್ಟಿ (ದೊಣ್ಣವಟ್ಟಿ) | ಕ್ರಿ.ಶ. - ೧೧೭೩ ಮತ್ತು ೧೦೪೫ | - BLR |
| ನೆರಂಡಿಗಲ್ಲು - ನೆರಣ್ಡಿಗಲ್ಲು | ಕ್ರಿ.ಶ. - ೧೦೨೫ | - BLR |
| ಬಲ್ಲಕುಂದೆ - ಬಲ್ಲಕುನ್ದೆ | ಕ್ರಿ.ಶ. - ೧೦೯೧ | - SRP |
| ಸಿಂದವಾಡಿ - ಸಿನ್ದವಾಡಿ | ಕ್ರಿ.ಶ. - ೧೧೭೬ | - BLR |

ಮೇಲಿನ ಉದಾಹರಣೆಗಳಲ್ಲಿ ಬಿಂದುವನ್ನೊಂದಿದ ರೂಪಗಳು ಶಾಸನಗಳಲ್ಲಿ ಕೆಲವು ಬಾರಿ 'ನ', 'ಣ' ಕಾರ ಬಳಕೆಯಾಗಿ ಶೂನ್ಯದ ಸ್ಥಾನಕ್ಕೆ ಬಂದು ಅಬಿಂದುಕಗಳಾಗಿವೆ. ಆದರೂ ಇಲ್ಲಿ ಅರ್ಥಕ್ಕೆ ಯಾವುದೇ ಕುಂದು ಬಂದಿಲ್ಲ.

ಸಬಿಂದುಕಗಳು ಅಬಿಂದುಕಗಳಾಗಿರುವುದಕ್ಕೆ ಉದಾಹರಣೆ

| | | |
|---|---|---|
| ಕಂತರಿಕೆ - ಕಾತರಿಕೆ | ಕ್ರಿ.ಶ. - ೧೧೮೪ | - ADN |
| ಕುಱುಂಗೋಡು - ಕುರುಗೋಡು | ಕ್ರಿ.ಶ. - ೧೧೧೭ | - BLR |
| ದಂಮೂರ - ದಮ್ಮೂರು | ಕ್ರಿ.ಶ. - ೧೧೦೬-೦೭ | - BLR |
| ಹರಂದಗೇಱಿ - ಹರ್ದಗೇರಿ | ಕ್ರಿ.ಶ. - ೧೧೩೦ | - BLR |

ಈ ಉದಾಹರಣೆಗಳಲ್ಲಿ ಬಿಂದುವನ್ನು ಹೊಂದಿದ ಸ್ಥಳನಾಮಗಳು ಶಾಸನೋಕ್ತವಾಗಿವೆ. ಇಂದು ಅವು ಬಿಂದುವನ್ನು ತೊರೆದು ಅಬಿಂದುಕಗಳಾಗಿಯೇ ಪ್ರಮಾಣಿತ ರೂಪವೆಂಬಂತೆ ಬಳಕೆಯಾಗುತ್ತವೆ. ಮುಖ್ಯವಾಗಿ ಸ್ಥಳನಾಮಗಳಲ್ಲಿ ೧೦ನೇ ಶತಮಾನದ ಪೂರ್ವಾರ್ಧದಿಂದ ೧೨ನೇ ಶತಮಾನದವರೆಗೆ ಶಾಸನದ ಮೂಲಕ ಸಬಿಂದುಕ ಹಾಗೂ ಅಬಿಂದುಕಗಳ ಎರಡೂ ಪ್ರಯೋಗವಿರುವುದು ಕಂಡುಬರುತ್ತದೆ. ಕಾಲಾಂತರದಲ್ಲಿ ಈ ಬಗೆಯ ಸಬಿಂದುಕಗಳಿಂದ ಕೂಡಿದ ಕೆಲವು ಹೆಸರುಗಳು ಅಬಿಂದುಕಗಳಾಗಿವೆ. ಇಂದು ವರ್ಣಮಾಲೆಯನ್ನು ಸಂಕುಚಿತಗೊಳಿಸುವ ಆಧುನಿಕ ಭಾಷಾಶಾಸ್ತ್ರಜ್ಞರ ದೃಷ್ಟಿಯಲ್ಲಿ ಅನುಸ್ವಾರವು ಬೇಕಾಗಿಲ್ಲ. ಈ ಕುರಿತು ಶಾಸನಗಳಲ್ಲಿ ಈ ಮೊದಲೇ ಪ್ರಯೋಗವಾಗಿರುವುದನ್ನು ಸ್ಥಳನಾಮಗಳ ಮೂಲಕ ಗುರುತಿಸಬಹುದು.

**೬.೨.೪. ಪ > ಹ : ಬದಲಾವಣೆ**

ಶಾಸನೋಕ್ತ ಸ್ಥಳನಾಮಗಳಲ್ಲಿ 'ಪ' ಕಾರವು ಮೊದಲು ಬಳಕೆಯಾಗಿದ್ದು ಅದು ನಂತರದ ಅವಧಿಯಲ್ಲಿ 'ಹ' ಕಾರವಾಗಿರುವುದು ಶಾಸನಗಳಿಂದ ತಿಳಿಯುತ್ತದೆ. ಈ ಬದಲಾವಣೆ ಪ್ರಕ್ರಿಯೆಯು ಸ್ಥಳನಾಮ ಘಟಕದ ಆದಿ ಅಕ್ಷರದಲ್ಲಿಯೂ, ಉತ್ತರಪದ (ವಾರ್ಗಿಕದಲ್ಲಿ) ದಲ್ಲಿಯೂ ಘಟಿಸಿರುವುದು ಕಂಡುಬರುತ್ತದೆ. ಕೆಲವು ಉದಾಹರಣೆಗಳು ಹೀಗಿವೆ.

| | | | |
|---|---|---|---|
| ಪಿಹನಪಟ್ಟಿ | (ಪಿಯನ ಹಟ್ಟಿ) | ಕ್ರಿ.ಶ. ೧೦೨೮ | - BLR |
| ಪಚ್ಚೊಳ್ಳಿ | (ಹಚ್ಚೊಳ್ಳಿ) | ಕ್ರಿ.ಶ. ೧೦೪೪ | - SRP |
| ಪಿರಿಯ ಬೆಳ್ಳಿಹಾಳ | (ಹಿರಿಯ ಬೆಳ್ಳಿಹಾಳು) | ಕ್ರಿ.ಶ. ೧೧೦೨ | - SRP |
| ಪೊಳಲುಗುಂದೆ | (ಹೊಳಲುಗುಂದೆ) | - | - ALR |
| ಬದಲ ಪಾಳು | (ಬದನೆಹಾಳು) | ಕ್ರಿ.ಶ. ೧೦೫೫ | - ADN |
| ಬನಗಾನಪಲ್ಲಿ | (ಬನಗಾನಹಳ್ಳಿ) | - | - KNL |

ಮೇಲಿನ ಉದಾಹರಣೆಗಳಲ್ಲಿ ಸ್ಥಳನಾಮಗಳ ಉತ್ತರ ಪದದಲ್ಲಿ : ಪಟ್ಟಿ > ಹಟ್ಟಿ

ಪಲ್ಲಿ > ಹಳ್ಳಿ

ಪಾಳು > ಹಾಳ್

ಎಂಬುದಾಗಿ ಪ > ಹ ಬದಲಾವಣೆಯು ಉಂಟಾಗಿರುವುದು ತಿಳಿಯುತ್ತದೆ.

ಹಾಗೆಯೇ ನಿರ್ದಿಷ್ಟದಲ್ಲಿ : ಪಚ್ಚ > ಹಚ್ಚ

ಪಿರಿಯ > ಹಿರಿಯ

ಪೊಳಲು > ಹೊಳಲು ಎಂಬುದಾಗಿ ಬದಲಾವಣೆಗೆ ಒಳಗಾಗಿವೆ.

ಪ' ಕಾರ ಬಳಕೆಯಾಗುತ್ತಿದ್ದಂತಹ ಕಾಲಾವಧಿಯಲ್ಲಿಯೇ 'ಹ' ಕಾರವೂ ಬಳಕೆಯಲ್ಲಿ ಇದ್ದುದನ್ನು ಗುರುತಿಸಬಹುದು. ಉದಾ :

| | | |
|---|---|---|
| ಹಟ್ಟಣ | ಕ್ರಿ.ಶ. - ೧೧೩೧ | - BLR |
| ಹರಂದಗೇಜಿ | ಕ್ರಿ.ಶ. - ೧೧೩೦ | - BLR |
| ಹಾಳಹನ್ನಸಿ | ಕ್ರಿ.ಶ. - ೯೭೧ | - BLR |
| ಹಾಹೆ ಕಲ್ಲು | ಕ್ರಿ.ಶ. - ೧೧೭೩ | - BLR |
| ಹೊಸ ಕುತ್ತಕನೂರು | ಕ್ರಿ.ಶ. - ೧೧೪೯ | - BLR |
| ಹೊಲವೇರಿ | ಕ್ರಿ.ಶ. - ೧೧೭೩ | - BLR |

ಹೀಗೆ ೧೧ನೇ ಶತಮಾನದಲ್ಲಿ ಹಾಗೂ ತದನಂತರದಲ್ಲಿ 'ಪ' ಕಾರದಷ್ಟೆ, ಹ'ಕಾರವೂ ಜೊತೆ ಜೊತೆಯಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ. 'ಪ' ಮತ್ತು 'ಹ' ಕಾರಗಳೆರಡೂ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದು ವಿಶೇಷವಾಗಿದೆ.

### ೭.೨.೫. ಲ > ನ : ಬದಲಾವಣೆ

ಶಾಸನದಲ್ಲಿ ಉಕ್ತವಾದ ಸ್ಥಳನಾಮಗಳಲ್ಲಿ 'ನ' ಕಾರದ ಸ್ಥಾನದಲ್ಲಿ 'ಲ' ಕಾರವು ಬಳಕೆಯಾದ ಬಗೆಗೆ ಮಾಹಿತಿಗಳಿವೆ. ಈ ಪ್ರಕ್ರಿಯೆಯು ಗಡಿಭಾಗದಲ್ಲಿ ಸಹಜವಾಗಿ ಇರುವುದನ್ನು ಗುರುತಿಸಬಹುದು. ಕನ್ನಡದ ಸ್ಥಳನಾಮವನ್ನು ತೆಲುಗು ಮಾತೃಭಾಷಿಕರು ಉಚ್ಚಾರಣೆ ಮಾಡುವಾಗ 'ನ' ಕಾರದ ಬದಲಾಗಿ 'ಲ' ಕಾರ ಸಂಬಂಧವಾಚಿ ಅಕ್ಷರವಾಗಿ ಬರುತ್ತದೆಯೆಂಬುದಕ್ಕೆ ಉದಾಹರಣೆಗಳಿವೆ.

| | | |
|---|---|---|
| ಅಗಸನದಿನ್ನೆ | - ಅಗಸಲದಿನ್ನೆ | - ADN |
| ಕಳವನಗುಂಡು | - ಕಳವಲಗುಂಡು | - ADN |
| ತಿಪ್ಪನದೊಡ್ಡಿ | - ತಿಪ್ಪಲದೊಡ್ಡಿ | - ADN |
| ರಾಗನಹಾಳು | - ರಾಘುಲಪಾಡು (SII- IX- Part- II) | |

ಇಲ್ಲಿ ತೆಲುಗು ಭಾಷಿಕರ ಉಚ್ಚಾರಣೆಯಲ್ಲಿ ಸಂಬಂಧವಾಚಿ 'ನ' ಕಾರ 'ಲ' ಕಾರವಾಗಿ ಉಳಿದು ಅದೇ ಇಂದಿನ ಪ್ರಮಾಣಿತ ರೂಪವಾಗಿ ಬಳಕೆಯಾಗುತ್ತಿದೆ. ಶಾಸನಗಳಲ್ಲಿಯೂ ಈ ಬಗೆಯ ಬದಲಾವಣೆ ನಡೆದಿದೆ ಎಂಬುದಕ್ಕೆ ಉದಾಹರಣೆ ಹೀಗಿವೆ.

ಬದಲಪಾಡು - (ಬದನೆಹಾಳು) - ಕ್ರಿ.ಶ. - ೧೦೫೫ - ADN

ರಾಘುಲಪಾಡು - (ರಾಗನಹಾಳು) - SII- IX- Part- II

ರೂಪಲಗುಡಿ - (ರೂಪನಗುಡಿ) - - BLR

ಎಂಬಲ್ಲಿ ಗುರುತಿಸಬಹುದಾಗಿದೆ. ಇಂತಹ ರೂಪಗಳನ್ನು ತೆಲುಗು ಪ್ರೇರಿತ ಎಂದು ಮಾತ್ರ ಗುರುತಿಸಲು ಆಗದು. ಏಕೆಂದರೆ ಕನ್ನಡದ ಆಡುನುಡಿಯಲ್ಲಿ 'ನ' ಕಾರವು 'ಲ' ಕಾರವಾದ ಬಗೆಗೆ ನಿದರ್ಶನಗಳಿವೆಯೆಂಬುದನ್ನು ಗಮನಿಸಬಹುದು. ಉದಾ : ಮೈಸೂರಿನಿಂದ - ಮೈಸೂರಿಲಿಂದ

ಲೈಟು - ನೈಟು

೬.೨.೬. ಲ > ಳ : ಬದಲಾವಣೆ

ಸ್ಥಳನಾಮಗಳಲ್ಲಿ 'ಲ' ಕಾರದ ಸ್ಥಾನದಲ್ಲಿ 'ಳ' ಕಾರ, 'ಳ' ಕಾರದ ಬದಲಾಗಿ 'ಲ' ಕಾರ ಬಳಕೆಯಾಗಿರುವುದು ತಿಳಿಯುತ್ತದೆ.

ಎಲ್ಲಾರ್ತಿ - ಎಳ್ಳಾರ್ತಿ - ALR

ನಂದ್ಯಾಲ - ನಂದ್ಯಾಳ (ಕೈಫಿಯತ್ತು ಕುರುಗೋಡು)

ಕುಂತಲ - ಕುಂತಳ (ಕೈಫಿಯತ್ತು ಕುರುಗೋಡು)

ಹಲಕುಂದೆ - ಹಳಕುಂದೆ - BLR

ಎಂಬ ಉದಾಹರಣೆಗಳು ಕೈಫಿಯತ್ತು ಹಾಗೂ ಇಂದು ದ್ವಿಭಾಷಿಕ ವಲಯದಲ್ಲಿರುವ ಜನರ ಉಚ್ಚಾರಣೆಯಲ್ಲಿ ಈ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಅಂತೆಯೇ ಗಡಿಭಾಗಕ್ಕೆ ಸಂಬಂಧಿಸಿದ ಒಂದು ಶಾಸನದಲ್ಲಿ ಈ ಕ್ರಿಯೆಯನ್ನು ಗುರುತಿಸಬಹುದು.

ಉದಾ : ಮಂಚಾಲ - ಮಂಚಾಳ - ಕ್ರಿ.ಶ. ೮೯೩ - ೯೪ - ADN

೬.೨.೭. ಚ' ವರ್ಗದ ಪಂಚಮಾಕ್ಷರ 'ಞ'

ವರ್ಣಮಾಲೆಯ ಚ'ವರ್ಗದ ಪಂಚಮಾಕ್ಷರ 'ಞ', ಶಾಸನೋಕ್ತ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದು ವಿಶೇಷವಾಗಿದೆ. ಉದಾ : ಕಂಚುಗಾರ ಬೆಳಗಲ್ಲನ್ನು - ಕಞ್ಚಗಾರ ಬೆಳ್ಗಲಿ - ಕ್ರಿ.ಶ. ೯೮೧ - SRP

ಎಂದು ಬರೆಯಲಾಗಿದೆ. ಇಂತಹ ಪ್ರಯೋಗಗಳು ಕನ್ನಡದಲ್ಲಿ ಅಪರೂಪವೆಂದು ಹೇಳಬಹುದು. ಇಲ್ಲಿ ಅನುಸ್ವಾರದ ಬದಲಾಗಿ 'ಞ' ಕಾರ ಬಳಕೆಯಾಗಿದೆ. ಈ ಮುಂಚೆ ಸಬಿಂದುಕಗಳು ಅಬಿಂದುಕಗಳಾಗಿ ಬಳಕೆಗೊಳ್ಳುವಾಗ 'ನ' ಕಾರವನ್ನು ಪರ್ಯಾಯವಾಗಿ ಬಳಸಲಾಗಿತ್ತು ಇಲ್ಲಿ 'ಞ' ಕಾರವನ್ನೇ ಬಳಸಿರುವುದು ವಿಶಿಷ್ಟವಾಗಿದೆ.

ಗಡಿಭಾಗದಲ್ಲಿ ಶಾಸನೋಕ್ತ ಸ್ಥಳನಾಮಗಳಲ್ಲಿ 'ಞ' ಕಾರದಂತಹ ಪ್ರಯೋಗವಿದ್ದರೂ, 'ಱ ಕಾರದ ಪ್ರಯೋಗ ಕಂಡು ಬಂದಿಲ್ಲ. ಗ್ರಾಮನಾಮಗಳಲ್ಲಿ 'ರ' ಕಾರದ ಬದಲಾಗಿ 'ಱ' ಕಾರ ಬಳಕೆಯಾದ ಬಗೆಗೆ ಮಾಹಿತಿಯಿಲ್ಲ. ಕರ್ನಾಟಕದ ಇನ್ನಿತರ ಭಾಗಗಳ ಶಾಸನಗಳಲ್ಲಿ 'ಱ' ಕಾರದ ಪ್ರಯೋಗ ಸ್ಥಳನಾಮಗಳಲ್ಲಿ ಇದ್ದರೆ ಅದೊಂದು ವಿಶೇಷವಾಗಿಯೇ ಉಳಿಯುತ್ತದೆ.

ಹೀಗೆ ಒಂದು ಭಾಷೆಯ ಚಾರಿತ್ರಿಕ ಅಂಶಗಳಿಂದ ಅದರ ಬೆಳವಣಿಗೆಯ ಹಂತಗಳನ್ನು ಶಾಸನೋಕ್ತ ಸ್ಥಳನಾಮಗಳ ಮೂಲಕ ತಿಳಿಯಬಹುದು. ಬಹುಮುಖ್ಯವಾಗಿ ಇಲ್ಲಿ ಚರ್ಚಿಸಿದ ಶಾಸನೋಕ್ತ ಸ್ಥಳನಾಮಗಳಲ್ಲಿ ಶಕಟರೇಫ - ರಳ, ಪ > ಹ ಬದಲಾವಣೆ, ಲ > ನ : ಲ > ಳ : ಳ > ಲ : ಬದಲಾವಣೆ, ಸಬಿಂದುಕ - ಅಬಿಂದುಕ ಪ್ರಕ್ರಿಯೆ, ಚ'ವರ್ಗದ ಪಂಚಮಾಕ್ಷರದ ಬಳಕೆ ಇತ್ಯಾದಿಯಿಂದ ಕ್ರಮೇಣ ಭಾಷೆಯು ಬೆಳೆಯುತ್ತ ಸ್ಥಳನಾಮಗಳಲ್ಲಿ ಪ್ರಯೋಗವಾದುದನ್ನು ಗಮನಿಸಿ ಅದರ ಸ್ಥಿತ್ಯಂತರ, ಅವಸ್ಥಾಂತರಗಳನ್ನು ಚಾರಿತ್ರಿಕವಾಗಿ ಗುರುತಿಸಬಹುದು. ಈ ಕಾರಣದಿಂದ ಶಾಸನೋಕ್ತ ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಸಮಗ್ರ ಅಧ್ಯಯನಕ್ಕೆ ತೆಗೆದುಕೊಳ್ಳುವ ಅಗತ್ಯವೂ ಇದೆಯೆನ್ನಬಹುದು. ಆ ಮೂಲಕ ಭಾಷಾ ಬಳಕೆಯ ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನೂ ಅನಾವರಣಗೊಳಿಸಲು ಸಾಧ್ಯವಾಗುತ್ತದೆ.

**೬.೩. ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು**

೧೮-೧೯ನೇ ಶತಮಾನಗಳ ಅವಧಿಯಲ್ಲಿ ಕರ್ನಲ್ ಮೆಕೆಂಝಿಯ ಪ್ರಯತ್ನದಿಂದ ಬರೆಯಿಸಲ್ಪಟ್ಟ ಕೈಫಿಯತ್ತುಗಳು ಒಂದರ್ಥದಲ್ಲಿ 'ಸ್ಥಳಪುರಾಣ'ಗಳು ಎನಿಸಿವೆ. ಪ್ರಾಚೀನ ಕರ್ನಾಟಕದ ಭೌಗೋಳಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮೊದಲಾದ ಕ್ಷೇತ್ರಗಳ ವಿವರಗಳನ್ನೊದಗಿಸುವ ಕೈಫಿಯತ್ತುಗಳು, ಶಾಸನಗಳು ಅಲಕ್ಷಿಸಿದ್ದ, ಅಥವಾ ಹೇಳಲಾರದ ಅನೇಕ ವಿಷಯಗಳನ್ನು, ಘಟನೆಗಳನ್ನು ದಾಖಲಿಸಿವೆಯೆಂಬುದು ಗಮನಾರ್ಹ. ಮುಖ್ಯವಾಗಿ ಸ್ಥಳೀಯ ಚರಿತ್ರೆಯನ್ನು, ಸಂಸ್ಕೃತಿಯನ್ನು ದಾಖಲಿಸಿದ್ದು ಕೈಫಿಯತ್ತುಗಳ ಮಹತ್ವಕ್ಕೆ ಕಾರಣವಾಗಿದೆ. ಪ್ರಾದೇಶಿಕ ಚರಿತ್ರೆಯೆಲ್ಲವನ್ನು ಕಾವ್ಯಗಳು, ಶಾಸನಗಳು ಹೇಳಲಾಗಲಿಲ್ಲ. ಅಂತಹ ಕೊರತೆಯನ್ನು ಮೆಕೆಂಝಿಯು ತುಂಬಲು ಪ್ರಯತ್ನ ಮಾಡಿದ್ದು ಮಹತ್ವದ ಕೆಲಸ. ಅದರಲ್ಲಿಯೂ ವಿಜಯನಗರೋತ್ತರಕಾಲೀನ ಸಾಂಸ್ಕೃತಿಕ ಕರ್ನಾಟಕವನ್ನು ಅರ್ಥಮಾಡಿಕೊಳ್ಳಲು ಇವು ನೀಡುವ ಸಹಾಯ ಗಣ್ಯವಾದುದು.

ಇತಿಹಾಸ ಬರವಣಿಗೆಯ ಸಂದರ್ಭದಲ್ಲಿ ದಾಖಲೆಗಳಾದ ಶಾಸನಗಳಿಗೆ ಪ್ರಥಮ ಸ್ಥಾನ. ಮಿಕ್ಕವುಗಳಿಗೆ ದ್ವಿತೀಯ ಸ್ಥಾನ ಸಲ್ಲುತ್ತದೆ. ಈ ದ್ವಿತೀಯ ಸ್ಥಾನದ ಆಧಾರ ಸಾಮಗ್ರಿಗಳಲ್ಲಿ ಕೈಫಿಯತ್ತುಗಳು ಪರಿಗಣಿತವಾಗುತ್ತವೆ.

ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು ಇದಕ್ಕೆ ಮಹತ್ವವನ್ನು ತಂದುಕೊಟ್ಟಿವೆ. ಹೀಗಾಗಿ ಕೆಲವು ಸಂಗತಿಗಳಿಗೆ ಶಾಸನಗಳಿಗಿಂತ ಮುಖ್ಯ ಎನಿಸುತ್ತವೆ. ಶಾಸನಗಳು ತನ್ನ ಪರಿಮಿತ ಗಾತ್ರದಿಂದಾಗಿ ಪ್ರಧಾನ ಘಟನೆಯ ಮುಖ್ಯ ಅಂಶಗಳ ಜೊತೆಯಲ್ಲಿ ಎರಡು - ಮೂರು ಸ್ಥಳನಾಮಗಳ ಉಲ್ಲೇಖ ನೀಡುತ್ತವೆ. ಆದರೆ ಅನೇಕ ಪುಟಗಳವರೆಗೆ ಬರೆಯಲ್ಪಟ್ಟ ಕೈಫಿಯತ್ತುಗಳಲ್ಲಿ ಎಲ್ಲ ಮುಖ್ಯ ಅಂಶಗಳನ್ನು ದಾಖಲಿಸುತ್ತಲೇ ಒಂದು ಊರಿನ ಹೆಸರು, ಅದರ ನಿಷ್ಪತ್ತಿ, ಆ ಊರಿನ ಇತಿಹಾಸ, ಭೌಗೋಳಿಕ ಪರಿಸರ, ಸಾಮಾಜಿಕ ಜೀವನ, ಸುತ್ತಮುತ್ತಲಿರುವ ಗ್ರಾಮಗಳ ವಿವರ, ನಿರ್ವಸಿತ ಸ್ಥಳಗಳ ಪರಿಚಯ ಮುಂತಾದ ಸಮಗ್ರ ಮಾಹಿತಿಯನ್ನು ಕೈಫಿಯತ್ತುಗಳು ಒದಗಿಸುತ್ತವೆ. ಅಲ್ಲದೆ ಗ್ರಾಮ, ಕೋಟೆ, ಕೊತ್ತಲ, ಕೆರೆ, ದೇವಾಲಯಗಳ ನಿರ್ಮಾಣ, ವಿವಿಧ ಆಚರಣೆ, ಊರಿಗೆ ಹೆಸರು ಬರಲು ಕಾರಣ, ಅದಕ್ಕಿರುವ ಪ್ರತಿನಾಮದ ವಿವರ ನೀಡುತ್ತವೆ. ಇದರಿಂದಾಗಿ ಕೈಫಿಯತ್ತುಗಳಿಗೆ ಮಹತ್ವವಿದೆ.

ಕೈಫಿಯತ್ತುಗಳನ್ನು ಬರೆದವರು ಸ್ಥಳೀಯ ಜನರು. ಸ್ಥಳೀಯರು ಅಕ್ಷರಸ್ಥರಾದವರು. ಇಲ್ಲವೇ ಸಾಮಾನ್ಯರಿಂದ ಕೇಳಿ ಬರೆದ ಶಿಷ್ಯರು. ಹೀಗಾಗಿ ಆಯಾ ಸ್ಥಳದ ಐತಿಹ್ಯ, ಪುರಾಣ, ಇತಿಹಾಸಗಳು ಇಲ್ಲಿ ಸೇರಿಕೊಂಡಿವೆ. "ಜನರಿಂದ ಕೇಳಿ ಬರೆದುದೇ ಇಲ್ಲಿ ಅಧಿಕ ಪ್ರಮಾಣದಲ್ಲಿರುವುದರಿಂದ ಇದು ಮೌಖಿಕ ಇತಿಹಾಸ ವರ್ಗಕ್ಕೆ ಸೇರುತ್ತದೆ."* ಆದ್ದರಿಂದ ಇತಿಹಾಸ ರಚನೆಗೆ ಮೌಖಿಕ ಸಾಮಗ್ರಿಯನ್ನು ಬಳಸಿಕೊಳ್ಳಲು ಇಂದು ಇತಿಹಾಸಶಾಸ್ತ್ರ ಹೆಚ್ಚು ಒಲವು ತೋರಿಸುತ್ತಿದೆ. ಈ ದೃಷ್ಟಿಯಿಂದ ಕೈಫಿಯತ್ತುಗಳನ್ನು ಇತಿಹಾಸಕ್ಕೆ ಹೊಂದಿಸಿ ಸ್ಥಳನಾಮಗಳ ಮೂಲಕ ಚರಿತ್ರೆಯ ಅಂಶಗಳನ್ನು ಅಧ್ಯಯನ ಮಾಡಬಹುದು.

ಮುಖ್ಯವಾಗಿ ಆಂಧ್ರ - ಕರ್ನಾಟಕ ಗಡಿಭಾಗದಲ್ಲಿ ದೊರೆಯುವ ಅನೇಕ ಕೈಫಿಯತ್ತುಗಳಲ್ಲಿ ಆಲೂರು, ಆದವಾನಿ, ಬಳ್ಳಾರಿ, ಸಿರುಗುಪ್ಪ ತಾಲ್ಲೂಕುಗಳಿಗೆ ಸಂಬಂಧಿಸಿದ ಕೈಫಿಯತ್ತುಗಳನ್ನು ಪರಿಗಣಿಸಿ ಸ್ಥಳನಾಮ ಅಧ್ಯಯನ ಮಾಡಲಾಗಿದೆ. ಕುರುಗೋಡು ಕೈಫಿಯತ್ತು, ಬಳ್ಳಾರಿ, ಭಟ್ಟರಹಳ್ಳಿ, ಹತ್ತಿಬೆಳಗಲ್ಲು, ಹಿರೇಹಾಳು ಕೈಫಿಯತ್ತುಗಳು ಲಭ್ಯವಿದ್ದು, ಇವುಗಳನ್ನು ಮುಖ್ಯವಾಗಿ ಲಕ್ಷಿಸಿದೆ. ಆಂಧ್ರದ ಗಡಿಭಾಗದ ಅರಕೇರಿ, ಆದವಾನಿ, ಆದವಾನಿಕೋಸಗಿ, ಆದವಾನಿ ಜೈನ, ಚಿಕ್ಕಹೋತೂರು, ನಾಗಲದಿನ್ನೆ, ಮಂಚಾಲೆ, ಹಿರೇಹೋತೂರು ಕೈಫಿಯತ್ತುಗಳು ಅಲಭ್ಯವಾಗಿವೆ. ಈ ಕೈಫಿಯತ್ತುಗಳಿದ್ದಿದ್ದರೆ ಸ್ಥಳನಾಮಗಳ ಅನೇಕ ಅಂಶಗಳನ್ನು ತಿಳಿಯಬಹುದಾಗಿತ್ತು. ಲಭ್ಯ ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು ಹೀಗಿವೆ.

೬.೩.೧. ಕೈಫಿಯತ್ತು ಕುರುಗೋಡು, ತಾಲೂಕೆ ಬಳ್ಳಾರಿ

| | | | |
|---|---|---|---|
| ಅಂತುಗ್ರಾಮ | ಕುಡುತಿನಿ | ಗುಂಡಿಗನೂರು | ಬಲಕುಂದಿ |
| ಕಂಚುಗಾರ ಬೆಳಗಲ್ಲು | ಕುಂತಳನಗರ | ತೆಕ್ಕಲಕೋಟೆ | ಬಳ್ಳಾರಿ |
| ಕಲ್ಲುಕಂಭ | ಕೊಳಗಲ್ಲು | ದರೂರು | ಬಾದನಹಟ್ಟಿ |
| ಕಗ್ಗಲ್ಲು | ಕೊಳೂರು | ನಗರೆ | ಬೈಲೂರು |
| ಕಂಚ್ಬಾಗ್ರಾಮ | ಗುತ್ತಿಗನೂರು | ಪಟ್ಟಣಶೆರಗು | ಬೈರಾದ್ಯಾವನಹಳ್ಳಿ |

| | | |
|---|---|---|
| ಭಟ್ಟರಹಳ್ಳಿ | ವೋರುವಾಯಿ | ಸಿಂದಿಗೆರೆ |
| ಮೊಕ | ಶಿರಗುಪ್ಪಿ | ಹಳೇಕುರುಗೋಡು |
| ಯಲ್ಲಾಪುರ | ಶಿರಿಗೆರೆ | ಹಾವಿನಹಾಳು |
| ರುಪನಗುಡಿ | ಶಿಂದಿಗೆರೆ | ಹುಳ್ಳೂರ |
| ವೀರಾಪುರ | | |

ಕುರುಗೋಡು ಕೈಫಿಯತ್ತಿನಲ್ಲಿ ಮೇಲಿನ ಸ್ಥಳನಾಮಗಳಲ್ಲದೇ ನೆರೆಯ ಆಂಧ್ರದ ಕೆಲವು ಸ್ಥಳನಾಮಗಳ ಉಲ್ಲೇಖವಿದೆ. ಅವು ಹೀಗಿವೆ.

| | | | |
|---|---|---|---|
| ಅನಂತಪುರ | ಉರುವಕೊಂಡೆ | ನಂದ್ಯಾಳ | ರಾಯದುರ್ಗ |
| ಅರಿಕೆರೆ | ಕಣೆಕಲ್ಲು | ಧರ್ಮಾವರಂ | |
| ಆದವಾನಿ | ಕುಂದುರ್ಪಿ | ಪೆನುಗೊಂಡೆ | |

ಕೆಲವು ನಿರ್ವಸಿತ ಸ್ಥಳನಾಮಗಳ ಉಲ್ಲೇಖವೂ ಕುರುಗೋಡು ಕೈಫಿಯತ್ತಿನಲ್ಲಿವೆ.

| | | |
|---|---|---|
| ಕೊಂಡಲನಾಯಕಗುಡ್ಡ | ಬಾಳೆಕೊಳ್ಳದದುರ್ಗ | ರಾಮಲಿಂಗನಗುಡ್ಡ |
| ಕೋಳಿಗುಡ್ಡ | ಬೂದಿಕೊಳ್ಳದದುರ್ಗ | ರುಷಿಶೃಂಗ |
| ಜಿಂಕಲಹರಿವಿನಗುಡ್ಡ | ಭಾಸ್ಕರಕ್ಷೇತ್ರ | ಹಾಲಭಾವಿಕಣವಿ |
| ನಾಯಕನ ಕೆರೆ | ಮೌಲ್ಯವಂತ | ಹುಜಿಹಳ್ಳಿನ ಪೇಟೆ |
| ಪಂಪಾಕ್ಷೇತ್ರ | ಯರ್‍ರದುರ್ಗಾ | ಹೇಮಕೂಟ |
| ಫಿರಂಗಿಸಾಲುದುರ್ಗ | | |

೬.೩.೨. ಕೈಫಿಯತ್ತು ಭಟ್ಟರಹಳ್ಳಿ, ತಾಲೂಕೆ ಬಳ್ಳಾರಿ.

| | |
|---|---|
| ಕಂಪಿಲಿ | ಬಳ್ಳಾರಿ |
| ಕುಮ್ಮಟದುರ್ಗ | ಭಟ್ಟರಹಳ್ಳಿ (ಪ್ರಾಚೀನನಾಮ ಕಾಟಗೊಂಡನಹಳ್ಳಿ) |
| ಕುರುಗೋಡು | ಭಟ್ಟರಹಳ್ಳಿ |
| ದರೋಜಿ | ವಡ್ಡು |

ಆಂಧ್ರದ ಸ್ಥಳನಾಮಗಳ ಉಲ್ಲೇಖ ಹೀಗಿವೆ.

| | | |
|---|---|---|
| ಆದವಾನಿ | ಕುಂದುರ್ಪಿ | ಗುತ್ತಿ |
| ಪೆನುಗೊಂಡೆ | ರಾಯದುರ್ಗ | |

ನಿರ್ವಸಿತ ಸ್ಥಳನಾಮ ಭಟ್ಟರಹಳ್ಳಿ ಕೈಫಿಯತ್ತಿನಲ್ಲಿ ಕೇವಲ ಒಂದು ಮಾತ್ರ ಉಲ್ಲೇಖಗೊಂಡಿದೆ. ನೆಜ್ಜಿದಗುಂಡು.

೬.೩.೩. ಬಳ್ಳಾರಿ ಕೈಫಿಯತ್ತು

| | | |
|---|---|---|
| ಅಮರಾಪುರ | ತೆಕ್ಕಲಕೋಟೆ | ಮುದ್ದಲಾಪುರ |
| ಅಸುಂಡಿ | ನಾಗಲಾಪುರ | ಮೋಕೆ |
| ಆಲದಹಳ್ಳಿ | ನಾಗರಕೆರೆ | ಶಂಕರಬಂಡೆ |
| ಇಭರಾಮಪುರ | ಪಾತ್ರಬೂದಿಹಾಳು | ಶಿರಗುಡ್ಡ |
| ಎತ್ತಿನಬೂದಿಹಾಳು | ಬಳ್ಳಾರಿ | ಶಿರಿವಾಳ |
| ಕಕ್ಕಬೇವಿನಹಳ್ಳಿ | ಬಿಸಿಲಹಳ್ಳಿ | ಶಿರಿಮಾಪುರ |
| ಕೃಷ್ಣಾಪುರ | ಬುಡ್ಡನಾಯಕನಹಳ್ಳಿ | ಶಿನ್ನೂರು |
| ಕುರುಗೋಡು | ಬೆಳಗಲ್ಲು | ಸಂಜೀವರಾಯನಕೋಟೆ |
| ಕೆರೆಹಳ್ಳಿ | ಬೇವಿನಹಳ್ಳಿ | ಹಂದರಹಾಳು |
| ಗೊನೆಹಾಳು | ಬೊಬ್ಬುಕುಂಟೆ | ಹಂಚಿನಹಾಳು |
| ಚರಕುಂಟೆ | ಮಣೂರು | ಹಲ್ಲಕುಂಟೆ |
| ಚಿಕ್ಕಬಳ್ಳಾರಿ | ಮಿಂಚೇರಿ | ಹೊನ್ನಹಳ್ಳಿ |
| ಚಿಕ್ಕಹಾಳು | ಮುಂಡರಗಿ | |

ಕೆಲವು ಆಂಧ್ರದ ಸ್ಥಳನಾಮಗಳ ಉಲ್ಲೇಖ ಬಳ್ಳಾರಿ ಕೈಫಿಯತ್ತಿನಲ್ಲಿ ಹೀಗಿವೆ.

| | | |
|---|---|---|
| ಅನಂತಪುರ | ಕಂದನೂಲು | ನಂದ್ಯಾಲ |
| ಆದವಾನಿ | ಕುಂದುರ್ಪಿ | ರಾಯದುರ್ಗ |
| ಕಣೆಕಲ್ಲು | ಧರ್ಮಾವರಂ | ಹಿರಿಯಹಾಳು |

ಕೆಲವು ನಿರ್ವಸಿತ ಸ್ಥಳನಾಮಗಳ ಉಲ್ಲೇಖ ಹೀಗಿದೆ.

| | |
|---|---|
| ಕುಂಬಾರಬಾಗಿಲು | ರಾಮಬಾಣ ತೋಪು |
| ಕೆಂಚನಗೌಡನಗುಡ್ಡ | ರುದ್ರಪ್ಪನ ಬಾಗಿಲು |
| ಚಳ್ಳೂರಯ್ಯನಬಾವಿ | ರುದ್ರಪ್ಪನ ಅಗಸೆ |
| ಜಾರಿಕೆಬಂಡೆ | ವೀರಭದ್ರತೋಪು |
| ಬಾಗಿಲಗುಡ್ಡ | ಸಿದ್ಧರಾಮತೋಪು |
| ಭೀಮಸೇನತೋಪು | ಸುಡುಗಾಡುಮಟ್ಟಿ |
| ಮಾರಿನಾಯಕನದೊಡ್ಡಿ | ಹೊನ್ನಗುಡಿಬಾವಿ |

೬.೩.೪. ಹತ್ತಿಬೆಳಗಲ್ಲು ಕೈಫಿಯತ್ತು, ತಾಲೂಕೆ ಗುಲ್ಲಂ

| | | |
|---|---|---|
| ಆದವಾನಿ | ಪಾವಗಡ | ಮೆದೆಪಾಡು |
| ಕಂದನೂರು | ಪಾವಕೊಂಡೆ | ಮೇದಿಹಾಳು |
| ಕಾಮಿನಹಾಳು | ಬಾಪುರ | ರಾಮದುರ್ಗ |
| ಕುಕ್ಕಿರಚೇಡು | ಬೆಮ್ಮನಪಾಡು | ರಾಯದುರ್ಗ |
| ಗುತ್ತಿದುರ್ಗ | ಬೆಳ್ಳದೊಣೆ | ಶಿರಗಾಪುರಂ |
| ಗೋರಂಟ್ಲ | ಬೊಮ್ಮನಹಾಳು | ಶಿದ್ಧರಹಾಳು |
| ಜಚಾರಹಳ್ಳಿ | ಮಲ್ಲರಾಯನದುರ್ಗ | ಶಿಂಗರಾಪುರ (ಶಿರಗಾಪುರ) |
| ತಡವಲಕುಂಟೆ | ಮದ್ದಿಕೆರೆ | ಹಲಹರಿವಿ |
| ತಿಂಮಾಪುರ | ಮಾಕನೂರು | ಹರದಗೆರೆ |
| ನಗರತೊ(ಡೊ)ಣೆ | ಮುಸಾನಹಳ್ಳಿ | |

ಹತ್ತಿಬೆಳಗಲ್ಲಿನ ಕೆಲವು ನಿರ್ವಸಿತ ಸ್ಥಳನಾಮಗಳು : ಊರುಗುಡ್ಡ

ರಾಮಿದೇವರಗುಡ್ಡ

೬.೩.೫. ಹಿರೇಹಾಳು ಕೈಫಿಯತ್ತು

| | | | |
|---|---|---|---|
| ಕುಂದುರ್ಪಿ | ಬಳ್ಳಾರಿ | ಹಲಕುಂದಿ | ಲಿಂಗಮ್ಮನಹಳ್ಳಿ |
| ಗುತ್ತಿ | ಮಡೇನಹಳ್ಳಿ | ಹಾಲಹಳೇ ಗ್ರಾಮ | ವೆಂಕಟಾಪುರ |
| ಜಾಜರದಕಲ್ಲು | ರಾಯದುರ್ಗ | ಹಿರಿದಾಳು | ವೊಬಳಾಪುರ |
| ಪುಲಕುರ್ತಿ | ಲಕ್ಷ್ಮೀಪುರ | ಹೊಸಹಳ್ಳಿ | ಸಿದ್ದಾಪುರ |

ಮೇಲಿನ ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು ಹಲವಾರು ವಿಶೇಷ ಅಂಶಗಳನ್ನು ಹೇಳುತ್ತವೆ. ಮುಖ್ಯವಾಗಿ ಭಾಷಿಕ, ಸಾಮಾಜಿಕ, ಪೌರಾಣಿಕ ಅಂಶಗಳನ್ನು ವಿಶದ ಪಡಿಸುತ್ತವೆ. ಇಲ್ಲಿ ಕೆಲವು ಭಾಷಿಕ ಅಂಶಗಳನ್ನು ಗುರುತಿಸಲಾಗಿದೆ.

೬.೩.೬. ಸ > ಶ ಪ್ರಕ್ರಿಯೆ

| | |
|---|---|
| ಪಟ್ಟಣ ಸೆರಗು > ಪಟ್ಟಣ ಶರಗು | ಸಿಂಧನೂರು > ಶಿಂದನೂರು (ಶಿನ್ನೂರು) |
| ಸಿರುಗುಪ್ಪ > ಶಿರುಗುಪ್ಪ | ಸಿರಗುಡ್ಡೆ > ಶಿರಗುಡ್ಡೆ |
| ಸಿಂದಿಗೆರೆ > ಶಿಂದಿಗೆರೆ | ಸಿದ್ಧರಹಾಳ > ಶಿದ್ಧರಹಾಳ |
| ಸಿರಿಗೆರೆ > ಶಿರಿಗೆರೆ | ಸಿರಗಾಪುರ > ಶಿರಗಾಪುರ |

ಎಂಬಂತಹ ಉದಾಹರಣೆಗಳಲ್ಲಿ 'ಸ' ಕಾರವು ಹೆಚ್ಚಾಗಿ 'ಶ' ಕಾರವಾಗಿ ಕೈಫಿಯತ್ತು ಬರವಣಿಗೆಯಲ್ಲಿ

ಬಳಕೆಯಾಗಿದೆ. ೧೮ - ೧೯ನೇ ಶತಮಾನದಲ್ಲಿ ಈ ರೀತಿಯ ಅನೇಕ ವ್ಯತ್ಯಸ್ತರೂಪಗಳು ವರ್ಣಮಾಲೆಯಲ್ಲಿ ಘಟಿಸಿರುವುದು ತಿಳಿಯುತ್ತದೆ. ಇಂದಿಗೂ ಕೆಲವು ಮಂದಿ ಸ > ಶ ಕಾರವಾಗಿಯೇ ಬರೆಯುವುದನ್ನು ಗಮನಿಸಬಹುದು.

**೬.೩.೭. ಸಬಿಂದುಕ - ಅಬಿಂದುಕ**

ಶಾಸನಗಳಲ್ಲಿ ಸಬಿಂದುಕಗಳು ಅಬಿಂದುಕಗಳಾದಂತೆ, ಕೈಫಿಯತ್ತಿನಲ್ಲಿ ಉಕ್ತಗೊಂಡಿರುವ ಸ್ಥಳನಾಮಗಳು ಕೆಲವು ಅನುಸ್ವಾರವನ್ನು ಹೊಂದಿವೆ. ಮತ್ತೆ ಕೆಲವು ಅನುಸ್ವಾರವನ್ನು ಕಳಚಿಕೊಂಡಿವೆ.

ಉದಾಹರಣೆ : ಕಂದನೂಲು > ಕರ್ನೂಲು

ತಿಂಮಾಪುರ > ತಿಮ್ಮಾಪುರ

ಶಿಂಗರಾಪುರ > ಶಿರಗಾಪುರ ಎಂಬುದಾಗಿ ವಿರಳವಾಗಿಯಾದರೂ ಬಳಕೆಯಾಗಿವೆ.

ಕೈಫಿಯತ್ತುಗಳಲ್ಲಿನ ಮತ್ತೊಂದು ಪ್ರಮುಖ ಅಂಶವೆಂದರೆ, ಸ್ಥಳನಾಮಗಳ ವಾರ್ಗಿಕದಲ್ಲಿ ಬರುವಂತಹ 'ಹಳ್ಳಿ' ಎಂಬ ಪದವು 'ಹಲ್ಲಿ' ಎಂದು ಬರೆದಿರುವುದಾಗಿದೆ. 'ಳ' ಕಾರ ದ್ವಿತ್ವದ ಬದಲಾಗಿ 'ಳ' ಕಾರಕ್ಕೆ 'ಲ' ಕಾರ ದ್ವಿತ್ವವಾಗಿ ಬರೆಯಲಾಗಿದೆ. ಈ ಕ್ರಮ ಆಂಧ್ರ ಗಡಿಭಾಗದ ತೆಲುಗು ಭಾಷಿಕರಲ್ಲಿ ಬರವಣಿಗೆಯ ಸಂದರ್ಭದಲ್ಲಿ ಈಗಲೂ ಕೆಲವರಲ್ಲಿ ಕಂಡುಬರುತ್ತದೆ. ಹಳೇ ತಲೆಮಾರಿನ ಜನರಲ್ಲಿ ಇಂದಿಗೂ 'ಹಳ್ಳಿ' ಯೆಂಬುದನ್ನು 'ಹಲ್ಲಿ' ಎಂದೇ ಬರೆಯುತ್ತಿರುವುದು ಗಮನಾರ್ಹ. ಕೈಫಿಯತ್ತುಗಳಲ್ಲಿ

(ಬಳ್ಳಾರಿ) - ಬಲ್ಲಾರಿ

(ಭಟ್ಟರಹಳ್ಳಿ) - ಭಟ್ಟರಹಲ್ಲಿ

(ಹುಜಿಹಳ್ಳಿನಪೇಟೆ) - ಹುಜಿಹಲ್ಲಿನಪೇಟೆ

(ಹುಳ್ಳೂರ) - ಹುಲ್ಲೂರ

(ಹೊಸಹಳ್ಳಿ) - ಹೊಸಹಲ್ಲಿ

ಎಂಬುದಾಗಿ 'ಳ' ಕಾರಕ್ಕೆ ದ್ವಿತ್ವವಾಗಿ 'ಲ' ಕಾರ ಬಂದಿರುವುದು ಭಾಷಿಕ ವ್ಯತ್ಯಸ್ತ ಕ್ರಿಯೆಯನ್ನು ಸೂಚಿಸುತ್ತದೆ.

ಬಳ್ಳಾರಿಯ ಗಡಿಭಾಗದಲ್ಲಿರುವ ಕೆಲವು ತೆಲುಗು ಪ್ರಭಾವಿತ ಸ್ಥಳನಾಮಗಳನ್ನು ಕೈಫಿಯತ್ತುಗಳು ಹೆಸರಿಸಿವೆ.

ಕೊಂಡ್ಲನಾಯಕನಹಳ್ಳಿ

ಜಿಂಕಲಹರಿವಿನಗುಡ್ಡ

ಬೊಮ್ಮನಪಾಡು (ಬೊಮ್ಮನಹಾಳು)

ಮದೆಪಾಡು (ಮದೆಹಾಳು)

ಯರ್‍ರದುರ್ಗ

ಎಂಬಂತಹ ಸ್ಥಳನಾಮಗಳಲ್ಲಿ ಜಿಂಕ + ಲ + ಹರಿವಿನಗುಡ್ಡ

ಕೊಂಡ + ಲ + ನಾಯಕನಹಳ್ಳಿ

'ಲ' ಸಂಬಂಧವಾಚಿ ವರ್ಣವು ತೆಲುಗು ಪ್ರೇರಿತವೆಂದು ಹೇಳಬಹುದು. 'ಲ' ಕಾರ ಇಲ್ಲಿ ಬಹುವಚನ ಪದವನ್ನು ಸೂಚಿಸುತ್ತದೆ. ಅಂತೆಯೇ ಸ್ಥಳನಾಮಗಳ ಮೇಲೆ ತೆಲುಗು ಭಾಷೆಯ ಸಂಪೂರ್ಣ ಪ್ರಭಾವವಲ್ಲದಿದ್ದರೂ ಈ ರೀತಿಯ ಆಂಶಿಕ ಪ್ರೇರಣೆಯಾಗಿದೆ. ಅದರಂತೆ ಮದೆಹಾಳು - ಮದೆಪಾಡು, ಬೊಮ್ಮನಹಾಳು - ಬೊಮ್ಮನಪಾಡು ಎಂಬ ಉದಾಹರಣೆಗಳಲ್ಲಿ ವಾರ್ಗಿಕದ ಹಾಳು > ಪಾಡು ಆಗಿ ಪರಿವರ್ತನೆಗೊಂಡಿರುವುದನ್ನು ಗುರುತಿಸಬಹುದು.

ಅನೇಕ ನಿರ್ವಸಿತ ಸ್ಥಳನಾಮಗಳನ್ನು ಕೈಫಿಯತ್ತು ಹೆಸರಿಸುತ್ತಾ, ಆ ಹೆಸರುಗಳು ಬಂದ ಬಗೆಯನ್ನು ಕೆಲವು ಕಡೆ ಹೇಳಲಾಗಿದೆ. ಅನೇಕ ಗ್ರಾಮನಾಮಗಳ ನಿಷ್ಪತ್ತಿಯನ್ನು ಹೇಳುತ್ತಾ, ಅಲ್ಲಿ ಆಳಿದ ರಾಜಪ್ರಭುತ್ವ ಮುಂತಾದ ಇತಿಹಾಸವನ್ನು ಕಟ್ಟುವ ಮಹತ್ವದ ಅಂಶಗಳನ್ನು ಕೈಫಿಯತ್ತುಗಳು ನೀಡುತ್ತವೆ.

ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳಿಂದ ಅನೇಕ ಸಾಮಾಜಿಕ ಅಂಶಗಳು ದೊರೆಯುತ್ತವೆ. ಕೈಫಿಯತ್ತುಗಳನ್ನು ಬರೆದವರು ಬಹುತೇಕ ಬ್ರಾಹ್ಮಣರು ಮತ್ತು ಅಕ್ಕಸಾಲಿಗ, ಬಡಿಗೇರರು. ಈ ಕಾರಣದಿಂದ ಅನೇಕ ಸ್ಥಳನಾಮಗಳು ಪ್ರತಿನಾಮಕರಣ ಅಥವಾ ಸಂಸ್ಕೃತ ಅನುಕರಣ ಪ್ರಕ್ರಿಯೆಗೆ ಒಳಪಟ್ಟಿವೆ. ಕೆಲವು ವೇಳೆ ಪ್ರತಿನಾಮಕರಣದ ಸಂದರ್ಭಗಳು ಐತಿಹಾಸಿಕ ಅಂಶಗಳನ್ನು ಸ್ಪಷ್ಟವಾಗಿ ಒದಗಿಸಿಕೊಡುತ್ತವೆಂಬುದನ್ನು ತಳ್ಳಿಹಾಕುವಂತಿಲ್ಲ. ಕೈಫಿಯತ್ತಿನಲ್ಲಿ ಉಕ್ತವಾದ ಸ್ಥಳನಾಮಗಳು ಹೆಚ್ಚಾಗಿ ಐತಿಹ್ಯಾತ್ಮಕ ಕಟ್ಟುಕಥೆಯ, ಪೌರಾಣಿಕ ಅಂಶಗಳಿಂದ ಕೂಡಿದ ವಿವರಣೆಯಿಂದಲೇ ಕೂಡಿರುತ್ತವೆ. ನಿಷ್ಪತ್ತಿಯನ್ನು ಮೌಖಿಕ ಆಕರಗಳನ್ನು ಬಳಸಿಕೊಂಡು ಹೆಣೆಯಲಾಗಿರುತ್ತದೆ. ಅಲ್ಲದೇ ಗ್ರಾಮನಾಮಗಳ ಭೌಗೋಳಿಕ ವಿವರವನ್ನೂ ಕೈಫಿಯತ್ತುಗಳು ಒದಗಿಸಿರುತ್ತವೆ. ಪ್ರತಿನಾಮಕರಣ ಕುರಿತಾಗಿ ಶಾಸನಗಳು ಕೊಟ್ಟ ವಿವರಣೆಯನ್ನು ಕೈಫಿಯತ್ತುಗಳೂ ನೀಡಿರುವುದು ಗಮನಾರ್ಹ. ಕೈಫಿಯತ್ತುಗಳಲ್ಲಿ ದಾಖಲಾದ ಗ್ರಾಮನಾಮಗಳ ಪ್ರತಿನಾಮಕರಣಗಳ ವಿವರ ಹೀಗಿದೆ.

ಗಂಗಲಾಪುರಕ್ಕೆ ಪ್ರತಿನಾಮ ಚಾಜರಕಲ್ಲು [೬]

ತೀರ್ಥಕ್ಕೆ ಪ್ರತಿನಾಮ ಹಿರೇಹಾಳು [೭]

ದೇವಲಾಪುರಕ್ಕೆ ಪ್ರತಿನಾಮಾ ಮಲ್ಲಿಕಾರ್ಜುನಪುರ [೮]

ನಂದಿದುರ್ಗಕ್ಕೆ ಉಪನಾಮ ದ್ವಾರಾವತಿದುರ್ಗ [೯]

ಭಟ್ಟರಹಳ್ಳಿಯ ಪ್ರಾಚೀನನಾಮ ಕಾಟಗೊಂಡನಹಳ್ಳಿ [೧೦]

ಎಂಬ ಪ್ರತಿನಾಮಕರಣಗಳಿಂದ ಆಯಾ ಪ್ರಾದೇಶಿಕ ಚರಿತ್ರೆಯು ತಿಳಿಯುತ್ತದೆ. ಇದರಂತೆ ಕೈಫಿಯತ್ತಿನಲ್ಲಿರುವ ಅನೇಕ ಸ್ಥಳನಾಮಗಳು ಸಂಸ್ಕೃತಾನುಕರಣ ಪ್ರಭಾವಕ್ಕೂ ಒಳಪಟ್ಟಿವೆ. ಅಲ್ಲದೇ 'ಕುಂತಳನಗರ' ಎಂಬಂತಹ (ನಿರ್ವಸಿತ) ಒಂದು ಭೂಭಾಗ ಅಥವಾ ನಾಡನ್ನು ಪ್ರತಿನಿಧಿಸುವ ಹೆಸರನ್ನು ಕೈಫಿಯತ್ತುಗಳು ಹೇಳುವುದರಿಂದ, ಇಲ್ಲಿಯವರೆಗೆ ಕುಂತಳನಾಡಿನ ಗುರುತಿಸುವಿಕೆಯ ನಿರ್ದಿಷ್ಟತೆಯ ಗೊಂದಲವನ್ನು ಇಂತಹ ಆಧಾರಗಳಿಂದ ಸ್ಪಷ್ಟಪಡಿಸಲು ಸಾಧ್ಯವಾಗಬಹುದು. ಹೀಗೆ ಚರಿತ್ರೆಯ ಆಕರಗಳನ್ನು ಹುಡುಕುವಲ್ಲಿ ಕೈಫಿಯತ್ತುಗಳಲ್ಲಿನ ಸ್ಥಳನಾಮಗಳು ಸಹಾಯವಾಗುತ್ತವೆ.

ಕೈಫಿಯತ್ತುಗಳಲ್ಲಿ ನಿರೂಪಿತವಾದ ಎಲ್ಲ ವಿಷಯಗಳನ್ನು ನಾವು ಸತ್ಯ ವಿಷಯಗಳೆಂದು ನಂಬಬೇಕಾಗಿಲ್ಲ. ಅನೇಕ ವಿಷಯಗಳಲ್ಲಿ ಅಸತ್ಯ ಸಂಗತಿಗಳನ್ನು ವಿವರಿಸಿರಲೂಬಹುದು. ಆದರೂ ಸ್ಥಳನಾಮಗಳಂತಹ ಕೆಲವು ವಿಷಯಗಳಿಂದ ತಕ್ಕಮಟ್ಟಿನ ಚಾರಿತ್ರಿಕ ಮಹತ್ವದ ವಿಷಯಗಳನ್ನು ಹೊಂದಿವೆಯಾದ್ದರಿಂದ ಈ ಮೂಲಕ ನಡೆಸುವ ಅಧ್ಯಯನ ಹಲವಾರು ಮಹತ್ವದ ಹೊಳಹುಗಳನ್ನು ತೆರೆದು ತೋರಿಸಬಲ್ಲದು.

### ೬.೪. ಪ್ರಾದೇಶಿಕ ಆಡಳಿತಗಾರರು ಮತ್ತು ಸ್ಥಳನಾಮಗಳು

ಇತಿಹಾಸದ ಪರದೆಯ ಮೇಲೆ ಆಗಿಹೋದ ಮೌರ್ಯ, ಶಾತವಾಹನ, ಕದಂಬ, ಗಂಗ, ಚಾಲುಕ್ಯ, ಹೊಯ್ಸಳ, ರಾಷ್ಟ್ರಕೂಟ, ವಿಜಯನಗರ, ಕೆಳದಿ, ಮೈಸೂರು, ಮುಸ್ಲಿಂ, ಆಂಗ್ಲೇಯರ ಆಡಳಿತಾವಧಿಯಲ್ಲಿ ಅನೇಕ ರೀತಿಯ ಸಾಂಸ್ಕೃತಿಕ ಸ್ಥಿತ್ಯಂತರಗಳು ಏರ್ಪಟ್ಟಿವೆ. ಮುಖ್ಯವಾಗಿ ಈ ರಾಜಪ್ರಭುತ್ವದ ಅಡಿಯಲ್ಲಿ ಆಡಳಿತ ನಡೆಸಿದ ಪಾಳೆಯಗಾರರು, ನಾಯಕರು, ಗೌಡರು, ರೆಡ್ಡಿಗಳು ಮುಂತಾದ ಸಾಮಂತರು ಕೆಲವು ಸಂದರ್ಭಗಳಲ್ಲಿ ತಮ್ಮ ಹೆಸರು, ತಮ್ಮ ಕುಟುಂಬದ ಸದಸ್ಯರ ಹೆಸರುಗಳನ್ನು ಪ್ರತಿನಿಧಿಸುವ ಸಲುವಾಗಿ, ಅದರಂತೆ ತಾವು ಮಾಡಿದ ಯುದ್ಧ ವಿಜಯವಾದಲ್ಲಿ, ಆ ಯುದ್ಧದ ಸವಿನೆನಪಿಗೆ ಕೆಲವು ಗ್ರಾಮಗಳನ್ನೂ, ಕೆರೆ, ಬಾವಿ, ಕೋಟೆಗಳನ್ನು ನಿರ್ಮಿಸಿದ್ದಾರೆ. ಅವುಗಳಿಗೆ ತಮ್ಮ ಹೆಸರುಗಳನ್ನು ಇಟ್ಟಿರುವುದು ತಿಳಿಯುತ್ತದೆ. ಆ ಬಗೆಯ ಕೆಲವು ಉದಾಹರಣೆಗಳು ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿವೆ.

**೧. ಕೆಂಚನಗುಡ್ಡ (SRP) :**

ಕ್ರಿ.ಶ. ೧೭೦೪ರಲ್ಲಿ ಸಿರುಗುಪ್ಪೆಯ ನಾಡಗೌಡಿಕೆಯಲ್ಲಿದ್ದ ಮುದುಕಣಗೌಡನ ಮಗ ಕೆಂಚನಗೌಡನ ಹೆಸರನ್ನು ಹೊಂದಿದೆ.[೧೧]

**೨. ವಿರುಪಾಪುರ (ALR)**

ಆಲೂರು ತಾಲ್ಲೂಕಿನಲ್ಲಿರುವ ಈ ಊರಿಗೆ, ಇಲ್ಲಿನ ಆದವಾನಿಯ ಪ್ರಾದೇಶಿಕ ವೀರನಾದ ವಿರುಪಣ್ಣನು ಪ್ರಭಾವಿತನಾಗಿದ್ದರಿಂದ, ಈ ಹೆಸರು ಬಂದಿದೆಯೆಂದು ಸ್ಥಳೀಯರಿಂದ ತಿಳಿದುಬರುತ್ತದೆ. ಹಾಗೆಯೇ ಪೆನುಗೊಂಡೆಯ ಸ್ಥಳೀಯ ಕಲಿಯಾದ ವಿರುಪಣ್ಣನು ಈ ಊರಿಗೆ ತನ್ನ ಹೆಸರನ್ನು ಇಟ್ಟಿರಬೇಕೆಂದೂ ಕೂಡ ತಿಳಿಯುತ್ತದೆ.

**೩. ಸಾಹೇಬ ಬುರ್ಜು (SRP)**

ಸಿರುಗುಪ್ಪಾದಲ್ಲಿರುವ ಹೊಳೆಯ ಕಡೆಯ ಬಾಗಿಲ ಹತ್ತಿರದ ಬುರುಜನ್ನು ರುದ್ರೋಜಿಲಿಂಗೋಜಿ ಕಟ್ಟಿಸಿ, ಇದಕ್ಕೆ ಸಾಹೇಬ ಬುರ್ಜು ಎಂದು ಹೆಸರಿಸಿದೆ.[೧೨]

**೪. ಹುಸ್ಸೇನಿ ಬುರ್ಜು (SRP)**

ಕ್ರಿ.ಶ. ೧೬೨೪ರ ಸಮಯದಲ್ಲಿ ಮಲಿಕ್‌ಅಬ್ದುಲ್‌ಮಹ್ಮದ್‌ನ ಕಾಲದಲ್ಲಿ ದಳಪತ್ ರಾಯನು ಕಟ್ಟಿಸಿದ ಬುರ್ಜನ್ನು ಹುಸ್ಸೇನಿಬುರ್ಜ ಎನ್ನುತ್ತಾರೆ.[೧೩]

೫. ಬ್ರೂಸ್ ಪೇಟೆ (BLR)

ಇದು ಬಳ್ಳಾರಿಯ ಒಂದು ಪೇಟೆಯ ಹೆಸರು. ಆಂಗ್ಲ ಅಧಿಕಾರಿ ಬ್ರೂಸ್ ಫುಟ್ ಎಂಬುವನ ಹೆಸರಿನಲ್ಲಿ ಬ್ರೂಸ್ ಪೇಟೆ ಎಂಬ ಹೆಸರು ಬಂದಿದೆಯೆಂದು ತಿಳಿಯುತ್ತದೆ.

ಆಲೂರು ತಾಲ್ಲೂಕಿನ ಮೂಸಾನಹಳ್ಳಿ, ಮೊಲಗನಹಳ್ಳಿ, ಬಳ್ಳಾರಿ ತಾಲ್ಲೂಕಿನ ಇಬ್ರಾಹಿಂಪುರ, ಹೊಸಪೇಟೆ ತಾಲ್ಲೂಕಿನ ಕೊಂಡನಾಯಕನಹಳ್ಳಿ, ಪಾಪನಾಯಕನಹಳ್ಳಿ, ಮಲಪನಗುಡಿ ಮುಂತಾದ ಅನೇಕ ಗ್ರಾಮಗಳು ಪ್ರಾದೇಶಿಕ ಆಡಳಿತಗಾರರ ಚರಿತ್ರೆಯನ್ನು ಪ್ರತಿನಿಧಿಸುವಂತಹ ಊರುಗಳಾಗಿವೆ.

೬.೪.೧. ಪ್ರಾದೇಶಿಕ ಆಡಳಿತಗಾರರ ಹೆಸರಿನ ಸ್ಥಳನಾಮಗಳು - ವಾರ್ಗಿಕ ರಚನೆಯ ಕ್ರಮ

ಮೇಲೆ ವಿವರಿಸಲಾದ ಪ್ರಾದೇಶಿಕ ಆಡಳಿತಗಾರರ ಹೆಸರಿನ ಗ್ರಾಮ, ನಿರ್ಜನಿತ ಸ್ಥಳನಾಮಗಳಿಂದ ವಾರ್ಗಿಕದ ಸಂಕ್ಷಿಪ್ತ ಚರ್ಚೆಯನ್ನು ಮಾಡಬಹುದು. ಅದೆಂದರೆ ವ್ಯಕ್ತಿನಾಮ ಆಧಾರಿತ ಸ್ಥಳನಾಮಗಳು ಹೆಚ್ಚಾಗಿ 'ನ', 'ರ' ಮುಂತಾದ ಸಂಬಂಧವಾಚಿ ಪದಗಳಿಂದ ರಚನೆಯಾಗಿರುತ್ತವೆ. ತೆಲುಗು ಭಾಷೆಯ 'ಲ', 'ಗಾರಿ', 'ವಾರಿ' ಎಂಬ ಸಂಬಂಧವಾಚಿ ಪದಗಳಿಂದ ರಚನೆಯಾಗಿರುತ್ತವೆ. ಉದಾ : ಕೆಂಚ + ನ + ಗುಡ್ಡ - SRP

ನಾಗ + ನ + ಹಳ್ಳಿ - HPT

ಬಸ + ಲ + ದೊಡ್ಡಿ - ADN

ಬೊಮ್ಮ + ಗುಂಡ + ನ + ಹಳ್ಳಿ - ALR

ಎಂದು ಸಂಬಂಧವಾಚಿಯೊಡನೆ ರಚನೆಯಾಗಿರುವುದರಿಂದ ಆ ಹಳ್ಳಿಗೂ, ದೊಡ್ಡಿಗೂ ನಿರ್ದಿಷ್ಟದಲ್ಲಿ ಬಳಕೆಯಾದ ವ್ಯಕ್ತಿಗಳಿಗೂ ಸಂಬಂಧವಿದೆಯೆಂದು ಗುರುತಿಸಬಹುದು.

ಅದರಂತೆ - ಬ್ರೂಸ್ + ಪೇಟೆ - BLR

ಸಾಹೇಬ + ಬುರ್ಜ - SRP

ಹುಸೇನಿ + ಬುರ್ಜು - SRP

ಎಂಬಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕಗಳ ನಡುವೆ ಯಾವುದೇ ಸಂಬಂಧವಾಚಿಯು ಬಳಕೆಯಾಗದೆ ರಚನೆಗಳಾಗಿವೆ. ಆದರೂ ಅವು ನಮ್ಮ ತಿಳಿವಳಿಕೆಯಲ್ಲಿ ವ್ಯಕ್ತಿನಾಮಾಧಾರಿತವೆಂದಾಗುತ್ತವೆ. ನಿರ್ದಿಷ್ಟಕ್ಕೂ, ವಾರ್ಗಿಕಕ್ಕೂ ಹಾಗೆ ನೋಡಿದರೆ ಸಂಬಂಧ ಇರಬಹುದು, ಇರದೇ ಹೋಗಬಹುದು. ಇಂತಹ ರಚನೆಗಳು ಕನ್ನಡದಲ್ಲಿ ಬಹಳಷ್ಟಿವೆ. ಮುಖ್ಯವಾಗಿ ಇಲ್ಲಿ ಬಳಕೆಯಾಗಿರುವ 'ಬುರ್ಜು' ಎಂಬ ವಾರ್ಗಿಕ ಕನ್ನಡ ಪರಿಸರದ್ದು ಅಲ್ಲ. ಆ ವಾರ್ಗಿಕಕ್ಕೆ ಬಳಕೆಯಾದ ನಿರ್ದಿಷ್ಟಗಳೂ (ಸಾಹೇಬ : ಹುಸೇನಿ) ನಮ್ಮ ಪರಿಸರದ ರಚನೆಗಳಲ್ಲ. ಆದ್ದರಿಂದ ನಮ್ಮ ಪರಿಸರದ ಒಂದು ವ್ಯಕ್ತಿನಾಮಕ್ಕೆ 'ಬುರ್ಜು' ಎಂಬ ವಾರ್ಗಿಕ ಸೇರಿ ರಚನೆಯಾಗಬಹುದು. ಅದಕ್ಕಿಂತ ಹೆಚ್ಚಾಗಿ ರಚನೆಯಾಗುವ ಸಾಧ್ಯತೆಗಳು ಕಡಿಮೆಯೆಂದೇ ಹೇಳಬಹುದು. ಉದಾ : ಕೆಂಚನ ಬುರ್ಜು

ತಿಮ್ಮಕ್ಕನ ಬುರ್ಜು ಎಂಬ

ರಚನೆಗಳಿರುವುದು ನಮ್ಮ ಪರಿಸರದಲ್ಲಿ ಕಂಡು ಬರುವುದು ಕಡಿಮೆಯೆನ್ನ ಬಹುದು.

ಹೀಗೆ ಸ್ಥಳನಾಮಗಳಿಂದ ಪ್ರಾದೇಶಿಕ ವೀರರ ಚರಿತ್ರೆಯೊಂದಿಗೆ, ಅಲ್ಲಿನ ಸ್ಥಳೀಯ ಸಂಸ್ಕೃತಿಯನ್ನು ಅನಾವರಣಗೊಳಿಸಬಹುದು. ಪ್ರಾದೇಶಿಕ ಚರಿತ್ರೆ ಮತ್ತು ಸ್ಥಳೀಯ ವೀರರನ್ನು ಪ್ರತಿನಿಧಿಸುವ ಈ ರೀತಿಯ ಅನೇಕ ಸ್ಥಳನಾಮಗಳಿವೆ. ಆದರೆ ಪ್ರಾದೇಶಿಕ ಚರಿತ್ರೆಯ ಆಧಾರಗಳ ಕೊರತೆಯಿಂದ ಇದು ಕಡೆಗಣಿಸುವ ಕ್ಷೇತ್ರವಾಗಿ ಇತಿಹಾಸಕಾರರ ಅವಜ್ಞೆಗೆ ಗುರಿಯಾಗಿದೆ. ಹೆಚ್ಚಾಗಿ ಮೌಖಿಕ ಚರಿತ್ರೆಯನ್ನು ನಿರ್ವಚಿಸುವ ಮುಖ್ಯ ಆಕರಗಳಾಗಿ ಸ್ಥಳನಾಮಗಳು ನಿಂತಿವೆಯೆನ್ನಬಹುದು. ನಾಡಿನಲ್ಲಿ ದೊರೆಯುವ ಅನೇಕ ಪ್ರಾದೇಶಿಕ ಚರಿತ್ರೆಯನ್ನು ಹೇಳುವ ಸ್ಥಳನಾಮಗಳಿಗೆ ನಮ್ಮ ಜನರು ಪುರಾಣೀಕೃತ, ಐತಿಹ್ಯಾತ್ಮಕ ಕಥೆಗಳನ್ನು ನೀಡಿ ನಿಜ ಚರಿತ್ರೆಯನ್ನು ಬಹುಮಟ್ಟಿಗೆ ದೂರ ತಳ್ಳಿದ್ದಾರೆ. ಇದರಲ್ಲಿಯೂ ಚಾರಿತ್ರಿಕ ಐತಿಹ್ಯಗಳನ್ನು ಹೆಕ್ಕಿ ತೆಗೆಯುವ ಮೂಲಕ ಬಹುಶ: ಸತ್ಯಾಂಶಗಳನ್ನು ಹೊರಹಾಕಬಹುದು. ಆಗ ಸ್ಥಳನಾಮಗಳ ಚಾರಿತ್ರಿಕ ಅಧ್ಯಯನದ ಮಹತ್ವ ಸ್ಪಷ್ಟವಾಗುತ್ತದೆ.

### ೬.೫. ಸ್ಥಳನಾಮಗಳ ಪ್ರತಿನಾಮಕರಣ

ಒಂದು ರಾಜಾಧಿಪತ್ಯದಿಂದ ಇನ್ನೊಂದು ರಾಜಾಧಿಪತ್ಯಕ್ಕೆ, ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಒಂದು ಗ್ರಾಮವು, ಅಥವಾ ಒಂದು ಸ್ಥಳವು ಪಡೆದುಕೊಂಡಿರುವ ಸ್ಥಿತ್ಯಂತರಗಳನ್ನು ವಸ್ತುನಿಷ್ಠವಾಗಿ ಸಂಶೋಧಿಸಿದರೆ ಅವುಗಳ ಪ್ರತಿನಾಮಕರಣ, ಪುನರ್ ನಾಮಕರಣದ ವೈಶಿಷ್ಟ್ಯತೆಗಳು ತಿಳಿಯುತ್ತವೆ. ಮೂಲತ: ಅಲ್ಲಿಯ ಸ್ಥಳೀಯರು ತಮ್ಮ ನೆಲೆಗಳಿಗೆ ಇಟ್ಟುಕೊಂಡ ಹೆಸರನ್ನು ಆ ಪ್ರಾಂತದ ಅಥವಾ ಆಕ್ರಮಿತ ಪ್ರಭುತ್ವದ ಜನತೆಯು ಒಂದು ಘಟನೆಯ ನೆನಪಿಗಾಗಿ, ಬದಲಾಯಿಸಿ ಪುನರ್ ನಾಮಕರಣ ಮಾಡಿದ್ದು ತಿಳಿಯುತ್ತದೆ. ಯುದ್ಧದ ವಿಜಯವಲ್ಲದೇ, ರಾಜನ, ತಂದೆ, ತಾಯಿಯ, ಅವನ ಪತ್ನಿಪುತ್ರರ ನೆನಪಿಗಾಗಿಯೂ ಅನೇಕ ಗ್ರಾಮಗಳಿಗೆ ಪ್ರತಿನಾಮಕರಣ ಮಾಡಿದ್ದನ್ನು ಶಾಸನಗಳು ತಿಳಿಸುತ್ತವೆ. ಅಲ್ಲಿ ನೆಲೆಸಿದ ಜನತೆಯು ಪ್ರತಿನಾಮಕರಣವನ್ನು ಸ್ವೀಕರಿಸಲಿ ಸ್ವೀಕರಿಸದಿರಲಿ ರಾಜಾಜ್ಞೆಯ ಮೇರೆಗೆ ಅದು ಕಡ್ಡಾಯವೂ ಆದ ಮತ್ತು ಆ ಹೆಸರನ್ನು ವಿರೋಧಿಸಿದವರಿಗೆ ಶಿಕ್ಷೆಯನ್ನು ವಿಧಿಸಿದ ಘಟನೆಗಳು ಕನ್ನಡನಾಡಿನಲ್ಲಿ ನಡೆದಿವೆ. ಅದೇನಿದ್ದರೂ ಒತ್ತಡ, ಒತ್ತಾಯದಿಂದಲಾದರೂ ಆ ಸ್ಥಳಕ್ಕೆ ಬದಲಿ ಹೆಸರು ಪ್ರಾಪ್ತವಾದದ್ದಿದೆ. ಮುಂದಿನ ಹಂತದಲ್ಲಿ ಅವು ನಾಶವಾಗಿಯೂ, ಮತ್ತೆ ಮೊದಲಿನ ಹೆಸರು ಚಾಲ್ತಿಗೆ ಬಂದಂತಹ ಉದಾಹರಣೆಗಳಿವೆ. ಆಂಧ್ರ ಕರ್ನಾಟಕ ಗಡಿಭಾಗದಲ್ಲಿ ದೊರೆಯುವ ಪ್ರತಿನಾಮಕರಣ ಸಂದರ್ಭಗಳನ್ನು ಅನೇಕ ಶಾಸನಗಳು, ಕೈಫಿಯತ್ತುಗಳೂ ಉಲ್ಲೇಖಿಸಿವೆ. ಅಂಥಾ ಕೆಲವು ಮಾದರಿಗಳು ಇಲ್ಲಿವೆ.

**೧. ಅಗಳಿ (MDK)**

"ಕಾಚಪನಾಯಕರಿಗೆ ಧ(ಂ)ರ್ಮವಾಗಿ ಆ ಪಳಿಗನಹಳ್ಳಿ ಎಂಬ ಗ್ರಾಮಕ್ಕೆ ಪ್ರತಿನಾಮ ಯಿಂಮಡಿ ಕಾಚಾಪುರವೆಂಬ ಹೆಸರಲಿ ಅಗಳಿಯ ಶಂಕರದೇವರಿಗೆ....."[೧೪]

**೨. ಕ್ರಿಯಾಶಕ್ತಿಪುರಕ್ಕೆ ಪ್ರತಿನಾಮ ಭೂಪಸಮುದ್ರಂ (ANT)**

ಭೂಪತಿರಾಯನೆಂಬುವವನು ಇಲ್ಲಿ ನೀರಿನ ಟ್ಯಾಂಕೊಂದನ್ನು ನಿರ್ಮಿಸಿದ ಕಾರಣದಿಂದಾಗಿ ಪ್ರತಿನಾಮವು ದೊರೆಯಿತೆಂಬುದು ತಿಳಿಯುತ್ತದೆ.[೧೫]

೩. ಕುರೇಕುಪ್ಪೆ (HPT)

"- - - - - ಅಜುಂಬಾಡವಾದ ದೊರವದಿಯ ವೇಂಠೆಯಕ್ಕೆ ಸಲುವ ಅನಂತಸೇತುವೆಂದು ಪ್ರತಿನಾಮವಾದ ಕುಱಿಯಕುಪ್ಪೆಯೆಂಬ ಸರ್ವಮಾನ್ಯದ ಅಗ್ರಹಾರದಲೂ"[೧೬]

೪. ಗಂಗಲಾಪುರಕ್ಕೆ ಪ್ರತಿನಾಮ ಚಾಜರಕಲ್ಲು - (BLR)[೧೭]

೫. ಗಾದಿಗಲೇರು - ಬುಕ್ಕರಾಯಪುರ - (KUR)

ಈ ಊರಿನಲ್ಲಿ ಭೈರವೇಶ್ವರ ದೇವಾಲಯವನ್ನು ವಿಜಯನಗರದ ಅರಸನಾದ ಒಂದನೇ ಬುಕ್ಕರಾಯನು ನಿರ್ಮಿಸಿದನು. ಇದರಿಂದಾಗಿ ಈ ಊರಿಗೆ ತನ್ನ ಹೆಸರನ್ನೇ ಪ್ರತಿನಾಮಕರಣ ಮಾಡಿದನು. (ವಿಜಯನಗರ ಕಾಲ - ೧೩೬೩ A.D.)[೧೮]

೬. ಗೊರವನಹಳ್ಳಿ - ಲಕ್ಷ್ಮಿಸಾಗರ - (HPR)

- - - - - "ಗೊರವನಹಳ್ಳಿಗೆ ಪ್ರತಿನಾಮವಾದ ಲಕ್ಷ್ಮಿಸಾಗರವೆಂಬ ಸರ್ವಮಾನ್ಯದಗ್ರಹಾರ- - - "[೧೯]

೭. ತೀರ್ಥಕ್ಕೆ ಪ್ರತಿನಾಮ ಹಿರೇಹಾಳು - (BLR)[೨೦]

೮. ದೇವಲಾಪುರಕ್ಕೆ ಪ್ರತಿನಾಮಾ ಮಲ್ಲಿಕಾರ್ಜುನಪುರ (BLR)[೨೧]

೯. ನಂದಲಪಾಡು > ವೀರನರಸಿಂಹರಾಯಲಪುರಂ (ANT)[೨೨]

೧೦. ನಾಗೇನಹಳ್ಳಿ - ನಾಗಲದೇವಿಪುರ - (HPT)

"- - - - - ಆ ಸ್ಥಾನಕ್ಕೆ ಅಂಗರಂಗವರಿಲಭವರ (ಥೋ)ತ್ಸಾಹವನೂ ಮಾಡಿಸಿ ಯಿಾ ಗ್ರಾಮವನೂ ನಾಗಲದೇವಿಪುರ (ವೆಂ)ಬ ಅಗ್ರಹಾರವನೂ ಮಾಡಿ - - - "[೨೩]

೧೧. - - - - "ನಾರಿ ಸೀಮೆಯೊಳಗಣ ಹಂಪದೇವನ ಹಳ್ಳಿಯೆಂಬ ಗ್ರಾ - - - ನೂ ಶ್ರೀಕೃಷ್ಣರಾಯಪುರವೆಂದು ಪ್ರತಿನಾಮವ ಮಾಡಿ - - - - -"[೨೪]

೧೨. ಬೆಳಗುಪ್ಪ - ವೀರನರಸಿಂಹರಾಯಪುರ - (KLD)

"ಕುಂದುರುಪೆಯ ಸೀಮೆಯ ಬೂದುಗುಪ್ಪೆಯ - - - - - ದೆ ಬೆಳಗುಪ್ಪೆ ಎಂಬ ಗ್ರಾಮಕ್ಕೆ ವೀರನರಸಿಂಹರಾಯಪುರವೆಂಬ ಪ್ರತಿನಾಮವನೂ (ಕೊಟು) ಯಿ - - - - -"[೨೫]

೧೩. ಮುತ್ಯಾಲಚೆರುವು - ತಿಮ್ಮಸಮುದ್ರ - (ANT)

ಕೃಷ್ಣದೇವರಾಯನ ಆಡಳಿತದಲ್ಲಿ ತಿಮ್ಮರಸು ಎಂಬ ಮಂತ್ರಿ ಒಂದು ನೀರಿನ ಟ್ಯಾಂಕನ್ನು ನಿರ್ಮಾಣಮಾಡಿದ್ದರಿಂದ ಮುತ್ಯಾಲಚೆರುವು ಎಂಬ ಗ್ರಾಮಕ್ಕೆ ತಿಮ್ಮರಸುವಿನ ಹೆಸರು ಬಂದಿತು.[೨೬]

೧೪. ಶ್ರೀ ಮತ್ಕೀರ್ತಿ ನಾರಾಯಣಪುರ ಪಟ್ಟಣಂ ತುಂಬಲು ಬೀಡಿನಲು - - - - -" (ADN)[೨೭]

೧೫. ವೆಲ್ಪಮಡುಗು - (GTY)

- - - - - "ಭಂಡಾರವಾಡಕೆ ಸಲುವ ಮೂಡನಾಡ ಮೊದಲಗ್ರಾಮ ವೆಲುಪಡಿಗೆ ಸ್ಥಳದೊಳಗಣ ಕೃಷ್ಣರಾಯಪುರದ ವೇಂಕಟೆಯ - - - - - "ನಂಮ ಕೃಷ್ಣರಾಯದೇವ ಮಹಾರಾಯರುಗಳ ಹೆಸರಲಿ ಕಟ್ಟಿದ ಪೇಟೆಯಲಿ ಬಂದು - - - - -"[೩೮]

೧೬. ಸೋಮಲಾಪುರಕ್ಕೆ ವಿರುಪಾಕ್ಷಪುರವೆಂಬ ನಾಮ - - - - -"[೩೯]

೧೭. ಹಂಪದೇವನಹಳ್ಳಿ - ಶ್ರೀಕೃಷ್ಣರಾಯಪುರ - (HPT)

" - - - - - ನಾರಿ ಸೀಮೆಯ ವೊಳಗಣ ಹಂಪನದೇವನ ಹಳ್ಳಿಯೆಂಬ ಗ್ರಾ - - - - - ನೂ ಶ್ರೀಕೃಷ್ಣರಾಯಪುರವೆಂದು ಪ್ರತಿನಾಮವ ಮಾಡಿ - - - - -"[೪೦]

೧೮. ಹಸ್ತಿನಾವತಿ ವಳಿತ ಅರಕೆರೆವೇಂಟದ ಪ್ರತಾಪದೇವರಾಯಪುರದ ಯರಗ್ಗುಡಿಯೆಂಬ ಸರ್ವಮಾನ್ಯದಗ್ರಹಾರದಲ್ಲಿ - - - - -" (ALR)[೪೧]

೧೯. "- - -ಹೊರಮಲೆಯನಾಡು ಅಚ್ಯುತರಾಯಪುರವೆಂಬ ಪ್ರತಿನಾಮವಾದ ಚೋರಮನೂರ ಸೀಮೆ ಗ್ರಾಮವನೂ- - - - -" (HPT)[೪೨]

ಹೀಗೆ ಸ್ಥಳನಾಮಗಳು ಪ್ರತಿನಾಮಕರಣ ಪ್ರಕ್ರಿಯೆಗೆ ಒಳಪಟ್ಟಿರುವುದು ಶಾಸನ ಮತ್ತು ಕೈಫಿಯತ್ತುಗಳಿಂದ ತಿಳಿಯುತ್ತದೆ. ಅದರಲ್ಲಿಯೂ ವಿಜಯನಗರಕಾಲದ ಅರಸರ ಕಾಲದಲ್ಲಿ ಗಡಿಭಾಗದಲ್ಲಿ ಪ್ರತಿನಾಮಕರಣ ಕ್ರಿಯೆಯು ಹೆಚ್ಚಾಗಿ ನಡೆದಿದೆಯೆಂದು ತಿಳಿಯುತ್ತದೆ. ಅದರಂತೆ ಕರ್ನಾಟಕದಲ್ಲಿ ಮುಸ್ಲಿಂ ಅರಸರ ಕಾಲಾವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರತಿನಾಮಕರಣಗೊಂಡ ಗ್ರಾಮಗಳಿವೆಯೆಂಬುದನ್ನು ಗುಲ್ಬರ್ಗ, ಬಿಜಾಪುರ ಜಿಲ್ಲೆಯಲ್ಲಿ ಗುರುತಿಸಬಹುದು. ಉಳಿದ ರಾಜಮನೆತನಗಳ ಕಾಲಾವಧಿಯಲ್ಲಿ ವಿರಳವೆಂಬಂತೆ ಪ್ರತಿನಾಮಕರಣ ಕ್ರಿಯೆಯು ನಡೆದಿದೆ.

ಮುಖ್ಯವಾಗಿ ಗಡಿಭಾಗದಲ್ಲಿ ನಡೆದಂತಹ ಪ್ರತಿನಾಮಕರಣ ವಿಜಯನಗರ ಕಾಲದಲ್ಲಿ ಘಟಿಸಿದ್ದು, ರಾಜರು ತಮ್ಮ ಹೆಸರುಗಳನ್ನು ಗ್ರಾಮಗಳಿಗೆ ನೀಡಿದ್ದಲ್ಲದೇ, ತಮ್ಮ ಕುಟುಂಬದ ಸದಸ್ಯರ ಹೆಸರುಗಳನ್ನೂ ಸ್ಥಾಪಿಸಿದರು. ಶ್ರೀಕೃಷ್ಣದೇವರಾಯನು ತನ್ನ ತಾಯಿಯ ನೆನಪಿಗಾಗಿ 'ನಾಗಲಾದೇವಿಪುರ' ಎಂಬ ನಾಮಕರಣವನ್ನು ಮಾಡಿದ್ದಿದೆ. ಇದರಂತೆ ತಿಮ್ಮಲಾಪುರ, ಚಿನ್ನಾಪುರ, ದೇವಲಾಪುರ ಮುಂತಾದ ಹೆಸರುಗಳನ್ನು ಉದಾಹರಿಸಬಹುದು. ಅರಸರು ತಮ್ಮ ಕುಲದೈವ, ಮನೆದೈವದ ಹೆಸರಿನಲ್ಲಿಯೂ ಪ್ರತಿನಾಮಕರಣವನ್ನು ಮಾಡಿದ್ದಾರೆ. 'ಸೋಮಲಾಪುರಕ್ಕೆ' ವಿಜಯನಗರ ಅರಸರ ಕುಲದೈವವಾದ ಪಂಪಾವಿರೂಪಾಕ್ಷನ ಹೆಸರಲ್ಲಿ 'ವಿರೂಪಾಕ್ಷಪುರವೆಂದು' ನಾಮಕರಣ ಮಾಡಲಾಯಿತು. ಕೆಲವು ಗ್ರಾಮಗಳನ್ನು ಮಂತ್ರಿಗಳಿಗೆ, ಸಾಮಂತರಿಗೆ ದಾನವಾಗಿ ನೀಡುವಾಗ ಆ ಗ್ರಾಮದ ಮೂಲ ಹೆಸರು ಬದಲಾಯಿಸಿದ್ದಿದೆ. ಕಾಚಪನಾಯಕ ಎಂಬುವವನಿಗೆ 'ಪಳಿಗನಹಳ್ಳಿ' ಎಂಬ ಗ್ರಾಮವನ್ನು ಧರ್ಮವಾಗಿ ನೀಡಿ ಅದಕ್ಕೆ ಅವನ ಹೆಸರಿನಲ್ಲಿ 'ಯಿಂಮಡಿ ಕಾಚಾಪುರ' ಎಂಬ ನಾಮಕರಣ ಮಾಡಲಾಯಿತು.

ಊರುಗಳಲ್ಲಿ ದೇವಾಲಯವನ್ನು ನಿರ್ಮಿಸಿ ಇಲ್ಲವೇ ಲೋಕೋಪಯೋಗಿ ಕಾರ್ಯಗಳನ್ನು ಕೈಗೊಂಡಾಗ ಅವರ ಹೆಸರಿನಲ್ಲಿ ಆ ಊರುಗಳಿಗೆ ಪ್ರತಿನಾಮಕರಣ ಮಾಡಿದ ಉದಾಹರಣೆಗಳಿವೆ. ಒಂದನೇ ಬುಕ್ಕರಾಯನು 'ಗಾದಿಗಲೇರು' ಎಂಬ ಗ್ರಾಮದಲ್ಲಿ ಭೈರವೇಶ್ವರ ದೇವಾಲಯವನ್ನು ನಿರ್ಮಿಸಿ 'ಬುಕ್ಕರಾಯಪುರ' ವೆಂದು ಹೆಸರಿಸಿದನು. ಭೂಪತಿರಾಯನೆಂಬುವವನು 'ಕ್ರಿಯಾಶಕ್ತಿಪುರ'ದಲ್ಲಿ ಜಲಸಂಗ್ರಹಗಾರ ಕಟ್ಟಿಸಿ ಆ ಊರಿಗೆ 'ಭೂಪಸಮುದ್ರ'ವೆಂಬ ಹೆಸರನ್ನು ನೀಡಿದ. ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ತಿಮ್ಮರಸು ಎಂಬ ಮಂತ್ರಿಯು 'ಮುತ್ಯಾಲ ಚೆರುವು' ಎಂಬ ಗ್ರಾಮದಲ್ಲಿ ನೀರಿನ ಟ್ಯಾಂಕೊಂದನ್ನು ನಿರ್ಮಿಸಿದ್ದರಿಂದಾಗಿ ಆ ಊರಿಗೆ 'ತಿಮ್ಮಸಮುದ್ರ' ಎಂಬ ಹೆಸರನ್ನು ನೀಡಲಾಯಿತು. ಹೀಗೆ ರಾಜಪ್ರಭುತ್ವದ ಅಡಿಯಲ್ಲಿ ನಡೆಯುತ್ತಿದ್ದ ಸಾಮಾಜಿಕ ಜೀವನದಲ್ಲಿ ಸ್ಥಳನಾಮಗಳಿಗೂ ಪ್ರತಿನಾಮಕರಣದ ಮೂಲಕ ರಾಜಪ್ರಭುತ್ವ ನೆಲೆಯೂರಿದ ಬಗೆಗೆ ತಿಳಿಯುತ್ತದೆ. ಸಾಮಾನ್ಯ ಜನರ ಹೆಸರಿನಲ್ಲಿ ಪ್ರತಿನಾಮಕರಣಗೊಂಡದ್ದು ಅತ್ಯಂತ ವಿರಳವೆಂದೇ ಹೇಳಬಹುದು. ಸಾಮಾಜಿಕರೂ ಸಾಮಾನ್ಯರ ಹೆಸರಿನ ಚಲಾವಣೆಯನ್ನು ತರಲು ತಮ್ಮ ಒಮ್ಮತವನ್ನು ಸೂಚಿಸುತ್ತಿರಲಿಲ್ಲವೆಂದೇ ತಿಳಿಯಬಹುದು. ಆದರೆ ಪ್ರತಿನಾಮಕರಣವನ್ನು ರಾಜಪ್ರಭುತ್ವ ಮಾಡಿದ್ದರೆ ಅದನ್ನು ಒಪ್ಪಿಸಲು ಕಾನೂನು ಮುಂದಾಗುತ್ತಿತ್ತು. ಈ ಕಾರಣದಿಂದ ಇತಿಹಾಸದುದ್ದಕ್ಕೂ ಅನೇಕ ಸ್ಥಳೀಯ ಸಾಂಸ್ಕೃತಿಕ ವ್ಯಕ್ತಿಗಳ ಹೆಸರುಗಳು ಸ್ಥಳಕ್ಕೆ ಆರೋಪಿತವಾಗಲಿಲ್ಲ ವೆನ್ನಬಹುದು.

ಪ್ರತಿನಾಮಕರಣ ಕ್ರಿಯೆಯು ಇಂದಿಗೂ ಮುಂದುವರೆಯುತ್ತಿದೆ. ಆದರೆ ಈ ನಾಮಕರಣದ ಸ್ವರೂಪ, ವಿಧಾನ ಭಿನ್ನವಾಗಿದೆ. ರಾಜಕೀಯ, ಆರ್ಥಿಕ, ಸಾಂಸ್ಕೃತಿಕವಾದ ಕೆಲವು ಕಾರಣಗಳಿಂದ ಆಧುನಿಕ ಸ್ಥಳನಾಮಗಳಲ್ಲಿ ಈ ರೀತಿಯ ಪ್ರಕ್ರಿಯೆಯು ನಡೆಯುತ್ತಿದೆ. ಅದನ್ನು ಸಾಮಾಜಿಕ ಅಧ್ಯಯನದಲ್ಲಿ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

ಇಲ್ಲಿ ಪ್ರತಿನಾಮಕರಣಗೊಂಡ ಸ್ಥಳನಾಮಗಳಲ್ಲಿ ಸಂಸ್ಕೃತ ಭಾಷೆಯು ದಟ್ಟವಾಗಿ ಪ್ರಭಾವ ಬೀರಿದೆಯೆಂಬುದನ್ನು ಗುರುತಿಸಬಹುದು. ಅಲ್ಲದೇ ವ್ಯಕ್ತಿನಾಮಗಳಿಂದಲೇ ಪ್ರತಿನಾಮಕರಣಗೊಂಡು, ವಾರ್ಗಿಕ ಮಟ್ಟದಲ್ಲಿ ಸಂಸ್ಕೃತದ ಸ್ವೀಕರಣೆಯು ನಡೆದಿದೆ. ಮೂಲ ಸ್ಥಳನಾಮಕ್ಕೂ, ಪ್ರತಿನಾಮಕ್ಕೂ ಹತ್ತಿರದ ಸಂಬಂಧವಿಲ್ಲದೆಯೂ, ಅಥವಾ ಸಂಪೂರ್ಣ ಬೇರೆಯಾಗಿಯೂ ರಚನೆಗೊಂಡಿವೆಯೆಂಬುದು ತಿಳಿಯುತ್ತದೆ.

ಕ್ರಿಯಾಶಕ್ತಿಪುರ - ಭೂಪಸಮುದ್ರ - ANT

ಗೊರವನಹಳ್ಳಿ - ಲಕ್ಷ್ಮೀಸಾಗರ - HPR

ಮುತ್ಯಾಲ ಚೆರುವು - ತಿಮ್ಮಸಮುದ್ರ - ANT

ಎಂಬ ಉದಾಹರಣೆಗಳಲ್ಲಿ

ಪುರ - ಸಮುದ್ರ

ಹಳ್ಳಿ - ಸಾಗರ

ಚೆರುವು - ಸಮುದ್ರ

ಎಂಬುದಾಗಿ ಪ್ರತಿನಾಮವಾಗಿವೆ. ಅಂದರೆ ಪುರಕ್ಕೂ, ಸಮುದ್ರಕ್ಕೂ ಸಮಾನವಾದ ಯಾವ ಅಂಶಗಳೂ ಇಲ್ಲ. ಅದರಂತೆ ಹಳ್ಳಿ, ಸಾಗರಕ್ಕೂ ಸಂಬಂಧವಿಲ್ಲ, ಚೆರುವು (ಕೆರೆ) ಎಂಬ ಜಲವಾಚಿ ಪದಕ್ಕೆ ಪರ್ಯಾಯವಾಗಿ

'ಸಮುದ್ರ' ಎಂಬ ರಚನೆಯಿದೆ. ಇವೆರಡಕ್ಕೂ ಜಲಮೂಲ ಸಂಬಂಧ ಇದೆಯಾದರೂ, ಅವುಗಳು ಅರ್ಥದ ದೃಷ್ಟಿಯಿಂದ ಭಿನ್ನವೇ ಆಗುತ್ತವೆ. ಅಂದರೆ ಕನ್ನಡ, ತೆಲುಗು ಮುಂತಾದ ದ್ರಾವಿಡ ಪರಿಸರದ ಕೆಲವು ರಚನೆಗಳಿಗೆ ಸಂಸ್ಕೃತದಲ್ಲಿ ಸಮಾನ ಪದಗಳಿಲ್ಲದಿರುವುದು ಇದಕ್ಕೆ ಕಾರಣವಿರಬಹುದೇ? ಎಂದು ಊಹಿಸಬಹುದು. ಅದೇನಿದ್ದರೂ ಸಂಸ್ಕೃತದ ಒಲವಿರುವ ರಾಜಪರಿವಾರ, ಪಂಡಿತಪರಿವಾರ ಸೇರಿ ಗ್ರಾಮಗಳಿಗೆ ಪ್ರತಿನಾಮ ಕೊಡುವಾಗ ಯಾವುದೇ ಭಾಷಿಕ ಅರ್ಥಗಳನ್ನು ಗಮನಿಸದೇ ನಾಮನಿರ್ದೇಶನ ಮಾಡಿರುವುದಾಗಿ ಈ ರಚನೆಗಳಿಂದ ಗುರುತಿಸಲು ಸಾಧ್ಯವಿದೆ. ಬಹುಮುಖ್ಯವಾಗಿ ಇವು ಸಂಸ್ಕೃತಾನುಕರಣಕ್ಕೆ ಯಥಾವತ್ತು ಭಾಷಾಂತರಗಳಲ್ಲ ಎಂಬುದನ್ನು ಗಮನಿಸಬೇಕು. ಪ್ರತಿನಾಮಕರಣವಾದ್ದರಿಂದ ಈ ಬಗೆಯ ರಚನೆಗಳು ಸಾಮಾನ್ಯವೇ ಆಗಿವೆ.

ಒಟ್ಟಾರೆ ಗ್ರಾಮನಾಮಗಳ ಪುನರ್ ನಾಮಕರಣ ಸಂದರ್ಭಗಳನ್ನು ಶಾಸನ, ಕೈಫಿಯತ್ತು ಉಲ್ಲೇಖಿಸಿವೆ. ಆ ಮೂಲಕ ಸ್ಥಳನಾಮಗಳ ಚಾರಿತ್ರಿಕ ಸಂಗತಿಗಳನ್ನು ತಿಳಿಯಬಹುದು.

**೬.೬. ವೀರ, ಮಾಸ್ತಿಗಲ್ಲುಗಳು - ಸ್ಥಳನಾಮಗಳು**

ವೀರಗಲ್ಲು, ಮಾಸ್ತಿಗಲ್ಲುಗಳಿಂದ ಸ್ಥಳನಾಮಗಳ ಅಭ್ಯಾಸ ಮಾಡುವ ಸಾಧ್ಯತೆಯಿದೆ. ಈ ರೀತಿಯ ನೆಡುಗಲ್ಲುಗಳಿಂದ ಕನ್ನಡನಾಡಿನಲ್ಲಿ ನಾಮ ನಿರ್ದೇಶನಗೊಂಡ ಸ್ಥಳನಾಮಗಳಿವೆ. ಇದು ಚರಿತ್ರೆಯನ್ನು, ಸಂಸ್ಕೃತಿಯನ್ನು ಕಂಡುಕೊಳ್ಳುವ ಮತ್ತೊಂದು ಬಗೆಯೂ ಹೌದು. ಈ ನೆಡುಗಲ್ಲುಗಳಲ್ಲಿ ಮುಖ್ಯವಾಗಿ ಲಿಪಿಯನ್ನು ಹೊಂದಿದ, ಲಿಪಿರಹಿತವಾದ ಪ್ರಕಾರಗಳಿವೆ. ಲಿಪಿಯಿರುವ ಕಲ್ಲುಗಳಲ್ಲಿ ಸ್ಥಳನಾಮಗಳು ಉಲ್ಲೇಖವಾಗಿವೆ. ಅದರಂತೆ ಲಿಪಿರಹಿತ ವೀರ, ಮಾಸ್ತಿಗಲ್ಲುಗಳ ಹೆಸರಿಂದಲೂ ಗ್ರಾಮನಾಮಗಳಿವೆ. ಒಂದೊಮ್ಮೆ ವೀರರ, ಮಹಾಸತಿಯ ನೆನಪಿನ ಕಲ್ಲುಗಳು ಮಾತ್ರವಿದ್ದು, ಅದೇ ಹೆಸರಿನ ಊರು, ಸ್ಥಳಗಳಿರದೇ, ಆ ವೀರರ, ಮಾಸ್ತಿಯರ ನಿಜ ಹೆಸರುಗಳಿಂದ ಕರೆಯಲ್ಪಟ್ಟಂತಹ ಉದಾಹರಣೆಗಳಿವೆ. ಅಂತಹ ಕೆಲವು ಮಾದರಿಗಳನ್ನು ಇಲ್ಲಿ ಗಮನಿಸಲಾಗಿದೆ.

**೬.೬.೧. ವೀರಗಲ್ಲುಗಳು - ಸ್ಥಳನಾಮ**

ವೀರಗಲ್ಲುಗಳನ್ನು ಹೆಚ್ಚಾಗಿ ನೆಡುತ್ತಿದ್ದುದು ದೇವಾಲಯಗಳ ಮುಂದೆ. ಇಲ್ಲವೆ ಊರಬಾಗಿಲ ಮುಂದೆ. ಚಾವಡಿಗಳಲ್ಲಿ, ಹೊಂಡಗಳ ಬಳಿ, ಹೊಲ, ಗದ್ದೆಗಳಲ್ಲಿಯೂ ನೆಟ್ಟಿರುವುದನ್ನು ಗಮನಿಸಬಹುದು. ಇಂಥಾ ವೀರಗಲ್ಲುಗಳನ್ನು ನೆಟ್ಟ ಸ್ಥಳಗಳಿಗೂ ಜನರು ಹೆಸರಿಟ್ಟಿರುವುದನ್ನು "ಕೋಲಾರ ಜಿಲ್ಲೆಯಲ್ಲಿ "ವೀರಗಾರರ ನೆತ್ತು" ಎಂಬುದಾಗಿ ಕರೆಯುತ್ತಾರೆ. ಈ 'ವೀರಗಾರರ ನೆತ್ತು' ಎಂಬ ಪ್ರದೇಶವನ್ನು ಕೆಲವೆಡೆ 'ಬೂದಿನೆತ್ತು' ಎಂಬುದಾಗಿಯೂ ಕರೆಯುತ್ತಾರೆ."[೩೩] (ನೆತ್ತು ಎಂದರೆ ನಿರ್ದಿಷ್ಟವಾದ ಸ್ಥಳ). ವೀರನಾದವನು ಎಲ್ಲಿಯೇ ಸಾಯಲಿ ಅವನ ಸ್ವಂತ ಸ್ಥಳದಲ್ಲಿ ವೀರಗಲ್ಲನ್ನು ಹಾಕಿಸುತ್ತಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಕೆಲವು ಸಾರಿ ಅವನು ಮಡಿದಲ್ಲಿಯೂ ಹಾಕಿಸಿದ್ದಾರೆ. ಈ ಸ್ಥಳಗಳಿಗೆ ಜನರು ಹೆಸರನ್ನು ಇಟ್ಟಿದ್ದಾರೆ. ಇದರಿಂದ ಆಯಾ ಪ್ರಾದೇಶಿಕ ವೀರನ ಚರಿತ್ರೆ, ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳು ಮುಂತಾದ ಮಾಹಿತಿಯು ದೊರೆಯುತ್ತದೆ. ವೀರಗಲ್ಲುಗಳು ಇರುವಲ್ಲಿ ಈಗ ಜನವಸತಿ ಇರಬಹುದು. ಇಲ್ಲದೆಯೂ ಇರಬಹುದು. ಆದರೆ ಅವುಗಳಿಗಿರುವ ಹೆಸರುಗಳು ಮಾತ್ರ ಗಮನವನ್ನು ಸೆಳೆಯುತ್ತವೆ.

**೧. ಇಲಿಚೆಪ್ಪನದೊಣೆ (ALR)**

ಇಲಿಚೆಪ್ಪ ಒಬ್ಬ ಸಾಂಸ್ಕೃತಿಕ ವೀರ. ಅವನ ಹೆಸರಿನಿಂದಾಗಿ ಈ ಡೊಣೆಗೆ ಹೆಸರು ಬಂದಿದೆ."[೩೪] ಕರ್ನಾಟಕದಲ್ಲಿಯೂ ಈ ರೀತಿಯ ಅನೇಕ ಸ್ಥಳನಾಮಗಳಿವೆ. "ಚಳ್ಳಕೆರೆ ತಾಲ್ಲೂಕಿನ 'ಎರಬಳ್ಳಿ' ಎಂಬ ಊರಿನ ಬಳಿ ಇರುವ ಒಂದು ಹೊಲದಲ್ಲಿ ಸಹಗಮನಮಾಡಿದ ಕೊಂಡಗಳನ್ನು ಜನರು ತೋರಿಸುತ್ತಾರೆ. ಈ ಕೊಂಡಗಳ ಬಳಿ ನೂರಾರು ಸಣ್ಣಸಣ್ಣ ಕಲ್ಲುಗಳನ್ನು ಸಾಲಾಗಿ ನಿಲ್ಲಿಸಿದ್ದಾರೆ. ಇವುಗಳನ್ನು ಅಲ್ಲಿಯ ಜನ "ಯಜಮಾನ್ರುಗುಡ್ಡ" ಅಥವಾ 'ಜಿನವ'ಗಳು ಎಂದು ಕರೆಯುತ್ತಾರೆ."[೩೫]

**೨. ತಿಪ್ಪಾರೆಡ್ಡಿ ಬಯಲು (ALR)**

ಇದೊಂದು ನಿರ್ವಸಿತ ಸ್ಥಳನಾಮ. ಇಲ್ಲಿ ವೀರಗಲ್ಲು ಇದೆ. ಜನರು ಹೇಳುವ ಐತಿಹ್ಯವೊಂದು ಹೀಗಿದೆ - "ತಿಪ್ಪಾರೆಡ್ಡಿಯೆಂಬಾತ ದನಗಳನ್ನು ಕಾಯಲೆಂದು ಗುಡ್ಡಕ್ಕೆ ಹೋದಾಗ ಚಿರತೆಯೊಂದು ದನಗಳ ಮೇಲೆ ಎರಗಿತು. ಅದನ್ನು ಕಂಡ ತಿಪ್ಪಾರೆಡ್ಡಿ ಚಿರತೆಯನ್ನು ಓಡಿಸಲು ಮುಂದಾಗಿ ಅದರೊಂದಿಗೆ ಕಾದಾಡಿ, ದನಗಳನ್ನು ರಕ್ಷಿಸಿ, ವೀರಮರಣವನ್ನು ಹೊಂದಿದ. ಈ ಕಾರಣದಿಂದ ಅವನಿಗೆ ವೀರಗಲ್ಲನ್ನು ನೆಟ್ಟು, ಆ ಪ್ರದೇಶಕ್ಕೆ 'ತಿಪ್ಪಾರೆಡ್ಡಿ ಬಯಲು' ಎಂದು ಕರೆದರು.[೩೬]

**೩. ವಜ್ರತಿಮ್ಮಪ್ಪನ ಮಟ್ಟೆ (ALR)**

"ಇಲ್ಲಿನ ಒಂದು ಸಣ್ಣ ಬೆಟ್ಟದಲ್ಲಿ ಕಳ್ಳರು ಸುತ್ತಮುತ್ತಲಿನ ಊರುಗಳಲ್ಲಿ ವಜ್ರವೈಢೂರ್ಯಗಳನ್ನು ಕದ್ದು ತಂದು ಅಡಗಿಸಿಡುತ್ತಿದ್ದರು. ತಿಮ್ಮಪ್ಪ ಎಂಬಾತನಿಗೆ ಇದು ತಿಳಿದು ಅವರೊಂದಿಗೆ ಹೋರಾಡಿ ಆ ಸಂಪತ್ತನ್ನು ಜನರಿಗೆ ಹಂಚಿದನು. ತಿಮ್ಮಪ್ಪ ಆ ಬೆಟ್ಟದಲ್ಲಿ ವಾಸಿಸುತ್ತಿದ್ದ. ಕಾಲಾಂತದಲ್ಲಿ ತೀರಿಕೊಂಡ. ಆ ಬೆಟ್ಟವನ್ನು ಇಂದಿಗೂ ವಜ್ರತಿಮ್ಮಪ್ಪನ ಮಟ್ಟೆ'ಎಂದು ಕರೆಯುತ್ತಾರೆ."[೩೭]

ವೀರಗಲ್ಲುಗಳಿಗೆ ಶಾಸನಪಾಠವಿದ್ದು, ಅವುಗಳಲ್ಲಿ ಸ್ಥಳನಾಮಗಳ ಉಲ್ಲೇಖವಿದೆ. "ಹೊಸಊರ ಮತ್ತು ಜಂಬೂರಗಳ ನಡುವೆ ಗಡಿಯ ಕಾಳಗ ನಡೆಯುವುದು ಎಂಬುದನ್ನು ಕೇಳಿದ ಈಸೂರಿನ 'ಮಾಳ' ಎಂಬುವವನು ಹೊಸ ಊರಿಗೆ ಬಂದು "ಸಾಸಿರ್ವರಲ್ಲಿ ಬೆಸನಂ ಬೇಡಿಕೊಂಡು" ಜಗಳದಲ್ಲಿ ಕಾದಾಡಿ ಕೆಲವರನ್ನು ಕೊಂದು ತಾನೂ ಸಾಯುತ್ತಾನೆ.[೩೮] ಎಂಬ ಉಲ್ಲೇಖಗಳಲ್ಲಿ ಸ್ಥಳನಾಮಗಳ ಉಲ್ಲೇಖಗಳಿವೆ. "ಬುಳ್ಳಗುಪ್ಪೆಯ ದಾಳಿಗೌಡನು ಎರಡು ಹಳ್ಳಿಗಳ ಜೊತೆಯಲ್ಲಿ ಕಾದಾಡಿ ತಮ್ಮ ಗಡಿಯ ಭೂಮಿಯಲ್ಲಿ ಸಾಯುತ್ತಾನೆ."[೩೯] ಬೂದಿಕುಪ್ಪೆಯ ಗಉಡ ಚೊಡಪ್ಪನ ಮಗ ದೇವಪ್ಪನು ಹುಲಿಕಚ್ಚಿ ಸತ್ತದ್ದಕ್ಕೆ ಹೊಯಿದ ವೀರಗಲ್ಲು.[೪೦]

ಶ್ರೀಮತಿ ಅಣತಿ ತಿರುಮಲನಾಯಕರು ಸುರುನಕಗಟ್ಟಿದ ಮಾಡಿಯಗಂಡ ಮಲ್ಲೋಡೇರಿಗೆ ಬಿಸಿಲಹಳ್ಳಿಯ ಗದ್ದೆ ಬೆದ್ದೆಯ ಸತ್ತಿಯ ಕೊಡುಗೆ.[೪೧]

ಹೀಗೆ ವೀರಗಲ್ಲುಗಳು ಕೂಡ ಒಂದು ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ನೀಡುವಲ್ಲಿ ಅದರಲ್ಲಿಯೂ ಸ್ಥಳನಾಮಗಳನ್ನೊಳಗೊಂಡ ವೀರಗಲ್ಲುಗಳು ಮತ್ತಷ್ಟು ಖಚಿತವಾದ ಮೂಲಾಧಾರವಾಗಿ ನಿಲ್ಲುತ್ತವೆ.

## ೬.೭. ಮಾಸ್ತಿಗಲ್ಲುಗಳು - ಸ್ಥಳನಾಮ

ತನ್ನ ನಾಡಿಗಾಗಿ ಪ್ರಾಣಾರ್ಪಣೆ ಮಾಡಿದ ವೀರನ ಹಿಂದೆಯೇ ಪ್ರಾಣಾರ್ಪಣೆ ಮಾಡಿದ ಸತಿಯರ ನೆನಪನ್ನು ಎಷ್ಟೋ ಗ್ರಾಮಗಳು ಉಳಿಸಿಕೊಂಡು ಬಂದಿವೆ. ಮಾಸ್ತಿಕಟ್ಟೆ, ಮಾಸ್ತಿಹೊಳೆ, ಮಾಸ್ತಿಮನೆ, ಮಾಸ್ತಿಮರಡಿ, ಮಾಸ್ತಿ: ಎಂಬ ಗ್ರಾಮಗಳು ಈ ಬಗೆಯವು. ಅಗ್ನಿ ಪ್ರವೇಶಿಸಿದ ಮಾಸ್ತಿ ಈ ಊರುಗಳಲ್ಲಿ ಒಂದು ಶಕ್ತಿಯಾಗಿ ಬೆಳೆದಿದ್ದು, ಬೇಡಿದುದನ್ನು ನೀಡುವ ಗ್ರಾಮದೇವತೆಯಾಗಿ ಮಾರ್ಪಟ್ಟಿದ್ದನ್ನು ಕಾಣಬಹುದು."[೪೨] ಹೀಗೆ ಸತಿಹೋದ ಘಟನೆಯನ್ನು ಸಾರುವ ಹಲವು ವಸ್ತುಗಳು ಕರ್ನಾಟಕದಲ್ಲಿ ಉಳಿದುಕೊಂಡು ಬಂದಿವೆ. ಸತಿಹೋದ ಸ್ಥಳದಲ್ಲಿ ಊರೋ, ಕಟ್ಟೆಯೋ, ಕೆರೆಯೋ, ಗದ್ದಿಗೆಯೋ ನಿರ್ಮಾಣವಾಗಿ ಅವು ಇಂದಿಗೂ ಸತಿ ಘಟನೆಯನ್ನು ತಲೆತಲಾಂತರಗಳಿಂದ ಜೀವಂತವಾಗಿಟ್ಟುಕೊಂಡು ಬಂದಿವೆ. ಹೊಲ, ಕಾಡು, ಗುತ್ತ, ಕೊಂಡ, ಗಿಡ, ಹಳ್ಳಿ, ದಿಬ್ಬ ಈ ಮೊದಲಾದ ರೂಪಗಳಲ್ಲಿಯೂ ಸತಿ ಘಟನೆಯು ಉಳಿದುಕೊಂಡು ಬಂದಿದೆ."[೪೩] ಮಾಸ್ತಿಹಳ್ಳಿ, ಮಾಸ್ತಿಹಾಳ್, ಮಾಸ್ತಿಹೊಳೆ, ಮಾಸ್ತಮ್ಮನಹಳ್ಳಿ, ಮಾಸಡಿ ಇತ್ಯಾದಿಗಳು ಆಯಾ ಊರುಗಳಲ್ಲಿ ನಡೆದಂತಹ ಸಹಗಮನವನ್ನು ಸೂಚಿಸುತ್ತವೆ."[೪೪] ಈ ಊರುಗಳಲ್ಲಿ ಸತಿಶಿಲ್ಪ, ಕೊಂಡ, ಕಟ್ಟೆದಿಬ್ಬ, ಗುಡಿ ಇವುಗಳಲ್ಲಿ ಯಾವುದಾದರೂ ಒಂದು ಇರುತ್ತದೆ. ಕಾರಣಾಂತರಗಳಿಂದ ಇವುಗಳ ಸುತ್ತಲೂ ಜನವಸತಿಯು ಆರಂಭವಾಗಿ ಕ್ರಮೇಣ ಊರುಗಳಾಗಿ ಪರಿಣಮಿಸಿದಾಗ ಅದನ್ನು ಗುರುತಿಸುವ ಸಲುವಾಗಿ 'ಮಾಸ್ತಿ' ಹೆಸರಿನಿಂದ ಇಲ್ಲವೇ ಮಾಸ್ತಿಗೆ ಸಂಬಂಧಪಟ್ಟುದುದರ ಹೆಸರಿನಿಂದ ಕರೆದುದುಂಟು.

ಕುಮಟಾ ತಾಲ್ಲೂಕಿನ 'ಮಾಸ್ತಿಹಳ್ಳಿ' ಎಂಬ ಅತೀ ಚಿಕ್ಕ ಊರಿನ ಹೆಸರು ಮಾಸ್ತಿಯಿಂದಲೇ ಬಂದಿದೆ. ಇಲ್ಲಿ ಮಾಸ್ತಿಕಟ್ಟೆಯೊಂದಿದೆ. ಸಮೀಪದಲ್ಲಿ ಹಳ್ಳ ಹರಿದಿದೆ. ಈ ಎರಡೂ ಕಾರಣಗಳಿಂದ ಇಲ್ಲಿರುವ ಜನವಸತಿಯನ್ನು 'ಮಾಸ್ತಿಹಳ್ಳಿ' ಎಂದು ಕರೆಯಲಾಗುತ್ತಿದೆ."[೪೫] ಅದರಂತೆ 'ಕೊಂಡದಹಳ್ಳಿ' ಈ ಊರಿನ ಹೆಸರು ಸತಿಯೊಬ್ಬಳು ಗಂಡನ ಶವದೊಡನೆ ಕೊಂಡ ಏರಿದ್ದನ್ನು ಸೂಚಿಸುವುದೇ ಆಗಿದೆ. ಈ ಸತಿಯ ಕಥೆ ಹೀಗಿದೆ. "ದುಮ್ಮಿಹಳ್ಳಿಯ ಮುಖ್ಯಸ್ಥನ ಮಗಳು ಮಾಸ್ತ್ಯಮ್ಮ. ಇವಳನ್ನು ಕಮ್ಮಾರಘಟ್ಟದ ಶ್ರೀಮಂತ ರೈತನ ಮಗನಿಗೆ ಕೊಟ್ಟು ಮದುವೆ ಮಾಡಿತ್ತು. ಕೆಲಸದ ನಿಮಿತ್ತ ರಾತ್ರಿಹೊತ್ತು ಮನೆಯಲ್ಲಿ ಇರುತ್ತಿರಲಿಲ್ಲ. ಆದರೂ ರಾತ್ರಿ ಪತ್ನಿ ಬಳಿ ಬಂದುಹೋಗುತ್ತಿದ್ದನು. ಇವಳು ಬಸುರಾಗಿ ಮಗುವಿಗೆ ಜನ್ಮಕೊಟ್ಟಳು. ಈಕೆಯ ಕುರಿತಾಗಿ ಹಲವು ಸುದ್ದಿಗಳು ಹಬ್ಬಿದವು. ಗಂಡನು ಒಂದು ದಿನ ಬಂದು ಮಾಸ್ತ್ಯಮ್ಮಳನ್ನು ಕರೆದುಕೊಂಡು ಹೊರಟನು. ಹಿಂದೆ ಹಿಂದೆಯೇ ಆಳು ಮಾದಿಗನೂ ಹೊರಟನು. ಗಂಡ ದಾರಿಯಲ್ಲಿ ಚಿಲುಮೆಯ ನೀರನ್ನು ಕುಡಿಯುವಾಗ ಮಾದಿಗನು ಆಯುಧದಿಂದ ಹೊಡೆದು ಕೊಂದನು. ಪತ್ನಿ ಮಾದಿಗನನ್ನು ಗಂಡನೆಂದು ತಿಳಿಯುವುದಾಗಿ ಹೇಳಿ ಅವನಿಗೆ ಮೊದಲು ನೀರು ಕುಡಿಯಲು ಹೇಳಿ, ಅವನು ನೀರು ಕುಡಿಯುವಾಗ ಅದೇ ಆಯುಧದಿಂದ ಹೊಡೆದು ಕೊಂದಳು. ಗಂಡನ ತಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಮಾದಿಗನ ತಲೆಯನ್ನು ಕಾಲಲ್ಲಿ ಕಟ್ಟಿಕೊಂಡು ಈಗಿರುವ 'ಕೊಂಡದಹಳ್ಳಿ'ಗೆ ಬಂದಳು. ಅಲ್ಲಿಯೇ ಭೂಮಿಯನ್ನು ಕೊಂಡು, ಕೆಂಡಕೊಂಡವಾದಳು. ಈಗಲೂ ಕೂಡ ಆಕೆ ಬಿದ್ದ ಕೊಂಡದ ಸ್ಥಾನವೆಂದು ಈಗಿರುವ ಚಿಕ್ಕ ಕೆರೆಯೊಂದನ್ನು ಜನರು ತೋರಿಸುತ್ತಾರೆ. ಅವಳು ಬಿದ್ದ ಕೊಂಡದಿಂದಲೇ ಈ

ಊರಿಗೆ 'ಕೊಂಡದಹಳ್ಳಿ' ಎಂದು ಹೆಸರು ಬಂದಿರಲು ಸಾಧ್ಯ"[೬೬] ಎಂಬುದಾಗಿ ಅಭಿಪ್ರಾಯಗಳು ಬಂದಿವೆ. ಈ ರೀತಿಯ ಉದಾಹರಣೆಗಳು ಅಧ್ಯಯನ ಕ್ಷೇತ್ರದಲ್ಲಿ ದೊರೆತಿಲ್ಲ. ಮೇಲಿನ ಮಾದರಿಗಳನ್ನು ಅಧ್ಯಯನದ ಸಾಧ್ಯತೆಗಳಿಗೆ ಬಳಸಿಕೊಳ್ಳಬಹುದಾದ ಆಕರಗಳನ್ನು ಪ್ರಸ್ತಾಪಿಸಲು ಬಳಸಿಕೊಳ್ಳಲಾಗಿದೆ.

ಹೀಗೆ ಮಾಸ್ತಿಕಲ್ಲುಗಳೂ, ಸ್ಥಳನಾಮಗಳಿಗೆ ಪ್ರೇರಣೆನೀಡಿ ಆ ಮೂಲಕ ಚಾರಿತ್ರಿಕ ಸಂದರ್ಭಗಳನ್ನು ತಿಳಿಯುವುದಕ್ಕೆ ಮಾರ್ಗಸೂಚಿಯಾಗಬಲ್ಲವು.

**೬.೮. ಐತಿಹಾಸಿಕ ಮಹತ್ವವನ್ನು ಹೊಂದಿದ ಕೆಲವು ಸ್ಥಳನಾಮಗಳು**

ಆಂಧ್ರ - ಕರ್ನಾಟಕ ಗಡಿಭಾಗದಲ್ಲಿ ಹಲವಾರು ರಾಜಪ್ರಭುತ್ವಗಳು ಆಳ್ವಿಕೆ ನಡೆಸಿವೆ. ಅವರ ಕಾಲಾವಧಿಯಲ್ಲಿ ತಮ್ಮ ರಾಜ್ಯವ್ಯಾಪ್ತಿಯಲ್ಲಿ ಒಂದು ಭೌಗೋಳಿಕ ವಲಯವನ್ನು ಅನೇಕ ವಿಭಾಗಗಳನ್ನಾಗಿ ಮಾಡಿಕೊಂಡು, ಆಡಳಿತದ ಅನುಕೂಲಕ್ಕಾಗಿ ಅವುಗಳಿಗೆ ನಾಡು, ಸೀಮೆ, ವಿಷಯ, ಪ್ರಾಂತ್ಯ, ಹೀಗೆ ವಿವಿಧ ಬಗೆಯಲ್ಲಿ ವಿಂಗಡಿಸಿಕೊಂಡು ಆಯಾ ವಿಭಾಗಕ್ಕೆ ಕೆಲವು ಊರುಗಳನ್ನು ಒಳಪಡಿಸಿ, ಒಬ್ಬ ಪ್ರಾಂತ್ಯಾಧಿಕಾರಿಯನ್ನು ನೇಮಿಸಲಾಗುತ್ತಿತ್ತು. ಅಂತಹ ಕೆಲವು ನಾಡು, ಸೀಮೆಗಳು ಗಡಿಭಾಗದಲ್ಲಿಯೂ ಇವೆ. ಅವುಗಳ ಪಟ್ಟಿ ಇಲ್ಲಿದೆ.

**೬.೮.೧. ಆಂಧ್ರಪ್ರದೇಶದ ಗಡಿಭಾಗದ ಪ್ರಮುಖ ನಾಡುಗಳು - ಸೀಮೆಗಳು**

| | | |
|---|---|---|
| ಅಗಳಿಸೀಮೆ | ಕೋಸಗೆಯನಾಡು | ನೊಳಂಬವಾಡಿ - ೩೨೦೦೦ |
| ಅಲಂಪೂರಸೀಮೆ | ಗರುಜೆ - ೭೦ | ಪೊಂಬುಳಿಗೆ - ೭೩ |
| ಅಯಿಜೆ ಮುನ್ನೂರು | ಗಂಗಜು ಸಾಸಿರ | ಭಾಗಿ - ೧೨ |
| ಆದವಾನಿ - ೫೦೦ | ಗುತ್ತಿಸೀಮೆ | ಮಂಚಾಲೆ - ೩೬ |
| ಎಮ್ಮೆದಲೆ - ೬೦೦೦ | ಗುಡಿಕಲ್ಲು - ೨೪ | ರಾಯದುರ್ಗಸೀಮೆ |
| ಕವತಾಲು - ೧೨ | ಜಿನ್ನನಾಡು - ೮೬ | ರೇನಾಡು - ೭೦ |
| ಕಣೆಯಕಲ್ಲುಮೂನೂಱು | ತುಂಬುಳ - ೩೦ | ವಡುಗಾವಳಿ |
| ಕಂದಕೂರು - ೨೪ | ತುರುಮರ ವಿಷಯ | |

ಎಂಬಂತಹ ನಾಡುಗಳಿದ್ದು, ಈ ಪ್ರದೇಶದ ದಟ್ಟವಾದ ಇತಿಹಾಸವನ್ನು ಇವು ಹೇಳುತ್ತವೆ. ಅಲ್ಲದೇ ಈ ನಾಡು, ಸೀಮೆಗಳ ಒಳಗೆ ಬರುವ ಅನೇಕ ಗ್ರಾಮಗಳ ಚರಿತ್ರೆಯೂ ಕುತೂಹಲಕಾರಿಯಾಗಿರುತ್ತದೆ.

**೬.೮.೨. ಕರ್ನಾಟಕದ ಗಡಿಭಾಗದ ಪ್ರಮುಖ ನಾಡುಗಳು, ಸೀಮೆಗಳು**

| | | |
|---|---|---|
| ಕಲ್ಕಣಿನಾಡು | ದೊರವಡಿ - ೭೦ | ಸಾವಿಮಲೆ |
| ಕುಂತಳ | ನಲ್ವಡಿ - ೧೨ | ಸುಬಾಲ xxx ಎಪ್ಪತ್ತು. |
| ಕೊಟ್ಟಿತೊಣೆ | ಬಳ್ಳಾರೆ - ೩೦ | |
| ತೆಕ್ಕೆಕಲ್ಲು - ೧೨ | ಬಲ್ಲಕುಂದೆ - ೩೦೦ | |

ಎಂಬ ನಾಡು, ಸೀಮೆಗಳನ್ನು ಕರ್ನಾಟಕದ ಗಡಿಭಾಗವು ಹೊಂದಿದೆ. ಪ್ರಮುಖವಾಗಿ ಕರ್ನಾಟಕದಲ್ಲಿ ದೊರೆಯುವ ನಾಡುಗಳು ಮತ್ತು ಸೀಮೆಗಳ ಹೆಸರುಗಳ ಕುರಿತು ಒಂದು ಪ್ರತ್ಯೇಕ ಅಧ್ಯಯನವನ್ನೂ ಮಾಡಲು ಸಾಧ್ಯವಿದೆ. ಇಂದು ಕೆಲವು ನಾಡು, ಸೀಮೆಗಳ ಎಲ್ಲೆಯ, ವ್ಯಾಪ್ತಿಯ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಅವುಗಳನ್ನು ಗುರುತಿಸಲು ಯಾವ ನಿರ್ದಿಷ್ಟ ಮಾಹಿತಿ ದೊರೆಯುತ್ತಿಲ್ಲ. ಕುಂತಳನಾಡು' ಎಂಬುದನ್ನು ಕನ್ನಡದ ಯಾವ ಭೌಗೋಳಿಕ ಪರಿಸರದಲ್ಲಿ ಗುರುತಿಸಬೇಕೆಂಬ ಅನೇಕ ಗೊಂದಲಗಳಿವೆ. ಇಂತಹ ಸ್ಥಳನಾಮಗಳ ಮುಖೇನ ಚಾರಿತ್ರಿಕ ಅಧ್ಯಯನ ಕೈಗೊಂಡಲ್ಲಿ ಬಹುಶ: ಅಂತಹ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಸಾಧ್ಯವಿದೆ.

**೬.೯. ಪುರಾತತ್ವ ಪರಿಸರ - ಸ್ಥಳನಾಮಗಳು**

ಪುರಾತತ್ವ ಶೋಧವೆಂದರೆ ಸಂಸ್ಕೃತಿಯ ಶೋಧವೇ. ಆ ಮೂಲಕ ಸ್ಥಳನಾಮಗಳ ಅಂತರ್ ಸಂಬಂಧವನ್ನು ಬೆಸೆದು ಪುರಾತತ್ವವನ್ನು ಅಧ್ಯಯನ ಮಾಡುವ ಅನಿವಾರ್ಯವಿದೆ. ಕಾರಣ ಗಡಿನಾಡಿನಲ್ಲಿ ದೊರೆಯುವ ಕೆಲವು ಸ್ಥಳನಾಮಗಳ ಮೂಲಕ ಪುರಾತತ್ವ ಪರಿಸರವನ್ನು ನಿರ್ವಚಿಸಲು ಸಾಧ್ಯವಿದೆ. ಆದಿಮಾನವನ ವಾಸದ ನೆಲೆಗಳಾದ ಸಂಗನಕಲ್ಲು, ಹಲಕುಂದಿ ಮುಂತಾದ ಪರಿಸರದಲ್ಲಿ ಶಿಲಾಯುಗದ ಅವಶೇಷಗಳು ಸಾಕಷ್ಟಿವೆ. ಪಶುಪಾಲನಾ ಹಂತದ ಸಾಂಸ್ಕೃತಿಕ ಚರಿತ್ರೆಯೂ ಈ ಭಾಗದಲ್ಲಿ ಆಗಿಹೋಗಿರುವುದನ್ನು ಗ್ರಾಮನಾಮಗಳು ಹೇಳುತ್ತವೆ. ಇಲ್ಲಿ ದೊರೆಯುವ

| | | | |
|---|---|---|---|
| ಇಂಗಳದಹಾಳ್ | - ALR | ಪಾತ್ರೆ ಬೂದಿಹಾಳು | - BLR |
| ಎತ್ತಿನ ಬೂದಿಹಾಳ್ | - BLR | ಬೂದಿಗುಂಪ | - SRP |
| ಕಮ್ಮರಚೇಡು | - ALR, BLR | ಹೊನ್ನಳ್ಳಿ | - BLR |
| ತಗ್ಗಿನ ಬೂದಿಹಾಳ್ | - BLR | ಹೊನ್ನೂರು | - ALR |
| ತಾಂಬ್ರಹಳ್ಳಿ | - HBH | | |

ಎಂಬಂತಹ ಸ್ಥಳನಾಮಗಳು ಪುರಾತತ್ವ ಪರಿಸರದ ಕೆಲವು ಅವಶೇಷಗಳನ್ನು ಹೊಂದಿವೆ. ಅಲ್ಲದೇ ಅವು ಲೋಹ ತಯಾರಿಕೆಯ ಕೇಂದ್ರಗಳೆಂಬುದನ್ನು ಹೆಸರಿನ ಮೂಲಕವೇ ತಿಳಿಸುತ್ತವೆ.

೧. ಬೂದಿಹಾಳು, ಬೂದಿಗುಡ್ಡ

'ಬೂದಿ' ಪದವಿರುವ ಎಷ್ಟೋ ಸ್ಥಳನಾಮಗಳು ಐತಿಹಾಸಿಕ ಹಾಗು ಪುರಾತತ್ವ ಶೋಧಕರಿಗೆ ಇತಿಹಾಸ ಪೂರ್ವ ಪ್ರಾಚೀನ ನಿವೇಶನಗಳನ್ನು ಪತ್ತೆಹಚ್ಚಲು ಸಹಾಯಕವಾಗಿವೆ.[೬] ಇಂತಹ ನೆಲೆಗಳ ಮೂಲಕ ಪ್ರಾಗೈತಿಹಾಸಿಕತೆ ಗುರುತಿಸುವಾಗ ಇವು ಕೇವಲ ಪಶುಪಾಲನೆಯಿಂದ ಬಂದಂಥವು ಮಾತ್ರವಲ್ಲ. ವ್ಯವಸಾಯದ ಜೊತೆಗೆ ಪಶುಪಾಲನೆಯೂ ಇತ್ತೆಂಬುದನ್ನು ಗಮನಿಸಬೇಕು. ಅಲ್ಲಿ ಗುಡ್ಡೆಹಾಕಿ ಸುಟ್ಟಂತಹ ಬೂದಿಯನ್ನು ಪವಿತ್ರವೆಂದು ಕೆಲವು ಜನತೆಯು ಕಂಡಿದ್ದಿರಬೇಕು. ಈ ಕಾರಣದಿಂದ 'ಬೂದಿ'ಯಿಂದ ಆರಂಭವಾಗುವ ಗ್ರಾಮನಾಮಗಳ ಉದಯವಾಗಿರುವ ಸಾಧ್ಯತೆಯಿದೆ. ಅಥವಾ ಬೂದಿದಿಬ್ಬಗಳಿರುವುದರಿಂದ ಪ್ರಜ್ಞಾಪೂರ್ವಕವಾಗಿಯೂ ಯೋಗ್ಯವಾದ ಸ್ಥಳವನ್ನು ಆಯ್ದುಕೊಂಡು ಅದಕ್ಕೆ ಅಂತಹ ಹೆಸರಿಟ್ಟಿರಬಹುದು. ''ಕನ್ನಡನಾಡಿನಲ್ಲಿ ದೊರೆಯುವ ಎಲ್ಲ ರೀತಿಯ

‘ಬೂದಿ’ ಎಂಬ ಪೂರ್ವಪದದಿಂದ ಆರಂಭವಾಗುವ ಸ್ಥಳನಾಮಗಳು ಬಹುತೇಕ ಪುರಾತತ್ವ ಪರಿಸರವನ್ನೊಂದಿದ ಪ್ರಾಚೀನ ಮಾನವನ ನೆಲೆಗಳು ಎಂಬುದರಲ್ಲಿ ಅನುಮಾನವಿಲ್ಲ."[೬೮] ಅಂದರೆ ಇಂದು ದೊರೆಯುವ ಬೂದಿ ಸಂಬಂಧಿತ ಎಡೆಗಳಲ್ಲಿ ಬೂದಿದಿಬ್ಬಗಳು ಇರಲೇ ಬೇಕೆಂದಲ್ಲ. ಸುತ್ತಮುತ್ತಲಿನ ಪರಿಸರದಲ್ಲಿಯೂ ಆ ಬಗೆಯ ಕುರುಹುಗಳಿದ್ದರೂ ಅಂತಹ ನೆಲೆಗಳಿಗೆ ಹೆಸರಿಟ್ಟಿರುವ ಉದಾಹರಣೆಗಳಿವೆ. ಬೂದಿ'ಸಂಬಂಧಿತ ಎಡೆಗಳಿಗೆ ಇಂದು ಪ್ರಾದೇಶಿಕವಾಗಿ ಅನೇಕ ಐತಿಹ್ಯ ಕಥೆಗಳು ಆರೋಪಿತವಾಗಿರುವುದನ್ನು ಗಮನಿಸಬಹುದು. ಬೂದಿಹಾಳು' ಎಂಬುದು ಕಾಮದಹನದ ಸ್ಥಳವೆಂತಲೂ, ಯಾವುದೋ ರಾಕ್ಷಸನನ್ನು ಶಿವನು ತನ್ನ ಮೂರನೇ ಕಣ್ಣಿನಿಂದ ಸುಟ್ಟುಹಾಕಿದನೆಂತಲೂ ಅನೇಕ ಪೌರಾಣಿಕ ಕಲ್ಪನೆಗಳೊಂದಿಗೆ ಆ ಸ್ಥಳಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಸ್ಥಳಪುರಾಣ, ಸ್ಥಳನಾಮ, ಪುರಾತತ್ವ ಈ ಮೂರರ ಒಳಹೊಕ್ಕು ನೋಡಿದಲ್ಲಿ ಮೌಖಿಕ ಸಂಪ್ರದಾಯ ಕಟ್ಟಿದ ಕಥೆಯ ಹಿಂದೆ ಚಾರಿತ್ರಿಕ ಅಂಶಗಳಿರುವುದನ್ನು ತಿಳಿಯಬಹುದು.

೨. ತಾಂಬ್ರಹಳ್ಳಿ: ಹೊನ್ನೂರು: ಕಮ್ಮರಚೇಡು: ಇಂಗಳದಹಾಳು

ಇವು ತಾಮ್ರಯುಗದ ನೆಲೆಗಳೆಂದು ಹೇಳುವಲ್ಲಿ ಯಾವ ಅನುಮಾನಗಳಿಲ್ಲ."[೬೯] ಲೋಹ ಯುಗದಲ್ಲಿ, ಲೋಹವನ್ನು ಕರಗಿಸಿ ಆಯುಧ ಮುಂತಾದುವನ್ನು ತಯಾರಿಸಲು ಅಲ್ಲದೇ ಆಭರಣಗಳನ್ನು ತಯಾರಿಸಲು ಅಲ್ಲಲ್ಲಿ ಕೈಗಾರಿಕೆಯ ಮಾದರಿಯಲ್ಲಿ ಕೆಲವು ನೆಲೆಗಳನ್ನು ಸ್ಥಾಪಿಸಲಾಗಿದ್ದಿತು. ಕಬ್ಬಿಣ, ತಾಂಬ್ರ, ಚಿನ್ನ ಮುಂತಾದ ಲೋಹಗಳನ್ನು ಕರಗಿಸಲು ಆಯಾ ವೃತ್ತಿಯನ್ನವಲಂಬಿಸಿದ ಸಮುದಾಯವಿದ್ದಿತೆಂದು ತಿಳಿಯುತ್ತದೆ.

"ಕರ್ನಾಟಕದಲ್ಲಿ ಇಂದು ಕಂಡುಬರುವ ಹೊನ್ನೂರು, ಹೊನ್ನುಕುಂಟೆ, ಹೊನ್ನಳ್ಳಿ ಮುಂತಾದ ಸ್ಥಳನಾಮಗಳು ಕೂಡ ಕನಕ (ಬಂಗಾರ)ವನ್ನು ತಯಾರು ಮಾಡುತ್ತಿದ್ದ ನೆಲೆಗಳೇ ಆಗಿವೆಯೆನ್ನಲು ಆಧಾರಗಳಿವೆ. ಖಂಡಿತಾ ಇವು ಪುರಾತತ್ವ ನೆಲೆಗಳೇ ಆಗಿವೆ."[೭೦] ಎಂಬಂತಹ ಅಭಿಪ್ರಾಯ ಕೊಡುತ್ತಾರೆ. ಇಂಗಳದಹಾಳು ಎಂಬುದು ಕೂಡ ಪುರಾತತ್ವ ನೆಲೆಯೇ. ಆದರೆ ಇಂಗಳದಹಾಳ್, ಹೊನ್ನೂರು ಈ ರೀತಿಯ ಹೆಸರುಗಳಿಗೆ ಬೇರೊಂದು ನಿಷ್ಪತ್ತಿಯನ್ನು ಕೊಡಲು ಸಾಧ್ಯವಿದೆ. 'ಇಂಗುಳ' ಎಂಬ ಒಂದು ಸಸ್ಯವಿದೆ. ಆ ಮೂಲದಿಂದ ಇಂಗಳದಹಾಳ್ ಬಂದಿರಬಹುದು. ಅದರಂತೆ 'ಹೊನ್ನಿ'ಯೆಂಬ ವ್ಯಕ್ತಿಯಿಂದ ಹೊನ್ನೂರುಗಳಂತಹ ಹೆಸರು ಬಂದಿರಲೂಬಹುದು. ಆದರೆ ಹೆಚ್ಚಾಗಿ ಇವು ಪುರಾತತ್ವ ನೆಲೆಗಳೇ ಎಂಬುದನ್ನು ಅಲ್ಲಗಳೆಯಲಾಗದು. ಹೀಗೆ ಪುರಾತತ್ವ ನೆಲೆಗಳಾಗಿ ಸ್ಥಳನಾಮಗಳು ಆ ಕಾಲದ ಚಾರಿತ್ರಿಕ ಸಂಗತಿಗಳಿಗೆ ಆಕರಗಳಾಗಿವೆಯೆಂಬುದನ್ನೂ ಗಮನಿಸಬಹುದು.

ಒಂದು ಭೌಗೋಳಿಕ ಪರಿಸರದ ಚರಿತ್ರೆಯೆಂದರೆ ಅದು ಕೇವಲ ರಾಜರ ಇತಿಹಾಸವಲ್ಲ. ಅದೊಂದು ಸಮಕಾಲೀನ ಸಂಸ್ಕೃತಿಯ, ಸಮಾಜದ ಜನಜೀವನ ವಿಧಾನ. ಆ ಇತಿಹಾಸವನ್ನು ಬರೆಯುವಲ್ಲಿ ಕೇವಲ ಶಾಸನಗಳು ಆಕರಗಳಲ್ಲ. ಅದರೊಂದಿಗೆ ಸ್ಥಳನಾಮಗಳಂತಹ ಆಕರಗಳನ್ನು ಬಳಸಿಕೊಂಡು ಚರಿತ್ರೆಯ ವ್ಯಾಖ್ಯಾನಕ್ಕೆ ತೊಡಗಿದಾಗ ಸಂಪೂರ್ಣವಾಗಿ ಚರಿತ್ರೆಯ ಸಂಗತಿಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ಕಾರಣದಿಂದ ಚಾರಿತ್ರಿಕ ಸಂಗತಿಗಳ ಅನಾವರಣಕ್ಕೆ ಸ್ಥಳನಾಮಗಳ ಪಾತ್ರ ಮುಖ್ಯವಾಗುತ್ತದೆ.

ಅಡಿಟಿಪ್ಪಣಿಗಳು

೧. ಶಂಬಾಜೋಷಿ, ಎಡೆಗಳು ಹೇಳುವ ಕಂನಾಡ ಕಥೆ, ಪು. ೬ - ೭
೨. ಹಂಪನಾ, ಚಂದ್ರಕೊಡೆ, ಪು. ೩
೩. ದೇಜಗೌ, ಸ್ಥಳನಾಮ ವ್ಯಾಸಂಗ, ಪು. ೨೨
೪. ಅದೇ, ಪು. ೨೨
೫. ಎಂ.ಎಂ.ಕಲ್ಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪು. XXVII ಪ್ರಸ್ತಾವನೆಯಲ್ಲಿ
೬. ಅದೇ, ಪು. ೫೨೧
೭. ಅದೇ
೮. ಅದೇ
೯. ಅದೇ, ಪು. ೪೦೯
೧೦. ಅದೇ, ಪು. ೪೬೬, ೪೬೭
೧೧. SII, Vol, IX, Part I
೧೨. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಪು. ೯೪
೧೩. ಅದೇ, ಪು. ೯೪
೧೪. SII, IX, Part II, ಪು. ೪೮೯
೧೫. Studies in Indian place names, Vol 6, Page. 78
೧೬. SII, IX, Part II, ಪು. ೫೨೮
೧೭. ಎಂ.ಎಂ.ಕಲ್ಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪು. ೫೨೧
೧೮. Studies in Indian place names, Vol 6, Page. 79
೧೯. SII, Vol, IX, Part II, Page 560
೨೦. ಎಂ.ಎಂ. ಕಲ್ಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪು. ೫೨೧
೨೧. ಅದೇ
೨೨. Studies in Indian place names, Vol 6, Page. 6, 7
೨೩. SII, Vol, IX, Part II, Page. 518
೨೪. ಅದೇ, ಪು. ೪೮೪
೨೫. ಅದೇ, ಪು. ೪೯೩
೨೬. Studies in Indian place names, Vol 6, Page. 78
೨೭. ಆರ್.ಶೇಷಾಶಾಸ್ತ್ರಿ ಮತ್ತು ಕೆ.ಆರ್.ಗಣೇಶ, ಆಂಧ್ರಪ್ರದೇಶದ ಕನ್ನಡ ಶಾಸನಗಳು
೨೮. SII, Vol, IX, Part II, Page. 531
೨೯. ತಾಮ್ರಶಾಸನ, ಸೋಮಲಾಪುರ, EI, XVII, Page. 193-204
೩೦. SII, Vol, IX, Part II, Page. 497
೩೧. ಹಂಪಿಯಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೮೦
೩೨. SII, Vol, IX, Part II, Page. 584
೩೩. ಆರ್.ಶೇಷಾಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು. ೮೬
೩೪. ಗುಂಡೂರು ಶೇಷಪ್ಪ, ಸಂದರ್ಶನ, ೧೨-೦೧-೨೦೦೧, ಯಳ್ಳಾರ್ತಿ
೩೫. ಆರ್.ಶೇಷಾಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು. ೮೮
೩೬. ಗುಂಡೂರುಶೇಷಪ್ಪ, ಸಂದರ್ಶನ, ೧೨-೦೧-೨೦೦೧, ಯಳ್ಳಾರ್ತಿ
೩೭. ಪಂಪನಗೌಡ, ಸಂದರ್ಶನ, ೧೯-೦೮-೨೦೦೧, ಯಳ್ಳಾರ್ತಿ
೩೮. E.C. Vol, VII, Cl, 9.925
೩೯. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೮೬

೪೦. E.C. Vol, IX, KN, 96. 1457

೪೧. E.C. VOl, V, CN, 225

೪೨. ಚೆನ್ನಕ್ಕ ಎಲಿಗಾರು, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪು. ೨೫೪

೪೩. ಬಿ.ಎಸ್.ಶೇರೆ, ಕರ್ನಾಟಕದಲ್ಲಿ ಸತಿಪದ್ಧತಿ, ಪು. ೭೧, ೭೨

೪೪. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೩೪

೪೫. ಬಿ.ಎಸ್.ಶೇರೆ, ಕರ್ನಾಟಕದಲ್ಲಿ ಸತಿಪದ್ಧತಿ, ಪು. ೭೩

೪೬. ಎಂ.ಚಿದಾನಂದಮೂರ್ತಿ, ಗ್ರಾಮೀಣ, ಪು. ೧೮

೪೭. ಎಂ.ಚಿದಾನಂದಮೂರ್ತಿ, ವಾಗಾರ್ಥ, ಪು. ೩೩

೪೮. ಪ್ರೊ.ಎಸ್.ನಾಗರಾಜು, ಪುರಾತತ್ವ ಮತ್ತು ದೇಸೀ ಸಂಸ್ಕೃತಿ, ವಿಚಾರ ಸಂಕಿರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೧-೦೨-೨೦೦೨

೪೯. ಅದೇ

೫೦. ಎನ್.ಎಸ್.ತಾರನಾಥ, ಪುರಾತತ್ವ ಮತ್ತು ದೇಸೀ ಸಂಸ್ಕೃತಿ, ವಿಚಾರ ಸಂಕಿರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೧-೦೨-೨೦೦೨

❑❑

೭

# ಸ್ಥಳನಾಮಗಳು - ಸಾಮಾಜಿಕ ಅಧ್ಯಯನ

## ೭. ಪ್ರವೇಶ

ಸ್ಥಳನಾಮಗಳು ಸಂಸ್ಕೃತಿಯ ನಿರ್ವಚನಕ್ಕೆ ಮಹತ್ವದ ಸಂಗತಿಗಳನ್ನು ನೀಡುತ್ತವೆ. ಸಂಸ್ಕೃತಿಯ ನಿರ್ವಚನದ ಸಂದರ್ಭದಲ್ಲಿ ಈವರೆಗೆ ಸ್ಥಳನಾಮಗಳನ್ನು ಮುಖ್ಯ ಆಕರಗಳೆಂದು ವ್ಯಾಪಾಕವಾಗಿ ಭಾವಿಸಿದಂತಿಲ್ಲ. ಇವುಗಳ ಉಪಯೋಗವನ್ನು ಕನ್ನಡದಲ್ಲಿ ಶಂಬಾ ಜೋಶಿಯವರು ತೋರಿಸಿಕೊಟ್ಟರೆನ್ನಬಹುದು. ಕನ್ನಡ ಸಂಸ್ಕೃತಿಯ ಭೌಗೋಳಿಕ ಹಾಗೂ ಸಾಂಸ್ಕೃತಿಕ ಎಲ್ಲೆಗಳ ಹುಡುಕಾಟದಲ್ಲಿ ಗ್ರಾಮನಾಮಗಳನ್ನು ಶಂಬಾ ಆಧರಿಸಿದ್ದರು. ಆ ಮೂಲಕ ಕನ್ನಡ ಸಂಸ್ಕೃತಿಯನ್ನು ಭಾರತದಾದ್ಯಂತ ಗುರುತಿಸುವ ಪ್ರಯತ್ನವನ್ನು ಮಾಡಿದರು. ಎಡೆಗಳು ಹೇಳುವ ಕಂನಾಡಕಥೆ, ಕನ್ನಡ ಸಂಸ್ಕೃತಿಯ ಹುಟ್ಟು, ಕಂನುಡಿಯ ಜೀವಾಳ ಇವೆಲ್ಲಾ ಕೃತಿಗಳಲ್ಲಿ ಸ್ಥಳನಾಮಗಳನ್ನು ಸಂಸ್ಕೃತಿಯ ಚಹರೆಗಳನ್ನಾಗಿ ಶಂಬಾ ಗುರುತಿಸಿದರು. ಶಂಬಾ ಅವರ ತರುವಾಯ ಸ್ಥಳನಾಮಗಳನ್ನು ಸಾಮಾಜಿಕ ಆಯಾಮದ ಕಡೆಗೆ ಬಿಂಬಿಸುವ ಪ್ರಯತ್ನವನ್ನು ವ್ಯಾಪಕವಾಗಿ ಮಾಡಲಾಗಲಿಲ್ಲವಾದರೂ ಕೆಲವೇ ಹೆಸರುಗಳ ಮೂಲಕ ಅಂತಹ ಆಯಾಮಕ್ಕೆ ಬೇಕಾದ ಪ್ರಾಸಂಗಿಕ ಚರ್ಚೆಯನ್ನು ಮಾಡಿದರೂ ಇಡಿಯಾಗಿ ಸ್ಥಳನಾಮಗಳನ್ನು ಸಾಮಾಜಿಕ ಸಂಗತಿಗಳೆಂದು ಸ್ವೀಕರಿಸಲಿಲ್ಲ. ಶಂಬಾ ಜೋಶಿಯವರ ನಂತರ ಮೂರು ದಶಕಗಳವರೆಗೆ ಈ ಕುರಿತು ಅಷ್ಟಾಗಿ ಚರ್ಚೆಯನ್ನು ಮಾಡಲಿಲ್ಲವೆನ್ನಬಹುದು.

ಎಂಬತ್ತರ ದಶಕದಲ್ಲಿ ಎ.ಗೋಪಾಲಕೃಷ್ಣ ಅವರು "ಕೋಲಾರ ಜಿಲ್ಲೆಯ ಸ್ಥಳನಾಮಗಳ ಭಾಷಿಕ, ಸಾಮಾಜಿಕ ಅಧ್ಯಯನ" ಎಂಬ ಪಿಎಚ್.ಡಿ. ನಿಬಂಧದಲ್ಲಿ ಅಲ್ಲಲ್ಲಿ ಕೆಲವು ಸಾಮಾಜಿಕ ಅಂಶಗಳನ್ನು ಭಾಷೆಯ ಮುಖೇನ ಗಮನಿಸಿದ್ದಾರೆ. ಆದರೆ ಹೆಸರುಗಳನ್ನು ಭಾಷಿಕ ಘಟಕಗಳಿಂದ ದೂರವಿರಿಸಿ, ಜನ ಜೀವನದ ಕಡೆಗೆ, ಅವರ ಸಂಸ್ಕೃತಿಯ ಕಡೆಗೆ ತರುವ ಕೆಲಸ ಬಹುಶಃ ಮಾಡಲಿಲ್ಲ. ಎ.ಗೋಪಾಲಕೃಷ್ಣ ಅವರು ತಮ್ಮ ನಿಬಂಧದಲ್ಲಿ ಸಂಪೂರ್ಣ ವರ್ಣನಾತ್ಮಕ ಮಾದರಿಯಲ್ಲೇ ವಿವರಿಸಿದರು. ಸಾಮಾಜಿಕ ಸಂಗತಿಗಳನ್ನು ಔಪಚಾರಿಕವಾಗಿ ನೋಡುವ

ಕ್ರಮವೇ ಮುಂದುವರೆಯುತ್ತಾ ಬಂದಿತು. ಸಂಪೂರ್ಣ ಭಾಷಿಕ ಘಟಕಗಳನ್ನಾಗಿ ಸ್ಥಳನಾಮಗಳನ್ನು ನೋಡಿರುವ ಹಿಂದಿನ ಅಧ್ಯಯನಗಳು ಸಮಾಜ ನಿಷ್ಠ ಅಥವಾ ಸಮಾಜಮುಖೀ ಅಂಶಗಳನ್ನು ಗಮನಿಸಲಿಲ್ಲ. ಈ ದೃಷ್ಟಿಯಿಂದ ಸಾಮಾಜಿಕ ಅಂಶಗಳನ್ನು ಕುರಿತಾದ ಕೆಲವು ಎಳೆಗಳನ್ನು ಅವಲಂಬಿಸಿ, ಒಟ್ಟು ಸ್ಥಳನಾಮಗಳ ಮೂಲಕ ಪ್ರತಿಫಲಿಸುವ ಸಾಮಾಜಿಕ ಸಂರಚನೆಯನ್ನು, ಆ ಮೂಲಕ ಹೆಣೆಯಬಹುದಾದ ಮಾದರಿಯನ್ನು ಪ್ರಕೃತ ಅಧ್ಯಯನದಲ್ಲಿ ತೋರಿಸಲಾಗಿದೆ. ಒಂದು ಸಾಮಾಜಿಕ ಪರಿಸರದಲ್ಲಿ ಗ್ರಾಮನಾಮಗಳು ಅಥವಾ ಸ್ಥಳನಾಮಗಳು ಬೀರುವ ಪ್ರಭಾವ ಒಟ್ಟು ಸಂಸ್ಕೃತಿಯ ಅಧ್ಯಯನಕ್ಕೆ ನೀಡುವ ಒಳನೋಟಗಳನ್ನು ಕೆಲವು ಆಯಾಮಗಳಲ್ಲಿ ವಿಶ್ಲೇಷಿಸಲು ಸಾಧ್ಯವಿದೆ.

ಆಂಧ್ರ - ಕರ್ನಾಟಕ ಗಡಿಪ್ರದೇಶದಲ್ಲಿ ಕನ್ನಡ - ತೆಲುಗು ಎರಡು ಭಾಷೆಗಳು ಹಾಗೂ ರಾಜಕೀಯ ಗಡಿಗಳನ್ನಾಧರಿಸಿದ ಎರಡು ಭೌಗೋಳಿಕ ಪರಿಸರಗಳು ಕನ್ನಡ ತೆಲುಗು ಭಾಷೆಯ ದ್ವಿಸಂಸ್ಕೃತಿಯ ವೈಲಕ್ಷಣ್ಯಗಳನ್ನು ಪಡೆದುಕೊಂಡಿರುತ್ತವೆ. ಆ ಸಾಂಸ್ಕೃತಿಕ ಅಂಶಗಳು ಸ್ಥಳನಾಮಗಳ ಮೇಲೆಯೂ ಕಾಲಾಂತರದಲ್ಲಿ ಪ್ರಭಾವಿಸಿರುವುದು ಕಂಡುಬರುತ್ತದೆ. ಕಾರಣ ಈ ಎರಡೂ ದ್ರಾವಿಡ ಭಾಷಾ ಪರಿಸರಗಳು ಅರ್ಥವತ್ತಾದ ಅಂಶಗಳನ್ನೊಳಗೊಂಡು ವೈವಿಧ್ಯತೆಯನ್ನು ತೋರಿಸಬಲ್ಲವು. ಎರಡು ಗಡಿ ಪ್ರದೇಶದ ಸಾಮಾಜಿಕ ಸಂಬಂಧದಿಂದ ಆರಂಭಗೊಂಡು ಜಾತಿ, ವರ್ಗ, ವ್ಯಕ್ತಿ, ವೃತ್ತಿ ಇವುಗಳ ನಡುವೆ ಸಂಸ್ಕೃತಾನುಕರಣ, ದೇಶ್ಶೀಕರಣದಂತಹ ಪ್ರಕ್ರಿಯೆಗಳು ಹೆಸರುಗಳೊಂದಿಗೆ ಬೆಸೆದುಕೊಂಡ ಬಗೆಯನ್ನು ತಿಳಿಯಲು ಸಾಧ್ಯವಿದೆ. ಒಂದು ನಿರ್ದಿಷ್ಟ ಸಮಾಜದಲ್ಲಿ ಸಮುದಾಯಗಳ ನೆಲೆಸುವಿಕೆಯ ಚಹರೆಗಳನ್ನು ಗುರುತಿಸುವಾಗ, ಪರಸ್ಪರ ಎರಡು ಭೌಗೋಳಿಕ ಪರಿಸರದಲ್ಲಿ ವಾಸಿಸುವ ಸಮುದಾಯಗಳಿಗೆ ಇರುವ ಭೌಗೋಳಿಕ ಅಂತರ್ ಸಂಬಂಧ ಅತ್ಯಂತ ಮಹತ್ವದ್ದಾಗುತ್ತದೆ. ಅಂದರೆ ಜಾತಿ ಅಥವಾ ವರ್ಗದ ನೆಲೆಯಲ್ಲಿ ಆಲೋಚಿಸುವಾಗ ವೃತ್ತಿಯನ್ನವಲಂಬಿಸಿ ಬದುಕುತ್ತಿದ್ದ ಸಮುದಾಯಗಳು ಪರಸ್ಪರ ವೃತ್ತಿಯನ್ನು ಕೊಡು - ಕೊಳೆಯನ್ನಾಗಿಟ್ಟುಕೊಂಡು ಒಂದೊಂದು ಗ್ರಾಮದಲ್ಲಿ, ಒಂದೊಂದು ವಿಶಾಲ ಪ್ರದೇಶದಲ್ಲಿ ವಾಸಿಸಿದಂತಹ ಕುರುಹುಗಳನ್ನು ಸ್ಥಳಗಳ ಹೆಸರುಗಳಿಂದ ಅವು ಹೊಂದಿರುವ ಭೌಗೋಳಿಕ ಸಾಮೀಪ್ಯತೆಯಿಂದ ಕೂಡಿರುವುದು ತಿಳಿಯುತ್ತದೆ. ಇದೊಂದು ಸ್ವಾರಸ್ಯಕರ ಸಂಗತಿ. ಅಂತೆಯೇ ವಲಸೆಯು ಸಮುದಾಯಗಳಿಗೆ ಹಿಂದಿನಿಂದಲೂ ಅಗತ್ಯವೆಂಬಂತೆ ತೋರಿಬಂದಿದೆ. ಗಡಿಭಾಗದಲ್ಲಿಯೂ ನೈಸರ್ಗಿಕ ವಿಕೋಪ, ವ್ಯವಹಾರ ಮುಂತಾದ ಕಾರಣಗಳಿಂದ ವಲಸೆ ಸಾಮಾನ್ಯ ಪ್ರಕ್ರಿಯೆಯಾಗಿದೆ. ದ್ವಿಭಾಷಿಕ ವಲಯದಲ್ಲಿ ಉಂಟಾದ ವಲಸೆಯಿಂದಲೂ ಸ್ಥಳನಾಮಗಳಲ್ಲಿ ಕೆಲವು ಬದಲಾವಣೆಗಳು ತಲೆದೋರಿವೆ. ಇದರಿಂದುಂಟಾದ ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳೂ ಮಹತ್ವವನ್ನು ಹೊಂದಿವೆ.

ಬಹುಮುಖ್ಯವಾಗಿ ಗಡಿಪ್ರದೇಶದಲ್ಲಿ ವಾಸಿಸುವ ಜನತೆಯು ದ್ವಿಭಾಷಿಕರಾಗಿದ್ದು, ಈ ಸಮುದಾಯಗಳಲ್ಲಿ ಕೆಳವರ್ಗ ಮತ್ತು ಮೇಲ್ವರ್ಗ ಎಂಬ ಮೇಲ್ನೋಟದ ಗ್ರಹಿಕೆಯೊಂದಿಗೆ ಆ ಎರಡೂ ವರ್ಗಗಳಲ್ಲಿರುವ ಅಕ್ಷರಸ್ಥ ಸಮುದಾಯ ಮತ್ತು ಅವರ ಉಚ್ಚಾರಣೆಯ ನಿಯಮಗಳು, ಅನಕ್ಷರಸ್ಥ ಸಮುದಾಯ ಮತ್ತು ಅವರ ಉಚ್ಚಾರಣೆಯ ನಿಯಮಗಳು, ತಮ್ಮ ವಾಸದ ನೆಲೆಗಳಿಗೆ ಎರಡೂ ವರ್ಗಗಳು ಕರೆದುಕೊಳ್ಳುವ ಹೆಸರು, ಅಧಿಕೃತವಾಗಿ ಇರುವ ಹೆಸರು, ತಮ್ಮ ಹಟ್ಟಿಗಳಿಗೆ ಗೌಪ್ಯವಾಗಿ ಕರೆದುಕೊಳ್ಳುವ ಹೆಸರುಗಳು ಮಹತ್ವದವಾಗಿವೆ. ಅದರಂತೆ ಮೇಲ್ವರ್ಗ

ಮತ್ತು ಕೆಳವರ್ಗಗಳೆರಡೂ ಬಳಸುವ ಸ್ಥಳನಾಮಗಳ ಬರೆಹ ಮತ್ತು ಔಪಚಾರಿಕ ಬರೆಹ, ದಾಖಲೆ ಹಾಗೂ ಉಚ್ಚಾರಣೆಯಲ್ಲಾದ ಬದಲಾವಣೆಯಂತಹ ಸಾಮಾಜಿಕ ಆಯಾಮಗಳನ್ನು ಈ ಅಧ್ಯಯನದಲ್ಲಿ ಗಮನಿಸಲು ಪ್ರಯತ್ನಿಸಲಾಗಿದೆ.

ಆಧುನಿಕತೆ ಸಾಮಾಜಿಕ ಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಅಂತೆಯೇ ಸ್ಥಳನಾಮಗಳ ಮೇಲೆಯೂ ತನ್ನ ಪ್ರಭಾವವನ್ನು ಬೀರಿದೆ. ಆಧುನಿಕತೆಯ ಒತ್ತಡದಿಂದ ಹೆಸರುಗಳು ಸ್ಥಿತ್ಯಂತರಗೊಂಡಿರುವುದು ತಿಳಿಯುತ್ತದೆ. ಇಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬಹುದು. ಈ ಮುಂಚೆ ಇದ್ದ ಪ್ರಾಚೀನ ಸ್ಥಳನಾಮಗಳ ಮೇಲೆ ಉರ್ದು ಹಾಗೂ ಆಂಗ್ಲ ಆಡಳಿತದ ಪ್ರಭಾವ ಆದದ್ದು ಒಂದು ಅಂಶ. ಈ ಪ್ರಭಾವದಿಂದ ಕನ್ನಡ ಭಾಷೆ ಮತ್ತು ಹೆಸರುಗಳ ಮೇಲಾದ ಪರಿಣಾಮ ಸಾಮಾಜಿಕ, ಭಾಷಿಕ ವ್ಯತ್ಯಾಸಗಳು ಇಲ್ಲಿ ಒಳಗೊಳ್ಳುತ್ತವೆ. ಎರಡನೆಯದಾಗಿ ತಾಂತ್ರಿಕ ಜಗತ್ತಿನ ಆವಿಷ್ಕಾರ. ಇಲ್ಲಿ ಕೈಗಾರಿಕೀಕರಣ, ಜಾಗತೀಕರಣ, ಸಮಕಾಲೀನ ರಾಜಕಾರಣದಿಂದ ಪ್ರೇರಿತಗೊಂಡ ಸ್ಥಳನಾಮಗಳು ಎಡೆಪಡೆಯುತ್ತವೆ. ಸ್ಥಳನಾಮಗಳು ಒಂದು ಕಾಲದಲ್ಲಿ ನಿರಂಕುಶ ಪ್ರಭುತ್ವ ಆಡಳಿತದ ದಬ್ಬಾಳಿಕೆ ಹಾಗೂ ಅವರ ಆರೋಗ್ಯಯುತ ಕಾಳಜಿಗಳೆರಡರಿಂದಲೂ ಪ್ರತಿನಾಮಕರಣ, ಸಂಸ್ಕೃತಾನುಕರಣಗೊಂಡಿರುವುದುಂಟು. ಅದರ ಮುಂದುವರಿಕೆಯ ರೂಪವೆಂಬಂತೆ ಪ್ರಕೃತ ಸಮಕಾಲೀನ ರಾಜಕಾರಣವೂ ಪ್ರಜಾಸತ್ತೆಯ ಒಪ್ಪಿಗೆ ಹಾಗೂ ಒಪ್ಪಿಗೆಯಿಲ್ಲದೆಯೂ ಸ್ಥಳನಾಮಕರಣಗೊಳಿಸಿದ ಉದಾಹರಣೆಗಳಿವೆ. ಒಂದರ್ಥದಲ್ಲಿ ನಿರಂಕುಶಾಧಿಕಾರಿಗಳು ತಮ್ಮ ಅಧಿಪತ್ಯವನ್ನು ಸ್ಥಳನಾಮಕರಣದಿಂದ ಮಾಡಲು ಯತ್ನಿಸಿದರು. ಅದರಂತೆ ಸಮಕಾಲೀನ ಸಂದರ್ಭ ಮುಂದುವರೆಯುತ್ತಿರುವುದು ತಿಳಿಯುತ್ತದೆ. ಇದು ಜಾಗತೀಕರಣ, ಕೈಗಾರಿಕೀಕರಣದ ನೆಲೆಯಲ್ಲಿ ಪರೋಕ್ಷವಾಗಿಯೂ ನಡೆಯುತ್ತಿರುವುದನ್ನು ಗುರುತಿಸಬಹುದು. ಇದರಿಂದಾಗಿ ಪಾರಂಪರಿಕವಾಗಿ ಬೆಳೆದು ಬಂದ ಸಂಸ್ಕೃತಿವಾಹಕಗಳಾದ ಸ್ಥಳನಾಮಗಳು ತಮ್ಮ ಮೂಲ ಗುಣದಿಂದ ವಿಮುಖಗೊಳ್ಳುತ್ತಿರುವುದು ಕಂಡುಬರುತ್ತಿದೆ.

ಮೇಲ್ನೋಟಕ್ಕೆ ಈ ರೀತಿಯ ಅಧ್ಯಯನ ಔಪಚಾರಿಕವಾಗಿಯೋ, ಅನಗತ್ಯವಾಗಿಯೋ, ಪೂರಕ ಅಂಶಗಳಿಂದ ದೂರವಾಗಿಯೋ ಇದೆಯೆಂದು ತೋರಬಹುದು. ಸ್ಥಳನಾಮ ಅಧ್ಯಯನವೆಂದರೆ ಎಲ್ಲ ಸ್ಥಳನಾಮಗಳ ಪ್ರಾಮಾಣಿಕವಾದ ನಿಷ್ಪತ್ತಿಯನ್ನು ನೀಡುವುದು ಮತ್ತು ಭಾಷಾಶಾಸ್ತ್ರದ ಮೂಲಕ ಅವುಗಳ ರಚನೆಯ ಅಧ್ಯಯನವನ್ನು ಮಾಡುವುದು ಎಂಬ ಅಭಿಪ್ರಾಯಗಳನ್ನೂ ವಿದ್ವಾಂಸರು ನೀಡುತ್ತಾರೆ. ಆದರೆ ಇದು ಕೇವಲ ನಿಘಂಟಿನ ಅಧ್ಯಯನವಾಗಿ ಉಳಿಯುವ ಸಾಧ್ಯತೆಯಿದೆ. ಆದ್ದರಿಂದಾಗಿ ನಾಮಾಧ್ಯಯನವನ್ನು ಸಮಾಜಮುಖಿಯಾಗಿ ನೋಡುವ ಅಗತ್ಯವಿದೆ. ಜಾಗತೀಕರಣ, ಆಧುನೀಕರಣದಂತಹ ಆಧುನಿಕವೆನ್ನಬಹುದಾದ ಪ್ರಮೇಯಗಳಿಂದಲೂ ನಾಮಾಧ್ಯಯನವನ್ನು ಇವತ್ತಿನ ಅಗತ್ಯದಲ್ಲಿ ಮಾಡುವ ಪೈಪೋಟಿ ಹಾಗೂ ಸಂಸ್ಕೃತಿಗೆ ನೀಡುವ ಮುಖಾಮುಖಿ ಯೊಂದಿಗೆ ತುಲಿಸಲು ಸಾಧ್ಯವಿದೆ. ವರ್ಣನಾತ್ಮಕ ಮಾದರಿಯೂ ಬೇಕಾಗುತ್ತದೆ. ಆದರೆ ಹೊಸನೋಟಗಳಿರದೇ ಹೋದರೆ ನಾಮಾಧ್ಯಯನಕ್ಕೆ ಬಹುಶಃ ಎರಡು ತೊಡಕುಗಳಿವೆಯೆಂದು ಭಾವಿಸಬಹುದು. ಒಂದು, ಆಧುನಿಕತೆಯತ್ತ ಧಾವಿಸಿರುವ ಇವತ್ತಿನ ಸಮುದಾಯಗಳು ಇಂತಹ ಅಧ್ಯಯನಗಳ ಕಡೆ ಗಮನ ಹರಿಸದೇ ಇರಬಹುದು. ಹೊಸ ತಲೆಮಾರು ಈ ಕ್ಷೇತ್ರಕ್ಕೆ ಆಸಕ್ತಿ ತೋರಿಸದೇ ಇರಬಹುದು. ಎರಡನೇಯದಾಗಿ ಸ್ಥಳನಾಮಕ್ಷೇತ್ರ ನಿಘಂಟಿನ

ಶಾಸ್ತ್ರವಾಗಿ ಉಳಿದು ಬಿಡಬಹುದು. ಇಂತಹ ಅಪಾಯ ಮತ್ತು ಆತಂಕಗಳನ್ನು ಎಚ್ಚರಿಕೆಯಿಂದ ಗಮನಿಸುತ್ತಲೇ, ಸಾಮಾಜಿಕ ಪರಿಸರದ ಮೇಲೆ ವಿಸ್ತೃತವಾಗಿ ಸ್ಥಳನಾಮಗಳನ್ನು ಹರಡಿ, ಹೊಸಬಗೆಯ ಪ್ರಮೇಯಗಳಿಂದ ಅವುಗಳ ಸೈದ್ಧಾಂತಿಕ ಹಾಗೂ ಸಾಮಾಜಿಕ, ಸಾಂಸ್ಕೃತಿಕ ಆವರಣಗಳನ್ನು ಅನಾವರಣಗೊಳಿಸುವ ಪ್ರಯತ್ನವನ್ನು ಒಂದು ಅಧ್ಯಾಯದ ಮಟ್ಟಿಗೆ ಸೀಮಿತಮಾಡಿ ಹೇಳಲಾಗಿದೆ. ಸಮಗ್ರ ಅಧ್ಯಯನವೂ ಈ ಬಗೆಯ ಮಾದರಿಯಿಂದ ಸಾಧ್ಯವೆಂದು ಹೇಳಬಹುದು.

ಪ್ರಸ್ತುತ ಸ್ಥಳನಾಮಗಳ ಅಧ್ಯಯನದಿಂದ ಸಮಾಜಮುಖೀ ಸಂಸ್ಕೃತಿಯ ಒಳನೇಯ್ಗೆಯನ್ನು ಈ ರೀತಿ ನೇಯಬಹುದು.

೭.೧. ಆಂಧ್ರ - ಕರ್ನಾಟಕ ಗಡಿಪ್ರದೇಶದ ಸಾಮಾಜಿಕ ಸಂಬಂಧ

ಗಡಿಪ್ರದೇಶದಲ್ಲಿ ವಾಸಿಸುವ ಜನತೆಯು ಪರಸ್ಪರ ಕೊಡುಕೊಳೆಯಿಂದಾಗಿ ಸಾಂಸ್ಕೃತಿಕವಾಗಿ ಪ್ರೇರಣೆಗೊಂಡಿರುವುದು ಸಹಜವೇ ಆಗಿದೆ. ಆಚರಣಾ ನೆಲೆಯಲ್ಲಿ, ಜೀವನಶೈಲಿಯ ನೆಲೆಯಲ್ಲಿ, ವಾಸ್ತು, ವ್ಯವಹಾರ, ಭಾಷೆ ಮುಂತಾದ ವಲಯಗಳಲ್ಲಿ ಎರಡೂ ಗಡಿಗಳಲ್ಲಿ ಬಹುತೇಕ ಗಾಢವಾದ ಸಂಬಂಧವೇ ಇದೆ. ಗಡಿ ವಿಷಯದಲ್ಲಿ ಅಂತರರಾಷ್ಟ್ರೀಯ ನೆಲೆಯಲ್ಲಿ ಆಲೋಚಿಸುವಾಗ ಈ ಗಾಢ ಸಂಬಂಧ ಇರದೇ ಹೋಗಬಹುದು. ಇದಕ್ಕೆ ಭೌಗೋಳಿಕ ಚಹರೆಗಳು (ಪ್ರಾಕೃತಿಕವಾದ ಬೆಟ್ಟ, ಗುಡ್ಡ, ಪರ್ವತ, ನದಿ, ಸಮುದ್ರ ಇತ್ಯಾದಿಗಳ ಅಂತರ) ಕಾರಣವಾಗುತ್ತವೆ. ಆದರೆ ದೇಶೀಯ ನೆಲೆಯಲ್ಲಿ ಗಡಿವಿಚಾರವು ಭೌಗೋಳಿಕ ಸಾಮಿಪ್ಯದಿಂದಾಗಿ ತನ್ನ ಸಂಬಂಧವನ್ನು ಬೆಸೆದುಕೊಳ್ಳುತ್ತದೆ. ಭಾಷಿಕ, ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಸಂಗತಿಗಳಿಂದ ಸಾಮ್ಯವನ್ನು ಹೊಂದಿರಲೂಬಹುದು. ಈ ಹಿನ್ನೆಲೆಯಲ್ಲಿ ಬಳ್ಳಾರಿ - ಸಿರುಗುಪ್ಪ - ಆಲೂರು - ಆದವಾನಿಯ ಗಡಿಭಾಗದ ಸಾಮಾಜಿಕ ಸಂಬಂಧವನ್ನು ಕೆಲವು ಅಂಶಗಳಿಂದ ಕೆಳಗಿನಂತೆ ಗುರುತಿಸಬಹುದು.

**ಅ. ಸಾಂಸ್ಕೃತಿಕತೆ :** ಗಡಿಭಾಗದಲ್ಲಿನ ನಾಲ್ಕು ತಾಲ್ಲೂಕುಗಳು ಭಾಷಾವಾರು ಪ್ರಾಂತರಚನೆಯ ಪೂರ್ವದಲ್ಲಿ ಒಂದೇ ಆಡಳಿತಕ್ಕೆ ಒಳಪಟ್ಟಿದ್ದವು. ಯಾವುದೇ ರಾಜಕೀಯ ಗಡಿಯ ಮಿತಿಯಿಲ್ಲದ ಅಂದಿನ ಸಮಾಜದಲ್ಲಿ ಭಾಷೆಯೂ ಕನ್ನಡವೇ ಆಗಿತ್ತು. ಕನ್ನಡನಾಡನ್ನಾಳಿದ ರಾಜಮನೆತನಗಳೆಲ್ಲ ಈ ಭಾಗದಲ್ಲಿ ತಮ್ಮ ಆಳ್ವಿಕೆಯನ್ನು ನಡೆಸಿವೆ. ಈ ಕಾರಣದಿಂದಾಗಿ ಇಲ್ಲಿನ ಜನಜೀವನ ಸಂಸ್ಕೃತಿಯು ಏಕಮುಖವಾಗಿತ್ತು. ಗಡಿಭಾಗದಲ್ಲಿ ವಾಸಿಸುವ ಅನೇಕ ಜನರು ಕನ್ನಡವನ್ನೇ ಮನೆಮಾತಾಗಿ ಆಡುತ್ತಾರೆ. ಅಲ್ಲಲ್ಲಿ ತೆಲುಗು ಭಾಷಿಕರೂ ಇದ್ದಾರೆ. ಈ ಭಾಗದಲ್ಲಿ ಎಲ್ಲ ಜಾತಿ ವರ್ಗದವರು ವಾಸಿಸುತ್ತಾರೆ. ಆಯಾ ಸಮುದಾಯಕ್ಕೆ ತಕ್ಕಂತೆ ಹುಟ್ಟು, ಸಾವು, ಹಬ್ಬ, ಆಚರಣಾ ನೆಲೆಯಲ್ಲಿ ಏಕತೆಯಿದೆ. ಆಂಧ್ರ - ಕರ್ನಾಟಕಕ್ಕೂ ವೈವಾಹಿಕ ಸಂಬಂಧಗಳಿಂದ ಪರಸ್ಪರ ಗಡಿಭಾಗದಲ್ಲಿ ಆಚರಣೆ, ಕೆಲವು ಹಬ್ಬಗಳು, ಭಾಷೆ ಮುಂತಾದ ವಿಷಯಗಳಲ್ಲಿ ಹಲವು ಪ್ರೇರಣೆಗಳು ಉಂಟಾಗಿವೆ. ಸಮಜಾತಿ, ವರ್ಗಗಳಿರುವುದರಿಂದ ಭಾಷೆಯನ್ನು ಹೊರತು ಪಡಿಸಿ ಸಂಪ್ರದಾಯದ ನೆಲೆಯಲ್ಲಿ ಬಹುತೇಕ ಒಂದೇ ಮಾದರಿಯನ್ನು ಕಾಣಬಹುದು. ಏಕಮಾದರಿಯ ಮನೆಗಳ ರಚನೆ, ದೇವಾಲಯ, ಜಾತ್ರೆ, ಉತ್ಸವಗಳು ಇರುವುದನ್ನು ಕಾಣಬಹುದು.

**ಆ. ವ್ಯಾವಹಾರಿಕತೆ :** ಗಡಿಪ್ರದೇಶದಲ್ಲಿ ಪರಸ್ಪರ ವ್ಯಾಪಾರ, ವಾಣಿಜ್ಯಗಳ ಕೊಡು ಪಡೆಯಿದೆ. ಆಂಧ್ರದ ಪಟ್ಟಣ, ನಗರಗಳಿಗೆ ಕರ್ನಾಟಕದ ಗಡಿಯ ಜನರು, ಕರ್ನಾಟಕದ ಗಡಿಯ ಪ್ರದೇಶಗಳಿಗೆ ಆಂಧ್ರದ ಜನರು ವ್ಯಾವಹಾರಿಕ ಸಂಬಂಧಗಳನ್ನು ಬೆಸೆದಿದ್ದಾರೆ. ಕೃಷಿಯನ್ನು ಅರಸಿ ಬಂದಂತಹ ಆಂಧ್ರದ ಸಮುದಾಯಗಳು ಬಳ್ಳಾರಿ ಜಿಲ್ಲೆಯ ಗಡಿಭಾಗಕ್ಕೆ ವಲಸೆ ಬಂದಿವೆ. ವಲಸೆ ಬಂದ ಅನೇಕ ಸಮುದಾಯಗಳು ಗುಂಪು ಗುಂಪಾಗಿ ಅಲ್ಲಲ್ಲಿ ಗುಡಿಸಲು, ಮನೆಗಳನ್ನು ನಿರ್ಮಿಸಿಕೊಂಡು 'ಕ್ಯಾಂಪು'ಗಳನ್ನು ನಿರ್ಮಿಸಿಕೊಂಡಿದ್ದಾರೆ. ಅಂತೆಯೇ ಉದ್ಯೋಗವನ್ನು ಅರಸಿಬಂದವರು ಪಟ್ಟಣ, ನಗರಗಳಲ್ಲಿದ್ದಾರೆ. ವ್ಯಾಪಾರದ ಉದ್ದೇಶದಿಂದ ಬಂದಂತಹ ಅನೇಕ ತೆಲುಗು ಮೂಲದ ಕುಟುಂಬಗಳು ಕನ್ನಡದ ಗಡಿಭಾಗದಲ್ಲಿ ನೆಲೆಸಿದ್ದಾರೆ.

**ಇ. ರಾಜಕೀಯ, ಭೌಗೋಳಿಕ:** ಭೌಗೋಳಿಕವಾಗಿ ಇಂದು ಗಡಿಭಾಗವು ಏಕಮಾದರಿಯ ಆಡಳಿತವನ್ನು ಹೊಂದಿಲ್ಲ. ಭಾಷಾವಾರು ಪ್ರಾಂತರಚನೆಯಿಂದಾಗಿ ಬಳ್ಳಾರಿ, ಸಿರುಗುಪ್ಪ ತಾಲ್ಲೂಕುಗಳು ಕನ್ನಡನಾಡಿನಲ್ಲಿಯೂ, ಆಲೂರು - ಆದವಾನಿ ತಾಲ್ಲೂಕುಗಳು ಆಂಧ್ರಪ್ರದೇಶದಲ್ಲಿಯೂ ಉಳಿದುಕೊಂಡಿವೆ. ಅಚ್ಚಕನ್ನಡದ ಭಾಷಾ ದ್ವೀಪಗಳಾಗಿ ಕೆಲವು ಹಳ್ಳಿಗಳು ಆಂಧ್ರದ ರಾಜಕೀಯ ಆಡಳಿತಕ್ಕೆ ಒಳಪಟ್ಟಿವೆ. ಅನೇಕ ಕನ್ನಡಿಗರು, ಅವರ ಆಚರಣೆ, ಸಂಸ್ಕೃತಿಯು ಅಲ್ಲಿ ಉಳಿದುಕೊಂಡಿದೆ. ತೆಲುಗರ ವಲಸೆಯಿಂದ ಅಚ್ಚ ತೆಲುಗಿನ ಭಾಷಾ ದ್ವೀಪಗಳು ಕರ್ನಾಟಕದಲ್ಲಿ ನಿರ್ಮಾಣಗೊಂಡಿವೆ. ಕರ್ನಾಟಕದ ಆಡಳಿತಕ್ಕೆ ಅವು ಒಳಪಟ್ಟಿವೆ. ಭೌಗೋಳಿಕ ಗಡಿಯನ್ನಾಧರಿಸಿ ಈ ವೈಪರೀತ್ಯವಿದ್ದರೂ ಅಲ್ಲಲ್ಲಿ ಏಕಮಾದರಿಯ ಸಾಮಾಜಿಕ ಜೀವನ ವಿಧಾನವಿದೆ. ಭಾಷಾವಾರು ಪ್ರಾಂತ ರಚನೋತ್ತರ ಅವಧಿಯಲ್ಲಿ ಗಡಿಭಾಗದಲ್ಲಿ ಅನೇಕ ಸಾಂಸ್ಕೃತಿಕ ಪಲ್ಲಟಗಳು ಏಕಮುಖೀ ಸಾಂಸ್ಕೃತಿಕತೆಯಿಂದ ಸ್ಥಿತ್ಯಂತರಕ್ಕೆ ಒಳಪಟ್ಟಿರುವುದನ್ನು ಗಮನಿಸಬಹುದು.

ಈ ಕಾರಣಗಳಿಂದ ಗಡಿ ಆಂಧ್ರ - ಕರ್ನಾಟಕ ಪ್ರದೇಶದ ಸಾಮಾಜಿಕ ಸಂಬಂಧವು ಕ್ರಮೇಣ ಏಕಮುಖತೆಯಿಂದ, ಭಾಷೆ, ಸಂಸ್ಕೃತಿಯಿಂದ ಪಲ್ಲಟಗೊಂಡು ದ್ವಿಭಾಷಿಕವಲಯ ಏರ್ಪಟ್ಟು, ಆ ಮೂಲಕ ದ್ವಿಸಾಂಸ್ಕೃತಿಕತೆಯೂ ಏರ್ಪಟ್ಟಿದೆ. ಈ ಕಾರಣದಿಂದಾಗಿ ಈ ಭಾಗದಲ್ಲಿ ಹೆಚ್ಚಾಗಿ ತೆಲುಗು ಭಾಷೆಯು ಕನ್ನಡದ ಮೇಲೆ ತನ್ನ ಸಾಮಾಜಿಕ ಒತ್ತಡಗಳನ್ನು ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಬಿಂಬಿಸಿದೆ. ವಲಸಿಗ ತೆಲುಗು ಸಮುದಾಯದಿಂದ ಕನ್ನಡ ಗಡಿಭಾಗದ ಜನತೆಯು ಆಂಧ್ರದ ಜೀವನ ಶೈಲಿಯನ್ನು ಹಂತಹಂತವಾಗಿಯಾದರೂ ಅನುಕರಿಸುತ್ತಿರುವುದು ಕಂಡುಬರುತ್ತದೆ. ತೆಲುಗುಭಾಷೆಯ ಮಾಧ್ಯಮಗಳಾದ ರೇಡಿಯೋ, ದೂರದರ್ಶನ, ಪತ್ರಿಕೆ, ಸಿನಿಮಾಗಳು ರೂಪಿಸುತ್ತಿರುವ ಕಾರ್ಯಕ್ರಮಗಳ ವೈಖರಿ, ಅಲ್ಲಿ ಉಪಯೋಗಿಸುವ ಸಂಭಾಷಣೆಗಳು, ಹಲವಾರು ತಾರೆಗಳ ದರ್ಶನ ಮುಂತಾದುವು ಗಡಿಭಾಗದ ಕನ್ನಡಿಗರನ್ನು ಗಾಢವಾಗಿ ಆಕರ್ಷಿಸಿರುವುದರಿಂದಾಗಿ ಭಾಷೆಯಲ್ಲಿ ತೆಲುಗನ್ನು ಮನರಂಜನೆಗೆ ಆಯ್ಕೆ ಮಾಡುವ ಕನ್ನಡಿಗರೇ ಅಧಿಕವಾಗಿದ್ದಾರೆ. ಮಾಧ್ಯಮಗಳ ಪ್ರಭಾವದಿಂದ ಕನ್ನಡದ ಅನೇಕ ಕುಟುಂಬಗಳು ತಮ್ಮ ಜೀವನ ಶೈಲಿಯನ್ನು, ಜಾತ್ರೆ, ಆಚರಣೆ, ಹಬ್ಬಗಳ ಸಂದರ್ಭವನ್ನು ಬದಲಿಸಿಕೊಂಡ ಉದಾಹರಣೆಗಳೂ ಇಲ್ಲಿವೆ. ಅಂತೆಯೆ ವಲಸಿಗ ತೆಲುಗು ಸಮುದಾಯವು ಕನ್ನಡನಾಡಿನ ಕೆಲವು ಹಬ್ಬಗಳನ್ನು, ಆಚರಣೆಗಳನ್ನು ಸ್ವೀಕರಿಸಿದ್ದಾರೆ. ವ್ಯಾಪಾರ, ವಾಣಿಜ್ಯಕ್ಕೆಂದು ಬಂದ ಮತ್ತು ಇಲ್ಲಿಯೇ ನೆಲೆಯೂರಿದ

ತೆಲುಗು ಕುಟುಂಬಗಳೂ ಕನ್ನಡದ ಗಡಿಯಲ್ಲಿರುವುದರಿಂದ ತೆಲುಗು ಸಂಸ್ಕೃತಿಯು ಅಲ್ಲಲ್ಲಿ ನೆಲೆಯೂರಿದೆ. ಕನ್ನಡದ ಎಲ್ಲ ಸಂಸ್ಕೃತಿಯನ್ನು ಉಳಿಸಿಕೊಂಡು, ಆಂಧ್ರದ ಪ್ರಭಾವಕ್ಕೆ ಒಳಗಾಗದ ಆಂಧ್ರ ಆಡಳಿತದ ಕೆಲವು ಗ್ರಾಮಗಳೂ ಆಂಧ್ರದ ಗಡಿಯಲ್ಲಿವೆ. ಇದು ಪರಸ್ಪರ ವೈರುಧ್ಯದ ನೆಲೆಯಲ್ಲಿಯೇ ಉಳಿದುಕೊಂಡಿರುವುದು ವಿಶೇಷ. ಈ ದೃಷ್ಟಿಯಿಂದ ಗಡಿಭಾಗದ ಸ್ಥಳನಾಮಗಳಲ್ಲಿಯೂ ಮಾತೃಭಾಷಿಕರ ಉಚ್ಚಾರಣೆ, ಬರೆಹದಲ್ಲಿ ಕೆಲವು ಬದಲಾವಣೆಗಳಾಗಿವೆ. ಭಾಷಾವಾರು ಪ್ರಾಂತರಚನೋತ್ತರ ಅವಧಿಯ ಆಂಧ್ರದ ಆಡಳಿತದಿಂದಾಗಿ ಕೆಲವು ಕನ್ನಡದ ಹೆಸರುಗಳು ತೆಲುಗೀಕರಣಗೊಂಡಿವೆ. ತೆಲುಗರ ಗಾಢಪ್ರಭಾವದಿಂದ ಆಂಧ್ರದ ಗಡಿಭಾಗದ ಕನ್ನಡಿಗರೂ ನಿಧಾನಗತಿಯಲ್ಲಿ ಪ್ರಭಾವಿತರಾಗುತ್ತಿರುವುದು ಕಂಡುಬರುತ್ತಿದೆ.

ಈ ಗಡಿಭಾಗದ ಸಾಮಾಜಿಕ ಸಂಬಂಧದ ವಿವರಣೆಯಿಂದ ಸ್ಥಳನಾಮಗಳಿಗೆ ಆಗುವ ಲಾಭವೇನು ಅಥವಾ ಈ ಅಧ್ಯಯನಕ್ಕೆ ಯಾವ ಬಗೆಯ ಸಂಬಂಧವಿದೆ? ಎಂಬ ಪ್ರಶ್ನೆಗಳು ಕಾಡುತ್ತವೆ. ಸ್ಥಳನಾಮಗಳಿಂದ ಗಡಿಪ್ರದೇಶದಲ್ಲಿ ಉಂಟಾಗಿರುವ ಸಂಸ್ಕೃತಿಯನ್ನು ಭಾಷಿಕ, ವಲಸೆ ಎಂಬ ಎರಡು ಆಯಾಮಗಳಲ್ಲಿ ವಿಶ್ಲೇಷಿಸಲು ಸಾಧ್ಯವಿದೆ. ಅಂದರೆ ಕನ್ನಡ ಸ್ಥಳನಾಮಗಳ ಮೇಲೆ ತೆಲುಗು ಭಾಷೆ, ತೆಲುಗು ಸ್ಥಳನಾಮಗಳ ಮೇಲೆ ಕನ್ನಡ ಭಾಷೆ, ಸಂಸ್ಕೃತಿಯ ಪ್ರಭಾವ, ಪ್ರೇರಣೆ ಹಾಗೆಯೇ ತೆಲುಗು ವಲಸಿಗ ಸಮುದಾಯದ ನೆಲೆಗಳು, ಅವುಗಳ ಹೆಸರು, ಕೆಲವು ರೆವಿನ್ಯೂ ದಾಖಲೆಯಾಗಿ ಸೇರಿವೆ. ಇನ್ನೂ ಕೆಲವು ಸಾಂಸ್ಕೃತಿಕ, ಸಾಮಾಜಿಕ ಸಂಬಂಧಗಳನ್ನು ಹೇಳುವ ಕುರುಹುಗಳಾಗಿ ಉಳಿದಿವೆ. ಹಾಗಾಗಿ ಈ ಅಧ್ಯಾಯದಲ್ಲಿ ಪ್ರಧಾನವಾಗಿ ಕನ್ನಡದ ಗಡಿಯನ್ನು ಲಕ್ಷಿಸಿ, ಅದರ ಮೇಲೆ ಪ್ರಭಾವ ಬೀರಿದ ಕಡೆ ತೆಲುಗು ಸಂಬಂಧಿಯಾದ ಅಂಶಗಳನ್ನು ಚರ್ಚಿಸಲಾಗಿದೆ.

### ೭.೨. ಸ್ಥಳನಾಮಗಳ ಸಾಮಾಜಿಕ ಆಯಾಮಗಳು

ಸ್ಥಳನಾಮಗಳ ಮೂಲಕ ಸಾಮಾಜಿಕವಾಗಿ ಉಂಟಾಗುವ ಸಾಂಸ್ಕೃತಿಕ ಪ್ರಕ್ರಿಯೆಗಳನ್ನು ತಿಳಿಯಲು ಸಾಧ್ಯವಿದೆ. ಸಮಾಜದಲ್ಲಿನ ವಿಭಿನ್ನರೀತಿಯ ಸಂಸ್ಕೃತಿಯ ಚಹರೆಗಳನ್ನು ಸ್ಥಳನಾಮಗಳು ಹೇಗೆ ಗುರುತಿಸಿ, ಮಾರ್ಗವನ್ನು ನಿರ್ಮಿಸುತ್ತಾ, ಪ್ರತಿನಿಧಿಯಾಗಿ, ಮೂಲಾಧಾರಗಳಾಗಿ ನಿಲ್ಲುತ್ತವೆಂಬುದನ್ನು ವಿವಿಧ ಸಾಮಾಜಿಕ ಆಯಾಮಗಳಿಂದ ಸ್ಥೂಲವಾಗಿ ಚರ್ಚಿಸಲಾಗಿದೆ.

### ೭.೨.೧. ಜಾತಿಯಾಧಾರಿತ ಸ್ಥಳನಾಮಗಳು

ಭಾಷೆಯ ರಚನೆಯಲ್ಲಿ ಧ್ವನಿ, ಪದ, ವಾಕ್ಯ, ಅರ್ಥ ಮುಂತಾದ ಅಂಶಗಳಿರುವಂತೆ ಸಾಮಾಜಿಕ ರಚನೆಯಲ್ಲಿ ಮಾನವನಿಗೆ ಲಿಂಗ, ವರ್ಗ, ಜಾತಿ, ಮುಂತಾದ ಅಂಶಗಳಿವೆ. ಈ ಮೂಲಕ ನಾಮಾಧ್ಯಯನ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಮುಖ್ಯವಾಗಿ "ಲಿಖಿತ ಆಧಾರಗಳ ಕೊರತೆಯಿದ್ದಲ್ಲಿ ಒಂದು ಜನಾಂಗವು ನೆಲೆಸಿದ್ದ ಒಂದು ಪ್ರದೇಶದ ಸ್ಥಳನಾಮಗಳಲ್ಲಿನ ಸಮಾನರೂಪಗಳನ್ನು ಪರಿಶೀಲಿಸಬೇಕು."[೧] ಇದರಿಂದ ಆಯಾ ನಾಡಿನ ಹಲವಾರು "ಸಾಂಸ್ಕೃತಿಕ ಸ್ತರಗಳ ನಾನಾ ಜನಾಂಗಗಳ ಅಸ್ತಿತ್ವವು ಸ್ಥಳನಾಮಗಳಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದಾಗಿದೆ."[೨] ಇಂತಹ ನಾಮಗಳು ನೇರವಾಗಿ ಅಲ್ಲದಿದ್ದರೂ, "ಸಂಸ್ಕೃತಿಯ ಪಳಯುಳಿಕೆಗಳಂಥ

ಅವಶೇಷಗಳಾಗಿರುವುದರಿಂದ ಅವು ಪರೋಕ್ಷವಾಗಿಯಾದರೂ ಜನತೆ ಮತ್ತು ನಿರ್ದಿಷ್ಟಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ."[೬] ಕಾರಣ ಈ ಬಗೆಯ ಸಾಮಾಜಿಕ ಅಧ್ಯಯನದಿಂದ "ಒಂದು ಸಮಾಜದಲ್ಲಿನ ವರ್ಣವ್ಯವಸ್ಥೆ, ನಾಗರಿಕತೆ, ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುತ್ತದೆ."[೭]

ಸ್ಥಳನಾಮ ನಿರ್ದೇಶನವು ಜಾತಿ, ವರ್ಗದ ಪ್ರತಿನಿಧಿಯಾಗಿ ಕಾಣಿಸಿಕೊಂಡಿದ್ದು ಎರಡನೇ ಘಟ್ಟದಲ್ಲಿ. ಇದಕ್ಕಿಂತ ಮುಂಚೆ ನಿಸರ್ಗದೊಂದಿಗೆ ಸರಳವಾದ ಜೀವನವನ್ನು ಸಾಗಿಸುತ್ತ, ತನ್ನ ಕುಟುಂಬ ಅಥವಾ ಗುಂಪಿನೊಂದಿಗೆ ಅಲೆಯುತ್ತಿದ್ದ ಮನುಷ್ಯ ಕೃಷಿಯನ್ನು ಕಂಡುಕೊಂಡು, ಅದರ ರಕ್ಷಣೆ ಮತ್ತು ಉಪಯೋಗಕ್ಕಾಗಿ ಒಂದೆಡೆ ನೆಲೆ ನಿಲ್ಲುವಲ್ಲಿ ಗ್ರಾಮ ಪರಿಕಲ್ಪನೆ ಉಗಮವಾಯಿತೆನ್ನಬಹುದು. ಈ ಸಂದರ್ಭದಲ್ಲಿ ಮನುಷ್ಯರು ನಿಸರ್ಗದತ್ತ ವಾದಂತಹ ಕಲ್ಲು, ಗುಡ್ಡ, ದಿನ್ನೆ, ಬೆಟ್ಟ, ಪೊಟರೆ ಮುಂತಾದವುಗಳೊಂದಿಗೆ ತಮ್ಮ ವಾಸದ ನೆಲೆಯನ್ನು ಗುರುತಿಸಿಕೊಂಡರು. ಆದುದರಿಂದ ಗ್ರಾಮನಾಮಗಳ ಇತಿಹಾಸದಲ್ಲಿ ನಿಸರ್ಗವಾಚಿ ಸ್ಥಳನಾಮಗಳು ಮೊದಲು ಉಗಮಗೊಂಡವು. ಇದು ಗ್ರಾಮ ಅಥವಾ ಸ್ಥಳನಾಮದ ಪ್ರಥಮ ಘಟ್ಟವೆಂದು ಕಲ್ಬುರ್ಗಿಯವರು ಅಭಿಪ್ರಾಯ ಪಡುತ್ತಾರೆ. (ನಾಮವಿಜ್ಞಾನ - ಪು. ೫೯) ಕಾಲಕ್ರಮದಲ್ಲಿ ನಿಸರ್ಗಕ್ಕಿಂತ, ತನ್ನ ಜನಾಂಗದ ಬಗೆಗೆ ವ್ಯಕ್ತಿಗಳು ಮೋಹ ಬೆಳೆಸಿಕೊಂಡ ಸಂದರ್ಭದಲ್ಲಿ ಸಮುದಾಯಗಳು ರೂಪುಪಡೆದವು. "ಜನಾಂಗ ನಿಷ್ಠೆ ಗಟ್ಟಿಗೊಂಡ ಈ ಎರಡನೇ ಘಟ್ಟದಲ್ಲಿ ನಿಸರ್ಗವಾಚಿಗೆ ಬದಲು ಕ್ರಮೇಣ ಜನಾಂಗವಾಚಿ ಗ್ರಾಮನಾಮಗಳು ತಲೆದೋರಲಾರಂಭಿಸಿದವು."[೮] ಹೀಗಾಗಿ ಜನಾಂಗ ಅಥವಾ ಜಾತಿಯ ನೆಲೆಯಲ್ಲಿ ನಿರ್ದೇಶನಗೊಂಡಿರುವ ಸ್ಥಳನಾಮಗಳನ್ನು ಆಯಾ ಸಮುದಾಯಗಳ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

### ೭.೨.೨. ಬ್ರಾಹ್ಮಣರು

ಸಾಮಾಜಿಕವಾಗಿ ಬಲಿಷ್ಠವಾದಂತಹ ಸಮುದಾಯವಾಗಿದ್ದು, ಪ್ರಾಚೀನ ಸಾಮಾಜಿಕ ಜೀವನದಲ್ಲಿ ತನ್ನ ಸ್ಥಾನಮಾನವನ್ನು ಗರಿಷ್ಠವೆಂಬಂತೆ ಗುರುತಿಸಿಕೊಂಡು ತನ್ನದೇ ಆದಂತಹ ಅಸ್ತಿತ್ವವನ್ನು ಸ್ಥಳನಾಮಗಳ ಮೇಲೂ ಸ್ಥಾಪಿಸಿಕೊಂಡಿರುವುದು ತಿಳಿಯುತ್ತದೆ. ಪ್ರತ್ಯೇಕ ಗುಂಪುಗಳಲ್ಲಿ ವಾಸಿಸುತ್ತಿದ್ದ ವೈದಿಕರು, ತಮ್ಮ ಕೆಲವು ನೆಲೆಗಳಿಗೆ ವೈಷ್ಣವ ಸಂಬಂಧೀ ಹೆಸರುಗಳನ್ನು ನಿರ್ದೇಶಿಸಿಕೊಂಡಿದ್ದಾರೆ. ಕ್ಷತ್ರಿಯರು ಬ್ರಾಹ್ಮಣರಿಗೆಂದೇ ಅಗ್ರಹಾರಗಳನ್ನು ನಿರ್ಮಿಸಿಕೊಟ್ಟುದು ಇತಿಹಾಸದಿಂದ ತಿಳಿಯುತ್ತದೆ. ಶಾಸನಗಳೂ ಅಗ್ರಹಾರಗಳ ಉಲ್ಲೇಖವನ್ನು ನೀಡುತ್ತವೆ. ರಾಜರು, ಮಂತ್ರಿಗಳು, ಅಧಿಕಾರಿಗಳು ನೀಡಿದ ಕೊಡುಗೆಗಳು ಇವಾಗಿರುತ್ತಿದ್ದವು. ಬ್ರಾಹ್ಮಣೇತರರು ಅಗ್ರಹಾರಗಳಲ್ಲಿ ವಾಸಿಸುವಂತಿರಲಿಲ್ಲವೆಂಬುದು ಈಗಾಗಲೇ ತಿಳಿದ ವಿಚಾರ.

ಅಗ್ರಹಾರಗಳಲ್ಲದೇ - 'ಬ್ರಾಹ್ಮಣ' ಎಂಬ ಹೆಸರಿನಿಂದಲೂ, - ಹಾರುವ, - ಪಾರುವ, - ಬೊಮ್ಮ ಮುಂತಾದ ಹೆಸರುಗಳಿಂದಲೂ ಆರಂಭವಾಗುವ ಸ್ಥಳನಾಮಗಳು ಕರ್ನಾಟಕ ಮತ್ತು ಆಂಧ್ರಪ್ರದೇಶದಾದ್ಯಂತ ಅಲ್ಲಲ್ಲಿ ದೊರೆಯುತ್ತವೆ. - ಬ್ರಹ್ಮವು ಸಂಸ್ಕೃತದಿಂದ ತದ್ಭವಗೊಂಡು - ಬೊಮ್ಮ' ಆಗಿರಬೇಕು. ಮುಂದೆ ಕನ್ನಡ

ನಾಡಿನಾದ್ಯಂತ ಇಂಥ ಬೊಮ್ಮ ಸಂಬಂಧಿ ಗ್ರಾಮರಚನೆಗಳಾಗಿರಬಹುದು. ಇದಕ್ಕೆ ಕಾರಣ ಆಳರಸರು ಬ್ರಾಹ್ಮಣರಿಗೆ ನೀಡಿದ ದತ್ತಿ, ದಾನ ಮತ್ತು ಪುರೋಹಿತವರ್ಗವು ಕಂಡುಕೊಂಡ ಅಸ್ತಿತ್ವವೂ ಆಗಿರಬೇಕು. ಅದರಂತೆ - ಭಟ್ಟ' ಎಂಬ ಪದವೂ ಬ್ರಾಹ್ಮಣರ ವಾಸ್ತವ್ಯದ ಹೆಸರನ್ನು ಪ್ರತಿನಿಧಿಸುತ್ತಿದೆ. "Bhatta' meant a scholar, a Brahmana and the name of Bhattarahalli probobly derives its name from Brahmana."[೬] ಭಟ್ಟರಿಗೆ ಸಂಬಂಧಿಸಿದ ಹೆಸರಿನ ಊರುಗಳು ದೊರೆಯುತ್ತವೆ. ಭಟ್ಟ ಎಂಬ ಪದ ಒಂದು ವೃತ್ತಿಯನ್ನು ಸೂಚಿಸುವ ಪದವಾಗಿದೆ. ಭಾರತದಾದ್ಯಂತ ಅಡುಗೆ ಮುಂತಾದ ಕೆಲಸವನ್ನು ಮಾಡುವವರಿಗೆ ಈ ಪದವು ಬಳಕೆಯಾಗುತ್ತದೆ. ಆದರೂ ಕರ್ನಾಟಕದ ಮಟ್ಟಿಗೆ ನಿರ್ದಿಷ್ಟ ಜಾತಿಯ ಜನರ ವ್ಯಕ್ತಿನಾಮದ ವಾರ್ಗಿಕವಾಗಿ, ಅಧಿಕೃತವಾಗಿ ಹೇಳುವುದರಿಂದ ಅಗ್ರಹಾರಗಳಿಗೆ ಒಂದು ಕಾಲದವರೆಗೆ ಅದೇ ಹೆಸರಿನಿಂದ ಕರೆದು, ನಂತರದ ಅವಧಿಯಲ್ಲಿ ಈ ಬಗೆಯ - ಭಟ್ಟ, ಕೆಲವು ವ್ಯಕ್ತಿಗಳ ಹೆಸರುಗಳು ಅಗ್ರಹಾರಗಳಿಗೆ ನಿರ್ದೇಶಿಸಿದ್ದು ತಿಳಿಯುತ್ತದೆ. ರಾಜ, ಮಂತ್ರಿ, ಸಾಮಂತಾದಿ ಅಧಿಕಾರಿಗಳು ದಾನವಾಗಿ ನೀಡಿದಂತಹ ಊರುಗಳಿಗೆ ಆಯಾ ರಾಜ, ಮಂತ್ರಿ, ಸಾಮಂತರ ಹೆಸರುಗಳೊಂದಿಗೆ ಅಗ್ರಹಾರಗಳು ಉಲ್ಲೇಖಗೊಂಡಿವೆ. ಉದಾ : ಸೋಮೇಶ್ವರ ಅಗ್ರಹಾರ. ಅದರಂತೆ ಅಗ್ರಹಾರದಲ್ಲಿ ವಾಸಿಸುವ ಬ್ರಾಹ್ಮಣ ಸಮುದಾಯದ ಹಿರಿಯ ಪಂಡಿತ, ನಾಯಕನಾದವನ ಹೆಸರಿನಲ್ಲಿಯೂ ಚಾಲ್ತಿಗೆ ಬಂದಿವೆ. ಉದಾ : ಸೋಮಯಾಜಿ ಅಗ್ರಹಾರ. ಹಲವು ಊರುಗಳ ಹೆಸರುಗಳು ಭಟ್ಟರಹಳ್ಳಿ, ಪೂಜಾರಿಹಳ್ಳಿ, ಅಯ್ಯನಹಳ್ಳಿ, ಅಯ್ಯನೂರು, ಬೊಮ್ಮನಹಾಳು ಮುಂತಾಗಿವೆ. ಇವು ಎಷ್ಟರಮಟ್ಟಿಗೆ ಬ್ರಾಹ್ಮಣ ಸಮುದಾಯವನ್ನು ಸೂಚಿಸುತ್ತವೆಂಬುದು ಕುತೂಹಲಕಾರಿ ಸಂಗತಿ. ಬ್ರಾಹ್ಮಣರನ್ನು ಅಯ್ಯ, ಭಟ್ಟ, ಸ್ವಾಮಿ ಎಂತಲೂ ಕರೆಯುವ ರೂಢಿಯಿದೆ. ದೇವರ ಪೂಜೆ ಮುಂತಾದ ಪೌರೋಹಿತ್ಯ ಕಾರ್ಯಗಳನ್ನು ನಿರ್ವಹಿಸುತ್ತಿದ್ದರಿಂದ - ಪೂಜಾರಿಗಳೆಂದೂ, ಶಿಕ್ಷಣ ಕೊಡುತ್ತಿದ್ದರಿಂದ - ಅಯ್ಯ' ಅಯ್ಯವಾರು (ತೆಲುಗು) ಎಂದೂ ಕರೆಯುತ್ತಿದ್ದರು. ಅಯ್ಯ ಎಂಬ ಪದಕ್ಕೆ ಶಿಕ್ಷಕ, ಉಪಾಧ್ಯಾಯ ಎಂಬರ್ಥವಿದೆ. ತೆಲುಗಿನಲ್ಲಿ ಇಂದಿಗೂ -ಅಯ್ಯವಾರು ಎಂಬ ಪದದ ಬಳಕೆಯಿದೆ. ಇದನ್ನು ಗಮನಿಸಿದರೆ -ಅಯ್ಯನೋರಹಳ್ಳಿ' ಎಂಬುದು ಬಹುಶ: ಬ್ರಾಹ್ಮಣ ಸಮುದಾಯದ ನೆಲೆಯನ್ನು ಸೂಚಿಸುವುದೇ? ಅಥವಾ ಹನ್ನೆರಡನೆಯ ಶತಮಾನದಲ್ಲಿ ಆರಂಭಗೊಂಡ ವೀರಶೈವ ಪಂಥದ ಪ್ರೇರಣೆಯಿಂದ ಬಂದಿರುವ ಸಾಧ್ಯತೆಯೂ ಇದೆ. ಜಂಗಮರಿಗೆ, ಅಯ್ಯ ಎಂತಲೂ ಕರೆಯುತ್ತಾರೆ. ಇವರೂ ಮಠಮಾನ್ಯಗಳನ್ನು ಆರಂಭಿಸಿ ಶಿಕ್ಷಣವನ್ನು ನೀಡಿದರು. ಇದರಿಂದಾಗಿ ಅಯ್ಯನವರು ಎಂಬ ಪದದಿಂದ ವೀರಶೈವ ಸಮುದಾಯದವರನ್ನೂ ಕರೆಯಲಾಗುತ್ತದೆ. ಕಾರಣ ಈ ಬಗೆಯ ವಾಸ್ತವ್ಯದ ಹೆಸರುಗಳನ್ನು ಗೆರೆ ಎಳೆದು ಗುರುತಿಸುವುದು ಕಷ್ಟ ಸಾಧ್ಯ. ಕೆಲವು ಕಡೆ ಅವುಗಳನ್ನು ಸ್ಥಳಿಯ ಕ್ಷೇತ್ರಮಾಹಿತಿಯಿಂದ ನಿರ್ದಿಷ್ಟವಾಗಿ ಗುರುತಿಸಲೂಬಹುದು. ಆಂಧ್ರದ ಗಡಿಯನ್ನು ಮೀರಿ ಒಳಹೊಕ್ಕಾಗ -ಅಯ್ಯ, -ಪೂಜಾರಿ ವಾರ್ಗಿಕಗಳಿಂದ ಆರಂಭವಾಗುವ ಗ್ರಾಮನಾಮಗಳು ಅಧಿಕೃತವಾಗಿ ಬ್ರಾಹ್ಮಣರ ವಾಸ್ತವ್ಯಗಳಾಗಿಯೇ ಇರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಆಂಧ್ರದಲ್ಲಿ ವೀರಶೈವ ಧರ್ಮದ ಪ್ರಸಾರ ಇಲ್ಲದಿರುವುದು. ಆದ್ದರಿಂದ ಆಂಧ್ರ - ಕರ್ನಾಟಕದಲ್ಲಿ -ಅಯ್ಯ, -ಪೂಜಾರಿ ಎಂಬ ಪದಗಳಲ್ಲಿ ಅರ್ಥವ್ಯತ್ಯಾಸ ಇರುವುದನ್ನು ಗುರುತಿಸಬಹುದು.

ಬ್ರಾಹ್ಮಣ ಸಮುದಾಯಕ್ಕೆ ಸಂಬಂಧಿಸಿದ ಸ್ಥಳ, ಗ್ರಾಮನಾಮಗಳು ಆಂಧ್ರ - ಕರ್ನಾಟಕ ಗಡಿಭಾಗದಲ್ಲಿ ವಿರಳವಾಗಿವೆ. ಅಲ್ಲದೇ ಅಗ್ರಹಾರ ಮತ್ತು ಬ್ರಾಹ್ಮಣ ಸಂಬಂಧಿ ವ್ಯಕ್ತಿನಾಮಗಳಿಂದ ನಿರ್ದೇಶನಗೊಂಡ ಊರುಗಳು ಇಲ್ಲಿ ದೊರೆಯುತ್ತವೆ. ಬ್ರಾಹ್ಮಣ ಪದಕ್ಕೆ ಸಮಾನವಾದುದು ತೆಲುಗು ಭಾಷೆಯಲ್ಲಿ - ಬಾಪುಲ ಎಂಬ ಪದ. ಗಡಿಭಾಗದಲ್ಲಿ ಈ ಬಗೆಯ ಗ್ರಾಮನಾಮಗಳಿವೆ.

ಬಾಪುರಂ - ALR
ಬಾಪುರಂ - ADN
ಬಾಪುಲದೊಡ್ಡಿ - ADN

ತೆಲುಗಿನ ಪ್ರಭಾವದಿಂದ -ಬಾಪುಲ ಎಂದು ಆರಂಭವಾಗುವ ಈ ತೆರನಾದ ಹೆಸರುಗಳನ್ನು ಬ್ರಾಹ್ಮಣರ ನೆಲೆಗಳೆಂದು ಗುರುತಿಸಬಹುದು.

ಅ. ಬ್ರಾಹ್ಮಣರಿಗೆ ದಾನವಾಗಿ ನೀಡಿದ ಊರುಗಳು ಅಗ್ರಹಾರಗಳು. ಇದೇ ಹೆಸರಿನ ಮೇಲೆ ಇಂದಿಗೂ ಗಡಿಭಾಗದಲ್ಲಿ ಕೆಲವು ಗ್ರಾಮಗಳಿವೆ.

ಅಗ್ರಹಾರಂ - ALR
ಆಲೂರು ಅಗ್ರಹಾರ - ALR
ಸಂಡೂರು ಅಗ್ರಹಾರ - SND

ಆ. ಬ್ರಾಹ್ಮಣರು ನಿರ್ವಹಿಸುವ ವೃತ್ತಿಯನ್ನು ಆಧರಿಸಿದ ನೆಲೆಗಳು

ಅಯ್ಯವಾರಿಪಲ್ಲಿ
ಜೋಯಿಸರಹಳ್ಳಿ

ಇ. -ಭಟ್ಟ, -ಪೂಜಾರಿ, -ಅಯ್ಯ ನಿರ್ದಿಷ್ಟಹೊಂದಿದ ನೆಲೆಗಳು

ಅಯ್ಯವಾರಿಪಲ್ಲೆ
ಅಯ್ಯನೋರಹಳ್ಳಿ
ಭಟ್ಟರಹಳ್ಳಿ - ALR
ಪೂಜಾರಿಹಳ್ಳಿ - KLD

ಈ. -ಬೊಮ್ಮ, ನಿರ್ದಿಷ್ಟವನ್ನು ಹೊಂದಿದ ವಾಸ್ತವ್ಯಗಳು

ಭಟ್ಟರಬೊಮ್ಮಲಾಪುರ - ADN
ಬೊಮ್ಮಲಾಪುರ - SRP
ಬೊಮ್ಮನಹಾಳು - BLR
ಬೊಮ್ಮಪಲ್ಲಿ - ADN
ಬೊಮ್ಮಗುಂಡನಹಳ್ಳಿ - ALR
ಹಗರಿಬೊಮ್ಮನಹಳ್ಳಿ - HBH

ಉ. -ಪಾರ್ವ, -ಹಾರ್ವ, ಎಂಬ ಪದಾರಂಭದೊಂದಿಗಿರುವ ಗ್ರಾಮಗಳು

ಪಾರ್ವನಿಪಲ್ಲೆ
ಹಾರೋಗದ್ದೆ
ಹಾರ್ವರಹಳ್ಳಿ
ಹಾರ್ವರಬಾವಿ (ನಿರ್ವಸಿತ)

ಹೀಗೆ ಬ್ರಾಹ್ಮಣ ಸಮುದಾಯವನ್ನು ಸೂಚಿಸುವ

ಅಯ್ಯ - ಅಯ್ಯವಾರು (ತೆಲುಗು)

ಜೋಯಿಸ - ಯಜ್ಞ (ತೆಲುಗು)

ಭಟ್ಟ -

ಬ್ರಾಹ್ಮಣ - ಬಾಪುಲ (ತೆಲುಗು)

ಬೊಮ್ಮ

ಪಾರ್ವ- ಹಾರುವ ಮುಂತಾದ ನಿರ್ದಿಷ್ಟ ವಾರ್ಗಿಕಗಳನ್ನು ಹೊಂದಿದ ಸ್ಥಳನಾಮಗಳಿವೆ. ಶಾಸನಗಳಲ್ಲಿಯೂ ಅಗ್ರಹಾರಗಳ ಕುರಿತಾಗಿ (ಗಡಿಪ್ರದೇಶದ) ಉಲ್ಲೇಖಗಳಿವೆ. ಚಾಲುಕ್ಯ, ರಾಷ್ಟ್ರಕೂಟ ಹಾಗೂ ವಿಜಯನಗರದ ಅರಸರ ಆಡಳಿತದ ದಟ್ಟವಾದ ಪ್ರಭಾವವಿರುವ ಈ ಭಾಗದಲ್ಲಿ ಕನ್ನಡ, ತೆಲುಗು ಶಾಸನಗಳಲ್ಲಿ ಅಗ್ರಹಾರಗಳನ್ನು ಹೆಸರಿಸಲಾಗಿದೆ.

ಉದಾ : ಕುಡುತಣಿ ಅಗ್ರಹಾರ

ಕುರುಂಗೋಡು ಸರ್ವಮಾನ್ಯದಗ್ರಹಾರ

ಸೋಮಸಮುದ್ರವೆಂಬ ಸರ್ವಮಾನ್ಯದಗ್ರಹಾರ (SII- Vol- IX- II)

ಸೋಮಸಮುದ್ರ, ಕುಡುತಣಿ, ಕುರುಂಗೋಡು ಇಂಥ ಅನೇಕ ಗ್ರಾಮಗಳು ಹಿಂದೆ ಅಗ್ರಹಾರಗಳಾಗಿದ್ದವು. ಶಾಸನೋಕ್ತ ಅಗ್ರಹಾರಗಳೆಲ್ಲ ಇಂದು ಅದೇ 'ಅಗ್ರಹಾರ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿಲ್ಲ. ಕಾಲಾಂತರದಲ್ಲಿ ಅವು ಖಿಲಗೊಂಡುದು ತಿಳಿಯುತ್ತದೆ. ಶಾಸನಗಳಲ್ಲಿ ಇಂತಹ ನೂರಾರು ಅಗ್ರಹಾರಗಳ ಉಲ್ಲೇಖವಿದೆ. ಕೇವಲ ಬ್ರಾಹ್ಮಣರ ನೆಲೆಗಳಾಗಿದ್ದ, ಇಲ್ಲಿ ತಮ್ಮ ಬೌದ್ಧಿಕ ಶಕ್ತಿಯಿಂದ ಶಿಕ್ಷಣವನ್ನು ನೀಡುತ್ತಾ, ರಾಜ್ಯದ ರಾಜಕೀಯದಲ್ಲಿ ತಮ್ಮದೇ ಆದಂತಹ ಅಸ್ತಿತ್ವವನ್ನು ಹೊಂದಿರುತ್ತಿದ್ದರು. ಉಕ್ತವಾಗಿರುವ ಎಲ್ಲ ಅಗ್ರಹಾರಗಳಿಲ್ಲದಿದ್ದರೂ ಅಲ್ಲಲ್ಲಿ ಹಾಗೆಯೇ ಕೆಲವು ಉಳಿದುಕೊಂಡಿವೆ. ಆದರೆ ಇಲ್ಲಿ ಕೇವಲ ಬ್ರಾಹ್ಮಣರು ಮಾತ್ರ ವಾಸಿಸುತ್ತಿಲ್ಲ. ಎಲ್ಲ ಸಮುದಾಯಗಳೂ ಇಲ್ಲಿವೆ. ಕೆಲವು ಅಗ್ರಹಾರಗಳಲ್ಲಿ ಬ್ರಾಹ್ಮಣರು ಇಲ್ಲದೆಯೂ ಇರಬಹುದು.

ಇಂದಿನ ಆಧುನಿಕ ವಿದ್ಯಾಮಾನದಲ್ಲಿಯೂ ಕೆಲವು ನಗರಗಳಲ್ಲಿ ಬ್ರಾಹ್ಮಣ ಸಮುದಾಯ ಪ್ರತ್ಯೇಕವಾಗಿ ವಾಸಿಸುತ್ತಿರುವುದು ಕಂಡುಬರುತ್ತದೆ. ಅವರು ತಮ್ಮ ವಾಸ್ತವ್ಯಗಳಿಗೆ ವೈಷ್ಣವ ಸಂಬಂಧೀ ದೈವಮೂಲದ ಹೆಸರುಗಳನ್ನು ನಿರ್ದೇಶಿಸಿಕೊಂಡಿರುವುದು ಕಂಡು ಬರುತ್ತದೆ.

ರಾಘವೇಂದ್ರ ಕಾಲನಿ - ADN

ವಿಜಯರಾಯನಕಟ್ಟೆ - ALR

ವೆಂಕಟೇಶ್ವರನಗರ - BLR

ಸತ್ಯನಾರಾಯಣಪೇಟೆ - BLR

ವೈದಿಕರು, ವೈಷ್ಣವ ಸಂಬಂಧೀ ಹೆಸರುಗಳನ್ನು ಗ್ರಾಮಗಳಿಗೂ ಇಟ್ಟಿದ್ದಾರೆ. ಅದರಂತೆ ಕೆಲವು ಪ್ರದೇಶಗಳಲ್ಲಿ ಶೈವ ಸಂಬಂಧೀ ಬ್ರಾಹ್ಮಣರು ಅಗ್ರಹಾರಗಳಲ್ಲಿದ್ದು, ಶಿವನಿಗೆ ಸಂಬಂಧಿಸಿದ ಹೆಸರುಗಳನ್ನು ತಮ್ಮ ವಾಸ್ತವ್ಯಗಳಿಗೆ ಕರೆದಿದ್ದಾರೆ. ಗಡಿಭಾಗದಲ್ಲಿ ಈ ಶೈವ ಬ್ರಾಹ್ಮಣರ ನೆಲೆಗಳಿಲ್ಲವೆಂದು ತಿಳಿಯುತ್ತದೆ. ಬ್ರಾಹ್ಮಣೇತರರೂ ಇಂದು

ವೈಷ್ಣವ ದೈವಗಳಾದ ನಾರಾಯಣ, ಲಕ್ಷ್ಮಿ, ಹನುಮಂತ, ವೆಂಕಟೇಶ್ವರ, ರಾಘವೇಂದ್ರ ಹೀಗೆ ಹಲವಾರು ಹೆಸರುಗಳನ್ನು ತಮ್ಮ ಗ್ರಾಮ, ಕೇರಿ, ಕಾಲನಿಗಳಿಗೆ ಕರೆದುಕೊಂಡಿರುವುದು ತಿಳಿಯುತ್ತಿದೆ.

- ಬೊಮ್ಮ' ಎಂಬ ನಿರ್ದಿಷ್ಟದಿಂದ ಆರಂಭವಾಗುವ ಸ್ಥಳನಾಮಗಳನ್ನು ಬ್ರಾಹ್ಮಣರ ನೆಲೆಗಳೆಂದು ಗುರುತಿಸುವಲ್ಲಿ ಕೆಲವು ಗೊಂದಲಗಳಿವೆ. ಆಂಧ್ರ ಕರ್ನಾಟಕ ಗಡಿಭಾಗದಲ್ಲಿ ಈ ಪದದಿಂದ ಆರಂಭವಾಗುವ ಸ್ಥಳನಾಮಗಳ ಕೆಲವು ಮಾದರಿಗಳು ಹೀಗಿವೆ.

ಪುರುಷ ಸಂಬಂಧವಾಚಿ ಪದ -ನ' ವ್ಯಕ್ತಿನಾಮ ಸಂಬಂಧಿ ಊರುಗಳೆಂಬಂತೆ ತೋರುವ ಗ್ರಾಮ ನಾಮಗಳಿವೆ.

ಬೊಮ್ಮಗುಂಡ | ನ | ಹಳ್ಳಿ - ALR

ಬೊಮ್ಮ | ನ | ಹಾಳ್ - BLR

ಹಗರಿಬೊಮ್ಮ | ನ | ಹಳ್ಳಿ - HBH

ಸ್ಥಳನಾಮ ನಿರ್ದಿಷ್ಟ ಹಾಗೂ ವಾರ್ಗಿಕಗಳ ನಡುವೆ -ಲಾ' ಕಾರವು ಸ್ತ್ರೀ ವ್ಯಕ್ತಿನಾಮ ಸಂಬಂಧವಾಚಿಯಾಗಿ ಬಳಕೆಗೊಂಡಿದೆ.

ಬೊಮ್ಮ | ಲಾ | ಪುರ - SRP

ಭಟ್ಟರ ಬೊಮ್ಮ | ಲಾ | ಪುರ - ADN

ಸ್ಥಳನಾಮ ನಿರ್ದಿಷ್ಟ ಹಾಗೂ ವಾರ್ಗಿಕಗಳ ನಡುವೆ ಯಾವುದೇ ಸಂಬಂಧವಾಚಕವಿಲ್ಲದೇ ಬಳಕೆಗೊಂಡಿದೆ.

ಬೊಮ್ಮಪಲ್ಲೆ - ADN

ಸಾಮಾನ್ಯವಾಗಿ ಕರ್ನಾಟಕದಲ್ಲಿ ಕಂಡುಬರುವ ಬೊಮ್ಮ' ಸಂಬಂಧಿ ಹೆಸರುಗಳು ಬ್ರಾಹ್ಮಣರ ನೆಲೆಗಳೆಂದು ಗುರುತಿಸಬಹುದಾದರೂ, ಕೆಲವು ದ್ವಂದ್ವಗಳು ಮೇಲಿನ ಉದಾಹರಣೆಗಳಲ್ಲಿವೆ. - ಬೊಮ್ಮಲಾ' ಎಂಬುದಾಗಿ ಸ್ಥಳನಾಮ ಆರಂಭವಾದಾಗ ಅದರಲ್ಲಿನ -ಲಾ' ಸ್ತ್ರೀವಾಚಿಪದವಾಗುತ್ತದೆ. ಕರ್ನಾಟಕದಲ್ಲಿ ಕಂಡುಬರುವ -ನಾಗಲಾ, -ಶಾಂತಲಾ, -ಶಕುಂತಲಾ ಮುಂತಾದ ವ್ಯಕ್ತಿನಾಮಗಳಲ್ಲಿ | ಲಾ | ಪದವು ಕೊನೆಯಲ್ಲಿದೆ. ಇದರಿಂದ ಬ್ರಾಹ್ಮಣರ ನೆಲೆಯೆಂದು ಹೇಳಲು ಕೆಲವು ಸಂದೇಹಗಳೂ ಬರಬಹುದು. ಕೋಲಾರ ಜಿಲ್ಲೆಯಲ್ಲಿ ಬರುವ 'ಬೊಮ್ಮದಾಸರಹಳ್ಳಿ' ಎಂಬುದನ್ನು ವಿ.ಗೋಪಾಲಕೃಷ್ಣ ಅವರು -ಬೊಮ್ಮ ಎಂಬುದು ದಾಸರಲ್ಲಿ ಒಂದು ಪಂಗಡ"[೭] ಎಂದು ಹೇಳುತ್ತಾ ಜನಾಂಗಿಕ ಅಂಶದಲ್ಲಿ ಚರ್ಚಿಸಿದ್ದಾರೆ. ತೆಲುಗು ಭಾಷೆಯಲ್ಲಿ -ಬೊಮ್ಮ = ಎಂದರೆ ಗೊಂಬೆ, ಬೊಂಬೆ ಎಂಬರ್ಥವಿದೆ. ಈ ಬಗೆಯ ಅರ್ಥಗಳು ನಿಜನಿಷ್ಪತ್ತಿಗೆ ಬಹುಶ: ದೂರವೇ ಉಳಿಯುತ್ತವೆ. -ಬ್ರಹ್ಮ ತದ್ಭವಗೊಂಡು -ಬೊಮ್ಮ ಆಗಿದೆ. ಕ್ಷೇತ್ರಮಾಹಿತಿಯ ಪ್ರಕಾರ ಇವು ಬ್ರಾಹ್ಮಣರ ಸಮುದಾಯಗಳ ವಾಸ್ತವ್ಯವೆಂದೇ ತಿಳಿಯುತ್ತದೆ. ಅದೇನಿದ್ದರೂ "ಅಗ್ರಹಾರ, -ಆಗರ, -ಮಂಗಲಗಳು ಬ್ರಾಹ್ಮಣರಿಗೆ ಕೊಟ್ಟ ಊರುಗಳನ್ನು ಸೂಚಿಸುವಂತೆ, ಬೊಮ್ಮ, - ಹಾರುವ ಪದಗಳೂ ಅಂತಹ ಅಗ್ರಹಾರ ಸೂಚಕಗಳಾಗಿವೆ."[೮] ಹೀಗೆ ಬ್ರಾಹ್ಮಣ ಸಮುದಾಯ ತಮ್ಮ ವಾಸ್ತವ್ಯಗಳಿಗೆ ಒಂದಲ್ಲ ಒಂದು ಬಗೆಯಲ್ಲಿ ಸಮುದಾಯದ ಪ್ರಾತಿನಿಧಿಕ ಸ್ಥಳನಾಮಗಳನ್ನು ನಿರ್ದೇಶಿಸಿಕೊಂಡಿದ್ದಾರೆ. ಆದರೆ ತೆಲುಗಿನಲ್ಲಿ 'ಲ' ಕಾರವು ಬಹುವಚನವನ್ನು ಹೇಳುತ್ತದೆ. ಕಳವ | ಲ | ಗುಂಡು

ಅಗಸ | ಲ | ದಿನ್ನೆ: ತಿಪ್ಪ | ಲ | ದೊಡ್ಡಿ ಎಂಬ ಗ್ರಾಮನಾಮಗಳಲ್ಲಿ | ಲ | ಎಂಬ ತೆಲುಗು ಪದ ಕನ್ನಡದ ನಿರ್ದಿಷ್ಟ ಹಾಗೂ ವಾರ್ಗಿಕ ರಚನೆಗಳ ನಡುವೆ ಬಂದಿದೆ. ಅದರಂತೆ ಬೊಮ್ಮ | ಲಾ | ಎಂಬಲ್ಲಿಯೂ ತೆಲುಗಿನ ಪ್ರಭಾವದಿಂದ ಬಂದಿರಬಹುದೆಂಬ ಮತ್ತೊಂದು ವಾದವನ್ನು ಮಂಡಿಸಲು ಅವಕಾಶವಿದೆ.

### ೭.೨.೩. ಕ್ಷತ್ರಿಯರು

ಕ್ಷತ್ರಿಯ' ಎಂಬ ಪದವನ್ನೊಂದಿದ ಸ್ಥಳನಾಮಗಳು ಕಂಡು ಬರುವುದಿಲ್ಲ. ಇಲ್ಲಿ ಕ್ಷಾತ್ರ ಗುಣವನ್ನು ಹೊಂದಿದ ಅಥವಾ ಅರಸರು, ಕೆಲವು ಪೌರಾಣಿಕ ವೀರರು, ಕ್ಷಾತ್ರಬಲವುಳ್ಳ ವ್ಯಕ್ತಿಗಳನ್ನು ವೀರರು ಎಂದು ಕರೆದವರನ್ನು ಹೆಸರಿಸುತ್ತಾ, ಕ್ಷತ್ರಿಯರಿಗೆ ಸಂಬಂಧಿಸಿದ ಸ್ಥಳನಾಮಗಳೆಂದು ಹೀಗೆ ಪಟ್ಟಿಮಾಡಬಹುದು. ಇಲ್ಲಿ ಕೆಲವು ಮಾತ್ರ ಗಡಿಭಾಗಕ್ಕೆ ಸಂಬಂಧಿಸಿವೆ.

| | | |
|---|---|---|
| ಅರಸನಹಳ್ಳಿ | ಪಾಂಡವಗಲ್ಲು - ADN | ರಾಮದುರ್ಗ - ALR |
| ಅರಸಿಕೆರೆ | ರಾಮನಗರ - ALR | ರಾಜನಹಾಳ್ |
| ಧರ್ಮಾಪುರ | ರಾಯದುರ್ಗ | ವೀರಲದಿನ್ನೆ - ADN |

ಈ ಸ್ಥಳನಾಮಗಳಲ್ಲಿ ಬಂದಿರುವ -ಅರಸ, -ಅರಸಿ, -ರಾಜ, -ರಾಯ, -ವೀರ ಹಾಗೂ (ರಾಮಾಯಣ, ಮಹಾಭಾರತದ ಹೆಸರುಗಳು) ಕೆಲವು ವ್ಯಕ್ತಿಗಳ ಹೆಸರುಗಳು ನೇರವಾಗಿ ಕ್ಷತ್ರಿಯರನ್ನು ಬಿಂಬಿಸಲಾರವಾದರೂ, ಕ್ಷಾತ್ರಗುಣವನ್ನು ಪ್ರತಿನಿಧಿಸುವ ದೃಷ್ಟಿಯಿಂದ ಇವುಗಳನ್ನು ಗುರುತಿಸಬಹುದು. ಆದರೂ ಇವು ಸಮರ್ಪಕವೆಂದು ಹೇಳಲಾಗದು. ಕೆಲವು ವ್ಯಕ್ತಿನಾಮವಾಚಕ ಸ್ಥಳನಾಮಗಳಾಗುತ್ತವೆ. ಇದೊಂದು ಮಾದರಿಯಷ್ಟೇ.

### ೭.೨.೪. ವೈಶ್ಯರು

ವೈಶ್ಯರು ವ್ಯಾಪಾರಿಗಳು. ಗ್ರಾಮಗಳು ವ್ಯಾಪಾರದ ದೃಷ್ಟಿಯಿಂದ ನಗರೀಕರಣಕ್ಕೆ ಒಳಗಾಗುವುದಕ್ಕೆ ಇವರ ಕೊಡುಗೆಯಿದೆ. ವ್ಯಾಪಾರ ಮಾಡುವುದರಿಂದ ಈ ಸಮುದಾಯವನ್ನೂ -ಶೆಟ್ಟಿ' ಎಂಬ ಪದದಿಂದ ಗುರುತಿಸಲಾಗುತ್ತದೆ. ಇವರು ಕೇವಲ ಕರ್ನಾಟಕದಲ್ಲಿ ಮಾತ್ರವಲ್ಲ ಭಾರತದಾದ್ಯಂತ ವಾಸಿಸುತ್ತಿದ್ದಾರೆ. ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರಿಗಳ ಸಂಘವಿದ್ದು, ಈ ವಣಿಕರ ಕುರಿತಾಗಿ ಮತ್ತು ಪಟ್ಟಣಶೆಟ್ಟಿಗಳ ಕುರಿತಾಗಿ ಕೆಲವು ಶಾಸನಗಳು ಉಲ್ಲೇಖಿಸಿವೆ. ಶೆಟ್ಟಿಗಳು ವ್ಯಾಪಾರ ಕೈಗೊಂಡದ್ದರಿಂದ ಅವರನ್ನು 'ಪಟ್ಟಣಶೆಟ್ಟಿ'ಗಳೆಂದೇ ಗುರುತಿಸಲಾಗಿದೆ. ವ್ಯಾಪಾರಮಾಡಿಕೊಂಡು ಶ್ರೀಮಂತರಾದ ಶೆಟ್ಟರು ಗ್ರಾಮಗಳನ್ನು ನಿರ್ಮಿಸಿದ ಉದಾಹರಣೆಗಳನ್ನು ಶಾಸನಗಳು ವ್ಯಕ್ತಪಡಿಸಿವೆ. ನಿರ್ಮಿಸಿದ ಗ್ರಾಮಗಳಿಗೆ ತಮ್ಮ ಹೆಸರನ್ನು ನೀಡಿದ ಬಗ್ಗೆ ಮಾಹಿತಿಗಳಿವೆ. -ಶೆಟ್ಟಿ' ಪೂರ್ವಪದಕ್ಕೆ, ಹಳ್ಳಿ, ಕೆರೆ, ಕೇರಿ, ಕುಂಟೆ, ಬೀಡು, ಕೊಪ್ಪ, ಪಲ್ಲಿಗಳು ಉತ್ತರಪದವಾಗಿ ಬಂದಂತಹ ಸ್ಥಳನಾಮಗಳು ಕನ್ನಡನಾಡಿನಲ್ಲಿವೆ.

ಪೊಳಲ್ ಶೆಟ್ಟಿಹಳ್ಳಿ - ಕೋಲಾರಜಿಲ್ಲೆ

ಶಂಕರಶೆಟ್ಟಿಹಳ್ಳಿ - ಮೈಸೂರುಜಿಲ್ಲೆ

ಸೋಮಶೆಟ್ಟಿಹಳ್ಳಿ - ಕೋಲಾರಜಿಲ್ಲೆ

ಗಡಿಭಾಗದಲ್ಲಿ ವೈಶ್ಯರಿಗೆ ಸಂಬಂಧಿಸಿದ ಗ್ರಾಮನಾಮಗಳಿಲ್ಲ. ಮೇಲಿನ ಉದಾಹರಣೆಯನ್ನು ಒಂದು ಮಾದರಿಗಾಗಿ ನೀಡಲಾಗಿದೆಯಷ್ಟೇ.

೭.೨.೫. ಶೂದ್ರರು

ಶೂದ್ರ' ಎಂಬ ಪದ ಇಲ್ಲಿ ಸ್ಥಳನಾಮದಿಂದ ಹೆಸರಿಸುವುದಿಲ್ಲ. ಇಲ್ಲಿ ಕೆಲವು ಸಮುದಾಯಗಳನ್ನು ಸಮೀಕರಿಸಿ ಚರ್ಚಿಸಲಾಗುತ್ತದೆ.

೭.೨.೫.೧. ಲಿಂಗಾಯತರು : (ಶೈವ)

ಲಿಂಗಾಯತರ ಊರುಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ಗುರುತಿಸಬಹುದು. ಹನ್ನೆರಡನೆಯ ಶತಮಾನದಲ್ಲಿ ಆರಂಭವಾದ ವೀರಶೈವ ಧರ್ಮದಿಂದ ಉಂಟಾದ ಸ್ಥಳನಾಮಗಳು ಹಾಗೂ ಈ ಧರ್ಮಕ್ಕಿಂತ ಮುಂಚೆ ಇದ್ದ ಶೈವ ಪಂಥದಿಂದ ನಿರ್ದೇಶಿಸಲ್ಪಟ್ಟ ಸ್ಥಳನಾಮಗಳು. ಶೈವಪಂಥದ ದೈವಗಳಾದ ವೀರಭದ್ರ, ಶಿವ, ಪರಮೇಶ್ವರ, ಲಿಂಗ, ನಂದಿ ಮುಂತಾದ ಹೆಸರುಗಳಿಂದ ಶೈವ ಸ್ಥಳನಾಮಗಳಿವೆ. ವೀರಶೈವ ಪಂಥದ ಪ್ರಭಾವದಿಂದ ಗ್ರಾಮನಾಮಗಳಲ್ಲಿ ಅಯ್ಯ, ಜಂಗಮ, ಒಡೆಯ, ಮಠ, ಬಸವ, ಸಿದ್ಧರಾಮ ಮುಂತಾದ ಪದಗಳಿವೆ. ಅಂತಹ ಕೆಲವು ಉದಾಹರಣೆಗಳು ಇಲ್ಲಿವೆ.

| ಶೈವ ಸಂಬಂಧಿ ಸ್ಥಳನಾಮಗಳು | ವೀರಶೈವ ಸಂಬಂಧಿ ಸ್ಥಳನಾಮಗಳು |
|---|---|
| ಪರಮದೇವನಹಳ್ಳಿ - BLR | ಅಯ್ಯನಹಳ್ಳಿ - KDL |
| ಮಲ್ಲಿಕಾರ್ಜುನಹಳ್ಳಿ - ALR | ಕೂಡಲಸಂಗಮ - (ಬಿಜಾಪುರ) |
| ಮಡ್ಡಿಲಿಂಗದಹಳ್ಳಿ - ALR | ಜಂಗಮಹಟ್ಟಿ - (ಬೆಳಗಾವಿ) |
| ಲಿಂಗದಹಳ್ಳಿ - ALR | ಜಂಗಮಹೊಸಳ್ಳಿ - (ಕೋಲಾರ) |
| ಶಂಕರಬಂಡೆ - ALR | ಜಂಗಮರಹೊಸಳ್ಳಿ - ALR |
| ಶಿವಪುರ - ಕೂಡ್ಲಿಗಿ - ತಾಲ್ಲೂಕು | ಬಸವಪುರ - ADN |
| ಸಿದ್ಧರಗಡ್ಡೆ - BLR | ಬಸವನ ಬಾಗೇವಾಡಿ |

ಲಿಂಗಾಯತರಿಗೆ ಸಂಬಂಧಿಸಿದ ಸ್ಥಳನಾಮಗಳನ್ನು ಹೇಳುವಾಗ ಶ್ರೀ. ಎಚ್.ಎಸ್. ಬ್ರಹ್ಮಾನಂದಂ ಅವರು ಈ ರೀತಿ ಅಭಿಪ್ರಾಯ ಪಡುತ್ತಾರೆ. "ಇವರು ಕೇವಲ ಲಿಂಗಾರಾಧಕರು. ಲಿಂಗವನ್ನು ಪೂಜಿಸುತ್ತಾರೆ. ಈ ಕಾರಣದಿಂದ ಲಿಂಗದ ಆರಾಧನಾ ಸಂಬಂಧಿಯಾಗಿ ಬರುವ ಸ್ಥಳನಾಮಗಳು ಇವರಿಗೆ ಸಂಬಂಧಿಸಿವೆ. ಲಿಂಗದಹಳ್ಳಿ - (ರಾಯದುರ್ಗಂ - ತಾ); ಲಿಂಗಲವಾರಿಪಲ್ಲಿ - (ಕದಿರಿ - ತಾ) ಮುಂತಾದ ಊರುಗಳನ್ನು ಹೆಸರಿಸಿದ್ದಾರೆ."[೯] ಜೊತೆಗೆ ಲಿಂಗ ಮತ್ತು ಶಿವ, ಅವನ ಪರಿವಾರ ದೇವತೆಗಳಿಗೆ ಸಂಬಂಧಿಸಿ ಬರುವ ಹೆಸರುಗಳು ಬಹುತೇಕ ಶೈವರ ಸ್ಥಳನಾಮಗಳಿಗೆ ಸಂಬಂಧಿಸಿರಬಹುದೆಂದು ಹೇಳಬಹುದು. "ಬ್ರಾಹ್ಮಣರಿಗೆ ನೀಡಿದ ಊರುಗಳನ್ನು ಅಗ್ರಹಾರವೆಂದು ಕರೆದರೆ, ಶೈವರಿಗೆ ನೀಡಿದ ಊರುಗಳನ್ನು 'ಶಿವಪುರ' ಎಂದು ಕರೆಯುತ್ತಿದ್ದಿರಬೇಕೆಂದು ವಿದ್ವಾಂಸರು

ಅಭಿಪ್ರಾಯಪಡುತ್ತಾರೆ.''[೧೦] ಶಿವಪುರಗಳನ್ನು ಶೈವರಿಗೆ ದಾನಕೊಟ್ಟಂತಹ ಉಲ್ಲೇಖಗಳು ಶಾಸನಗಳಲ್ಲಾಗಲೀ, ಇತರೆ ದಾಖಲೆಗಳಲ್ಲಾಗಲೀ ಮಾಹಿತಿ ದೊರೆಯುವುದಿಲ್ಲ. ಬದಲಾಗಿ ಈಶ್ವರಪುರ, ಸೋಮಸಮುದ್ರ ಎಂಬಂತಹ ಸ್ಥಳನಾಮಗಳು ಉಲ್ಲೇಖವಾಗಿವೆ. ಆದರೂ ಇವು ಶೈವರಿಗೆ ನೀಡಿದಂತಹ ಕೊಡುಗೆಗಳಲ್ಲವೆಂಬುದು ಸ್ಪಷ್ಟವಾಗುತ್ತದೆ.

### ೭.೨.೫.೨. ಕುರುಬರು

ಕಾಡು ಕುರುಬರು ಮತ್ತು ಜೇನು ಕುರುಬರು ಕರ್ನಾಟಕ ರಾಜ್ಯದ ಬುಡಕಟ್ಟುಗಳು. ಕುರುಬ' ಎಂಬ ಪದವು 'ಕುರು' ಎಂಬ ಪದದಿಂದ ನಿಷ್ಪನ್ನಗೊಂಡಿದೆ. -ಕುರು ಪದವು ಕುರಿ' ಎಂಬ ಪ್ರಾಣಿಯನ್ನು ತಿಳಿಸುತ್ತದೆ. ಈ ಕಾರಣದಿಂದ ಇವರು ವಾಸಿಸುವ ನೆಲೆಗಳಿಗೆ ಅದೇ ಹೆಸರಿನಿಂದ ಕರೆದುಕೊಂಡಿರುವುದು ವಿಶೇಷವಾಗಿ ಕಂಡುಬರುತ್ತದೆ. ಉತ್ತರ ಮಲಬಾರಿನ ಕುರುಂಬನಾಡು[೧೧] ಎಂಬ ಹೆಸರಿನ ತಾಲ್ಲೂಕು ಜನಾಂಗವನ್ನು ಪ್ರತಿನಿಧಿಸುವಲ್ಲಿ ಪ್ರಮುಖ ಸಾಕ್ಷಿಯಾಗಿದೆ. ಹೀಗೆ ಅಖಂಡ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿಭಾಗಗಳಲ್ಲಿ ಈ ಸಮುದಾಯಕ್ಕೆ ಸಂಬಂಧಿಸಿದ ಕೆಲವು ಗ್ರಾಮನಾಮಗಳಿವೆ. "ಕಾಡು ಕುರುಬರು ಮತ್ತು ಜೇನು ಕುರುಬರು ವಾಸಿಸುವ ಪ್ರದೇಶಗಳನ್ನು 'ಹಾಡಿ' ಗಳೆಂದು ಕರೆಯುವ ರೂಢಿಯಿದೆ.''[೧೨] ಹಟ್ಟಿಕಾರರು, ಕುರುಬರು ಈ ನಾಡಿನ ಮೂಲ ನಿವಾಸಿಗಳು. ಇವರು ಹಟ್ಟಿ ಮತ್ತು ಹಾಡಿಗಳಲ್ಲಿ ವಾಸಿಸುತ್ತಾರೆ ಎಂದು ಶಂಬಾ ಅವರು ಗುರುತಿಸುತ್ತಾರೆ. ಆದ್ದರಿಂದ ಹಟ್ಟಿ, ಹಾಡಿ ಎಂಬ ವಾರ್ಗಿಕಗಳು ಪ್ರಾಚೀನವಾದುವು ಎಂದು ತಿಳಿಯುತ್ತದೆ. ಗಡಿಭಾಗದ ಕುರುಬರ ನೆಲೆಗಳೆಂದು ಗುರುತಿಸಬಹುದಾದ ಉದಾಹರಣೆಗಳು ಹೀಗಿವೆ.

| | |
|---|---|
| ಕುರುವಳ್ಳಿ - SRP | ಕುರುಳೆಹಳ್ಳಿ - ALR |
| ಕುರುವಹಳ್ಳಿ - ALR | ಕುರಿಗನೂರು - SRP |
| ಕುರುಕುಂದೆ - ALR | ಕುರುಗೋಡು - BLR |

ಎಂಬ ಸ್ಥಳನಾಮಗಳಲ್ಲಿ -ಕುರು' ಎಂಬ ಪೂರ್ವಪದವು ಆರಂಭದಲ್ಲಿ ಚರ್ಚಿಸಿದಂತೆ -ಕುರುಬ' ಪದವನ್ನು ವಿವರಿಸುತ್ತದೆ. -ಕುರು ಪದವು ಕುರಿ' ಎಂಬ ಪ್ರಾಣಿಯನ್ನೂ ಹೇಳುತ್ತದೆ. ಹೆಚ್ಚಾಗಿ ಕುರುಬರು ಆರಂಭದಲ್ಲಿ ಗುಡ್ಡಗಾಡುಗಳಲ್ಲಿ, ಬೆಟ್ಟಗಳ ಬದಿಯಲ್ಲಿ ಹಾಡಿ, ಹಟ್ಟಿಗಳನ್ನು ನಿರ್ಮಿಸಿಕೊಂಡು, ಕುರಿಗಳನ್ನು ಸಾಕುತ್ತಿದ್ದ ಬಗ್ಗೆ ಶಂಬಾ ಅವರು ವಿವರ ನೀಡುತ್ತಾರೆ. ಈ ದೃಷ್ಟಿಯಿಂದ ಗಡಿಭಾಗದಲ್ಲಿರುವ ಮೇಲಿನ ಗ್ರಾಮನಾಮಗಳು ಬೆಟ್ಟಗಳಿಂದ ಕೂಡಿದ್ದು, ಇಲ್ಲಿ ಕುರುಬರು ವಾಸಿಸುತ್ತಿದ್ದ ಬಗೆಗೆ ಸ್ಥಳೀಯ ಮಾಹಿತಿ ದೊರೆಯುವುದರಿಂದ ಕುರುಬರಿಗೆ ಸಂಬಂಧಿಸಿದ ವಾಸ್ತವ್ಯಗಳೆಂದು ಗುರುತಿಸಬಹುದು. ಕುರು' ಎಂಬ ಪದ ಗುರುತು, ಕುರುಹು ಎಂಬರ್ಥಗಳನ್ನು ನೀಡುತ್ತವೆ. ಅಲ್ಲದೇ ಕೆಲವು ಐತಿಹ್ಯಗಳು ಸಮುದಾಯವನ್ನು ಬಿಂಬಿಸದೇ ಬೇರೆ ರೀತಿಯಲ್ಲಿ ವಿವರಿಸುತ್ತವೆ. ಆದರೆ ಸಂಸ್ಕೃತಿಯ ಅಧ್ಯಯನದಲ್ಲಿ ಶಂಬಾ ಹುಡುಕುವ ಮಾಹಿತಿಗಳು ಮುಖ್ಯವೆನಿಸಿವೆ. ಅಂತಹ ಆಧಾರಗಳಿಂದ ಮೇಲಿನ ಹೆಸರುಗಳು ಕುರುಬರ ನೆಲೆಗಳಾಗಿದ್ದವೆಂದು ಗುರುತಿಸಲಾಗಿದೆ.

೭.೨.೫.೩. ಗೊಲ್ಲರು

ವೈದಿಕ ಕಾಲದ ಗ್ರಾಮ ಸಮುದಾಯಗಳ ಸಾಮಾಜಿಕ ವ್ಯವಸ್ಥೆಯ ಬಗ್ಗೆ ವಿಪುಲ ಮಾಹಿತಿಯು ಅಂದಿನ ಬರೆಹಗಳಲ್ಲಿ ದೊರೆಯುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಘೋಷ್ ಮತ್ತು ಗ್ರಾಮ ಎಂಬ ಎರಡು ಘಟಕಗಳ ಉಲ್ಲೇಖವಿದೆ. ಒಂದನೆಯದು (ಘೋಷ್) ಸಣ್ಣ ಗಾತ್ರದ್ದಾದರೆ, ಎರಡನೆಯದು (ಗ್ರಾಮ) ದೊಡ್ಡದು. ಈ ಗ್ರಾಮಗಳು ಅರಣ್ಯಕ್ಕೆ ಸಮೀಪದಲ್ಲಿರುತ್ತವೆಂದು ಹೇಳಲಾಗಿದೆ. ಆದ್ದರಿಂದ ಇಲ್ಲಿ ಒಂದು ಸಮುದಾಯ ವಾಸಿಸುತ್ತದೆ. ಗೊಲ್ಲರಲ್ಲಿ ಕಾಡುಗೊಲ್ಲರೆಂಬ ಪ್ರತ್ಯೇಕ ಸಮುದಾಯವಿದೆ. ಈ ಚಿಕ್ಕ ಗ್ರಾಮ ನಿವಾಸಿಗಳನ್ನು - ಗೋಪರು' ಎಂದು ಕರೆಯಲಾಗಿದೆ. ಇವರ ಮುಖ್ಯ ವೃತ್ತಿ ಪಶು ಸಂಗೋಪನೆ ಮತ್ತು ಹೈನುಗಾರಿಕೆಯಾಗಿತ್ತು. ದನಗಾರಿಕೆ ಗೊಲ್ಲ ಜನಾಂಗದ ಪಾರಂಪರಿಕ ವೃತ್ತಿ. ಈ ದನಗಾರರ ಬಗ್ಗೆ ಶಂಬಾ ಜೋಶಿಯವರು ಹಾಲುಮತದರ್ಶನ ಕೃತಿಯಲ್ಲಿ ಚರ್ಚಿಸುತ್ತಾರೆ. ಕುಟಿ > ಕುಡಿ > ಕುಡ > ಕುಳ: ಪಟ್ಟಿ > ಹಟ್ಟಿ: ಪಾಡಿ > ಹಾಡಿ ಇವುಗಳೆಲ್ಲಾ ಗೋವಳಿಗರ ವಸತಿಗಳೆಂದು ಅವರು ವಾದಿಸುತ್ತಾರೆ. "ಪಟ್ಟಿಯು ಈ ನಾಡವರ ತೀರ ಆರಂಭಕಾಲದ ದನಗಾರಿಕೆಯ ಮಟ್ಟದ ಬಿಡಾರವೆಂದು ಶಂಬಾ ಅವರು ತೀರ್ಮಾನಿಸುವರು."[೧೫] ಇದನ್ನು ಒಪ್ಪಬಹುದು. ಶಂಬಾ ಮುಂದುವರೆದು ಗೌಡರೆಂದರೆ ಗೌಳರು, ಗೋವಳರೆಂಬಲ್ಲಿ ಸಂದೇಹವಿಲ್ಲ"[೧೬] ಎನ್ನುತ್ತಾರೆ. ಆದರೆ ಈ ಬಗೆಗೆ ಅವರಿಗೂ ಕೆಲವು ಗೊಂದಲಗಳಿದ್ದಂತೆ ತೋರುತ್ತದೆ. ಗೊಲ್ಲ ಸಮುದಾಯವು ಆಂಧ್ರ ಕರ್ನಾಟಕ ಗಡಿ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸಿದ್ದು, ಇವರು ಕನ್ನಡ - ತೆಲುಗು ದ್ವಿಭಾಷಿಕರು. ಅವರಿಗೆ ಸಂಬಂಧಿಸಿದ ಕೆಲವು ಸ್ಥಳನಾಮಗಳು ಹೀಗಿವೆ.

| | |
|---|---|
| ಗೊಲ್ಲನಾಗೇನಹಳ್ಳಿ - BLR | ಗೊಲ್ಲಪಲ್ಲಿ - ಕೋಲಾರ |
| ಗೊಲ್ಲಾಸ್ ಹಟ್ಟಿ - KLD | ಗೊಲ್ಲವಾರಿಪಲ್ಲಿ - ಕೋಲಾರ. |
| ಗೊಲ್ಲರಹಟ್ಟಿ - ಚಿತ್ರದುರ್ಗ | |

ಹಟ್ಟಿ, ಪಲ್ಲಿ, ಹಳ್ಳಿ, ಬೀಡು, ಗದ್ದೆ ಮುಂತಾದ ವಾರ್ಗಿಕಗಳು -ಗೊಲ್ಲ ಎಂಬ ಜಾತಿವಾಚಿ ನಿರ್ದಿಷ್ಟಕ್ಕೆ ಸರಿಹೊಂದುತ್ತವೆ. ಈ ಸಮುದಾಯ ನೆಲೆಸಿದಲ್ಲಿ ಜನಸಂಖ್ಯೆಯ ಬಾಹುಳ್ಯದಿಂದ ತಮ್ಮ ಜನಾಂಗದ ಹೆಸರನ್ನೇ ಇಟ್ಟುಕೊಂಡಿರುವುದು ತಿಳಿಯುತ್ತದೆ.

೭.೨.೫.೪. ವಡ್ಡರು

ಕಲ್ಲು ಒಡೆಯುವುದು, ಮನೆಯನ್ನು ಕಟ್ಟುವುದು ಇವರ ಪಾರಂಪರಿಕ ವೃತ್ತಿ. ಈ ಸಮುದಾಯದ ಹೆಸರಿನಿಂದಲೂ ಸ್ಥಳನಾಮಗಳಿವೆ.

| | |
|---|---|
| ಕಲ್ಲುಕುಟಿಗನಹಳ್ಳಿ - BLR | ವಡ್ಡರಹಳ್ಳಿ - ಕೋಲಾರ |
| ವಡ್ಡರಹಳ್ಳಿ - HPT | ವಡ್ಡರಪಲ್ಲಿ - ಚಿತ್ರದುರ್ಗ |

ಇಲ್ಲಿರುವ 'ಕಲ್ಲುಕುಟಿಗ' ಎಂಬುದು ಆಚಾರ್ಯರಿಗೂ (ಶಿಲ್ಪಿ) ಸಂಬಂಧಿಸುತ್ತದೆ. ವಡ್ಡವೃತ್ತಿಗೂ ಸಂಬಂಧಿಸುತ್ತದೆ. ವೃತ್ತಿಯಿಂದ ವಡ್ಡರ ಸಮುದಾಯವನ್ನು ಹೇಳುವ ಸ್ಥಳನಾಮ ಕರ್ನಾಟಕದಲ್ಲಿ ಕೇವಲ ಒಂದೇ ಒಂದು ಇದೆ. ಕ್ರಿ.ಶ. ೧೧೩೪ರ ಒಂದು ಶಾಸನ ಕಲ್ಲುಕುಟಿಗನನ್ನು ಹೆಸರಿಸಿದೆ."[೧೭] ಶಿಲ್ಪಿ ಎಂದು ಕರೆಯಲ್ಪಡುವ

ಸಮುದಾಯವು ವಿಶ್ವಬ್ರಾಹ್ಮಣರೆಂದು, ಅವರು ಸೂಕ್ಷ್ಮ ಕೆತ್ತನೆಯ ಕೆಲಸವನ್ನು ಮಾಡುತ್ತಾರೆ. ವಡ್ಡರೊಂದಿಗೆ ಅವರು ಗುರುತಿಸಿಕೊಳ್ಳುವುದಿಲ್ಲ.

**೭.೨.೫.೫. ಅಗಸರು**

ಬಟ್ಟೆ ತೊಳೆಯುವ ಪ್ರಾಚೀನ ವೃತ್ತಿ ಇವರದು. ಕಾವ್ಯ, ಶಾಸನಾದಿಗಳಲ್ಲಿ ಈ ಸಮುದಾಯದ ಉಲ್ಲೇಖವಿದೆ. ಮಡಿವಾಳ' ಎಂಬ ಪದ ಈ ಸಮುದಾಯಕ್ಕೆ ಬಳಕೆಯಾಗುತ್ತದೆ. ಇವರಿಗೆ ಸಂಬಂಧಿಸಿದ ಸ್ಥಳನಾಮಗಳು ಗಡಿಭಾಗದಲ್ಲಿವೆ.

| | |
|---|---|
| ಅಗಸಕಲ್ಲು - ALR | ಅಗಸನೂರು - SRP |
| ಅಗಸನೂರು - ADN | ಚಾಕಲಪಲ್ಲಿ - ಗುಂಟೂರು |
| ಅಗಸಲದಿನ್ನೆ - ADN | ಮಡಿವಾಳರಹಳ್ಳಿ - ಕೋಲಾರ. |

**೭.೨.೫.೬. ಉಪ್ಪಾರರು**

ಉಪ್ಪು ತಯಾರಿಸುವುದು ಮತ್ತು ಗೋಡೆಕಟ್ಟುವುದು ಇವರ ವೃತ್ತಿ. "ಉಪ್ಪುತೆರಿಗೆ (ಉಪ್ಪುದೆರೆ) ಪ್ರಾಚೀನ ಕರ್ನಾಟಕದಲ್ಲಿ ಇವರ ವೃತ್ತಿಗೆ ಇತ್ತು. ೧೬ನೇ ಶತಮಾನದ ಶಾಸನ - ಉಪ್ಪಾರ ಎಂಬುದು ಒಂದು ಜಾತಿ ಎಂಬುದನ್ನು ತಿಳಿಸುತ್ತದೆ."[೧೬] ಈ ಸಮುದಾಯಕ್ಕೆ ಸಂಬಂಧಿಸಿದ ಸ್ಥಳನಾಮಗಳು ಹೀಗಿವೆ.

ಉಪ್ಪಾರಹಾಳ್ - ADN
ಉಪ್ಪಾರಹೊಸಳ್ಳಿ - BLR
ಉಪ್ಪಾರಮೋಳೆ - HPT (ನಿರ್ವಸಿತ)

**೭.೨.೫.೭. ಕೊರಗರು (ಕೊರಚ)**

ಕೊರಗರು ಕನ್ನಡನಾಡಿನ ಮೂಲನಿವಾಸಿಗಳೆನ್ನಲಾಗಿದೆ.[೧೭] ಕೊರಗರನ್ನು ಕೊರಮ, ಕೊರಚ ಎಂಬ ಎರಡು ಬುಡಕಟ್ಟುಗಳೊಂದಿಗೆ ಹೋಲಿಸುತ್ತಾರೆ. ಇವರಿಗೆ ಸಂಬಂಧಿಸಿದ ಸ್ಥಳನಾಮಗಳಿವೆ.

| | |
|---|---|
| ಈಚಲಹಾಳ್ - ADN | ಕೊರಚರಹಟ್ಟಿ |
| ಕೊರಚರ ಬಂಡೆ - ALR (ನಿರ್ವಸಿತ) | ಮ್ಯಾದಾರಹಳ್ಳಿ - SND |
| ಕೊರಚರ ಈಚಲು - ALR (ನಿರ್ವಸಿತ) | |

ಕರ್ನಾಟಕದ ದಕ್ಷಿಣಕನ್ನಡ ಪರಿಸರದಲ್ಲಿ ಕೊರಗರು ಹೆಚ್ಚಾಗಿ ನೆಲೆಸಿದ್ದಾರೆ. ಇವರು ವಾಸಿಸುವ ಮನೆಗಳನ್ನು -ಕೊಪ್ಪ ಅಥವಾ -ಕೊಟ್ಟ (ಕೊರಗರ ಕೊಪ್ಪ, ಕೊರಗರಕೊಟ್ಟ) ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಇವರನ್ನು ಮೇದಾರರು ಎಂದು ಕರೆಯುತ್ತಾರೆ. ಇವರು ಈಚಲು' ಸಸ್ಯದಿಂದ ಬಾರಿಗೆ, ಪುಟ್ಟಿ ಹೆಣೆಯುತ್ತಾರೆ. ಆದ್ದರಿಂದ 'ಈಚಲು' ನೇರವಾಗಿ ಈ ಸಮುದಾಯವನ್ನು ಪ್ರತಿನಿಧಿಸುವುದಿಲ್ಲವಾದರೂ ಅವರ ವೃತ್ತಿಗೆ ಸಂಬಂಧಿಸಿದ ಗಿಡವಾದ್ದರಿಂದ ಅವರ ನೆಲೆಗೆ ಹತ್ತಿರವಾಗಿದೆ. ಕಾರಣ 'ಈಚಲಹಾಳ್ ' ಎಂಬ ಸ್ಥಳನಾಮ ಬಂದಿರಬಹುದೆಂದು ಊಹಿಸಬಹುದು. ಇದನ್ನು ಪ್ರಕೃತಿವಾಚಿಯಾಗಿಯೂ ನೋಡಬಹುದು.

### ೭.೨.೫.೮. ಮೊಂಡರು

ಮೊಂಡ ಸಮುದಾಯವು ಮೂಲತಃ ಆಂಧ್ರದವರು. ಇವರಿಗೆ ಸಂಬಂಧಿಸಿ ಗಡಿಭಾಗದಲ್ಲಿ ಎರಡು ಗಾದೆಗಳಿವೆ.

೧. ಏರೂರು ಎಲ್ಲಿಟೋ ಮೊಂಡಿ ವೆಲಸಿನಟ್ಲು [೧೮]
(ಏರೂರು ಸೀಮೆಯಲ್ಲಿ ಮೊಂಡನು ಪ್ರಕಾಶಿಸಿದಂತೆ)

೨. ಎರುಕಲಮ್ಮ ಏರೂರಿಕಿ ಚುಟ್ಟಮಾ
(ಎರುಕಲಮ್ಮ ಏರೂರಿಗೆ ನೆಂಟಳೇ)

ಈ ಗಾದೆಗಳಿಂದ ಮೊಂಡರು ಸ್ಥಳೀಯವಾಗಿಯೋ ಅಥವಾ ಗಡಿ ರಕ್ಷಕರಾಗಿದ್ದುದರಿಂದಲೋ ಪ್ರಚಾರಕ್ಕೆ ಬಂದಿರುವಂತಿದೆ. ಏರೂರು - (ALR)ನ ಸುತ್ತಮುತ್ತ ಮೊಂಡರು ನೆಲೆಸಿದ್ದಾರೆ. ಅಂತೂ ಊರ ಹೊರಗಿನ ಗಡಿಯನ್ನು ಸೂಚಿಸುವುದರಿಂದ ಭಿಕ್ಷುಕರಾಗಿ ಅಲೆಮಾರಿ ಜೀವನ ನಡೆಸುತ್ತಿದ್ದ ಮೊಂಡ ಸಮುದಾಯ ಗಡಿಯಲ್ಲಿ ಶತೃಗಳನ್ನು ಎದುರಿಸಿ ಪ್ರಕಾಶಿಸುವಂತಹ ಹೋಲಿಕೆ ಇವರ ಧೈರ್ಯಕ್ಕೆ ಸಂಕೇತವಾಗಬಹುದು. ಅಂತೆಯೇ ಈ ಗಾದೆಗಳು ಈ ಊರಿಗೆ ಅನ್ವರ್ಥವಾಗಿವೆ.

### ೭.೨.೫.೯. ಗೊರವರು

ಕರ್ನಾಟಕ ಮತ್ತು ಆಂಧ್ರದ ಅಸಂಖ್ಯಾತ ಉಪಸಂಸ್ಕೃತಿಗಳಲ್ಲಿ ಗೊರವರ ಸಂಸ್ಕೃತಿಯೂ ಒಂದು. ಈ ಸಂಸ್ಕೃತಿಯ ವಿಶೇಷವೆಂದರೆ ಇದು ಯಾವುದೇ ಒಂದು ಜಾತಿಗಾಗಲೀ, ಸ್ಥಳಕ್ಕಾಗಲೀ ಸೀಮಿತವಾದುದಲ್ಲ. ಪ್ರತಿಯೊಂದು ಸಮುದಾಯವು ಇದರಲ್ಲಿ ಸೇರಿದೆ. ಆದರೂ ಸಂಖ್ಯೆಯ ದೃಷ್ಟಿಯಿಂದ ಕುರುಬರೇ ಹೆಚ್ಚಾಗಿರುವುದು ಕಂಡುಬಂದಿದೆ. ಗೊರವ ಸಂಪ್ರದಾಯವು ಮೈಲಾರಲಿಂಗನ ಸಂಪ್ರದಾಯದ ಸುತ್ತ ಹೆಣೆದುಕೊಂಡಿದೆ. ಪಶುಪಾಲನಾ ಸಂಸ್ಕೃತಿಯ ಹಂತದಲ್ಲಿ ಬುಡಕಟ್ಟುಜನರು ತಮಗೆ, ತಮ್ಮ ದನಕರುಗಳಿಗೆ ಆಸರೆಯಾದ ಬೆಟ್ಟ, ಗುಡ್ಡ, ಅಡವಿಗಳ ಬಗ್ಗೆ ಗೌರವ, ಭಯ, ಭಕ್ತಿಯನ್ನು ಹೊಂದಿದ್ದರು. ಮಲೆ = ಎಂದರೆ ಬೆಟ್ಟ. ಮಲೆಯ ಅಯ್ಯ ಮಲ್ಲಯ್ಯ. ಇವನು ಗೊರವರ ದೈವ. ಅವನ ಹೆಸರಿನೊಂದಿಗೆ ಗೊರವರ ಕೆಲವು ವಾಸ್ತವ್ಯಗಳಿವೆ. ಆಂಧ್ರ - ಕರ್ನಾಟಕ ಅಲ್ಲದೇ ಮಹಾರಾಷ್ಟ್ರದ ಕೆಲವು ಕಡೆ ಗೊರವರ ಮೂಲ ನೆಲೆಗಳನ್ನು ಗುರುತಿಸಬಹುದಾಗಿದೆ. ಗಡಿಭಾಗದಲ್ಲಿಯೂ ಗೊರವರ ಮೂಲ ನೆಲೆಗಳಿವೆ. ಬಳ್ಳಾರಿ ಜಿಲ್ಲೆಯ 'ಮೈಲಾರ' ಎಂಬುದು ಗೊರವರ ನೆಲೆಯನ್ನು ಹೇಳುತ್ತದೆ. ಆಲೂರು ತಾಲ್ಲೂಕಿನ ಆದಿಮೀನಗೊಂದಿ (ದೇವರಗುಡ್ಡ) ಕ್ಷೇತ್ರ ಕಾಳಾಮುಖ ಗೊರವರ ಮೂಲ ನೆಲೆಯಾಗಿತ್ತು. "ಶ್ರೀಶೈಲ, ಚಿನ್ನತುಂಬಳಂ, ಆಲಂಪುರ, ಕುಕ್ಕನೂರು, ಕಲ್ಲೂರು, ಚದುರಗೊಳ, ಕುರುಗೋಡು ಇನ್ನೂ ಅನೇಕ ಸ್ಥಳಗಳಲ್ಲಿ ಗೊರವರು ವ್ಯಾಪಕವಾಗಿ ಹರಡಿಕೊಂಡಿದ್ದಾರೆ."[೧೯]

ನೇರವಾಗಿ 'ಗೊರವ' ಎಂಬ ಪದದಿಂದ ಉಲ್ಲೇಖವಾಗಿರುವ ಕೆಲವು ಸ್ಥಳನಾಮಗಳು ಶಾಸನಗಳಲ್ಲಿವೆ.

೧. ಹುಂಚದ ಕಾಳ ಭೈರವನ ಗುಡಿಯ ಮೇಲೆ ವೀರಸಾಂತರನು 'ಗೊರವರಪಳ್ಳಿ'ಯನ್ನು ಸರ್ವಜ್ಞ ಬೇಯನಿಗೆ ಕೊಟ್ಟ ವಿಷಯವಿದೆ.[೨೦]

೨. ಪಾಂಡವಪುರದ ೪೩ ನೆಯ ಶಾಸನದಲ್ಲಿ (E.C. Vol- ಪರಿಷ್ಕೃತ ಸಂಪುಟ) 'ಗೊರವರ ಕೆರೆ'ಯ ಉಲ್ಲೇಖವಿದೆ. ಮಡಿಕೇರಿಯ ೨ನೇ ಶತಮಾನದ ಶಾಸನದಲ್ಲಿ 'ಗೊರವನಹಳ್ಳಿ' ಎಂಬ ಉಲ್ಲೇಖವಿದೆ.[೨೧]

೩. ಆಂಧ್ರದ ಅನಂತಪುರ ಜಿಲ್ಲೆಯ ಹಿಂದೂಪುರ ತಾಲ್ಲೂಕಿನ ಒಂದು ಶಾಸನದಲ್ಲಿ 'ಗೊರವನಹಳ್ಳಿ' ಎಂಬ ಸ್ಥಳನಾಮದ ಉಲ್ಲೇಖವಿದೆ.[೨೨]

ಗಡಿ ಆಂಧ್ರ - ಕರ್ನಾಟಕ ಪ್ರದೇಶದಲ್ಲಿ ಗೊರವರ ಮೂಲ ನೆಲೆಗಳೆಂದು ಕಂಡುಬಂದ ಸ್ಥಳನಾಮಗಳನ್ನು ಹೀಗೆ ಪಟ್ಟಿಮಾಡಬಹುದು.

| | |
|---|---|
| ಆದಿಮೀನಗೊಂದಿಕ್ಷೇತ್ರ (ದೇವರಗುಡ್ಡ) - ALR | ಗೊರವನಹಳ್ಳಿ - HPR |
| ಆಲಂಪುರ | ಚಿನ್ನತುಂಬಳಂ - ADN |
| ಊಳೂರು - BLR | ಬಳ್ಳಾರಿ - BLR |
| ಕುರುಗೋಡು - BLR | ಬಲ್ಲೂರು - ALR |
| ಗೊಗ್ಗಯ್ಯನಮಠ - ALR (ನಿರ್ವಸಿತ) | ಮೈಲಾರ - ALR |
| ಗೊರವರ ಬಾವಿ - ALR (ನಿರ್ವಸಿತ) | ಶ್ರೀಶೈಲಂ - KUR |

### ೭.೨.೫.೧೦. ನಟುವರು

ನಟುವರ ವಸತಿ ವ್ಯವಸ್ಥೆಯ ಅಧ್ಯಯನ ಕಾಡಿನಿಂದ ಊರಿನವರೆಗೆ ನಡೆದು ಬಂದುದು ತಿಳಿಯುತ್ತದೆ. ಆರಂಭದಲ್ಲಿ ನಾಟ್ಯ ಮತ್ತು ಸಂಗೀತವನ್ನು ಆಡುತ್ತಾ ಅಲೆಮಾರಿಗಳಾದ ಇವರಿಗೆ ನಟುವರ ಹೆಂಗಸರ ಚೆಲುವು, ಸೌಂದರ್ಯ, ನಾಟ್ಯವನ್ನು ಕಂಡು ರಾಜರು ಆಶ್ರಯ ನೀಡಿದರು. ಈ ವೇಳೆಯಲ್ಲಿ ನಟುವರು ಊರುಗಳಲ್ಲಿ ವಾಸಿಸಲು ಆರಂಭಿಸಿದರು. "ಕೆಲವು ಸಲ ಇಡೀ ಊರೇ ನಟುವರದಾಗಿರುತ್ತಿತ್ತು. ನಾಟ್ಯ ಮಾಡುವವರು ಮತ್ತು ಸಂಗೀತ ನುಡಿಸುವವರು ಬೇರೆ ಬೇರೆ ಊರುಗಳಲ್ಲಿ ನೆಲೆಸುತ್ತಿದ್ದರು."[೨೩] ಪ್ರಾಚೀನ ಕಾಲದಲ್ಲಿ ಸೂಳೆಯರು, ದೇವದಾಸಿಯರು, ಗಣಿಕೆಯರು ಎಂಬ ಮೂರು ಪಂಗಡಗಳು ನಟುವರ ನಾಟ್ಯಸ್ತ್ರೀಯರಾಗಿದ್ದರು. ಸ್ಥಳನಾಮ ಅಧ್ಯಯನ ಸಂದರ್ಭದಲ್ಲಿ -ಸೂಳೆ ಮತ್ತು -ಗಣಿಕೆಯರಿಗೆ ಸಂಬಂಧಿಸಿದ ಕೆಲವು ಗ್ರಾಮಗಳು ಬಹುಮುಖ್ಯವೆನಿಸಿವೆ. ಪ್ರಾಚೀನ ಕಾಲದಲ್ಲಿ ಸೂಳೆಯರಿಗಾಗಿಯೇ ಪ್ರತ್ಯೇಕ ಕೇರಿಗಳಿದ್ದ ಬಗೆಗೆ "ಕುರುಗೋಡಿನ ಒಂದು ಶಾಸನ 'ಸೂಳೆಗೇರಿ' ಯನ್ನು ಉಲ್ಲೇಖಿಸುತ್ತದೆ."[೨೪] ಅದರಂತೆ "ದೇವಸ್ಥಾನದ ಕಾರ್ಯ ಕಲಾಪಗಳಿಗೆ ಅನುಕೂಲ ವಾಗುವಂತೆ ಅದರ ಸುತ್ತಮುತ್ತ ಗಾಯಕರು, ಸೂಳೆಯರು, ಗಣಿಕೆಯರು ತಮ್ಮ ವಾಸಸ್ಥಾನಗಳನ್ನು ನಿರ್ಮಿಸಿಕೊಳ್ಳು ತ್ತಿದ್ದ ಬಗ್ಗೆ ಶಾಸನ ತಿಳಿಸುತ್ತದೆ. ಒಟ್ಟು ಈ ಪ್ರದೇಶಕ್ಕೆ -ಪುರ, -ದೇವರಾಪುರ ಎಂದು ಶಾಸನಗಳು ಕರೆದಿವೆ."[೨೫] ರಾಜರು ಇವರಿಗೆ ಪ್ರತ್ಯೇಕ ಊರುಗಳನ್ನು ಕೊಡುಗೆಯಾಗಿ ನೀಡಿದ್ದಿದೆ. ಇದರಿಂದ ನಟುವ ಹೆಣ್ಣುಮಕ್ಕಳು ಆ ಊರಿಗೆ ಕೆರೆ, ಬಾವಿ, ಕುಂಟೆ ಮುಂತಾದುವನ್ನು ಕಟ್ಟಿಸುತ್ತಿದ್ದರು. ಅಲ್ಲದೇ ಅನೇಕ ದೇವಸ್ಥಾನಗಳಿಗೆ ದಾನವನ್ನು

ನೀಡಿದ್ದಾರೆ. ಅಲ್ಲದೇ ಕೆಲವು ಸೂಳೆಯರು ಗ್ರಾಮಗಳನ್ನು ನಿರ್ಮಿಸಿದ್ದಾರೆ. ಈ ಬಗ್ಗೆ ಕನ್ನಡ ಶಾಸನಗಳು ಮಾಹಿತಿ ನೀಡಿವೆ.

"ಸೂಳೆಕೆರೆಗಳು ಸಾಮಾನ್ಯವಾಗಿ ಜೈನ ವ್ಯಾಪಾರಿಗಳು ಕಟ್ಟಿಸಿದ ಕೆರೆಗಳಿರಬೇಕು. ಸೂಳೆ ಬಸದಿ < ಲೋಕ ಜಿನಾಲಯ' ಎಂಬುದು ಶ್ರೀವಿಜಯ ಸೇನಾನಿ ಕಟ್ಟಿಸಿದ್ದಾನೆ. ಶೈವರು ಈ ಪದವನ್ನು ದೇವಸ್ಥಾನಾದಿಗಳಿಗೆ ಬಳಸಿಲ್ಲ. ಶೈವೇತರ (ಜೈನ, ಬೌದ್ಧ)ರು ಬಳಸಿದ್ದಾರೆ. ಶೈವೇತರ ವ್ಯಾಪಾರಿಗಳಿಗೆ -ಸೂಳೆ' ಎಂಬ ಅಡ್ಡ ಹೆಸರು ಇತ್ತೇ? ಎಂದು ವಿದ್ವಾಂಸರು ಸಂದೇಹ ವ್ಯಕ್ತ ಪಡಿಸುತ್ತಾರೆ."[೨೫] ಆದರೆ - ಸೂಳ್' ಎಂಬ ಪದ ಒಳ್ಳೆಯ, ಸರದಿ, ಪ್ರತಿಜ್ಞೆ ಎಂಬ ಅರ್ಥವನ್ನೂ ನೀಡುತ್ತದೆ. ಹೆಚ್ಚಾಗಿ ಸೂಳೆ ಎಂಬಲ್ಲಿ ಪದಾಂತ್ಯ -ಎ' ಕಾರವಾಗಿರುವ ಹಾಗೂ ಈ ಪದದಿಂದ ಆರಂಭವಾಗುವ ಊರುಗಳಲ್ಲಿ ಸೂಳೆಯರ ಬಗೆಗೆ ಮಾಹಿತಿಯು ದೊರೆಯುತ್ತದೆ. ಅಂತಹ ಕೆಲವು ಸ್ಥಳನಾಮಗಳು ಗಡಿಭಾಗದಲ್ಲಿವೆ.

ಗಣಿಕೆಹಾಳ್ - BLY

ಪ್ರೊದ್ದುಟೂರು - (ಪೊದ್ದಿಟೂರು) - ಪೊದ್ದಿ ಎಂಬ ಗಣಿಕಾಸ್ತ್ರೀಯಿಂದ ಬಂದದ್ದು."[೨೬]

ಸೂಳೆಬಾವಿ - ALR (ಸುಳುವಾಯಿ)

ಸೂಳೆಕೆರೆ - ADN

ಸೂಳೆಬಾವಿ ಮತ್ತು ಸೂಳೆಕೆರೆಗಳನ್ನು ಸುಳಿಬಾವಿ, ಸುಳಿಕೆರೆ ಎಂಬ ಭೌಗೋಳಿಕ ನಿರ್ಮಾಣವಾಚಿಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಸಾಮಾನ್ಯವಾಗಿ ಕೆರೆ, ಬಾವಿಗಳಲ್ಲಿ ನೀರು ಹರಿಯುವುದಿಲ್ಲ. ನಿಂತ ನೀರಿನಲ್ಲಿ ಸುಳಿ ಇರಲಾರದು ಎಂಬುದನ್ನು ಗಮನಿಸಬಹುದು.

ಸೂಳೆ' ಎಂಬ ಪದ ಸಾಮಾಜಿಕವಾಗಿ ಪ್ರತಿಬಂಧಿತವಾದಂತಹ ಪದ, ಅಥವಾ ಆ ಹೆಸರು ಕೆಲವರಿಗೆ ಮುಜುಗರ ಉಂಟುಮಾಡುತ್ತದೆ. ಅದು ವ್ಯವಹಾರಿಕ ವಲಯಕ್ಕೆ ಬಂದು, ಅದೂ ಗ್ರಾಮನಾಮಗಳಿಗೆ ಹೆಸರಾಗಲು ಸಾಧ್ಯವೆ ಎಂಬ ಅಭಿಪ್ರಾಯವನ್ನು ಕೆಲವು ವಿದ್ವಾಂಸರು ವ್ಯಕ್ತಪಡಿಸುತ್ತಾರೆ. ಸೂಳೆಯರಿಗೆ ಒಂದು ಕಾಲದಲ್ಲಿ ಸಮಾಜದಲ್ಲಿ ಅತ್ಯಂತ ಗೌರವಯುತ ಮೌಲ್ಯವಿತ್ತು. ಅಲ್ಲದೇ ಸೂಳೆಗೇರಿಗಳನ್ನು ಶಾಸನಗಳು ವರ್ಣಿಸಿವೆ. ಅವರಿಗೆ ರಾಜಾಶ್ರಯವೂ ದೊರೆತ ಬಗ್ಗೆ ಉಲ್ಲೇಖಗಳಿವೆ. ಗ್ರಾಮಗಳನ್ನು ದತ್ತಿಯಾಗಿ ಸೂಳೆಯರಿಗೆ ನೀಡಿದ ಬಗ್ಗೆಯೂ ಈ ಹಿಂದೆ ವಿವರಿಸಲಾಗಿದೆ. ಕಾರಣ ಸೂಳೆಯರೂ ತಮ್ಮ ವೃತ್ತಿಯಿಂದ ಗಳಿಸಿದ ಆದಾಯದಿಂದ ಅನೇಕ ಲೋಕೋಪಯೋಗಿ ಕಾರ್ಯಗಳನ್ನು ಮಾಡಿದ್ದುಂಟು. ಅಂತೆಯೇ ಕೆಲವು ಗ್ರಾಮಗಳನ್ನು ನಿರ್ಮಿಸಿದರೆಂಬುದರಲ್ಲಿ ಯಾವ ಸಂದೇಹಗಳೂ ಇಲ್ಲವೆನ್ನಬಹುದು. ಆದರೂ -ಗಣಿಕೆ' ಎಂಬ ನಿರ್ದಿಷ್ಟಕ್ಕೆ -ಹಾಳ್' ಎಂಬ ವಾರ್ಗಿಕ ಇರುವುದರಿಂದ, ಬಹುಶಃ ಭೂಮಿಯ ಲಕ್ಷಣವನ್ನು ಹೇಳುವ ಈ ವಾರ್ಗಿಕಕ್ಕೆ -ಗಣಿಕೆ ಎಂಬುದು ಸಸ್ಯವಾಚಿಯಾಗಿ ತೋರುವ ಸಾಧ್ಯತೆಗಳಿವೆ. ಕಾರಣ ಇದನ್ನು ಪ್ರಕೃತಿವಾಚಿಯಾಗಿಯೂ ನೋಡಲು ಸಾಧ್ಯವಿದೆ. (ಗಣಿಕೆ - ಗೆಣ್ಣು, ಗಂಟು, ಸೂಳೆ, ದಂಟಿನ ಒಂದು ಭಾಗ, ಕ.ನಿ. ಸಂ. ೨, ೨೪೦೫)

## ೭.೨.೫.೧೧. ಲಂಬಾಣಿಗಳು

ಲಂಬಾಣಿ ಸಮುದಾಯ ವಾಸಿಸುವ ಪ್ರದೇಶಕ್ಕೆ ಸಾಮಾನ್ಯವಾಗಿ -ತಾಂಡಾ, -ತಾಂಡೆ ಎಂದು ಕರೆಯುತ್ತಾರೆ. ಲಂಬಾಣಿಗರು ಇದನ್ನು -ತಾಂಡೋ ಎಂದು ಕರೆಯುತ್ತಾರೆ. ಇದು ಲಂಬಾಣಿಗರಿಗೆ ಸಂಕೇತ ಸೂಚಕವಾಗಿರುವ ಒಂದು ವಿಶಿಷ್ಟಪದ. ಬುಡಕಟ್ಟು ಜನಗಳಾದ ಇವರು ಸಾಮಾನ್ಯವಾಗಿ ಕಾಡು, ಕಣಿವೆ, ಬೆಟ್ಟ, ಗುಡ್ಡಗಳಿದ್ದ ಕಡೆಯಲ್ಲಿ ವಾಸಿಸುತ್ತಾರೆ. ಪೂರ್ವದಲ್ಲಿ ಅಲೆಮಾರಿಗಳಾಗಿದ್ದ ಇವರು ವ್ಯಾಪಾರ ನಿಮಿತ್ತ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಗುಂಪುಗಳಲ್ಲಿ ಸಂಚರಿಸುತ್ತಿದ್ದರು. ಕಾಲಾಂತರದಲ್ಲಿ ಅವರು ತಮ್ಮ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯೊಂದಿಗೆ ಊರುಗಳಿಂದ ದೂರದಲ್ಲಿ ಪ್ರತ್ಯೇಕ ತಾಂಡಗಳನ್ನು ನಿರ್ಮಿಸಿಕೊಂಡು ನೆಲೆಸಿದರು. ನಗರ, ಗ್ರಾಮ ಸಂಸ್ಕೃತಿಗಳಲ್ಲಿ ಬೆರೆಯದ ಇವರು ವಿಶಿಷ್ಟ ಸಂಸ್ಕೃತಿಯ ರಕ್ಷಣೆಗೆಂದು ದೂರ ಉಳಿದಿರಬಹುದು. ಪ್ರತ್ಯೇಕವಾದ ಸಮೂಹ, ಗುಂಪುಗಳಲ್ಲಿ ವಾಸಿಸುವ ಇವರ ತಾಂಡಗಳನ್ನು ಪಕ್ಕದ ಊರುಗಳ ಹೆಸರಿನಿಂದಲೂ ಕರೆಯುತ್ತಾರೆ. ಲಂಬಾಣಿಗರು ತಮ್ಮ - ತಾಂಡೋಗಳಿಗೆ ತಮ್ಮದೇ ಆದ ಅಧಿಕೃತ ಹೆಸರುಗಳನ್ನು ಇಟ್ಟುಕೊಂಡಿರುವುದು ಅವರ ಸಂಸ್ಕೃತಿ, ಪರಂಪರೆಯ ಬಗೆಗೆ ಅವರಿಗಿರುವ ಅಭಿಮಾನ ವ್ಯಕ್ತವಾಗುತ್ತದೆ. ಇದು ಆ ಸಮಾಜದ ಆಂತರಿಕ ವ್ಯವಸ್ಥೆಯಾಗಿದ್ದು, ಕೇವಲ ಲಂಬಾಣಿಗರು ಮಾತ್ರ ಈ ವ್ಯವಸ್ಥೆಯನ್ನು ಅರಿತವರಾಗಿರುತ್ತಾರೆ. "ಲಂಬಾಣಿಗರು ತಮ್ಮನ್ನು ತಾವು ಅಭಿಮಾನದಿಂದ 'ಗೋರಮಾಟಿ' ಗಳೆಂದು ಕರೆದುಕೊಳ್ಳುವ ಹಾಗೆ, ತಮ್ಮ ತಾಂಡಗಳಿಗೆ ತಮ್ಮದೇ ಆದ ಅಧಿಕೃತ ಹೆಸರುಗಳಿಂದ ಕರೆಯುತ್ತಾರೆ."[೨೮] ಅವರ ತಾಂಡಗಳಿಗೆ ಕೆಲವು ಸ್ವತಂತ್ರವಾದಂತಹ ಹೆಸರುಗಳೂ ಇವೆ.

"ಲಂಬಾಣಿಗರು ತಮ್ಮ ಆಂತರಿಕ ವ್ಯವಹಾರಕ್ಕಾಗಿ ತಾಂಡಗಳಿಗೆ -ನಾಯಕ್ ' -ಭಗತ್ 'ರ ಹೆಸರುಗಳನ್ನೂ ಸಂಕೇತವಾಗಿಟ್ಟುಕೊಳ್ಳುತ್ತಾರೆ."[೨೯] ಹೀಗಾಗಿ ತಾಂಡೆಗಳಿಗೆ ಒಂದೊಂದಕ್ಕೆ ಎರಡೆರಡು ಹೆಸರುಗಳಿರುವುದು ತಿಳಿಯುತ್ತದೆ.

ಆಲೂರಿನ ಹೊಸಪೇಟೆ ತಾಂಡಕ್ಕೆ ಗಂಗ್ಯಾನಾಯ್ಕನ ತಾಂಡ

ಬಳ್ಳಾರಿಯ ಹೊನ್ನಾಳಿ ತಾಂಡಕ್ಕೆ ಜಾಲೂಬಾಯಿ ತಾಂಡ

ಸಾಮಾನ್ಯವಾಗಿ ಈ ಸಮುದಾಯದವರು ಅಧಿಕೃತವಾದ ಸ್ಥಳನಾಮವನ್ನು ತಮ್ಮ ನೆಲೆಗಳಿಗೆ ಕೊಡಲಾರರು. "ಆದರೆ ಹೊರಗೆ ವ್ಯಕ್ತವಾಗಲಾರದ ಇವರ ಸ್ವಾಭಿಮಾನ, ಆತ್ಮವಿಶ್ವಾಸಗಳು ತಮ್ಮ ಸಂಸ್ಕೃತಿಯ ಸಂಗೋಪನೆಯಲ್ಲಿ ಅವರಿಗಿರುವ ಸಹಜ ಕಳಕಳಿಗಳು ಲಂಬಾಣಿಗಳು ತಾವೇ ತಮ್ಮ ತಾಂಡಗಳಿಗೆ ಬೇರೆ ಹೆಸರುಗಳನ್ನಿಟ್ಟು ವ್ಯವಹರಿಸುವ ರೂಪದಲ್ಲಿ ವ್ಯಕ್ತವಾಗುತ್ತದೆ."[೩೦] ಲಂಬಾಣಿಗರ ನೆಲೆಗಳಿಗೆ ನಿರ್ದಿಷ್ಟವಾಗಿ ಆಯಾ ಊರುಗಳು ಅಥವಾ ವ್ಯಕ್ತಿ ಇದ್ದು, ವಾರ್ಗಿಕದಲ್ಲಿ ಮಾತ್ರ ದಕ್ಷಿಣಭಾರತದಲ್ಲಿ -ತಾಂಡ ಎಂಬುದು ಇರುತ್ತದೆ. ತಾಂಡ ಎಂಬ ಪದ ಇವರ ವಲಸೆಯನ್ನು ಸೂಚಿಸುತ್ತದೆ.[೩೧]

## ೭.೩. ಅಲೆಮಾರಿ (ತಾತ್ಕಾಲಿಕ) ಸಮುದಾಯಗಳ ಸ್ಥಳನಾಮಗಳು

ಭಾರತದಲ್ಲಿ ಅನೇಕ ಬುಡಕಟ್ಟು ಜನಸಮುದಾಯಗಳಿವೆ. ಈ ಬುಡಕಟ್ಟು ಜನಾಂಗಗಳಲ್ಲಿ ಕೆಲವು ಅಲೆಮಾರಿ ಜನಾಂಗಗಳಿವೆ. ಇಂತಹ ಕೆಲವು ಆದಿವಾಸಿ ಹಾಗೂ ಅಲೆಮಾರಿ ಜನಾಂಗಗಳು ತಾತ್ಕಾಲಿಕವಾಗಿ ಮಾತ್ರ ಒಂದೆಡೆ

ನೆಲೆಸುತ್ತವೆ. ಈ ತಾತ್ಕಾಲಿಕವಾದ ನೆಲೆಯೂ ಕೂಡ ಗ್ರಾಮದ ಸ್ವರೂಪ ಪಡೆಯುತ್ತದೆ.[೨೦] ಈರೀತಿಯ ಅಸ್ತಿತ್ವವನ್ನು ಪಡೆದ ನೆಲೆಸುವಿಕೆಗೂ ಒಂದೊಂದು ಹೆಸರು ನಿರ್ದೇಶಿತವಾಗಿರುತ್ತದೆ. ಮುಖ್ಯವಾಗಿ ಈ ಬಗೆಯ ನೆಲೆಸುವಿಕೆಯು ಕೆಲವೇ ಮತ ಪಂಥದ ಜನರಿಗೆ ಇರುತ್ತದೆ. ಈ ಮೂಲಕ ಇವರು ನೆಲೆಸಿದ ಸ್ಥಳದ ಗುರುತಿಸುವಿಕೆಯನ್ನು ಶಾಶ್ವತವಾಗಿ ಅಲ್ಲಿ ನೆಲೆಸಿದ ಸಮುದಾಯಗಳು ಅವರವರ (ಅಲೆಮಾರಿಗಳ) ಹೆಸರಿನೊಂದಿಗೆ, ಇಲ್ಲವೇ ಅವರ ವೃತ್ತಿಯೊಂದಿಗೆ ಒಂದು ಹೆಸರನ್ನು ನೀಡಿಕೊಂಡು ಬಳಸುತ್ತಾರೆ. ಇವು ಶಾಶ್ವತವಾಗಿ ಹಾಗೆಯೇ ಕರೆಯಲ್ಪಡುತ್ತವೆ. ಅಲೆಮಾರಿ ಸಮುದಾಯ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಕೆಲವೇ ಸಮಯ ವಾಸಿಸಿದರೂ, ಅಲ್ಲಿನ ಹೆಸರು ಮಾತ್ರ ಗಟ್ಟಿಯಾಗಿರುತ್ತದೆ. ಎಷ್ಟೋ ಹಳ್ಳಿಗಳಲ್ಲಿ ಅಲೆಮಾರಿ ಸಮುದಾಯವು ಶಾಶ್ವತವಾಗಿಯೂ ಉಳಿದುಕೊಂಡು ತಮ್ಮ ಸಮುದಾಯದ ಹೆಸರಿನ ಸ್ಥಳವನ್ನು ಉಳಿಸಿಕೊಂಡಿರುವುದು ಗಡಿಪ್ರದೇಶದಲ್ಲಿ ಕಂಡು ಬರುತ್ತದೆ. ಅಲೆಮಾರಿ ಗ್ರಾಮಸಮುದಾಯವು ಗಡಿಪ್ರದೇಶದ ಗುಂಟ ಜೀವಿಸುತ್ತಿರುವುದು ತಿಳಿಯುತ್ತದೆ. ಗಡಿಭಾಗದ ಈ ಅಲೆಮಾರಿ ಸಮುದಾಯಗಳ ಭಾಷೆ ತೆಲುಗು. ಕನ್ನಡವನ್ನೂ ವ್ಯವಹಾರಿಕವಾಗಿ ಬಳಸುತ್ತಾರೆ. ಅವರು ತಾವಿದ್ದಷ್ಟು ಕಾಲ 'ಬಿಡಾರ' ಹೂಡುತ್ತಾರೆ. ನಂತರ ಮತ್ತೊಂದು ಕಡೆ ಹೋಗುತ್ತಾರೆ. ಅದಕ್ಕೆ ಅಲ್ಲಿನ ಸ್ಥಳೀಯರು ಅಂತಹ ಸಮುದಾಯದ ಹೆಸರುಗಳಿಂದಲೇ ಆ ಸ್ಥಳವನ್ನು ಗುರುತಿಸುತ್ತಾರೆ.

| | | |
|---|---|---|
| ಕೊಂಡಯ್ಯನೋರುಹಟ್ಟಿ | ಡೊಂಬಾರಮಾಳಿ | ಬಿಂಗ್ಯಾರ ದಿನ್ನೆ |
| ಜೋಗ್ಯಾರ ಬಯಲು | ಬಿಂಗ್ಯಾರ ಕಟ್ಟೆ | |

ಇಲ್ಲಿ ಕೆಲವು ಅಲೆಮಾರಿ ಸಮುದಾಯಗಳ ನೆಲೆಸುವಿಕೆಯಿಂದ ಬಂದಂತಹ ಸ್ಥಳನಾಮಗಳನ್ನು ಚರ್ಚಿಸಲಾಗಿದೆ.

೭.೩.೧. ಡೊಂಬರು : (ದೊಂಬರು)

ಡೊಂಬಗ ನೆಲಿ ಇಲ್ಲ, ಡಂಬಿಗೆ ಬೆಲಿ ಇಲ್ಲ - ಇದು ಡೊಂಬರಿಗೆ ಸಂಬಂಧಿಸಿದ ಗಾದೆ. ಈ ಗಾದೆಯು ಡೊಂಬರಿಗೆ ಯಾವುದೇ ನಿರ್ದಿಷ್ಟ ವಾಸ್ತವ್ಯ ಇಲ್ಲವೆಂಬುದನ್ನು ವಿವರಿಸುತ್ತದೆ. ಈ ಸಮುದಾಯ ಯಾವುದೇ ಪ್ರದೇಶದಲ್ಲಿ ಸ್ಥಿರವಾಗಿ ನಿಲ್ಲದೇ ಅಲೆಮಾರಿಗಳಾಗಿ ಬದುಕುತ್ತ ಬಂದು ಭೂಪ್ರದೇಶದ ವಿವಿಧ ಭೌಗೋಳಿಕ ಪರಿಸರದಲ್ಲಿ ಕಾಣಿಸಿಕೊಳ್ಳುತ್ತಾರೆ. ಅನುಕೂಲ ವಾತಾವರಣ, ಪ್ರದೇಶವನ್ನು ನೋಡಿ ನೆಲೆನಿಂತು ಗುಡಿಸಲುಗಳನ್ನು ಕಟ್ಟಿಕೊಂಡರು. ಹಟ್ಟಿ, ಕೆರೆಕಟ್ಟೆಗಳನ್ನು ರೂಪಿಸಿಕೊಂಡರು. ಇದರಲ್ಲಿಯೇ ಕೆಲವು ಗುಂಪು ಅಲೆಮಾರಿಯಾಗಿಯೇ ಉಳಿಯಿತು. ಹೋದೆಡೆಯಲ್ಲಾ 'ಸಂಚಾರಿಗುಡಿಸಲು'ಗಳನ್ನು ನಿರ್ಮಿಸಿಕೊಂಡರು. "ಸ್ಥಳೀಕೃತ ಗುಂಪುಗಳಲ್ಲಿ ಬಹುಪಾಲು ಬುಡಕಟ್ಟಿನವರೇ."[೨೨]

೭.೩.೨. ದೊಂಬಲದಿನ್ನೆ

ಆದವಾನಿ ತಾಲ್ಲೂಕಿನ ಒಂದು ಸ್ಥಳನಾಮ. ಮಂತ್ರ, ಮಾಟ ವಿದ್ಯೆಗಳಲ್ಲಿ ಪರಿಣತರಾದ ಡೊಂಬರ ಸಮುದಾಯದ ಕುರುಹಾಗಿ ಈ ಊರು ಉಳಿದಿದೆ. ಇದಕ್ಕೆ ಸ್ಥಳೀಯ ಐತಿಹ್ಯ ಹೀಗಿದೆ. "ಕೆಲವು ಪ್ರದರ್ಶಕ ಕಲೆಗಳನ್ನು ಕಲಿತುಕೊಂಡ ಡೊಂಬರವನು ಒಂದು ಊರಿಗೆ ಬಂದು, ಅಲ್ಲಿ ನೆರೆದಿದ್ದ ಜನರನ್ನು ಕುರಿತು ನಾನು

ಮೇಲಕ್ಕೆ ಹಾರಬಲ್ಲೆ ಎಂದನಂತೆ. ನೀನು ಹಾರಿದಷ್ಟು ಭೂಮಿ ನಿನಗೆ ಕೊಡುತ್ತೇವೆ ಎಂದು ಅವರು ಹೇಳಿದರು. ತನ್ನ ಕಣ್ಕಟ್ಟು ವಿದ್ಯೆಯಿಂದ ಡೊಂಬರವನು ಒಂದು ಗ್ರಾಮದಷ್ಟು ಭೂಮಿಯ ಗಾತ್ರವನ್ನು ಹಾರಿ ಜಿಗಿದನು. ಊರಿನವರು ಮಾತಿನಂತೆ ಆ ಭೂಮಿಯನ್ನು ದಾನವಾಗಿ ನೀಡಿದರು. ಅಂದಿನಿಂದ ಅವನು ತನ್ನ ಪರಿವಾರವನ್ನೆಲ್ಲಾ ಅಲ್ಲಿಗೆ ಕರೆತಂದು ಬೀಡು ಬಿಟ್ಟಿದ್ದಕ್ಕಾಗಿ 'ದೊಂಬಲದಿನ್ನೆ' ಎಂದು ಹೆಸರಾಯಿತಂತೆ. ಆ ಮುಂಚೆ ಈ ಊರಿಗೆ ಹನುವನಾಳು ಎಂದಿದ್ದಿತಂತೆ."[೩೪] ಹೀಗೆ ವಿವಿಧ ವ್ಯಕ್ತಿ ಮತ್ತು ವೃಂದಗಳ ಶೌರ್ಯ ಸಾಹಸಕ್ಕೆ ಸಂಬಂಧಿಸಿದ ಸ್ಥಳೀಯ ಐತಿಹ್ಯಗಳು ಪುರಾಣ, ದಂತಕಥೆಗಳು ನಾಡಿನುದ್ದಕ್ಕೂ ಇರುತ್ತವೆ. ಇಂಥವುಗಳಲ್ಲಿ ವಾಸ್ತವದ ಜೊತೆಗೆ ಕಲ್ಪನೆಯೂ ಇದ್ದಿರಬಹುದು. ಆದರೆ ಕೆಲವು ನಿಜ ಸಂಗತಿಗಳಿಂದ ಸಮುದಾಯಗಳ ಸಾಮಾಜಿಕ, ಸಾಂಸ್ಕೃತಿಕ ಚಿತ್ರಣ ದೊರೆಯುತ್ತದೆ. ಕರ್ನಾಟಕದಲ್ಲಿಯೂ 'ಡೊಂಬರವಾಡಿ' ಮುಂತಾದ ಊರುಗಳಿವೆ. ಆಂಧ್ರ ಮೂಲದವರಾದ ಇವರು ವಿಜಯನಗರ ಕಾಲದಲ್ಲಿ ನೀಡುತ್ತಿದ್ದ ಪ್ರೋತ್ಸಾಹದಿಂದ ಕನ್ನಡನಾಡಿಗೆ ವಲಸೆ ಬಂದರು. "ಡೊಂಬರಿಗೆ ಕೆಲವು ಗ್ರಾಮಗಳನ್ನು ದಾನವಾಗಿ ನೀಡಿದ ಉಲ್ಲೇಖವಿದೆ."[೩೫] ಹೆಚ್ಚಾಗಿ ತೆಲುಗು ಭಾಷಿಕ ಪ್ರದೇಶಗಳಿಂದ ಕನ್ನಡನಾಡಿಗೆ ವಲಸೆಬಂದ ಡೊಂಬರು 'ಗ್ರಾಮದಾನ'ವನ್ನು ಪಡೆದು ತಮ್ಮಕುಲದ ಹೆಸರನ್ನು, ತಮ್ಮ ವ್ಯಕ್ತಿನಾಮಗಳನ್ನು ಊರಿಗೆ ಇಟ್ಟುಕೊಂಡಂತೆ ಉದಾಹರಣೆಗಳು ಸಿಗುತ್ತವೆ. ಹೊನ್ನಿಹಾಳ್ - ಹೊನ್ನಿ ಎಂಬುವವಳು ಡೊಂಬರಲ್ಲಿ ಒಬ್ಬ ವಿಶೇಷ ನೃತ್ಯಗಾತಿ. "ಡೊಂಬರು ದಾನವಾಗಿ ಬಂದ ಅಥವಾ ತಾವೇ ಒಂದು ಸ್ಥಳದಲ್ಲಿ ನೆಲೆಯನ್ನು ಊರಿ ತಮ್ಮ ಹೆಸರನ್ನು ಆ ಗ್ರಾಮಕ್ಕೆ ಕರೆಯುವಾಗ ಆ ಸ್ಥಳದ ಬಗ್ಗೆ ಗಂಭೀರವಾಗಿ ಪರಿಶೀಲಿಸುತ್ತಿದ್ದುದು ಗುರುತಿಸಲಾಗಿದೆ."[೩೬] ಶುಭವೆಂದು ಕಂಡು ಬಂದಲ್ಲಿ ಮಾತ್ರ ಆ ಗ್ರಾಮಕ್ಕೆ ಹೆಸರು ನೀಡುತ್ತಿದುದು ವಿಶೇಷ.

ನಂಜುಂಡ ಕವಿಯ 'ಕುಮಾರರಾಮನ ಸಾಂಗತ್ಯ' ಕಾವ್ಯದಲ್ಲಿ ಕುಮಾರರಾಮನ ಶೌರ್ಯ, ಸಾಹಸಗಳನ್ನು ಸೂಚಿಸುವ ಕೆಲವು ಸ್ಥಳಗಳನ್ನು ವಿವರಿಸಲಾಗಿದೆ. ಅವುಗಳೆಂದರೆ

ಕಾಟಣ್ಣನ ಕೂಪ
ಟಗರಿನ ಬೈಲು
ಬೊಲ್ಲನ ಬಂಡೆ
ಹಂಪಯ್ಯನಕಲ್ಲು ಮುಂತಾದ ಸ್ಥಳ

ವಿಶೇಷಣಗಳು ಡೊಂಬ ಸಮುದಾಯದ ವಿವಿಧ ಶಕ್ತಿಸಾಧನಗಳಾಗಿದ್ದವೇ? ಮತ್ತು ಕುಮಾರರಾಮನು ಡೊಂಬರ ಚೆನ್ನಿಯನ್ನು, ರತ್ನಾಜಿಯನ್ನು ಮನಸೋತು ಪ್ರೀತಿಸಿದ್ದರಿಂದ ಡೊಂಬರಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಈ ಸ್ಥಳಗಳಿಗೆ ಹೆಸರು ನೀಡಿರಬಹುದೇ? ತಿಳಿಯಬೇಕಾಗಿದೆ. ಹೀಗೆ ಸ್ಥಳನಾಮಗಳು ಡೊಂಬ ಸಮುದಾಯದ ಜೀವನ ಸಂಸ್ಕೃತಿಯೆಡೆಗೆ ಗಮನ ಸೆಳೆಯುತ್ತವೆ.

### ೭.೩.೩. ಹೆಳವರು

ಹೆಳವರು ಅಲೆಮಾರಿ ಗುಂಪಾಗಿದ್ದು, ತಮ್ಮ ವೃತ್ತಿಯ ಕಾರಣದಿಂದಾಗಿ ವರ್ಷದುದ್ದಕ್ಕೂ ಅಲೆಯುತ್ತಾರೆ. ಹೆಳವರು ಅಲೆಮಾರಿ ಗುಂಪಾಗಿದ್ದು, ತಮ್ಮ ವೃತ್ತಿಯ ಕಾರಣದಿಂದಾಗಿ ವರ್ಷದುದ್ದಕ್ಕೂ ಅಲೆಯುತ್ತಾರೆ. ಒಕ್ಕಲುಗಳಿದ್ದ ಹಳ್ಳಿಗಳಿಗೆ ಹೋಗಿ, ಊರ ಅಂಚಿನಲ್ಲಿ ತಮ್ಮ ಚಕ್ಕಡಿಯೊಂದಿಗೆ ತಂಡೋಪ ತಂಡವಾಗಿ

ಚಕ್ಕಡಿಗಳನ್ನು ನಿಲ್ಲಿಸಿ ಕೆಲವು ದಿನಗಳ ಕಾಲ ಇದ್ದು ಮುಂದೆ ಸಾಗುತ್ತಾರೆ. ಆಂಧ್ರದಲ್ಲಿಯೂ ಈ ಸಮುದಾಯವಿದೆ. ತೆಲುಗಿನಲ್ಲಿ 'ಪಿಚ್ಚಗುಂಟ್ಲೋಳ್ಳು' ಎಂದು ಕರೆಯುತ್ತಾರೆ. ಇವರ ಭಾಷೆ ತೆಲುಗು. ಬಳ್ಳಾರಿ, ರಾಯಚೂರು, ಗುಂತಕಲ್, ಅನಂತಪುರ, ಧಡೇಕಲ್, ಆದವಾನಿಯಲ್ಲಿ ವಾಸಿಸುತ್ತಾರೆ. ದಕ್ಷಿಣ ಮತ್ತು ಉತ್ತರ ಕರ್ನಾಟಕದಲ್ಲಿಯೂ ಇದ್ದಾರೆ.

ಹೆಳವರು ವಾಸಿಸುವ ಸ್ಥಳಗಳನ್ನು ಹಟ್ಟಿ, ಹುಂಡಿ, ಪಾಳ್ಯಗಳೆಂದು ಕರೆಯುತ್ತಾರೆ.[೩೭] ಸಾಮಾನ್ಯವಾಗಿ ಈ ವಾರ್ಗಿಕಗಳು ದಕ್ಷಿಣಕರ್ನಾಟಕದ ಹೆಳವರು ವಾಸಿಸುವ ಸ್ಥಳಗಳಿಗೆ ಅನ್ವಯಿಸುತ್ತವೆ. ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿ ಹೆಚ್ಚಾಗಿ ಹಳ್ಳಿ, ಪಲ್ಲಿ, ಹಟ್ಟಿ ಎಂಬ ವಾರ್ಗಿಕಗಳೊಂದಿಗೆ ಈ ಸಮುದಾಯದ ನೆಲೆಗಳಿರುವುದು ತಿಳಿಯುತ್ತದೆ. ಇವರು ಹಳ್ಳಿ - ನಗರಗಳಲ್ಲಿಯೂ ವಾಸಿಸುತ್ತಿದ್ದರೂ ಇತರ ಜನಪದ ಗುಂಪುಗಳೊಡನೆ ಕೂಡಿರದೇ ಪ್ರತ್ಯೇಕವಾಗಿಯೇ ಇದ್ದಾರೆ. ದಕ್ಷಿಣ ಕರ್ನಾಟಕದಲ್ಲಿ,

| | |
|---|---|
| ಪಿಚಗುಂಟ್ರಹಳ್ಳಿ | ಹೆಳವರ ಪಾಳ್ಯ |
| ಪಿಚ್ಚಗುಂಟ್ಲಹಳ್ಳಿ | ಹೆಳವನಕಟ್ಟೆ |
| ಪೆಳವನಹಳ್ಳಿ | ಹೆಳವನಹಳ್ಳಿ |

ಹೆಳವರಹುಂಡಿ ಎಂಬ ಸ್ಥಳನಾಮಗಳಿವೆ. ಈ ಸಮುದಾಯ ಆಂಧ್ರದ ಗಡಿಭಾಗದಲ್ಲಿ ವಾಸಿಸುತ್ತಿದೆಯಾದರೂ ಇವರಿಗೆ ಸಂಬಂಧಿಸಿ ಈ ಭಾಗದಲ್ಲಿ ಸ್ಥಳನಾಮವಿಲ್ಲದಿರುವುದು ಕಂಡುಬರುತ್ತದೆ. ಮೇಲಿನ ಉದಾಹರಣೆಗಳನ್ನು ಮಾದರಿಗಾಗಿ ನೀಡಲಾಗಿದೆ.

**೭.೩.೪. ಸುಡುಗಾಡು ಸಿದ್ಧರು**

ಆಂಧ್ರಮೂಲದ ಇವರು ಅಲೆಮಾರಿಗಳಾಗಿ ಕರ್ನಾಟಕದ ಕೆಲವು ಪ್ರದೇಶಗಳಲ್ಲಿಯೂ ವಾಸಿಸುತ್ತಿದ್ದಾರೆ. ಸಾಮಾನ್ಯವಾಗಿ ಊರಿನ ಹೊರಗೆ ತಮ್ಮದೇ ಆದ ಜನ ಸಮುದಾಯದಲ್ಲಿ ಇವರು ವಾಸಿಸುತ್ತಾರೆ. "ಸುಡುಗಾಡು ಸಿದ್ಧರ ಯಾವುದೇ ಹಟ್ಟಿಗೂ ಪ್ರತ್ಯೇಕ ಹೆಸರುಗಳು ಇರುವುದು ಕಾಣಿಸದು."[೩೮] ಸಾಮಾನ್ಯವಾಗಿ ಆಯಾ ಊರುಗಳ ಪಕ್ಕದಲ್ಲಿಯೇ ಬೀಡು ಬಿಟ್ಟಿರುವುದರಿಂದ ಊರುಗಳಿಗಿರುವ ಹೆಸರುಗಳಿಂದಲೇ ಅವರು ಪರಿಗಣಿಸಲ್ಪಡುತ್ತಾರೆ. ಆಂಧ್ರದ ಗಡಿಯಲ್ಲಿರುವ 'ಸಿದ್ದಾಪುರ - ALR' ಸುಡುಗಾಡು ಸಿದ್ಧರ ಒಬ್ಬನಾಯಕನ ಹೆಸರಿನಿಂದ ಕರೆಯಲ್ಪಡುತ್ತದೆ. "ಸಿದ್ಧ' ಎಂಬ ಒಬ್ಬ ಕಾಡುಪಾಪರದವನು ಸುಡುಗಾಡು ಕಾಯ್ದು ವೇಷಹಾಕಿ ಜೀವನ ಮಾಡುತ್ತಿದ್ದ. ತನ್ನ ಅಲ್ಪ ಮಾಟ ವಿದ್ಯೆಯಿಂದ ಜನರ ರೋಗ ರುಜಿನವನ್ನು ಕಳೆಯುತ್ತಿದ್ದ. ಇದರಿಂದ ಇವನು ವಾಸಿಸಿದ್ದ ಸ್ಥಳ ಸಿದ್ಧಾಪುರ ಎಂದು ಹೆಸರಾಯಿತು"[೩೯] ಎಂಬುದೊಂದು ಕಥೆಯಿದೆ. ಸಿದ್ಧ ಎಂಬ ಪದಾರಂಭವಾಗುವ ಅನೇಕ ಸ್ಥಳನಾಮಗಳಿವೆ. ಬಹುಶ: ಇವೆಲ್ಲವೂ ಈ ಸಮುದಾಯದ ಕುರುಹುಗಳೆಂದು ಹೇಳಲಾಗದು.

**೭.೩.೫. ಹಗಲು ವೇಷದವರು**

ಇವರು ತೆಲುಗು ಮೂಲದವರು. ಬಹುಪಾಲು ಅಲೆಮಾರಿಗಳಾದರೂ ವರ್ಷದ ಒಂದೆರೆಡು ತಿಂಗಳು ಒಂದು ಊರಿನಲ್ಲಿ ನೆಲೆ ನಿಲ್ಲುವವರೂ ಆಗಿದ್ದಾರೆ.[೪೦] ಹೀಗೆ ಅವರು ನೆಲೆ ನಿಲ್ಲುವುದು ಪ್ರತಿವರ್ಷವೂ ಒಂದೇ ಊರಿನಲ್ಲಿ. ಇಂತಹ ಊರನ್ನು ಅವರು ತಮ್ಮ ಸ್ವಂತ ಊರೆಂದು ಕರೆದುಕೊಳ್ಳುತ್ತಾರೆ. ಉಳಿದ ತಿಂಗಳುಗಳಲ್ಲಿ

ಅಲೆಮಾರಿಗಳು. ಇವರು ವಾಸಿಸಲು 'ಗುಡಾರ'ಗಳನ್ನು ನಿರ್ಮಿಸುತ್ತಾರೆ. ಊರಿಗೆ ಹೊಂದಿಕೊಂಡೇ ಈ ಸಮುದಾಯದ ನೆಲೆಗಳಿರುತ್ತವೆ. ಗುಂಪಾಗಿ ಇವರು ವಾಸಿಸುತ್ತಾರೆ. "ಇವರು ವಾಸಿಸುವ ಗುಡಾರಗಳನ್ನು 'ವಂಕರಗುಡಿಸಿ' ಎಂದು ಕರೆಯುತ್ತಾರೆ."[೪೧] ಈ ಹೆಸರಿನಿಂದ ಇವರ ಸಂಸ್ಕೃತಿಯನ್ನು ಅರಿಯಬಹುದು. "ಆಂಧ್ರ ಪ್ರದೇಶದಲ್ಲಿ ಇವರನ್ನು 'ಬುಡ್ಗಜಂಗಾಲು'"[೪೨] ಎಂದು ಕರೆಯುತ್ತಾರೆ. ಇವರ ನೆಲೆಗಳಿಗೆ ತೆಲುಗಿನಲ್ಲಿ 'ಬುಡ್ಗಗುಡಿಸೇನು' ಎಂದು ಕರೆಯುತ್ತಾರೆ. ಗಡಿಭಾಗದಲ್ಲಿ ಈ ಸಮುದಾಯದ ಹೆಸರನ್ನು ಪ್ರತಿನಿಧಿಸುವ ಪ್ರತ್ಯೇಕ ಸ್ಥಳನಾಮ ಕಂಡು ಬರುವುದಿಲ್ಲ.

### ೨.೩.೬. ಗೊಂಬೆರಾಮರು

ಇವರನ್ನು ಕಿಳ್ಳೆಕ್ಯಾತರೆಂದು ಕರೆಯುತ್ತಾರೆ. ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿ ಇವರು ಹೆಚ್ಚಾಗಿ ವಾಸವಾಗಿದ್ದಾರೆ. ಇವರಿಗೆ ಯಾವುದೇ ನೆಲೆಯಿಲ್ಲ. ಕರ್ನಾಟಕದಲ್ಲಿ ಕಂಡುಬರುವ 'ಬೊಮ್ಮಲಾಟಪುರ', 'ಗಣಾಚಾರಿಪುರ' (ಗಣಚಾರಿ ಕಿಳ್ಳೆಕ್ಯಾತರಲ್ಲಿ ಒಂದು ಮುಖ್ಯ ಗೋತ್ರ) ಇವರ ನೆಲೆಗಳನ್ನು ಹೇಳುತ್ತವೆ. ಗಡಿಭಾಗದಲ್ಲಿ - ಬೊಮ್ಮದಿಂದ ಆರಂಭವಾಗುವ ಸ್ಥಳನಾಮಗಳಿವೆ. ಇವು ಈ ಸಮುದಾಯದ ಮಾಹಿತಿಯನ್ನು ನೀಡುತ್ತಿಲ್ಲ.

### ೨.೪. ಅರೆಶಾಶ್ವತ ಸ್ಥಳನಾಮಗಳು

ಇಂತಹ ನೆಲೆಸುವಿಕೆಯಲ್ಲಿ ಸಾಮಾನ್ಯವಾಗಿ ಐದು - ಹತ್ತು ವರ್ಷಗಳ ಕಾಲ ಒಂದು ಗುಂಪಿನ ಜನರು ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಸಿ, ಕೃಷಿ ಕೈಗೊಂಡು, ಅನಂತರ ಆ ಸ್ಥಳವನ್ನು ಬಿಟ್ಟು ಬೇರೆ ಪ್ರದೇಶಕ್ಕೆ ಹೋಗಿ ತಮ್ಮ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಾರೆ. "ಇಂತಹ ನೆಲೆಸುವಿಕೆಯು ಸಹ ಭಾರತದಲ್ಲಿ ಆದಿವಾಸಿ ಸಮುದಾಯದಲ್ಲಿ ಕಂಡುಬರುತ್ತದೆ."[೪೩] ಆಧುನಿಕವಾಗಿಯೂ ಈ ಬಗೆಯ ವಲಸೆ ಮತ್ತು ನೆಲೆಸುವಿಕೆಯು ಪ್ರಾದೇಶಿಕ ಮಟ್ಟದಲ್ಲಿ ಆಯಾ ಭೌಗೋಳಿಕ ಸನ್ನಿವೇಶದ ವಾತಾವರಣದಿಂದ ನಡೆಯುತ್ತದೆ. ಮುಖ್ಯವಾಗಿ ಆಂಧ್ರಪ್ರದೇಶದ ಗುಂಟೂರು ಜಿಲ್ಲೆ ಹಾಗೂ ಬಹುತೇಕ ತೆಲಂಗಾಣ ಪ್ರದೇಶ ಪ್ರಾಕೃತಿಕವಾಗಿ ಪ್ರತಿಕೂಲ ವಾತಾವರಣ ದಿಂದ ಕೂಡಿರುತ್ತದೆ. ಅಲ್ಲಿನ ಜನತೆಯು ಕರ್ನಾಟಕದ ಗಡಿಭಾಗಗಳಿಗೆ ವಲಸೆ ಬರುತ್ತಾರೆ. ಈ ವಲಸೆಯು ಶಾಶ್ವತವಾಗಿರದೇ ಅನುಕೂಲ ವಾತಾವರಣ ಅವರ ಪ್ರದೇಶದಲ್ಲಿ ಬರುವವರೆಗೆ ಇರುತ್ತದೆ. ಆ ಇರುವಿಕೆಯ ಅವಧಿಯಲ್ಲಿ ಅವರು ತಾವು ವಾಸ್ತವ್ಯ ಹೂಡಿದ ಸ್ಥಳಕ್ಕೆ ಕೆಲವು ಹೆಸರುಗಳನ್ನು ನೀಡಿರುತ್ತಾರೆ. ಬಳ್ಳಾರಿ - ರಾಯಚೂರು - ಸಿಂಧನೂರು - ಸಿರುಗುಪ್ಪ ತಾಲ್ಲೂಕುಗಳ ಗಡಿಭಾಗದಲ್ಲಿ ಈ ಬಗೆಯ ಅರೆಶಾಶ್ವತ ಗ್ರಾಮಗಳು ಬಹಳಷ್ಟಿವೆ.

| | |
|---|---|
| ಕಂಪ್ಲಿಕೊಟ್ಟಾಲ | ಮಂಗಮ್ಮ ಕ್ಯಾಂಪು |
| ಗೊಂಚಿಗಾರರೆಡ್ಡಿ ಕ್ಯಾಂಪು | ರೆಡ್ಡಿ ಕ್ಯಾಂಪು |
| ದೇವಿನಗರ ಕ್ಯಾಂಪು | ಶ್ರೀನಿವಾಸ ಕ್ಯಾಂಪು |
| ನರಸಮ್ಮ ಕ್ಯಾಂಪು | ಶ್ರೀರಾಮನಗರ ಕ್ಯಾಂಪು |
| ಬೆಳಗಲ್ಲು ಕ್ಯಾಂಪು | ಸುಬ್ಬಾರಾವು ಕ್ಯಾಂಪು |

ಈ ಬಗೆಯ ಕ್ಯಾಂಪುಗಳಲ್ಲಿ ಕೆಲವು ಶಾಶ್ವತವಾಗಿಯೂ ಉಳಿದು, ರೆವಿನ್ಯೂ ದಾಖಲೆ ಆದದ್ದಿದೆ. ಅದೇನೇ ಇದ್ದರೂ ಇಂತಹ ಸಹಜ ಅನಿವಾರ್ಯತೆಗಳಿಂದ ರಚನೆಯಾದ ಗ್ರಾಮಗಳು, ವಲಸೆ, ವಲಸೆ ಸಮುದಾಯದ ಸಂಸ್ಕೃತಿಯ ಮೇಲೆ ಬೆಳಕನ್ನು ಚೆಲ್ಲುತ್ತವೆ.

ಹೀಗೆ ಅನೇಕ ಬಗೆಯ ಜಾತಿ, ಸಮುದಾಯಗಳಿಗೆ ಸಂಬಂಧಿಸಿದ ಸ್ಥಳನಾಮಗಳಿವೆ. ಈವರೆಗೆ ಗಡಿಭಾಗದಲ್ಲಿನ ಜಾತಿಯಾಧಾರಿತ ಸ್ಥಳಗಳ ಹೆಸರುಗಳನ್ನು ನೋಡಲಾಯಿತು. ಅದರಂತೆ ಇಂದು ಕೆಲವು ಜಾತಿಗಳು ನಮ್ಮಲ್ಲಿ ಇಲ್ಲ. ಒಂದು ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಜನಾಂಗಗಳ ಸ್ಥಳನಾಮಗಳೂ ಗಡಿಭಾಗದಲ್ಲಿವೆ. ಎಂ.ಎಂ.ಕಲ್ಬುರ್ಗಿಯವರು "ಕಾಲ ಕ್ರಮದಲ್ಲಿ ನಿಸರ್ಗಕ್ಕಿಂತ ತನ್ನ ಜನಾಂಗದ ಬಗೆಗೆ ವ್ಯಕ್ತಿ ಮೋಹ ಬೆಳೆಸಿಕೊಳ್ಳುವಲ್ಲಿ ಜನಾಂಗಗಳು ರೂಪುಗೊಂಡವು. ಜನಾಂಗನಿಷ್ಠೆ ಗಟ್ಟಿಗೊಂಡ ಈ ಎರಡನೆಯ ಘಟ್ಟದಲ್ಲಿ ನಿಸರ್ಗವಾಚಿಗೆ ಬದಲು ಜನಾಂಗವಾಚಿ ಗ್ರಾಮನಾಮಗಳು ತಲೆದೋರಿದವು. ಕನ್ನಡ ನಾಡಿನಲ್ಲಿ ಸಾವಿರಾರು ಊರುಗಳು ಹುಟ್ಟಿಕೊಂಡಿದ್ದು ಅವುಗಳ ಸಹಾಯದಿಂದ ಒಂದುಕಾಲಕ್ಕೆ ಇಲ್ಲೆ ನೆಲೆ ನಿಂತಿದ್ದ ಪ್ರಾಚೀನ ಜನಾಂಗಗಳ ದೊಡ್ಡಯಾದಿಯನ್ನೇ ಸಿದ್ಧಪಡಿಸಲಾಗಿದೆ"[೪೪] ಎಂದು ಅಭಿಪ್ರಾಯ ಪಡುತ್ತಾರೆ. ಈ ಹಿನ್ನೆಲೆಯಲ್ಲಿ ಗಡಿಭಾಗದಲ್ಲಿ ಪ್ರಾಚೀನ ಜನಾಂಗವೆಂದು ಗುರುತಿಸಬಹುದಾದಂತಹ ಸ್ಥಳನಾಮಗಳಿವೆ.

೧. ಕಾತರಕಿ : ಆಲೂರು ತಾಲ್ಲೂಕಿನ ಒಂದು ಗ್ರಾಮ. - ಕಾತರು' ಎಂಬ ಜನಾಂಗದಿಂದ ಬಂದಿರಬೇಕು.

೨. ಕಾಕರ್ಲತೋಟ : ಬಳ್ಳಾರಿ ತಾಲ್ಲೂಕಿನ ಒಂದು ಗ್ರಾಮನಾಮ. - ಕಾಕರು ಎಂಬ ಜನಾಂಗದಿಂದ ಬಂದಿರಬೇಕು.

೩. ಗುಗ್ಗರಹಟ್ಟಿ : ಬಳ್ಳಾರಿ ತಾಲ್ಲೂಕಿನ ಒಂದು ಗ್ರಾಮನಾಮ. - ಗುಗ್ಗರು ಅಥವಾ - ಗೊಗ್ಗರು ಎಂಬ ಜನಾಂಗದಿಂದ ಬಂದಿರಬೇಕು.

೪. ಮುಂಡ್ರಿಗೆ : ಬಳ್ಳಾರಿ ತಾಲ್ಲೂಕಿನ ಒಂದು ಗ್ರಾಮನಾಮ. -ಮುಂಡರು' ಎಂಬ ಜನಾಂಗದಿಂದ ಬಂದಿರಬೇಕು.

೫. ಹಂದ್ರಾಳು : ಬಳ್ಳಾರಿ ತಾಲ್ಲೂಕಿನ ಒಂದು ಗ್ರಾಮನಾಮ. "ಸಾಮಾನ್ಯವಾಗಿ ಗ್ರಾಮನಾಮಗಳ ಮಧ್ಯ ಬರುವ -ರ' (- ಅರ್') ಎಂಬುದು ಇಂತಹ ಜನಾಂಗಗಳನ್ನು ಸೂಚಿಸುತ್ತದೆ."[೪೫] ಹಂದ್ರಾಳು ಎಂಬುದು -ಹಂದರು' ಎಂಬ ಜನಾಂಗದಿಂದ ಬಂದಿರಬೇಕೆಂಬ ಅಭಿಪ್ರಾಯವನ್ನು ಕಲ್ಬುರ್ಗಿಯವರು ವ್ಯಕ್ತಪಡಿಸುತ್ತಾರೆ.

ಈ ಬಗೆಯ ಜನಾಂಗಿಕ ಸ್ಥಳನಾಮಗಳನ್ನು ಗುರುತಿಸುವಾಗ ಕೆಲವು ಗೊಂದಲಗಳಿವೆ. ಮುಂಡರು, ಕಾತರು, ಹಂದರು, ಗುಗ್ಗರು, ಕಾಕರು ಎಂಬ ಜನಾಂಗಗಳು ಇದ್ದವೇ? ಎಂಬ ಅನುಮಾನಗಳೂ ಬರುತ್ತವೆ. " -ಕಾಕರ್ಲ ತೋಟ' ಎಂಬ ಗ್ರಾಮದಲ್ಲಿ

ಹಾಗಲಕಾಯಿ ಹೆಚ್ಚು ಬೆಳೆಯುತ್ತಿದ್ದ ತೋಟವಿದ್ದುದರಿಂದ ಈ ಊರಿಗೆ ಹೆಸರು ಬಂದಿರಬಹುದು. ಕಾಕರ್ಲ (ತೆಲುಗು) = ಹಾಗಲಕಾಯಿ.”[೪೬]

ಜಾತಿಯ ಉಪಪಂಗಡಗಳನ್ನೂ ಹೇಳುವ ಕೆಲವು ಸ್ಥಳನಾಮಗಳೂ ಕಂಡುಬರುತ್ತವೆ. ಅವುಗಳನ್ನು ಇಲ್ಲಿ ನೋಡಬಹುದು.

**೬. ನಂದ್ಯಾಲ ನಂದವರಂ** : ಕರ್ನೂಲು ಜಿಲ್ಲೆಯ ಗ್ರಾಮನಾಮಗಳು. ನಂದವಾರಿಕ ಎಂಬುದು ತೆಲುಗು ಮಾತನಾಡುವ ಕನ್ನಡನಾಡಿನಲ್ಲಿರುವ ಸ್ಮಾರ್ತ ಬ್ರಾಹ್ಮಣರ ಒಂದು ಉಪ ಪಂಗಡ. ವಿಜಯನಗರ ಕಾಲದಲ್ಲಿ ಆಂಧ್ರದ ನಂದವರಂನಿಂದ ವಲಸೆ ಬಂದ ಇವರನ್ನು ನಂದವಾರಿಕುಲು, ನಂದವಾರಿಕಾಸ್ ಎನ್ನುತ್ತಾರೆ. “ನಂದಲೂರು, ನಂದವರಂ, ನಂದ್ಯಾಲ ಎಂಬ ಊರುಗಳು ಈ ಸಮುದಾಯದ ಮೂಲ ಸ್ಥಳಗಳೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.”[೪೭] ಇದೇ ಜನಾಂಗದ ಬಗ್ಗೆ ಮತ್ತೊಂದು ಅಭಿಪ್ರಾಯವೂ ಇದೆ. “ಬನಾರಸಿನ ಬ್ರಾಹ್ಮಣರು, ಆಂಧ್ರಪ್ರದೇಶದ ನಂದ ಚಕ್ರವರ್ತಿಗೆ ಒದಗಿದ ದುಸ್ಥಿತಿಯನ್ನು ತಮ್ಮ ಯೋಗಶಕ್ತಿಯನ್ನು ಪ್ರಯೋಗಿಸಿ ಪಾರುಮಾಡಿದ್ದರಿಂದ ಈಗಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ನಂದ್ಯಾಲ ತಾಲ್ಲೂಕಿನ -ನಂದವರ' ಅಗ್ರಹಾರವನ್ನು ಪಡೆದರಂತೆ. ನಂತರ ಈ ಬ್ರಾಹ್ಮಣರು ‘ನಂದವಾರಿಕ’ ಬ್ರಾಹ್ಮಣರೆಂದೇ ಪರಿಚಿತರಾದರು.”[೪೮] -ನಂದ' ದಿಂದ ಆರಂಭವಾಗುವ ಎಲ್ಲ ಸ್ಥಳನಾಮಗಳು ಬಹುಶಃ ನಂದ ಚಕ್ರವರ್ತಿಗಳಿಗೆ ಸಂಬಂಧಿಸಿರಬೇಕೆಂದು ಶಂಬಾ ಚರ್ಚಿಸುತ್ತಾರೆ. ಅಲ್ಲದೇ -ನಂದ್ಯಾಲ ಎಂಬುದು ಮೂಲತಃ ನಂದಿ + ಹಾಳ ಎಂಬುದಾಗಿ ಬಿಡಿಸಿ ಅದು ಪ್ರಾಣಿವಾಚಿಯೆಂದು ಶಂಬಾ ಆಲೋಚಿಸುತ್ತಾರೆ. ಕಾರಣ ಇಂತಹ ಗ್ರಾಮನಾಮಗಳ ನಿಷ್ಪತ್ತಿಯನ್ನು ಖಚಿತವಾಗಿ ಹೇಳಲು ಗೊಂದಲಗಳಿವೆ. ಕರ್ನಾಟಕದಲ್ಲಿ -ನಂದಳಿಕೆ ಎಂಬುದೊಂದು ಗ್ರಾಮನಾಮವಿದೆ. ಬಹುಶಃ ಇಂತಹ ಗೊಂದಲಗಳಿಗೆ ಈ ಹೆಸರು ಸೇರಬಹುದೇನೋ.

**೭. ಉಲ್ಬಾಳ್** : ಬ್ರಾಹ್ಮಣರಲ್ಲಿ (ಸ್ಮಾರ್ತ) ಉಲ್ಚಕಮ್ಮೆ ಎಂಬುದು ಒಂದು ಪಂಗಡ. ಕರ್ನೂಲು ಜಿಲ್ಲೆಯ ಉಲ್ಬಾಳ್ ಗ್ರಾಮದಂತೆ ರಾಯಚೂರು ಗಡಿಭಾಗದಲ್ಲಿ ‘ಉಲ್ಬಾಳ್’ ಎಂಬ ಊರಿದೆ. ಇದು ಸ್ಮಾರ್ತ ಬ್ರಾಹ್ಮಣರ ವಲಸೆಯಿಂದ ಬಂದಂತಹ ಹೆಸರು.[೪೯]

ಹೀಗೆ ಗ್ರಾಮನಾಮಗಳನ್ನು ಒಂದು ಜಾತಿಯ ಉಪಜಾತಿಯ ನೆಲೆಯಲ್ಲಿ ಗುರುತಿಸುವಾಗ ಜಾತಿಯಿಂದ ಗ್ರಾಮವನ್ನು ನಿರ್ದೇಶಿಸುವ ಬಗೆ ಒಂದು. ಅದರಂತೆ ಗ್ರಾಮನಾಮದಿಂದ ಜಾತಿಯನ್ನು ಗುರುತಿಸುವ ಬಗೆ ಇನ್ನೊಂದು. (ಮಂಡ್ಯ ಅಯ್ಯಂಗಾರ್ಸ್, ಬಬ್ಬೂರು ಕಮ್ಮೆ) ಜಾತಿಯನ್ನು ಗ್ರಾಮನಾಮದಿಂದ

ಗುರುತಿಸುವಲ್ಲಿ ಆ ಸಮುದಾಯ ವಲಸೆ ಬಂದಿರುವುದನ್ನು ಹೇಳುತ್ತದೆ. ಆದರೆ ಜಾತಿಯಿಂದ ಗ್ರಾಮವನ್ನು ಹೇಳುವಾಗ ಆ ಸಮುದಾಯ ಸ್ಥಳದಲ್ಲಿಯೇ ವಾಸ್ತವ್ಯ ಹೂಡಿರುತ್ತದೆಂದು ಹೇಳಬಹುದು.

**೭.೫. ಇಸ್ಲಾಂ**

ಗಡಿಭಾಗದಲ್ಲಿ ಇಸ್ಲಾಂ ಸಮುದಾಯದ ಸ್ಥಳನಾಮಗಳು ಕಡಿಮೆ. ಗುಲಬರ್ಗಾ, ಬೀದರ ಗಡಿಭಾಗದಲ್ಲಿ ಈ ಧರ್ಮದ ಪ್ರಭಾವ ಹೆಚ್ಚಾಗಿರುವುದರಿಂದ ಅಲ್ಲಿಯ ಸ್ಥಳನಾಮಗಳಲ್ಲಿ ಉರ್ದು ಪ್ರಭಾವ ಸ್ಥಳನಾಮಗಳ ಪೂರ್ವ ಹಾಗೂ ಉತ್ತರ ಪದಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಬಳ್ಳಾರಿ - ಕರ್ನೂಲು ಗಡಿಭಾಗದಲ್ಲಿ ಮುಸ್ಲಿಂ ಧರ್ಮದ ಸ್ಥಳನಾಮಗಳು ವ್ಯಕ್ತಿನಾಮದೊಂದಿಗೆ ನಿರ್ದೇಶನಗೊಂಡಿವೆ.

ಇಬ್ರಾಹಿಂಪುರ - BLR

ಸುಲ್ತಾನ್ ಪುರ - ADN

**೭.೬. ಜೈನ ಮತ್ತು ಬೌದ್ಧ**

ಬಳ್ಳಾರಿ - ಕರ್ನೂಲು ಜಿಲ್ಲೆಯ ಗಡಿಭಾಗದಲ್ಲಿ ಜೈನ ಮತ್ತು ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಗ್ರಾಮನಾಮಗಳು ಕಂಡು ಬರುವುದಿಲ್ಲ. "ಅನಂತಪುರ ಜಿಲ್ಲೆಯ ಗಡಿಯಲ್ಲಿರುವ - ಕೊನಕೊಂಡ್ಲ' ಎಂಬುದು ಜೈನ ಆಚಾರ್ಯ ಕುಂದಕುಂದಾಚಾರ್ಯರಿಂದ ಬಂದಿದೆ ಎನ್ನುತ್ತಾರೆ."[೫೦] ಕೊಂಡಕುಂದ > ಕುಂದಕುಂದ > ಕೊನಕುಂದ > ಕೊನಕೊಂಡ > ಕೊನಕೊಂಡ್ಲ ಎಂದು ರೂಪಾಂತರ ಆಗಿರಬಹುದೆಂಬ ಅಭಿಪ್ರಾಯವಿದೆ. ಕರ್ನಾಟಕದಲ್ಲಿ ಜೈನರಿಗೆ ಸಂಬಂಧಿಸಿದ ಅನೇಕ ಸ್ಥಳನಾಮಗಳಿವೆ.

ಜೈನರಳ್ಳಿ

ಬಸದಿಹಳ್ಳಿ

ಮುಕ್ಕೊಡೆಹಳ್ಳಿ

ಬೌದ್ಧ ಧರ್ಮದ ಸ್ಥಳನಾಮಗಳೂ ಬಳ್ಳಾರಿ - ಕರ್ನೂಲು ಗಡಿಭಾಗದಲ್ಲಿ ದೊರೆಯುವುದಿಲ್ಲ. ಮಾದರಿಗಾಗಿ ಕರ್ನಾಟಕದ ಸ್ಥಳನಾಮಗಳನ್ನು ಉದಾಹರಿಸಲಾಗಿದೆ.

ತಾರಾಪುರ

ಬುದ್ಧವಾಡಿಗೆ - ಕೋಲಾರ

ಬುದ್ಧವಾರಿಪಲ್ಲೆ - ಕೋಲಾರ

ಭಗವತಿನಗರ

ಸುಗತಹಳ್ಳಿ

ಸುಗತೂರು - ಕೋಲಾರ

ಬೌದ್ಧ ಧರ್ಮದ ಸ್ಥಳನಾಮಗಳನ್ನು ಗುರುತಿಸುವಾಗ ಕೆಲವೊಮ್ಮೆ ತುಂಬಾ ಎಚ್ಚರವನ್ನು ವಹಿಸಬೇಕಾಗುತ್ತದೆ. ಬೌದ್ಧ ಧರ್ಮದ ಸ್ಥಳನಾಮಗಳನ್ನು ವಿಂಗಡಿಸುವಾಗ ಡಾ. ವಿಶ್ವನಾಥ ಅವರು "'ಬೂದಿಹಾಳು, ಬೂದಿಪಡಗ'

ಎಂಬ ಸ್ಥಳನಾಮಗಳು ಬೌದ್ಧಧರ್ಮಕ್ಕೆ ಸಂಬಂಧಿಸಿವೆ''[೫೦] ಎಂಬ ಅಭಿಪ್ರಾಯ ಮಂಡಿಸುತ್ತಾರೆ. ಆದರೆ ಬೂದಿ - ಬುದ್ಧ ಎಂಬ ಪದಗಳಿಗೆ ಅರ್ಥ ವ್ಯತ್ಯಾಸವಿರುವುದನ್ನು ಗಮನಿಸಬೇಕಾಗುತ್ತದೆ. "ಬೂದಿ, ಎಂಬ ಪದದಿಂದ ಆರಂಭವಾಗುವ ಯಾವುದೇ ಸ್ಥಳನಾಮ ಪುರಾತತ್ವ ಪರಿಸರಕ್ಕೆ ಸಂಬಂಧಿಸಿರುತ್ತದೆ.''[೫೧] ಅಲ್ಲದೇ ಇಂದು ಬೂದಿ' ಸಂಬಂಧಿತ ಎಡೆಗಳಲ್ಲಿ ಪುರಾತತ್ವಜ್ಞರು ಅಂತಹ ಅವಶೇಷಗಳನ್ನು ಕಂಡುಕೊಂಡಿದ್ದಾರೆ. ಕಾರಣ ಇಂತಹ ಸ್ಥಳನಾಮಗಳ ನಿಷ್ಪತ್ತಿಯು ಅನೇಕ ಸಾರಿ ಗೊಂದಲಕ್ಕೆ ಈಡು ಮಾಡುತ್ತವೆ.

ಹೀಗೆ ಆಯಾ ಕಾಲಮಾನದಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿ, ಅಂದಂದಿನ ಸಾಮಾಜಿಕ ಸಾಂಸ್ಕೃತಿಕ ಪರಿಸರದಿಂದ ಒಂದೊಂದು ಸಮುದಾಯ ತಮ್ಮ ವಾಸ್ತವ್ಯಗಳಿಗೆ ನೀಡಿದಂತಹ ಹೆಸರು ಆ ಸಮುದಾಯದ ಒಗ್ಗಟ್ಟು ಹಾಗೂ ಅವರ ಗುಂಪುಜೀವನ ವಿಧಾನದ ಪ್ರತಿನಿಧಿಯಾಗಿ ಉಳಿಯುತ್ತದೆ. ಸಾಂಘಿಕ ಜೀವನವನ್ನೇ ನೆಚ್ಚಿಕೊಂಡಿದ್ದ ಕಾಲದಲ್ಲಿ ವಿಶಿಷ್ಟ ಜೀವನ ಪದ್ಧತಿ, ವಾಸ್ತು, ಅವರ ಸಾಂಸ್ಕೃತಿಕ ಅಂಶಗಳನ್ನು ಸ್ಥಳದ ಸಂಸ್ಕೃತಿಯಾಗಿ, ಸ್ಥಳದ ಚರಿತ್ರೆಯಾಗಿ ಅಧ್ಯಯನ ಮಾಡಲು ಜನಾಂಗಿಕ ಗ್ರಾಮನಾಮಗಳು ಮುಖ್ಯವೆನಿಸಿವೆ. ಗುಂಪಾಗಿ ನೆಲೆಸುವ ಒಂದೊಂದು ಸಮುದಾಯದ ಬಗೆ (ವಿಧಾನ) ಇಂದಿಗೂ ಗ್ರಾಮೀಣ ಪರಿಸರದಲ್ಲಿ ಕಂಡು ಬರುತ್ತದೆ. ಅಂದರೆ ಅನೇಕ ಸಮುದಾಯಗಳು ಗ್ರಾಮದಲ್ಲಿದ್ದರೂ ಆಯಾ ಜಾತಿ, ವರ್ಗಗಳಿಗೆ ಪ್ರತ್ಯೇಕ ಕೇರಿಗಳಿರುವುದು ಕಂಡು ಬರುತ್ತದೆ. ನಗರ ಸಮಾಜದಲ್ಲಿಯೂ ಒಂದೊಂದು ಕಡೆ ಈ ಜಾತಿಯ ನೆಲೆಸುವಿಕೆಯ ವಿಧಾನ ಇದೆಯಾದರೂ ಈಗ ಅನೇಕ ಬದಲಾವಣೆಯನ್ನು ಹೊಂದುತ್ತಿದೆ. ಒಂದೊದು ಜಾತಿ ವಾಸಿಸುತ್ತಿದ್ದ ಗ್ರಾಮಗಳಿಗೆ ಕ್ರಮೇಣ ಅವಲಂಬೀ ಜೀವನ ಅಗತ್ಯವೆಂದು ತೋರಿದಾಗ ಪರಸ್ಪರ ತಮ್ಮ ಜೀವನ ಶೈಲಿಗೆ ಸಹಾಯವಾಗುವ ಎಲ್ಲಾ ಸಮುದಾಯಗಳು ಪ್ರತ್ಯೇಕ - ಪ್ರತ್ಯೇಕ ಕೇರಿಗಳಲ್ಲಿ ವಾಸಿಸಿರಬೇಕು. ಅಂದರೆ ಕುಂಬಾರಹಳ್ಳಿಯಲ್ಲಿ ಆರಂಭದಲ್ಲಿ ಕುಂಬಾರರು ಮಾತ್ರ ವಾಸಮಾಡಿರಬೇಕು. ನಂತರ ಬೇರೆ ಜಾತಿ, ವೃತ್ತಿಯವರು ಬಂದು ನೆಲೆಸಿದ್ದರೂ, ಮೂಲ ಸ್ಥಳನಾಮ ಹಾಗೆಯೇ ಉಳಿದುಕೊಂಡಿರಬಹುದು. ಅಗ್ರಹಾರಗಳಲ್ಲಿ ಕೇವಲ ಬ್ರಾಹ್ಮಣರಿಗೆ ಮಾತ್ರ ವಾಸಮಾಡುವ ಅವಕಾಶವಿತ್ತು. ಆದರೆ ಇಂದು ಕೆಲವು ಅಗ್ರಹಾರಗಳಲ್ಲಿ ಬ್ರಾಹ್ಮಣರೇ ಇಲ್ಲದಿರಬಹುದು. ಇದು ಕಾಲಾಂತರದ ಸ್ಥಿತ್ಯಂತರ ಅಷ್ಟೇ. ಅದರಂತೆ ಮಾದಿಗರಹಳ್ಳಿಯಲ್ಲಿ ಮಾದಿಗರೇ ಇಲ್ಲದೇ, ಬ್ರಾಹ್ಮಣರು ವಾಸಿಸುತ್ತಿರಬಹುದು. ಬ್ರಾಹ್ಮಣರಿಗೆ ಅವರ ಊರ ಹೆಸರು ಕೇಳಿದಾಗ ಮಾದಿಗರಹಳ್ಳಿ' ಎಂದು ಹೇಳುವುದು ಮುಜುಗರದ ಸಂಗತಿ ಯೇನಲ್ಲ. ಇಂತಹ ಮುಜುಗರಗಳು ಬಂದ ಸಂದರ್ಭದಲ್ಲಿ ಸ್ಥಳನಾಮವನ್ನು ಸಂಸ್ಕೃತಾನುಕರಣ ಮಾಡಿದ್ದು ಚರಿತ್ರೆಯುದ್ದಕ್ಕೂ ನಡೆದಿದೆ. ಒಂದೊಂದು ಜಾತಿಯಿಂದ ಒಂದೊಂದು ಸ್ಥಳನಾಮಗಳಿರುವುದು ಒಟ್ಟು ಸಂಸ್ಕೃತಿಯ ಅನನ್ಯತೆಯನ್ನು ಹೇಳುತ್ತದೆ. "ನಿರ್ದಿಷ್ಟ ಸಂಸ್ಕೃತಿಯೊಂದರ ಪ್ರತೀಕವಾಗಿ ಕಾಣುವ ಈ ಸ್ಥಳನಾಮಗಳು ನೂರಾರು, ಸಾವಿರಾರು ವರ್ಷಗಳವರೆಗೂ ತಾಳಿಕೆಯ ಗುಣವನ್ನು ಹೊಂದಿವೆ. ಆದ್ದರಿಂದ ಪ್ರಾಚೀನ ಸಂಸ್ಕೃತಿಯ ಪಳಯುಳಿಕೆಗಳಾಗಿ ಕಾಣುವ ಇವು ಅದೇ ಸಂಸ್ಕೃತಿಯ ಬೇರುಗಳಾಗಿ ಸಹ ಗೋಚರಿಸುತ್ತವೆ.''[೫೨]

ಸ್ಥಳನಾಮಗಳ ಅಧ್ಯಯನವನ್ನು ಹೀಗೆ ಜಾತಿ, ಸಮುದಾಯಗಳಿಂದ ನೋಡುವಾಗ ವಲಸೆ, ಅವರ ಸಂಸ್ಕೃತಿ, ಜಾತಿಸಂಬಂಧಿ ವ್ಯವಸ್ಥೆ ಮತ್ತು ಅನನ್ಯತೆಯನ್ನು ತಿಳಿಯಬಹುದು.

೭.೭. ವೃತ್ತಿ ಆಧಾರಿತ ಸ್ಥಳನಾಮಗಳು : (ಪಾರಂಪರಿಕ ಕೈಗಾರಿಕೆಗಳನ್ನು ಪ್ರತಿನಿಧಿಸುವ ಸ್ಥಳನಾಮಗಳು)

ವೃತ್ತಿಯು ಬೆಳೆದು ಜಾತಿಯಾಗಿ ಮಾರ್ಪಟ್ಟಿತು. ಜಾತಿ ಮತ್ತು ವೃತ್ತಿಗಳು ಒಂದೇ ಬಿಂದುವಿನಲ್ಲಿ ಬರುತ್ತವೆ. ಆದರೂ ಅಧ್ಯಯನದ ಅನುಕೂಲಕ್ಕೆಂದು ವೃತ್ತಿಯಾಧಾರಿತ ಸ್ಥಳನಾಮಗಳನ್ನು ಬಿಡಿಯಾಗಿ ಚರ್ಚಿಸಲಾಗುತ್ತದೆ. ಸಮುದಾಯಗಳು ಜೀವನಕ್ಕಾಗಿ ಬೇಟೆ, ಕೃಷಿ ಮುಂತಾದ ಮಾರ್ಗಗಳನ್ನು ಕಂಡುಕೊಂಡಂತೆ ಕೈಗಾರಿಕೆಯನ್ನೂ ಕಂಡುಕೊಂಡರು. ಅಲ್ಲದೇ ಕೃಷಿಸಂಬಂಧೀ ಕೈಗಾರಿಕಾ ಸಂಬಂಧೀ ವಸ್ತುಗಳ ಉತ್ಪಾದನೆಯ ಗುಡಿ ಕೈಗಾರಿಕೆಗಳೂ ಆರಂಭವಾದವೆನ್ನಬಹುದು. ವೃತ್ತಿಪರ ಜನತೆಯು ಆಯಾ ನಿರ್ದಿಷ್ಟ ಸ್ಥಳಗಳಲ್ಲಿ ಕೈಗಾರಿಕೆಯನ್ನು ಆರಂಭ ಮಾಡಿದರು. ಮುಂದೆ ಆ ನೆಲೆಗಳಿಗೆ ತಮ್ಮ ವೃತ್ತಿಯ ಹೆಸರುಗಳನ್ನೇ ನೀಡಿದರು. ಬಹುತೇಕ ಈ ಬಗೆಯ ಪಾರಂಪರಿಕ ವೃತ್ತಿಯನ್ನಲಂಬಿಸಿದ ಸ್ಥಳನಾಮಗಳು ಪ್ರಾಚೀನವಾದವುಗಳೆಂದು ನಂಬಲಾಗುತ್ತದೆ. ಇಂದಿಗೂ ಅನೇಕ ಕಡೆ ಕೈಗಾರಿಕಾ ನೆಲೆಗಳ ಗುರುತುಗಳು ದೊರೆಯುತ್ತಿವೆ. ಈ ದೃಷ್ಟಿಯಿಂದ ಇಂತಹ ಅಧ್ಯಯನಗಳು ಅಗತ್ಯವೆಂದು ತಿಳಿಯಬಹುದು. ಆಂಧ್ರ - ಕರ್ನಾಟಕದ ಗಡಿಭಾಗದ ಕೆಲವು ಸ್ಥಳನಾಮಗಳೊಂದಿಗೆ ಇದನ್ನು ಚರ್ಚಿಸಬಹುದು.

| | | | |
|---|---|---|---|
| ಇಂಗಳದಾಳು | - SRP | ಕಮ್ಮರಚೇಡು | - BLR |
| ಇಂಗಳದಾಳು | - ADN | ಕಮ್ಮರಚೇಡು | - ALR |
| ಕಂಚಕಾರಹಳ್ಳಿ | - ANT | ತಾಂಬ್ರಹಳ್ಳಿ | - BLR |
| ಕಂಚಗಾರ ಬೆಳಗಲ್ಲು | - SRP | ಹೊನ್ನೂರು | - BLR |
| ಕರ್ಚಿಗ (ಕಂಚಿಗ)ನೂರು | - SRP | ಹೊನ್ನೂರು | - ALR |

ಇವುಗಳನ್ನು ಗಡಿಭಾಗದ ವೃತ್ತಿಪರ ಸ್ಥಳನಾಮಗಳೆಂದು ಗುರುತಿಸಲಾಗಿದೆ. ಇಲ್ಲಿನ ಬಹುಪಾಲು ಸ್ಥಳನಾಮಗಳು ವೃತ್ತಿಯಂತೆಯೇ, ಲೋಹಮೂಲದ ಅಂದರೆ ಲೋಹ ಲಭ್ಯವಾಗುವ ನೆಲೆಗಳಂತೆ ತೋರುತ್ತವೆ. ತಾಮ್ರ, ಚಿನ್ನವನ್ನು ಹೆಸರಿಸುತ್ತವೆ. ಆದರೆ ಭೌಗೋಳಿಕವಾಗಿ ಗಡಿಭಾಗದ ಈ ಪರಿಸರದಲ್ಲಿ ಈ ಲೋಹಗಳು ದೊರೆಯುವ ನಿಕ್ಷೇಪಗಳ ಬಗೆಗೆ ಮಾಹಿತಿಯಿರುವುದಿಲ್ಲ. ಕಾರಣ ಒಂದು ಕಾಲದಲ್ಲಿ ಇಲ್ಲಿ ಈ ಲೋಹಗಳು ಲಭ್ಯವಿರಬಹುದು. ಇಲ್ಲವೇ ಅಂತಹ ಲೋಹಗಳಿಂದ ವಸ್ತುಗಳನ್ನು ತಯಾರಿಸಲು ಶಾಲೆಗಳನ್ನು (Work shop) ಆರಂಭಿಸಿರಬೇಕೆಂದು ಹೇಳಬಹುದು. ಮೇಲಿನ ಲೋಹವನ್ನು ಸೂಚಿಸುವ ಗ್ರಾಮನಾಮಗಳಲ್ಲಿ ಆ ಪರಿಸರದಲ್ಲಿ ಲೋಹ ಕರಗಿಸಿದ ಕೆಲವು ಅವಶೇಷಗಳು ದೊರೆತ ಬಗ್ಗೆ ಇತಿಹಾಸಕಾರರು ದಾಖಲಿಸಿದ್ದಾರೆ. ಬಳ್ಳಾರಿ ಪರಿಸರದ ಸಂಗನಕಲ್ಲು - ಹಲಕುಂದಿ ಮುಂತಾದಲ್ಲಿ ಬೂದಿ ಮತ್ತು ಕೆಲವು ವಸ್ತುಗಳು ದೊರೆತಿವೆ. ಈ ಕಾರಣದಿಂದ ಇವು ಕೈಗಾರಿಕಾ ನೆಲೆಗಳೆಂದು ಗುರುತಿಸಬಹುದು.

೧. **ಕಮ್ಮರಚೇಡು :** ಕಬ್ಬಿಣದ ಕೈಗಾರಿಕೆಯಲ್ಲಿ ತೊಡಗಿದ್ದ ಕಮ್ಮಾರರು ರಾಜಕೀಯ ಇತಿಹಾಸದಲ್ಲಿ ಯುದ್ಧೋಪಕರಣ ತಯಾರಿಸುವಲ್ಲಿ ಬಹುಮುಖ್ಯವಾದ ಪಾತ್ರವಹಿಸಿದ್ದರು. ಅಲ್ಲದೇ ಕೃಷಿಗೆ ಉಪಯುಕ್ತವಾಗುವ ಉಪಕರಣಗಳನ್ನು ತಯಾರಿಸುತ್ತಿದ್ದರು. ಈ ಕಮ್ಮಾರರನ್ನು ಗ್ರಾಮಸ್ಥರು ಆಯಾಗಾರರಲ್ಲಿ ಒಬ್ಬರೆಂದು ಪರಿಗಣಿಸಿ ವಾರ್ಷಿಕ ಆಯ'ವನ್ನು ಕೊಟ್ಟ ಉಲ್ಲೇಖಗಳು ಶಾಸನಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಕಮ್ಮಾರಿಕೋದ್ಯಮದ

ಮೂಲಕ ಕೃಷಿಗೆ ಸಹಾಯಕರಾಗಿದ್ದು ದುಡಿದ ಮೂವರು ಕಮ್ಮಾರರನ್ನು ಶಾಸನವು ಅಪರೂಪಕ್ಕೆ ಉಲ್ಲೇಖಿಸುತ್ತದೆ.[೫೪] ಕಮ್ಮಾರರು ಗುಡಿಕೈಗಾರಿಕೆಯ ರೂಪದಲ್ಲಿ ಕೆಲವು ಗ್ರಾಮಗಳಲ್ಲಿ ನೆಲೆಸಿ ಯುದ್ಧೋಪಕರಣ ಮಾಡುವಲ್ಲಿ ನಿರತರಾಗಿರಬೇಕು. ಈ ಕಾರಣದಿಂದಲೇ ಅವರು ತಮ್ಮ ನೆಲೆಗಳಿಗೆ ಕಮ್ಮರಸಾಲೆ' ಎಂದು ಕರೆದುಕೊಂಡರು. ವಿಜಯನಗರ ಸಾಮ್ರಾಜ್ಯ ಮತ್ತು ಇದಕ್ಕಿಂತ ಮುಂಚಿನ ಚಾಲುಕ್ಯ ಮನೆತನದಿಂದ ಕುರುಗೋಡಿನ ಸಿಂಧರವರೆಗೆ ಒಂದಲ್ಲ ಒಂದು ರೀತಿಯಲ್ಲಿ ಆಯಾ ರಾಜವಂಶಜರ ಕಣ್ಣಿಗೆ ಬಿದ್ದ ಬಳ್ಳಾರಿ ಮತ್ತು ಆದವಾನಿ ಪ್ರದೇಶ ಅವರ ಆಡಳಿತಕ್ಕೆ ಒಳಪಟ್ಟಿದೆ. ಇದನ್ನು ಶಾಸನಗಳೇ ಸ್ಪಷ್ಟಪಡಿಸುತ್ತವೆ. ಆಧುನಿಕ ಶಸ್ತ್ರಾಸ್ತ್ರವಾದ ಫಿರಂಗಿ ಪಡೆಗಿಂತ ಮುಂಚಿನ ಅವಧಿಯಲ್ಲಿ ಬಳ್ಳಾರಿ ತಾಲ್ಲೂಕಿನ ಕಮ್ಮರಚೇಡು ಮತ್ತು ಆಲೂರು ತಾಲ್ಲೂಕಿನ ಕಮ್ಮಾರಚೇಡು ಪ್ರದೇಶಗಳು ಯುದ್ಧೋಪಕರಣ ಪೂರೈಕೆಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳಗಳಾಗಿದ್ದವು. ಕಾರಣ ಈ ಹೆಸರುಗಳು ಈ ನೆಲೆಗಳಿಗೆ ಒಪ್ಪುತ್ತವೆ. ಕಮ್ಮರ ಮತ್ತು ಕಮ್ಮಾರ ಎಂಬ ಎರಡು ಪದಗಳಲ್ಲಿ ಅಷ್ಟಾಗಿ ಅರ್ಥವ್ಯತ್ಯಾಸವಿಲ್ಲ. ಈ ಪದಗಳ ಬಗೆಗೆ ಕೆಲವು ಕಾವ್ಯೋಲ್ಲೇಖಗಳು ದೊರೆಯುತ್ತವೆ.

"ಕಮ್ಮರನಂಬು ಕಮ್ಮರಂಗೆ"[೫೫]

"ಕಮ್ಮರರಿಲ್ಲದೆ ಖಡ್ಗಾದಿ ಶಸ್ತ್ರಂಗಳಾಗವು"[೫೬]

"ಬವರದೊಳೇಂ ಬಲ್ಲಂಕರ

- - - - - - - ಕಮ್ಮರು

ಯೊವಜಂ ಬಿಲ್ಲೊವಜನೆಂಬುದಂ ಮಾಡುವನೇ"[೫೭]

ಇದರಿಂದ ಕಮ್ಮಾರಿಕೆಯ ವೃತ್ತಿಯು ಅತ್ಯಂತ ಅವಶ್ಯಕವಾಗಿದ್ದಿತೆಂದು ತಿಳಿಯುತ್ತದೆ. ಇದರಿಂದಾಗಿಯೇ ಅವರು ಅಲ್ಲಲ್ಲಿ ನೆಲೆಸಿ ಕೈಗಾರಿಕೆಗಳನ್ನು ಆರಂಭಿಸಿದರೆಂದು ತಿಳಿಯಬಹುದು.

ಕಮ್ಮರಚೇಡು' ಹೆಸರಿನ ಉತ್ತರಪದದಲ್ಲಿರುವ -ಚೇಡು ಪದವು ಕನ್ನಡದ -ಸೇಡು ಪದಕ್ಕೆ ಸಮಾನವಾದುದು. ಇದು ತೆಲುಗು ಮೂಲ ಪದ. ಚೇಡು - Shrinking, Bending, Contraction (ಬಗ್ಗಿಸು; ಸಡಿಲಿಸು) ಎಂಬ ಅರ್ಥಗಳನ್ನು ಕಿಟ್ಟೆಲ್ ಕೋಶ ನೀಡುತ್ತದೆ. ಕೆಲವು ಕಡೆ ಚೇಡು ಪದವು 'ಸಾಲೆ' ಎಂದೂ ಆಗಿದೆ. ದ್ರಾವಿಡ ಭಾಷಾ ಗುಂಪುಗಳಲ್ಲಿ ಪದಾದಿ 'ಚ' ಕಾರವನ್ನು ತೆಲುಗು ಹಾಗೆಯೇ ಉಳಿಸಿಕೊಂಡು ಬಂದಿದೆ. ಕನ್ನಡದಲ್ಲಿ ಈ ಪದ ಚ > ಸ ವಾಗಿರುವುದು ಕಂಡುಬರುತ್ತದೆ. ಆದರೂ ಗಡಿ ಪ್ರದೇಶದಲ್ಲಿ -ಚ' ಕಾರ ಹಾಗೆಯೇ ಉಳಿದುಕೊಂಡಿದೆ. ಆಡುನುಡಿಯಲ್ಲಿ 'ಸ' ಕಾರ ಪ್ರಯೋಗವಾಗುತ್ತದೆ. "ಬಾಣ, ಕತ್ತಿ ಮುಂತಾದವುಗಳನ್ನು ತಯಾರು ಮಾಡಲು ಒಂದು ಜನಾಂಗಕ್ಕೆ ಪ್ರತ್ಯೇಕ ಕಾರ್ಯಾಗಾರಗಳಿರುತ್ತಿದ್ದವು. ಈ ಬಾಣ ಆಯುಧ ಮೊದಲಾದುವುಗಳನ್ನು ತಯಾರಿಸುವ ಕಾರ್ಯಾಗಾರವನ್ನು 'ಕಮ್ಮಟ' ಗಳೆಂದೂ 'ಕಮ್ಮರಸಾಲೆ'[೫೮] ಎಂದೂ ಕರೆದಿದ್ದಾರೆ. ಅದರಂತೆ ಕುಂದಾಪುರ ತಾಲ್ಲೂಕಿನಲ್ಲಿ ಒಂದು 'ಕಮ್ಮರಸಾಲೆ' ಇದೆ. ಇದೂಕೂಡ ಕಮ್ಮಾರರಸಾಲೆ (ಕಮ್ಮಟ - Workshop) ಇದ್ದ ನೆನಪಿನಲ್ಲಿ ಹುಟ್ಟಿಕೊಂಡಿದೆ ಎಂದು ಆರ್ಕೆ ಮಣಿಪಾಲ[೫೯] ಹೇಳುತ್ತಾರೆ. ಆಲೂರು ತಾಲ್ಲೂಕಿನ ಕಮ್ಮರಚೇಡಿನ ಗ್ರಾಮದ ಕ್ಷೇತ್ರ ಮಾಹಿತಿಯಂತೆ ಅದು 'ಕಮ್ಮಲಚೆರುವು'. ಚೇಡು ಮತ್ತು ಚೆರುವು ಹತ್ತಿರದ ಪದಗಳಾದರೂ ಅರ್ಥವ್ಯತ್ಯಾಸವಿದೆ.

ಕಂಚುಗಾರ ಬೆಳಗಲ್ಲು - SRP

ಕಂಚಿಗನೂರು - SRP

ಕಂಚಕಾರಹಳ್ಳಿ - ANT

ತಾಂಬ್ರಹಳ್ಳಿ - HBH

ಈ ಸ್ಥಳನಾಮಗಳು ಮೇಲ್ ರೂಪಕ್ಕೆ ವ್ಯಕ್ತಿನಾಮವಾಗಿ, ವೃತ್ತಿ, ಲೋಹಮೂಲ ಹೆಸರುಗಳಾಗಿ ತೋರಿ ಬರುತ್ತವೆ. ಆದರೂ ನಮ್ಮ ಪ್ರಾಚೀನ ಕುಶಲಕರ್ಮಿಗಳ ಚರಿತ್ರೆಯನ್ನು ಇವು ಹೇಳುತ್ತವೆ. ತಾಮ್ರ, ಹಿತ್ತಾಳೆ, ಕಂಚು ಎಂಬ ಮೂರು ಲೋಹಗಳಲ್ಲಿ ಕೆಲಸ ಮಾಡುವವರನ್ನು ಕನ್ನಡದಲ್ಲಿ ಕಂಚುಗಾರರು ಎಂದು ಕರೆಯಲಾಗಿದೆ. 'ಕಾಂಸಿಗ' ಎಂಬ ಪದವನ್ನು ಕೆಲವು ಕಡೆ ಈ ಅರ್ಥದಲ್ಲಿ ಬಳಸಿರುವಂತೆ ಕಾಣುತ್ತದೆ. "ಕಂಚುಗಾರರು ತಳಿಗೆ (ಕಂಚಿನ), ಕನ್ನಡಿ, ಸಿಪ್ಪು, ಸಟ್ಟುಗಗಳನ್ನು ಮಾಡುತ್ತಿದ್ದರು."[೬೦] ಈ ಕಂಚುಗಾರರು ಕೂಡ ವಿಶ್ವಕರ್ಮಮತಕ್ಕೆ ಸೇರಿದವರೇ ಆಗಿದ್ದಾರೆ. "ಕಂಚುಗಾರರು ಕೇವಲ ಪಾತ್ರೆ, ಪಡಗಗಳನ್ನಷ್ಟೇ ಅಲ್ಲದೇ ತೀರ್ಥಂಕರರ, ವಿಷ್ಣು, ಶಿವ ಮುಂತಾದ ದೇವತೆಗಳ ಮೂರ್ತಿಗಳನ್ನು ಕೂಡ ಎರಕಹೊಯ್ದು ತಯಾರಿಸುತ್ತಿದ್ದರು."[೬೧] ಹೀಗಾಗಿ ಇವರು ವೃತ್ತಿಗಾಗಿ ಒಂದೊಂದು ಗುಂಪು ಒಂದೊಂದು ಕಡೆ ನೆಲೆಸಿದ ಕಾರಣದಿಂದಲೇ ತಮ್ಮ ನೆಲೆಗಳಿಗೆ ಅದೇ ಹೆಸರನ್ನು ನೀಡಿದ್ದಾರೆ.

ಕಂಚುಗಾರ ಬೆಳಗಲ್ಲು' ಎಂಬ ಸ್ಥಳನಾಮ ಇಂದು ರೆವಿನ್ಯೂ ದಾಖಲೆಯಲ್ಲಿ 'ಕೆಂಚಗಾರ ಬೆಳಗಲ್ಲು' ಎಂದು ದಾಖಲಾಗಿದೆ. ಇದು ವ್ಯಕ್ತಿನಾಮವಾಚಕವಾಗಿ ತೋರುತ್ತದೆ. ಒಂದು ಐತಿಹ್ಯದ ಪ್ರಕಾರ ಕೆಂಚ ಎಂಬವವನು ಬಿಳಿಕಲ್ಲುಗಳ ಮೇಲೆ ಇರುತ್ತಿದ್ದರಿಂದ ಆ ಹೆಸರು ಬಂದಿತೆಂದೂ ಹೇಳಲಾಗುತ್ತದೆ. ಚಾಲುಕ್ಯರ ೯೮೮ರ ಶಾಸನದಲ್ಲಿ ಈ ಊರಿನ ಹೆಸರು "ಕಞ್ಚಗಾರ ಬೆಳ್ಗಲಿ[೬೨] ಎಂದು ಉಲ್ಲೇಖಗೊಂಡಿದೆ. ಇದರಿಂದಾಗಿ ಈ ಗ್ರಾಮನಾಮ ವೃತ್ತಿವಾಚಿಯೆಂದು ಹೇಳಬಹುದು. ಅದರಂತೆ 'ತಾಂಬ್ರಹಳ್ಳಿ' ಗೂ 'ತಮ್ಮರಹಳ್ಳಿ' (ಅಣ್ಣ - ತಮ್ಮಂದಿರಿಗೆ ಸಂಬಂಧಿಸಿ) ಎಂಬ ಕಥೆ ಹೇಳಲಾಗುತ್ತದೆ. ಇದೂ ಕೂಡ ಲೋಹಮೂಲ ಗ್ರಾಮನಾಮವೆಂದು ನಿರ್ಧರಿಸಲು ಅನೇಕ ಆಧಾರಗಳಿವೆ. ಇವು ಕಂಚು, ತಾಮ್ರ ಮುಂತಾದ ಲೋಹಕಾರರ ಅಥವಾ ಲೋಹದೊರೆಯುವ ನೆಲೆವೀಡುಗಳೆಂದು ತಿಳಿಯಬಹುದು.

೨. ಇಂಗಳದಹಾಳು : ಇಂಗಳ' ಎಂಬುದು ಅಚ್ಚ ಕನ್ನಡದ ಪದ. ಇದರ ಅರ್ಥ - ಕೆಂಡ. ತೊಳೆದ ಇಂಗಳವೇ ಇಂಗಾಲ ಅಥವಾ ಇದ್ದಿಲು, ಗಣಿಗಳಿಂದ ತೆಗೆದ ಅದಿರುಗಳನ್ನು ಕೆಂಡದ ರಾಶಿಯಲ್ಲಿ ಕಾಯಿಸಿ ಶುದ್ಧವಾದ ಚಿನ್ನ ಮೊದಲಾದ ಲೋಹಗಳನ್ನು ಮಾಡುತ್ತಿದ್ದರಿಂದ ಅಲ್ಲಿದ್ದ ಊರಿಗೆ 'ಇಂಗಳದಹಳ್ಳಿ' ಅಥವಾ 'ಕೆಂಡದ ಊರು' ಎಂಬ ಹೆಸರುಗಳಾದವು. ಕಾಲಕ್ರಮದಲ್ಲಿ ಆ ಹಳ್ಳಿಗಳು ಹಾಳಾಗಿ, ನಂತರ ಜೀರ್ಣೋದ್ಧಾರವಾದ ಗ್ರಾಮಗಳೇ 'ಇಂಗಳದಹಾಳ್' ಎಂದಾಗಿವೆ. "ಇಂಗಳದಹಾಳು' ಎಂಬಂತಹ ಊರುಗಳು ತಾಮ್ರಯುಗದ ನೆಲೆಗಳೆಂದು ಹೇಳುವಲ್ಲಿ ಯಾವ ಅನುಮಾನಗಳೂ ಇಲ್ಲ."[೬೩] ಇಂಗುಳ ಎಂಬ ಒಂದು ಸಸ್ಯವೂ ಇದೆ. ಈ ಬಗೆಯ ನಿಷ್ಪತ್ತಿಗಳೂ ದೊರೆಯಲು ಸಾಧ್ಯವಿದೆ.

೩. ಹೊನ್ನೂರು : "ಕನ್ನಡನಾಡಿನಲ್ಲಿ ಇಂದು ಕಂಡುಬರುವ ಹೊನ್ನೂರು, ಹೊನ್ನಕುಂಟೆ ಮುಂತಾದ ಸ್ಥಳನಾಮಗಳು ಕೂಡ ಕನಕ (ಬಂಗಾರ)ವನ್ನು ತಯಾರು ಮಾಡುವ ನೆಲೆಗಳೇ ಆಗಿದ್ದವೆನ್ನಲು ಇತಿಹಾಸದಲ್ಲಿ

ಆಧಾರಗಳಿವೆ. ಖಂಡಿತಾ ಇವು ಪುರಾತತ್ವ ನೆಲೆಗಳಾಗಿದ್ದು, ಪ್ರಾಚೀನ ಕಾಲದ ಕೈಗಾರಿಕೋದ್ಯಮ ಹಾಗೂ ಕುಶಲಕರ್ಮಿಗಳ ಜೀವನ ಪದ್ಧತಿಯನ್ನು ಹೇಳುತ್ತವೆ."[೬೮] ಶಾಸನಗಳು ಪೊನಾಚಾರಿ,[೬೯] ಪಂಚಾಳಿಕ[೭೦] ಎಂಬ ಪದಗಳನ್ನು ಉಲ್ಲೇಖಿಸುತ್ತವೆ. ಇದರಿಂದ ಪ್ರಾಚೀನ ಕಾಲದ ಹಾಗೂ ವಿಜಯನಗರ ಅರಸರ ಕಾಲದಲ್ಲಿ ಅಕ್ಕಸಾಲಿಗರ ಒಂದು ಬಣ ಇಂಥ ಊರುಗಳಲ್ಲಿ ನೆಲೆಸಿ ಬಂಗಾರದಿಂದ ರಾಣಿಯರ ಸುಂದರ ಆಭರಣ ತಯಾರಿಕೆಯಲ್ಲಿ ತೊಡಗಿರಬಹುದೆನಿಸುತ್ತದೆ.

ಮೇಲಿನ ಸ್ಥಳನಾಮಗಳಿಂದ ಪ್ರಾಚೀನ - ಅರ್ವಾಚೀನ ಕಾಲದ ಕೈಗಾರಿಕೋದ್ಯಮ ಮತ್ತು ವೃತ್ತಿಯನ್ನವಲಂಬಿಸಿದ ಲೋಹಕಾರರ ಜೀವನವನ್ನು ತಿಳಿಯಲು ಸಾಧ್ಯವಾಗುತ್ತದೆ.

### ೭.೮. ವ್ಯಕ್ತಿನಾಮಾಧಾರಿತ ಸ್ಥಳನಾಮಗಳು

ಕಾಲ ದೇಶ ಪರಿಸರಕ್ಕೆ ತಕ್ಕಂತೆ ಮಾನವನ ಆಲೋಚನಾ ವಿಧಾನ ಜೀವನ ಶೈಲಿಯು ಅನೇಕ ಸ್ಥಿತ್ಯಂತರ ಪ್ರಕ್ರಿಯೆಗೆ ಒಳಪಡುತ್ತಲೇ ಇರುತ್ತದೆ. ಈ ಎಲ್ಲ ಸ್ಥಿತ್ಯಂತರಗಳು ಜೀವನ ವಿಧಾನದ ಜೊತೆ ಜೊತೆಗೆ ಆಯಾ ಭೌಗೋಳಿಕ ಪರಿಸರದ ಮೇಲೆ ವಿಶೇಷವಾಗಿ ಪ್ರಭಾವ ಬೀರುತ್ತದೆನ್ನಬಹುದು. ಸಂಸ್ಕೃತಿಯ ಪರಿಚಲನೆಯಲ್ಲಿ ಈ ರೀತಿಯ ಬದಲಾವಣೆ ಅನಿವಾರ್ಯ. ಸ್ಥಳನಾಮ ನಿರ್ದೇಶನದ ಆರಂಭಿಕ ಹಂತ ನೈಸರ್ಗಿಕ ವಾತಾವರಣವನ್ನು ಅವಲಂಬಿಸಿತ್ತು. ಮುಂದೆ ಸಂಸ್ಕೃತಿಯ ವಿಕಸನದ ಹಾದಿಯಲ್ಲಿ ಜನಾಂಗಿಕ ನಿಷ್ಠೆಗೆ ಈ ಪ್ರವೃತ್ತಿ ಸಾಗಿ ಬಂತು. ಇದರೊಂದಿಗೆ ಅಂದಂದಿನ ಸಮಾಜದಲ್ಲಿ ಯಾವುದೋ ಕಾರಣಕ್ಕೆ ವಿಶೇಷವಾದ ಘಟನೆಯಿಂದ, ಹೆಸರಾದ ವ್ಯಕ್ತಿಯನ್ನು ಒಂದೊಂದು ಗ್ರಾಮಕ್ಕೆ ಕರೆದರು. ಮುಂದೆ ಸ್ತ್ರೀ ಮತ್ತು ಪುರುಷರಾದಿಯಾಗಿ ಐತಿಹಾಸಿಕ, ಸಾಮಾಜಿಕ, ರಾಜಕೀಯ, ಇತ್ಯಾದಿ ಕಾರಣದಿಂದ ಸ್ಥಳನಾಮಗಳಿಗೆ ಹೆಸರಾಗಿ ನಿಂತುಕೊಳ್ಳಲಾರಂಭಿಸಿದರು. ಪರಂಪರೆಯ ನೆನಪಿಗಾಗಿ ಈ ಬಗೆಯ ನಾಮನಿರ್ದೇಶನ ನಡೆಯಿತು. ಆಧುನಿಕವಾಗಿ ವ್ಯಕ್ತಿಯನ್ನಾಧರಿಸಿದ ಸ್ಥಳನಾಮಗಳು ವೈವಿಧ್ಯ ನೆಲೆಯಲ್ಲಿ ಸ್ಥಾನವನ್ನು ಪಡೆದುಕೊಂಡಿವೆ.

ಒಟ್ಟು ಭೌಗೋಳಿಕ ಪರಿಸರವನ್ನು ಗಮನಿಸಿದಾಗ ವ್ಯಕ್ತ್ಯಂಶವುಳ್ಳ ಸ್ಥಳನಾಮಗಳು ಕಡಿಮೆಯೆಂದೇ ಹೇಳಬಹುದು. "ಅಲ್ಲದೇ ಕಾಲದ ದೃಷ್ಟಿಯಿಂದ ಈಚಿನವು. ಇತ್ತೀಚೆಗೆ ಜನರ ಮನೋಧರ್ಮ ಬದಲಾಗಿ ವ್ಯಕ್ತಿಪೂಜೆಯ ಅಂಶ ಅವರ ಜೀವನದಲ್ಲಿ ಬೆರೆತಂತೆ ಕಂಡರೂ, ದೊಡ್ಡ ಊರಿಗೆ ಒಬ್ಬ ವ್ಯಕ್ತಿಯ ಹೆಸರು ಕೊಡದೆ, ಕೇರಿಗೆ ಅಥವಾ ಒಂದು ಮನೆಯಡಿಗೆ ಗುರುತಿಸಲಿಕ್ಕಾಗಿ ಹೆಸರನ್ನಿಟ್ಟಿರುವುದು ಸಹ ಜನರ ಜೀವನ ದೃಷ್ಟಿಯನ್ನು ಬಿಂಬಿಸಬಲ್ಲದು."[೭೧] ಆದರೂ ಇಂದು ಅನೇಕ ನಗರ - ಪಟ್ಟಣಗಳಿಗೂ ವ್ಯಕ್ತಿಯ ಹೆಸರನ್ನು ಇಡುವುದು ಕಂಡು ಬರುತ್ತಿದೆ. ಇದು ಆಧುನಿಕ ಸಮಾಜ ನಾಮಗಳಿಗೆ ಆಕರಗಳನ್ನಾಗಿ ಸ್ವೀಕರಿಸಿದ ಒಂದು ಬಗೆಯೆನ್ನಬಹುದು.

ಭೌಗೋಳಿಕ ಪರಿಸರಕ್ಕನುಗುಣವಾಗಿ ವ್ಯಕ್ತಿಯಾಧಾರಿತ ಸ್ಥಳನಾಮಗಳು ಬದಲಾಗುತ್ತಾ ಹೋಗುತ್ತವೆ. ದಟ್ಟವಾದ ನೈಸರ್ಗಿಕ ಕಾಡು - ಬೆಟ್ಟಗಳಿಂದ ತುಂಬಿದ ದಕ್ಷಿಣ ಕನ್ನಡದಲ್ಲಿ ಕಡಿಮೆಯೂ, ಉತ್ತರದಲ್ಲಿ ಬಯಲು

ನಾಡಾದ್ದರಿಂದ ಹೆಚ್ಚಾಗಿಯೂ, ಮುಸ್ಲಿಂ ಮತ್ತು ಆಂಗ್ಲ ಆಡಳಿತದ ದಟ್ಟ ಪ್ರಭಾವವಿದ್ದಲ್ಲಿ ಆಯಾ ನಾಯಕರಿಗೆ ಸಂಬಂಧಿಸಿದ ಊರುಗಳು ಹೆಚ್ಚಾಗಿರುವುದು ತಿಳಿಯುತ್ತದೆ. ಅಲ್ಲದೆ ದೈವವನ್ನೇ ನಂಬಿರುವ ನಮ್ಮ ಸಾಂಪ್ರದಾಯಿಕ ಸಮಾಜದಲ್ಲಿ ದೈವಕ್ಕೆ ಸಂಬಂಧಿಸಿದ ಸ್ಥಳನಾಮಗಳೇ ಬಹುತೇಕ ಕಂಡು ಬರುತ್ತವೆ.

ಆಂಧ್ರ - ಕರ್ನಾಟಕ ಗಡಿಭಾಗದಲ್ಲಿ ಕಂಡುಬರುವ ವ್ಯಕ್ತಿನಾಮ ಆಧಾರಿತ ಸ್ಥಳನಾಮಗಳ ಪಟ್ಟಿ ಹೀಗಿದೆ.

| ALR | ADN | BLR | SRP |
|---|---|---|---|
| ಕಾಮನಹಾಳ್ | ಈರನಗಲ್ಲು | ಅಮರಾಪುರಂ | ಅಕ್ಕತಂಗೇರಹಾಳ್ |
| ಗುಮ್ಮನೂರು | ಕಾಮನದೊಡ್ಡಿ | ಇಬ್ರಾಹಿಂಪುರ | ಇಬ್ರಾಹಿಂಪುರ |
| ಚಿರುಮನದೊಡ್ಡಿ | ಕಾಟೇದೊಡ್ಡಿ | ಕಕ್ಕಬೇವೇನಹಳ್ಳಿ | ಕೆಂಚನಗುಡ್ಡ |
| ಚೊಕ್ಕನಹಳ್ಳಿ | ಕಾಮವರಂ | ಕುಂತನಹಳ್ಳಿ | ಗಜ್ಜಿಗನಹಾಳು |
| ದಂಡನಾಯಕನಪುರ (ಧಣಾಪುರ) | ಕುಂಟನಹಾಳ್ | ಗೊಲ್ಲನಾಗೇನಹಳ್ಳಿ | ದಾಸಪುರ |
| ತಿಮ್ಮಾಪುರಂ | ಗೌಡಗಲ್ಲು | ಚಿಟಿಗನಹಾಳ್ | ದೇವಲಾಪುರ |
| ನಾಗನಾಥನಹಳ್ಳಿ | ತಾರಾಪುರಂ | ಜಾನಿಕುಂಟ | ನಾಗಲಾಪುರ |
| ನಾರಾಯಣಪುರ | ತಿಪ್ಪಲದೊಡ್ಡಿ | ತಿಮಲಾಪುರ | ಪೊಪ್ಪನಹಾಳ್ |
| ಬಂಟನಹಾಳ್ | ದೊಡ್ಡನಕೇರಿ | ದಾಸರನಾಗೇನಹಳ್ಳಿ | ಬ್ಯಾಗರಾಮದಿನ್ನ |
| ಮಲ್ಲಿಕಾರ್ಜುನಹಳ್ಳಿ | ನಾರಾಯಣಪುರ | ಪರಮದೇವನಹಳ್ಳಿ | ಬೀರಳ್ಳಿ |
| ಮಾಚನೂರು | ಪಾಂಡವಗಲ್ಲು | ಬುರ್ರನಾಯಕನಹಳ್ಳಿ | ಭೈರಾಪುರ |
| ಮುದ್ದನಗೇರಿ | ಬಂಟಕುಂಟೆ | ಭೈರದೇವನಹಳ್ಳಿ | ಮಂಜನಹಾಳು |
| ಮೂಸನಹಳ್ಳಿ | ಬಸಲದೊಡ್ಡಿ | ಮಲ್ಲಾಪುರಂ. ಎಸ್. | ಮಾಳಾಪುರ |
| ರಾಮದುರ್ಗಂ | ಬಸಾಪುರಂ - ೧ | ಯಮ್ಮಿಗನೂರು | ಮುದನೂರು |
| ವಿರುಪಾಪುರ | ಬಸಾಪುರಂ - ೨ | ರಾಯಪುರಂ | ಮೈಲಾಪುರ |
| ಶಂಕರಬಂಡೆ | ಮಲ್ಲನಹಟ್ಟಿ | ವೀರಾಪುರಂ | ರವಿಹಾಳು |
| ಶ್ರೀರಾಮನಗರ | ರಂಗಾಪುರಂ | ವೇಣಿ ವೀರಾಪುರ | ವೆಂಕಟಾಪುರ |
| ಸಿದ್ದಾಪುರ | ವಿರುಪಾಪುರಂ | ಶಂಕರಬಂಡ | ಸನವಾಸಪುರ |
| ಸಿದ್ಧರಹಾಳ್ | ಸಾಂತನೂರು | ಸಂಗನಕಲ್ಲು | ಸಾಲಿಗನೂರು |
| | ಸಾಂಬಗಲ್ಲು | ಸಂಜೀವರಾಯನಕೋಟೆ | ಸಿದರಗದ್ದೆ |
| | ಸುಲ್ತಾನಪುರ | ಸಿದ್ದಮ್ಮನಹಳ್ಳಿ | ಸಿದ್ಧರಾಮಪುರ |
| | ಸೂಳಕೆರೆ | ಸಿಡಿಗನಮೊಲ | |
| | ಹನವಾಳು | ಸಿದ್ಧರಗುಡ್ಡ | |
| | | ಸಿಂಗದೇವನಹಳ್ಳಿ | |
| | | ಸೋಮಲಾಪುರ | |
| | | ಸೋಮಸಮುದ್ರ | |

ಈ ಪಟ್ಟಿಯನ್ನು ಗಮನಿಸಿದರೆ ಮುಖ್ಯವಾಗಿ ತಿಳಿಯುವುದೆಂದರೆ ಆಂಧ್ರ ಮತ್ತು ಕರ್ನಾಟಕದ ಗಡಿಭಾಗದುದ್ದಕ್ಕೂ ವ್ಯಕ್ತಿನಾಮಾಧಾರಿತ - ಸ್ಥಳನಾಮಗಳು ಹೆಚ್ಚಾಗಿವೆ.

| ಆಲೂರು ತಾಲ್ಲೂಕು | | ಆದವಾನಿ ತಾಲ್ಲೂಕು | | ಬಳ್ಳಾರಿತಾಲ್ಲೂಕು | | ಸಿರುಗುಪ್ಪತಾಲ್ಲೂಕು | |
|---|---|---|---|---|---|---|---|
| ಒಟ್ಟು ಸ್ಥಳನಾಮಗಳು | ವ್ಯಕ್ತಿಯಾಧಾರಿತ ಸ್ಥಳನಾಮಗಳು | ಒಟ್ಟು ಸ್ಥಳನಾಮಗಳು | ವ್ಯಕ್ತಿಯಾಧಾರಿತ ಸ್ಥಳನಾಮಗಳು | ಒಟ್ಟು ಸ್ಥಳನಾಮಗಳು | ವ್ಯಕ್ತಿಯಾಧಾರಿತ ಸ್ಥಳನಾಮಗಳು | ಒಟ್ಟು ಸ್ಥಳನಾಮಗಳು | ವ್ಯಕ್ತಿಯಾಧಾರಿತ ಸ್ಥಳನಾಮಗಳು |
| ೯೯ | ೧೯ | ೧೧೮ | ೨೪ | ೧೦೭ | ೨೬ | ೮೫ | ೨೧ |

ವ್ಯಕ್ತಿನಾಮಾಧಾರಿತ ಸ್ಥಳನಾಮಗಳನ್ನು ಮುಖ್ಯವಾಗಿ ಈ ಮುಂದಿನಂತೆ ವರ್ಗೀಕರಿಸಬಹುದು.

೧. ಪೌರಾಣಿಕ ವ್ಯಕ್ತಿ ಪ್ರಧಾನ ಸ್ಥಳನಾಮಗಳು :

ನಾರಾಯಣಪುರ
ಪಾಂಡವಗಲ್ಲು
ರಾಮಾಪುರ
ರಾಮದುರ್ಗ
ಶಂಕರಬಂಡೆ
ಶ್ರೀರಾಮನಗರ
ಸಾಂಬಗಲ್ಲು
ಸಿದ್ಧರಾಮಾಪುರ
ಸೋಮಸಮುದ್ರ

೨. ಚಾರಿತ್ರಿಕ ವ್ಯಕ್ತಿ ಪ್ರಧಾನ ಸ್ಥಳನಾಮಗಳು :

ಅಮ್ಮಾಪುರ (ಕುರುಗೋಡು ಕೈಫಿಯತ್ತು)
ಕೊಂಡಲನಾಯಕನಗುಡ್ಡ (ಕುರುಗೋಡು ಕೈಫಿಯತ್ತು)
ಚಿರುಮನದೊಡ್ಡಿ
ದಂಡನಾಯಕನಪುರ
ನಾಯಕನಕೆರೆ (ಕುರುಗೋಡು ಕೈಫಿಯತ್ತು)
ಬಂಟನಹಾಳು
ಬುರ್ರನಾಯಕನಹಳ್ಳಿ
ಮಾಚನೂರು
ಯಮ್ಮಿಗನೂರು
ಯಲ್ಲಾಪುರ (ಕುರುಗೋಡು ಕೈಫಿಯತ್ತು)
ವಿರುಪಾಪುರ
ಸಂಜೀವರಾಯನಕೋಟೆ
ಸುಲ್ತಾನಪುರ
ಹಗಲಭತ್ತನ ಕೆರೆ (ದರೋಜಿ ಕೈಫಿಯತ್ತು)

೩. ಸಾಮಾಜಿಕ ವ್ಯಕ್ತಿ ಪ್ರಧಾನ ಸ್ಥಳನಾಮಗಳು :

ಅಕ್ಕತಂಗೇರಹಾಳ್
ಇಬ್ರಾಹಿಂಪುರ
ಈರನಗಲ್ಲು
ಕುಂಟನಹಾಳ್
ಗೌಡಗಲ್ಲು
ಗೊಲ್ಲನಾಗೇನಹಳ್ಳಿ
ಜಿಂಕಲಹರಿವಿನಗುಡ್ಡ (ಕುರುಗೋಡು ಕೈಫಿಯತ್ತು)
ನಾಗಲಿಂಗಯ್ಯನ ಗುಡ್ಡ (ಕುರುಗೋಡು ಕೈಫಿಯತ್ತು)
ಮಲ್ಲಿಕಾರ್ಜುನಹಳ್ಳಿ
ಮಾದಿಗನ ಕೊಳ್ಳ - ನಿರ್ವಸತಿ
ರೆಡ್ಡಿಬಯಲು - ನಿರ್ವಸತಿ.

ಸಾಮಾನ್ಯವಾಗಿ ಈ ಮೂರುಬಗೆಯ ಸ್ಥಳನಾಮ ನಿರ್ದೇಶನಕ್ಕೆ ಕಾರಣಗಳಿವೆ. ಪೌರಾಣಿಕ ವ್ಯಕ್ತಿನಾಮಗಳು ಸ್ಥಳಗಳಿಗೆ ಇಟ್ಟದ್ದು ಆರಂಭಿಕ ಹಂತವೆನ್ನಬಹುದು. ಬಹುತೇಕ ಈ ಸ್ಥಳನಾಮಗಳು ಪ್ರಾಚೀನವಾದುವುಗಳಾಗಿರುತ್ತವೆ. ಚಾರಿತ್ರಿಕ ವ್ಯಕ್ತಿ ಪ್ರಧಾನ ಸ್ಥಳನಾಮಗಳು ನಂತರದ ಕಾಲಾವಧಿಯಲ್ಲಿ ಬಂದಂತವುಗಳೆಂದು ಗುರುತಿಸಬಹುದು. ವ್ಯವಸ್ಥಿತ ರಾಜಕೀಯ ನೆಲೆ ಆರಂಭವಾದಾಗ ಚಾರಿತ್ರಿಕ ವ್ಯಕ್ತಿನಾಮಗಳು ಸ್ಥಳಗಳ ಹೆಸರಾಗಿ ಎಡೆಪಡೆದವು. ನಂತರದ ಅವಧಿಯಲ್ಲಿ ಸಾಮಾಜಿಕರ ಬದುಕು ಗಾಢವಾದಂತೆ ತಮ್ಮಲ್ಲಿಯೇ ಮುಖ್ಯವಾದಂತಹ ವ್ಯಕ್ತಿಗಳ ಹೆಸರುಗಳನ್ನು ತಮ್ಮ ನೆಲೆಗಳಿಗೆ ಕರೆದುಕೊಂಡದ್ದನ್ನು ಈ ಮೂಲಕ ಗುರುತಿಸಬಹುದು.

ನಮ್ಮನಾಡಿನ ಜನತೆಗೆ ಪುರಾಣ, ದೈವ ಪ್ರಜ್ಞೆ ಹೆಚ್ಚು. ಈ ಕಾರಣದಿಂದ ರಾಮಾಯಣ ಮಹಾಭಾರತ - ಭಾಗವತಾದಿಗಳಲ್ಲಿ ಬರುವ ಪುರಾಣಪುರುಷರು, ಅಲ್ಲದೆ ಇನ್ನಿತರ ಅನೇಕ ದೇವರುಗಳ ಹೆಸರನ್ನು ತಾವು ವಾಸಿಸುವ ನೆಲೆಗಳಿಗೆ ಇಟ್ಟರೆ ಶುಭವಾಗುತ್ತದೆಂದು ನಂಬುತ್ತಾರೆ. ಇದರಿಂದ ಈ ಬಗೆಯ ಅನೇಕ ಸ್ಥಳನಾಮಗಳು ಜನ್ಮತಾಳಿವೆ.

ಚರಿತ್ರೆಯಲ್ಲಿ ಆಗಿಹೋದ, ರಾಜ, ರಾಣಿ, ಮಂತ್ರಿ, ನಾಯಕ, ಸಾಮಂತ, ದಂಡಾಧಿಪತಿ ಹೀಗೆ ಅನೇಕ ವ್ಯಕ್ತಿಗಳೆಲ್ಲರ ಹೆಸರಿನಿಂದ ಸ್ಥಳನಾಮಗಳಿವೆ. ವೀರ - ಮಾಸ್ತಿ ಹೋದ ವ್ಯಕ್ತಿಗಳೂ ಸ್ಥಳಕ್ಕೆ ಹೆಸರುಗಳಾಗಿ ನಿಂತದ್ದನ್ನು ಈ ಬಗೆಯ ಸ್ಥಳನಾಮಗಳಲ್ಲಿ ಕಾಣಬಹುದು.

ಸಾಮಾನ್ಯರು ಅಂದರೆ ದೈನಂದಿನ ಚಟುವಟಿಕೆಗಳಲ್ಲಿ ಉನ್ನತ ವ್ಯಕ್ತಿತ್ವವನ್ನು ಮೆರೆದ ಹಿರಿಯರು, ಲೋಕೋಪಯೋಗಿ ಕಾರ್ಯಗಳನ್ನು ಮಾಡಿದ ಸೂಳೆಯರು, ಸ್ತ್ರೀಯರು, ಸಾಮಾನ್ಯರ ಹೆಸರುಗಳಿಂದ ಸ್ಥಳಗಳು ನಿರ್ದೇಶಿಸಲ್ಪಟ್ಟಿವೆ.

ಮುಖ್ಯವಾಗಿ ನಮ್ಮ ಸಮಾಜದ ವರ್ಗ, ವರ್ಣ ವ್ಯವಸ್ಥೆಯಲ್ಲಿ ಮೇಲ್ವರ್ಗದ, ಅಧಿಕಾರಿಗಳ, ರಾಜರ ಹೆಸರುಗಳೇ ಸ್ಥಳನಾಮಗಳಾಗಿವೆ. ಸಮಾಜದಲ್ಲಿ ಸೂಳೆಯಾಗಿಯೂ ಸ್ಥಳನಾಮಗಳಿಗೆ ಹೆಸರಾಗಿ ನಿಂತ ಉದಾಹರಣೆಗಳಿವೆ. ಆದರೆ ಕೆಳಜಾತಿಯ, ಅಸ್ಪೃಶ್ಯರ ಅಥವಾ ಸಾಮಾನ್ಯರ ಹೆಸರಿನಲ್ಲಿ ಸ್ಥಳನಾಮಕರಣಗೊಂಡಿರುವುದು ವಿರಳ. ಎಲ್ಲೋ ಅಲ್ಲೊಂದು ಇಲ್ಲೊಂದರಂತೆ ಕೆಲವು ಸ್ಥಳನಾಮಗಳು ಕಾಣಿಸುತ್ತವೆ.

ಸ್ತ್ರೀಯರನ್ನು ಅಷ್ಟು ಪ್ರಮುಖವಾಗಿ ಗಣಿಸದ ಸಾಂಪ್ರದಾಯಿಕ ಸಮಾಜದಲ್ಲಿಯೂ ಸ್ಥಳನಾಮಗಳು ನಿರ್ದೇಶನಗೊಂಡುದ್ದು ವಿಶೇಷವೇ ಎನ್ನಬೇಕು. ಆರಂಭದಲ್ಲಿ ರಾಜಶಾಹಿ, ಅಧಿಕಾರಿ, ಮೇಲ್ವರ್ಗಕ್ಕೆ ಸೀಮಿತವಾದ ಈ ಸ್ತ್ರೀಯ ಹೆಸರುಗಳು, ಕ್ರಮೇಣ ಸಾಮಾನ್ಯ ಮಹಿಳೆಯರ ಹೆಸರಿನಿಂದಲೂ ಸ್ಥಳಗಳು ನಾಮಕರಣಗೊಂಡಿವೆ. ಗಡಿಭಾಗದಲ್ಲಿ ಸ್ತ್ರೀವಾಚಿ ಸ್ಥಳನಾಮಗಳು ವಿರಳವಾಗಿವೆ.

ವ್ಯಕ್ತ್ಯಂಶಗಳುಳ್ಳ ಸ್ಥಳನಾಮಗಳ ವರ್ಗೀಕರಣದಲ್ಲಿ ಕೆಲವು ತೊಂದರೆಗಳಿವೆ. ಪುರಾಣ ಪುರುಷ, ಚಾರಿತ್ರಿಕ ವ್ಯಕ್ತಿ, ಸಾಮಾನ್ಯ ಎಂದು ಗುರುತಿಸುವುದು ಕೆಲವೊಮ್ಮೆ ತೊಂದರೆ. ಆಯಾ ಊರುಗಳ ಸರಿಯಾದ, ನಿಜ ನಿಷ್ಪತ್ತಿ ಅಥವಾ ಘಟನೆಯ ವಿವರಗಳಿದ್ದರೆ ಈ ತೊಂದರೆಯಿಲ್ಲ. ನಾರಾಯಣಪುರ ಅಥವಾ ಶ್ರೀರಾಮಪುರ ಎಂದಿದ್ದರೆ ಇವನು ವ್ಯಕ್ತಿಯೂ ಆಗಬಹುದು. ಪುರಾಣಪುರುಷನೂ, ಚಾರಿತ್ರಿಕ ವ್ಯಕ್ತಿಯೂ ಆಗಬಹುದು.

ಆಧುನಿಕವಾಗಿ ಸ್ವಾತಂತ್ರ ಹೋರಾಟಗಾರರು, ಸಾಹಿತಿಗಳು, ರಾಜಕೀಯನಾಯಕರು, ಬಂಡವಾಳಶಾಹಿಗಳು ಮುಂತಾದವರ ಹೆಸರುಗಳು ಬೀದಿಗಳಿಗೆ, ಕೆಲವು ಗ್ರಾಮಗಳಿಗೆ ಇಡಲಾಗುತ್ತಿದೆ. ಅದರಲ್ಲಿಯೂ ಇಂದು ಹೆಚ್ಚಾಗಿ ಪುರುಷರ ಹೆಸರುಗಳೇ ನಾಮ ನಿರ್ದೇಶಿತವಾಗುತ್ತಿವೆ. ಇದು ಸಂಪ್ರದಾಯವನ್ನು ಅನುಸರಿಸುವ ಒಂದು ಮಾದರಿ. 'ಇಂದಿರಾ' ಮುಂತಾದವರ ಹೆಸರು ಮಾತ್ರ ಅಲ್ಲಲ್ಲಿ ಕಾಣುತ್ತದೆ. ಅದೇನೇ ಇದ್ದರೂ ಇಂತಹ ವ್ಯಕ್ತ್ಯಂಶವುಳ್ಳ ಸ್ಥಳನಾಮಗಳಿಂದಲೂ ಕೂಡ ಸಾಂಸ್ಕೃತಿಕ ಅನಾವರಣಕ್ಕೆ ಆಧಾರಗಳಾಗಿ ತೆಗೆದುಕೊಳ್ಳಬಹುದು.

## ೭.೯. ಸಂಸ್ಕೃತೀಕರಣ ಪ್ರಕ್ರಿಯೆ (Sanskritisation)

ಸ್ಥಳನಾಮಗಳು ಕನ್ನಡ ಮತ್ತು ತೆಲುಗು ಭಾಷೆಯಿಂದ ಸಂಸ್ಕೃತಭಾಷೆಗೆ ರೂಪಾಂತರ ಹೊಂದುವುದನ್ನು (ಯಳ್ಳಾರ್ತಿ - ತಿಲಪುರ) ಇಲ್ಲಿ ಸಂಸ್ಕೃತೀಕರಣ ಎಂದು ಕರೆಯಲಾಗಿದೆ. ಕನ್ನಡ - ತೆಲುಗು ಮುಂತಾದ ದ್ರಾವಿಡ ಭಾಷೆಗಳನ್ನು ಸಂಸ್ಕೃತಭಾಷೆಯು ವಿವಿಧ ಬಗೆಯಲ್ಲಿ ಪ್ರಭಾವಿಸಿದೆ. ಸಹಜವಾಗಿಯೇ ಇದು ಆಯಾ ಸಾಹಿತ್ಯದ ಮೇಲೂ ತನ್ನ ಭೂಯಿಷ್ಠತೆಯನ್ನು ಸಾಧಿಸಿದೆ. ಅಂತೆಯೇ ಸ್ಥಳನಾಮಗಳಲ್ಲಿಯೂ ಸಂಸ್ಕೃತಭಾಷೆಯ ಅನುಕರಣೆಯು ಸಾಕಷ್ಟು ನಡೆದಿದೆ. ಆದರೆ ಆಡು ಮಾತಿನಲ್ಲಿ ಸಂಸ್ಕೃತ ಭಾಷೆಯ ಒತ್ತಡ ಅಥವಾ ಪ್ರಭಾವ ಅಷ್ಟಾಗಿ ಇಲ್ಲವೆನ್ನಬಹುದು. ಗ್ರಾಂಥಿಕ ಭಾಷೆಗೆ ಇದರ ಪ್ರೇರಣೆ ಒದಗಿ ಬಂದಿದ್ದರಿಂದ ಪ್ರಾಚೀನರಲ್ಲಿ ಬಹುಪಾಲು ಮಂದಿ ಬ್ರಾಹ್ಮಣರೇ ಸಂಸ್ಕೃತವನ್ನು ಬಲ್ಲ ಪಂಡಿತರಾಗಿದ್ದರು. ಈ ದೃಷ್ಟಿಯಿಂದ ಇವರು ತಮ್ಮ ಸಂಸ್ಕೃತ ಭಾಷೆಯ ಪ್ರಭಾವವನ್ನು ಹೆಸರುಗಳ ಮೇಲೆ ಪ್ರಭಾವಗೊಳಿಸಿದ್ದಾರೆ. ಸಾಮಾನ್ಯ ಜನರು ಸಂಸ್ಕೃತದಿಂದ ದೂರವಿದ್ದರು. ಪಂಡಿತರ ಅನುಕರಣೆಗೆ ಇವರ ಅನುಮತಿಯೂ ಅಪ್ರಜ್ಞಾಪೂರ್ವಕವಾಗಿ ಇತ್ತು. "ಊರಲ್ಲಿ ಪಂಡಿತರೆಂದು ಪ್ರಸಿದ್ಧರಾಗಿರುವ ಇವರ ಹೇಳಿಕೆಯನ್ನು ಸಾಮಾನ್ಯರು ನಿಜವೆಂದೇ ನಂಬುತ್ತಿದ್ದರು. ಇಂಥ ಪುರಾಣ ಕಥೆಗಳು ಬ್ರಾಹ್ಮಣರ ಪ್ರಸಿದ್ಧ ದೇವಾಲಯವಿರುವ ಊರುಗಳ ವಿಷಯವಾಗಿ ತಪ್ಪದೇ ಕೇಳಿಬರುತ್ತವೆ. ಏಕೆಂದರೆ ದೇವಾಲಯವನ್ನು ಶೋಷಣೆಯ ಕೇಂದ್ರವನ್ನಾಗಿ ಬೆಳೆಸುವುದಕ್ಕಾಗಿ ಇಂಥ ವೈಭವಯುತವಾದ ಕಥೆಗಳನ್ನು ಸೃಷ್ಟಿಸುವುದು ಅವರಿಗೆ ಅವಶ್ಯವಾಗಿರುತ್ತಿತ್ತು. ಈ ಪುರಾಣ ಮೂಲ ನಿಷ್ಪತ್ತಿ ಒಂದು ಪೌರಾಣಿಕ ಕಥೆಯಾಗಿ ಬೆಳೆದಿರುತ್ತಿದ್ದು, ಪುರೋಹಿತರು ಇಂಥ ಕಥೆಗಳನ್ನು ರೂಪಿಸುತ್ತಾರೆ. ಊರಲ್ಲಿನ ಪಂಡಿತರು ವಾತಾವರಣವನ್ನು ಆರ್ಯೀಕರಿಸಲು ಮಾಡಿದ ಪ್ರಯತ್ನಗಳಿವು."[೮] ಊರುಗಳಲ್ಲಿನ ದೇವಾಲಯಗಳಲ್ಲಿ ಹಾಡುವ ಭಜನಾಪದ ಮತ್ತು ಮಂಗಳಾರತಿ ಪದಗಳಲ್ಲಿ ಕೊನೆಯ ಭಾಗದಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಸ್ಥಳನಾಮವು ಸಂಸ್ಕೃತೀಕರಣಗೊಂಡಿರುತ್ತವೆ. ಇದಕ್ಕೆ ಕಾರಣ ಸಂಸ್ಕೃತ ಭಾಷೆಯನ್ನು ಹೇಳುವ ಮೂಲಕ ಯಾವುದೋ ರೀತಿಯ ಹೆಗ್ಗಳಿಕೆಯೆಂಬ ಮನೋಭಾವವೂ ಇವರಲ್ಲಿದೆ. ಇದು ಕೇವಲ ಪಂಡಿತರು ಮಾಡಿದ ಹುನ್ನಾರ. ಆದರೂ ಇಂದು ಜನಸಾಮಾನ್ಯರೂ ಕೂಡ ಗ್ರಾಮೀಣ ಪರಿಸರದಲ್ಲಿ ಈ ಬಗೆಯ ಸಂಸ್ಕೃತದ ಮೋಹಕ್ಕೆ ಒಳಗಾಗುತ್ತಿದ್ದಾರೆ. ಅದೇನಿದ್ದರೂ ಮೂಲ ಹೆಸರು ಎಂದೂ ಮರೆಮಾಚದಂತೆ ಉಳಿಸಿರುವುದೂ ಕೂಡ ಈ ಜನಸಾಮಾನ್ಯರೇ ಎಂಬುದು ಗಮನಾರ್ಹ ಸಂಗತಿ.

ಈ ಸಂಸ್ಕೃತೀಕರಣ ಮಾಡುವಲ್ಲಿಯೂ ಅನೇಕ ಪ್ರಮಾದಗಳಾಗಿವೆ. ಪಂಡಿತರೆಂದುಕೊಂಡಿರುವವರು ದೇಶೀಯವಾದ ಸ್ಥಳನಾಮವನ್ನು ಯಥಾವತ್ತಾಗಿ ಸಂಸ್ಕೃತಕ್ಕೆ ಅಳವಡಿಸುವಾಗ - ತಪ್ಪುಭಾಷಾಂತರ; ಅನ್ಯಥಾಮೂಲ ಸ್ಖಾಲಿತ್ಯ; ಮೂಲ ನಿಷ್ಪತ್ತಿಯ ಬಗ್ಗೆ ಅಸ್ಪಷ್ಟಭಾವನೆ: ಯಥಾವತ್ತು ಭಾಷಾಂತರ ಮಾಡುವಲ್ಲಿ ಸ್ಥಳನಾಮದ ವಿಕೃತಿಗೆ ಕಾರಣವಾಗುವುದು ಮುಂತಾದ ಅಚಾತುರ್ಯಗಳು ಘಟಿಸುತ್ತವೆ. ಪ್ರಜ್ಞಾ ಮತ್ತು ಅಪ್ರಜ್ಞಾ: ಅವಿವೇಕದಿಂದ ನಡೆಯುವ ಈ ಪ್ರಕ್ರಿಯೆಯಿಂದ ತಪ್ಪು ಗ್ರಹಿಕೆಯು ಹೆಚ್ಚಾಗಿ ನಿಜ ನಿಷ್ಪತ್ತಿಯಿಂದ ದೂರ ಉಳಿಯಬೇಕಾಗುತ್ತದೆ.

ಅಧ್ಯಯನ ಕ್ಷೇತ್ರದಲ್ಲಿ ಸಂಸ್ಕೃತೀಕರಣಗೊಂಡ ಕೆಲವು ಸ್ಥಳನಾಮಗಳು ಹೀಗಿವೆ.

| ಮೂಲ ಸ್ಥಳನಾಮಗಳು | ಸಂಸ್ಕೃತೀಕರಣಗೊಂಡ ಸ್ಥಳನಾಮಗಳು |
|---|---|
| ಆದವಾನಿ | ಯಾದವಗಿರಿ - ADN |
| ಆಸ್ಪರಿ | ಅಶ್ವಪುರಿ - ALR |
| ಆನೆಗೊಂದಿ | ಗಜಗಹ್ವರ - BLR |
| ಆಲೂರು | ಕ್ಷೀರಪುರ - ALR |
| ಎಮ್ಮಿಗನೂರು | ಮಹಿಷಪುರ - ADN |
| ಏಳುಬೆಂಚಿ | ಸಪ್ತಪಲ್ಲಪುರಿ - BLR |
| ಒರುವಾಯಿ | ಏಕಶಿಲಾನಗರ - BLR |
| ಚಿಪ್ಪಗಿರಿ | ಶಿಲ್ಪಿಗಿರಿ - ALR |
| ಧಣಾಪುರ | ದ್ರೋಣಪುರ - ADN |
| ತಾಳೂರು | ಮಾಂಗಲ್ಯಪುರ - BLR |
| ನಾಗರಾಳು | ಸರ್ಪಾಸ್ತಿಗ್ರಾಮ - ALR |
| ದೇಸನೂರು | ಚಿತ್ರಶತಗ್ರಾಮ - SRP |
| ಪೆನುಗೊಂಡ | ಘನಶೈಲಗಿರಿ - ANT |
| ಬಲ್ಲೂರು | ಪ್ರಜ್ಞಾಪುರಿ - ALR |
| ಬಸರಕೋಡು | ಗರ್ಭಾದ್ರಿಪುರ - ALR |
| ಬಾಪುರಂ | ಬ್ರಹ್ಮಪುರ - ALR |
| ಬಿಳೇಹಾಳ್ | ಶ್ವೇತಪುರ - ALR |
| ಬೂದಿಗುಪ್ಪ | ಭಸ್ಮಾದ್ರಿಪುರ - SRP |
| ಬೆಲ್ಲೊಣೆ | ಧವಳಸಮುದ್ರ - ALR |
| ಮಂಚಾಲೆ | ಮಂತ್ರಾಲಯ - ADN |
| ಮೀನಹಳ್ಳಿ | ಮತ್ಸ್ಯಪುರ - BLR |
| ಮೀನಗೊಂದಿ | ಮತ್ಸ್ಯಾದ್ರಿ - ALR |
| ಮೋಕ | ಮೋಕ್ಷಪುರ - BLR |
| ಯಳ್ಳಾರ್ತಿ | ತಿಲಪುರಿ - ALR |
| ಹಂದಿಹಾಳ | ವರಾಹಪುರ - BLR |
| ಹದ್ದಿನಗುಂಡು | ಗರುಡಾದ್ರಿಶಿಲೆ - ADN |
| ಹಾಲಹರಿವಿ | ಕ್ಷೀರಸಾಗರ - ALR |
| ಹೊಸಳ್ಳಿ | ನೂತನಪುರ - SRP |
| ಹೊನ್ನೂರು | ಸ್ವರ್ಣಪುರ - SRP |
| ಹೊಳಲಗುಂದಿ | ಪೊಳಲಾದ್ರಿನಗರ - ALR |

ಈ ಸಂಸ್ಕೃತೀಕರಣ ಪ್ರಕ್ರಿಯೆಯಲ್ಲಿ ಮೂಲಸ್ಥಳನಾಮದ ಅರ್ಥ ಹಾಗೂ ಸಂಸ್ಕೃತಾನುಕರಣಗೊಂಡ ಅರ್ಥಕ್ಕೆ ಸಂಬಂಧವೇ ಇಲ್ಲದಿರುವುದನ್ನು ಗುರುತಿಸಬಹುದು. ಕೆಲವು ಮಾತ್ರ ಹತ್ತಿರದ ಸಂಬಂಧ ಹೊಂದಿವೆ. ವಾರ್ಗಿಕ ಮಟ್ಟದಲ್ಲಿ ಹೆಚ್ಚಾಗಿ ಸಂಬಂಧವಿರದಂತೆ ಸಂಸ್ಕೃತೀಕರಿಸಲಾಗಿದೆ. ನಿರ್ದಿಷ್ಟಮಟ್ಟದಲ್ಲಿ ಕೆಲವು ಪದಗಳು ಹೋಲುತ್ತವೆ.

ಹೀಗೆ ಸಂಸ್ಕೃತೀಕರಣ ಕ್ರಿಯೆಯು ಒಂದು ಕಾಲಕ್ಕೆ ನಿರಂತರವಾಗಿ ನಡೆಯುತ್ತಲೇ ಇತ್ತು. ಕ್ರಮೇಣ ಅವು ಶಾಶ್ವತವಾಗಿರದೇ, ಜನ ಬಳಕೆಯಿಂದ ಅತಿದೂರ ಉಳಿದವು. ಜೊತೆಗೆ ದಾಖಲೆಯಿಲ್ಲದೇ ಹೋದವು.

ಆಧುನಿಕತೆಯತ್ತ ಹೊರಟಿರುವ ಜನತೆಯು ಈ ಕ್ರಿಯೆಯಿಂದ ದೂರವೇ ಉಳಿದರಾದರೂ ಇಂಗ್ಲೀಷಿನ ಪ್ರೇರಣೆ, ಪ್ರಭಾವಕ್ಕೆ ಒಳಗಾಗಬೇಕಾಯಿತು. ಈ ಮೂಲಕ ಇಂಗ್ಲೀಷೀಕರಣ ಸ್ಥಳನಾಮಗಳಲ್ಲಿ ಪ್ರವೇಶಿಸಿತು.

ಬ್ರಿಟಿಷರ ಕರ್ನಲ್ ಮೆಕೆಂಝಿಯು ದೇಶೀಯ ವಿದ್ವಾಂಸರಿಂದ, ಬ್ರಾಹ್ಮಣರಿಂದ ಗ್ರಾಮಗಳ ಚರಿತ್ರೆಯನ್ನು ಬರೆಸಲು ಮುಂದಾದನು. ಈ ಕಾಲಾವಧಿಯು ಅಂದರೆ ೧೯ನೇ ಶತಮಾನವು 'ಸ್ಥಳನಾಮಗಳ ಸಂಸ್ಕೃತೀಕರಣದ ಪರಮಾವಧಿ' ಎಂದು ಗುರುತಿಸಬಹುದು. ಏಕೆಂದರೆ ಸ್ಥಳೀಯರು ಈ ಚರಿತ್ರೆಯನ್ನು ಬರೆಯುವ ದೃಷ್ಟಿಯಿಂದ ಸ್ಥಳಪುರಾಣಗಳು, ಐತಿಹ್ಯ - ಕಥೆ - ಕೈಫಿಯತ್ತುಗಳನ್ನು ನಿರ್ಮಿಸಿದರು. "ಕೈಫಿಯತ್ತುಗಳ ನಿರೂಪಕರೆಲ್ಲರೂ ಬ್ರಾಹ್ಮಣ ಮತ್ತು ಲಿಂಗಾಯತ ಮೇಲ್ವರ್ಗಕ್ಕೆ ಸೇರಿದವರಾಗಿದ್ದರು. ಈ ಮೇಲ್ವರ್ಗವು ಅಂದಿನ ಕಾಲಘಟ್ಟದಲ್ಲಿ ಸಾಂಸ್ಕೃತಿಕವಾಗಿ ಕ್ರಿಯಾಶೀಲವಾಗಿತ್ತು. ಆದುದರಿಂದ ವಸಾಹತು ಶಾಹಿಯ ಒಡೆತನದಿಂದ ಆ ಕಡೆ ಪಾಶ್ಚಾತ್ಯ ಸಂಸ್ಕೃತಿಯಿಂದ ತಾನೇ ನಿರ್ಮಿಸಿಕೊಂಡ ಉಂಬಳಿಗಮಾನ್ಯ ಪದ್ಧತಿ ಮತ್ತು ಯುರೋಪಿಯನ್ನರು ಹುಟ್ಟುಹಾಕಿದ ಖಾಸಗೀ ಭೂ ಒಡೆತನದ ಫಲವಾಗಿ ತನ್ನ ಸಾಮಾನ್ಯ ಜನವರ್ಗದಿಂದ ಲಾಭಪಡೆದೂ ಅವರಿಂದ ದೂರನಿಂತರು. ವಸಾಹತುಶಾಹಿಯ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾದ ಈ ವರ್ಗವು ತನ್ನ ಪ್ರಾಚೀನ ಸಾಂಸ್ಕೃತಿಕ ಮೌಲ್ಯಗಳಿಂದ ಪ್ರತಿಕ್ರಿಯಿಸಲು ಹೊರಟರು."[೬] ಈ ಸಮಯಾವಕಾಶದಲ್ಲಿ ಸ್ಥಳನಾಮಗಳು ಅನೇಕ ಬಗೆಯಲ್ಲಿ ಸಂಸ್ಕೃತೀಕರಣ ಗೊಂಡಿರುವುದು ತಿಳಿಯುತ್ತದೆ. ಆ ಮೂಲಕ ಮೇಲ್ವರ್ಗದ ಸಾಮಾಜಿಕ ನೀತಿ ಅಥವಾ ಸಾಂಸ್ಕೃತಿಕತೆಯು ಸಂಸ್ಕೃತಾನುಕರಣಕ್ಕೆ ಶರಣಾಗುವುದು ತಿಳಿಯುತ್ತದೆ.

ಮೇಲ್ವರ್ಗದ ಸೃಷ್ಟಿಯಿಂದ ಈ ಸ್ಥಳನಾಮಗಳು ಆ ಕಾಲಘಟ್ಟದ ವಸಾಹತುಶಾಹಿಯ ಸಾಮಾಜಿಕ ಸ್ಥಿತ್ಯಂತರಕ್ಕೆ ಸಾಂಪ್ರದಾಯಿಕ ಮೌಲ್ಯದಿಂದ ನೀಡಿದ ಪ್ರತಿಕ್ರಿಯೆ. ಆದ್ದರಿಂದ ಬದಲಾವಣೆಯು ಶಾಶ್ವತವಾಗಿ ಉಳಿಯಲಾರದು. ಆದ್ದರಿಂದಲೇ ನಮ್ಮಲ್ಲಿ ಸ್ಥಳನಾಮಗಳು 'ದೇಶ್ಯೀಕರಣ'ದ ಮೂಲಕ ಮರುಹುಟ್ಟನ್ನು ಪಡೆದುಕೊಂಡವು.

### ೭.೧೦. ದೇಶ್ಯೀಕರಣ ಪ್ರಕ್ರಿಯೆ (Nativisation)

ಸ್ಥಳನಾಮಗಳಲ್ಲಿ 'ಸಂಸ್ಕೃತೀಕರಣ'ಕ್ಕೆ ವಿರುದ್ಧವಾಗಿ ನಡೆಯುವ ಒಂದು ಕ್ರಿಯೆಯೇ 'ದೇಶ್ಯೀಕರಣ' ಪ್ರಕ್ರಿಯೆ. "ಸಮಾಜದ ಮೇಲ್ ರಚನೆಯಿಂದ ಬರುವ ಸುಸಂಸ್ಕೃತರೂಪಗಳ ಪ್ರತಿನಿಧಾನ ಇಲ್ಲವೆ ಹೇರಿಕೆ ಸಮಾಜದ ಕೆಳರಚನೆಯಲ್ಲಿರುವ ಜನತೆಯ ನಾಡಿಮಿಡಿತಕ್ಕೆ ಒಗ್ಗದೆ ಹೋಗುವ ಸಾಧ್ಯತೆ ಅಧಿಕವಾಗಿರುವುದರಿಂದ ಅಂಥ ರೂಪಗಳ (ಸಂಸ್ಕೃತೀಕರಣಗೊಂಡ) ಕೇವಲ ಗ್ರಂಥಸ್ಥ, ಪಂಡಿತರ ಒಣ ಚರ್ಚೆಯಾದ್ದರಿಂದ, ಒಂದಲ್ಲ ಒಂದು ದಿನ ಅವು ಸಂಪೂರ್ಣ ಮರೆಯಾಗುತ್ತವೆ."[೬೦] ಮುಂದೆ ಜನಸಾಮಾನ್ಯರಿಗೆ ಸುಲಭವಾದ ದೇಶೀಯ ಸೊಗಡು ಜೀವಂತವಾಗಿ ತನ್ನ ಬೇರುಗಳನ್ನು ಸಂಸ್ಕೃತಿಯಲ್ಲಿ ಹರುವುತ್ತದೆ. ಒಂದು ಶಿಷ್ಟ ಸಂಸ್ಕೃತಿಯಿಂದ ಜಾನಪದ ಸಂಸ್ಕೃತಿಯು ಪ್ರೇರಣೆಪಡೆಯುವಂತೆ, ಜಾನಪದ ಸಂಸ್ಕೃತಿಯಿಂದ ಶಿಷ್ಟ ಸಂಸ್ಕೃತಿಯೂ ಪ್ರೇರಣೆ ಪಡೆಯುವುದು ಸ್ವಾಭಾವಿಕವೇ.

ದೇಶ್ಶೀಕರಣ ಹಾಗೂ ಸಂಸ್ಕೃತೀಕರಣ ಈ ಎರಡು ಪ್ರಕ್ರಿಯೆಗಳನ್ನು ಒಂದೆಡೆ ನಿಲ್ಲಿಸಿ ಮುಖಾಮುಖಿಯಾಗಿಸುವ ಮೂಲಕ ಪರಸ್ಪರ ಇವೆರೆಡರ ನಡುವಿನ ಭಾಪು ಹಾಗೂ ಸಂಸ್ಕೃತಿಯಲ್ಲಿ ಇವುಗಳ ಪಾತ್ರ, ಓಘ ತಿಳಿಯುತ್ತದೆ. ಅಂದರೆ ದೇಶದಲ್ಲಿನ ಬಹುಸಂಖ್ಯಾತ ಜನರು ಕೆಳವರ್ಗದವರಾದ್ದರಿಂದ ದೇಶೀ ರೂಪಗಳು ಇವರಲ್ಲಿ ಉಳಿಯುತ್ತದೆಂಬುದನ್ನು ಗಮನಿಸಬಹುದು. ಅಲ್ಪಸಂಖ್ಯಾತ, ಅಕ್ಷರಸ್ಥ ಪಂಡಿತರ ಸ್ವತ್ತಾಗಿರುವ ಸಂಸ್ಕೃತೀಕರಣ ಪ್ರಕ್ರಿಯೆಯು ಕೆಳಸಮುದಾಯಗಳಿಂದ ಖಿಲಗೊಳ್ಳುತ್ತಲೇ ಇರುತ್ತದೆ.

ಜಾನಪದ ಅಥವಾ ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡು ಬಂದ, ಸ್ಥಳೀಯ ಭಾಷೆಯ ಮಾನದಂಡದಿಂದ ಸ್ಥಳನಾಮಗಳ ನಿಷ್ಪತ್ತಿಯನ್ನು ಹುಡುಕ ಹೊರಟರೆ ಬಹುಶಃ ಜನಪದ ಬಾಯಿಯಿಂದ ಅದು ಕೊಂಚ ವಿರೂಪವಾಗಿರಬಹುದು. ಅದನ್ನು ಸರಿಯಾಗಿ ಗ್ರಹಿಸಿದರೆ ನಿಜವಾದ ಅರ್ಥ ಹುದುಗಿರುತ್ತದೆ. ಎಷ್ಟೋ ವೇಳೆ ಶಿಷ್ಟೀಕರಣದಿಂದಾಗಿ ಮೂಲ ನಿಷ್ಪತ್ತಿಯು ತನ್ನ ನಿಜತನವನ್ನು ಕಳೆದುಕೊಂಡಿರುತ್ತದೆ. ಉದಾ : 'ಕಾಮಲಾಪುರ' ಇದು ಜನಪದರಿಂದ ಉಚ್ಚರಿಸಲ್ಪಡುವ ಗ್ರಾಮನಾಮ. ಇದು ಶಿಕ್ಷಿತರಿಂದ 'ಕಮಲಾಪುರ' ಆಗಿದೆ. 'ಕಾಮಲಾಪುರ' ವೇ ನಿಜನಿಷ್ಪತ್ತಿಯೆಂಬುದನ್ನು ಗಮನಿಸಿದರೆ ಶಿಷ್ಟೀಕರಣದ ಸೋಗಿನಿಂದ ಆಗಬಹುದಾದ ಪ್ರಮಾದಗಳು ತಿಳಿಯುತ್ತವೆ.

ದೇಶ್ಶೀಕರಣ ಅಥವಾ ಮೌಖಿಕ ಪರಂಪರೆಯಲ್ಲಿ ಸ್ಥಳನಾಮಗಳಿಗೆ ಹೆಚ್ಚಾಗಿ ಕಾಲ್ಪನಿಕ ಕಥೆ, ಪುರಾಣ, ಐತಿಹ್ಯಗಳು ಬೆಸೆದುಕೊಂಡಿರುತ್ತವೆ. ಆ ಮೂಲಕ ತನ್ನ ಗರ್ಭದಲ್ಲಿ ನಿಜಾಂಶವನ್ನು ಅಡಗಿಸಿಕೊಂಡಿರುತ್ತವೆ. ದೇಶ್ಶೀಕರಣದಂತೆಯೇ ಸಂಸ್ಕೃತೀಕರಣಗೊಂಡ ಹೆಸರುಗಳಿಗೂ ಸಾಕಷ್ಟು ಕಾಲ್ಪನಿಕತೆ ಪುರಾಣ, ಐತಿಹ್ಯಗಳು ಪಂಡಿತರಿಂದಲೇ ಪ್ರಜ್ಞಾಪೂರ್ವಕವಾಗಿ ನಡೆದಿರುತ್ತದೆ. ಆದರೆ ಜನಪದರಲ್ಲಿ ಪ್ರಜ್ಞಾಪಾತಳಿಯಿಂದ ದೂರವಿದ್ದು, ತಾನಾಗಿಯೇ ಬಂದಿರುತ್ತದೆ. ಬಹುಸಂಖ್ಯಾತ ಅನಕ್ಷರಸ್ಥರಾದವರಿಗೆ ಯಾವುದು ಸುಲಭವಾಗಿರುತ್ತದೆಯೋ ಅದು ತಮ್ಮ ದೈನಂದಿನ ಜೀವನದಲ್ಲಿ ಆತ್ಮೀಯವಾಗುತ್ತದೆ. ಈ ದೃಷ್ಟಿಯಿಂದ ಇವರು ಅನ್ಯ ಭಾಷೆಯ ಪದವನ್ನು ಸುಲಭವಾಗಿ ಸ್ವೀಕರಿಸಲಾರರು.

| | |
|---|---|
| ದೇಸನೂರು - ಚಿತ್ತಶತಗ್ರಾಮ - SRP | ಬೂದಿಗುಪ್ಪ - ಭಸ್ಮಾದ್ರಿಪುರ - SRP |
| ನಾಗರಹಾಳು - ಸರ್ಪಾಸ್ತಿಗ್ರಾಮ - ALR | ಹೊಳಲಗುಂದಿ - ಪೊಳಲಾದ್ರಿಪುರ - ALR |

ಎಂದು ಸಂಸ್ಕೃತ ಭಾಷೆಗೆ ರೂಪಾಂತರಿಸಿದ ಸ್ಥಳನಾಮಗಳನ್ನು ಜನಸಾಮಾನ್ಯರು ಬಳಸಲಾರರು. ಮೂಲ, ದೇಸೀಯ ಹೆಸರುಗಳೇ ಅವರಿಗೆ ಆಪ್ಯಾಯಮಾನವಾಗಿ ಉಳಿಯುತ್ತವೆ. ಈ ಹಿಂದೆ ರಾಜಶಾಹಿ, ಪುರೋಹಿತಶಾಹಿಗಳು ಸಂಸ್ಕೃತೀಕರಣವನ್ನು ಒತ್ತಾಯ ಪೂರ್ವಕವಾಗಿಯೂ, ಅದೊಂದು ಕರ್ತವ್ಯವೆಂಬಂತೆ ಒತ್ತಡ ತಂದದ್ದೂ ಇದೆ. ತಾತ್ಕಾಲಿಕ ಒತ್ತಡಕ್ಕೆ ಮಣಿದು ಆ ಸಂದರ್ಭದಲ್ಲಿ ಅದನ್ನು ಬಳಸಬಹುದು. ನಂತರ ಅವರಲ್ಲಿ ದೇಸೀ ಪದವೇ ಬಳಕೆಗೆ ಮುನ್ನುಗ್ಗಿ ಬರುತ್ತದೆ. ಈ ಕಾರಣದಿಂದ ನಮ್ಮ ಸಂಸ್ಕೃತಿಯ ಅರ್ಥೈಸುವಿಕೆಯಲ್ಲಿ ಈ ದೇಶ್ಶೀಕರಣ ಪ್ರಕ್ರಿಯೆಯು ಉಪಯುಕ್ತ ಮಾಹಿತಿಯಾಗುತ್ತದೆ. ದೇಶ್ಶೀಕರಣ ಪ್ರಕ್ರಿಯೆ ಯಾವಾಗಲೂ ಪರಂಪರೆಯ ಉಳಿಯುವಿಕೆಯ ಕಡೆ ಹಿಂದಿರುಗುತ್ತಿರುತ್ತದೆ.

## ೬.೧೧. ಸ್ಥಳನಾಮಗಳ ವಾರ್ಗಿಕ - ನಿರ್ದಿಷ್ಟಗಳು : ಸಮುದಾಯ ಅಧ್ಯಯನಕ್ಕೆ ಪ್ರೇರಣೆ

ಯಾವುದೇ ಸ್ಥಳನಾಮವನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ಅದನ್ನು ವಿಂಗಡಿಸಿ ಹೇಳಲಾಗುತ್ತದೆ. ಹೆಸರಿನ ಪೂರ್ವಪದ ನಿರ್ದಿಷ್ಟವೆಂದೂ, ಉತ್ತರ ಪದವನ್ನು ವಾರ್ಗಿಕ ಎಂದು ಕರೆಯಲಾಗುತ್ತದೆ. ಇವುಗಳಿಂದಲೇ ಸಮುದಾಯದ ಅಧ್ಯಯನ ಮಾಡಲು ಸಾಧ್ಯವಿದೆ. ಮುಖ್ಯವಾಗಿ ಎರಡು ಬಗೆಯಲ್ಲಿ ಇದು ತನ್ನನ್ನು ಅಧ್ಯಯನಕ್ಕೆ ಒಳಗು ಮಾಡಿಕೊಳ್ಳುತ್ತದೆ. ಸ್ಥಳನಾಮಗಳಲ್ಲಿನ ಕೆಲವು ನಿರ್ದಿಷ್ಟಗಳು ಬಹುಪಾಲು ನೇರವಾಗಿ ಜಾತಿ, ಸಮುದಾಯವನ್ನು ಪ್ರತಿನಿಧಿಸಿ ಹೇಳುತ್ತವೆ.

| | |
|---|---|
| ಕಮ್ಮಾರ + ಚೇಡು - ALR | ಬೇಡರ + ಹಳ್ಳಿ |
| ಕುರುಬರ + ಹುಂಡಿ | ಮಾದಿಗರ + ಹಳ್ಳಿ |
| ಗೊಲ್ಲರ + ಹಟ್ಟಿ - ANT | ಮ್ಯಾಸರ + ಹಟ್ಟಿ |
| ಜಂಗಮರ + ಹೊಸ + ಹಳ್ಳಿ - ALR | ಹೆಳವರ + ಕಟ್ಟೆ |
| ದಾಸರ + ಹಳ್ಳಿ - SRP | |

ಈ ಬಗೆಯ ಸ್ಥಳನಾಮಗಳಲ್ಲಿ ಪೂರ್ವಪದವು ಯಾವುದೇ ಭಿನ್ನಾಭಿಪ್ರಾಯವಿಲ್ಲದೆಯೇ ಆಯಾ ಸಮುದಾಯಗಳನ್ನು ಖಚಿತವಾಗಿ ಪ್ರತಿನಿಧಿಸುತ್ತವೆ. ನಿರ್ದಿಷ್ಟಗಳಿಂದ ಸಮುದಾಯದ ಕುರುಹನ್ನು ಜಾತಿಯಾಧಾರಿತ ನಾಮಗಳಲ್ಲಿ ಚರ್ಚಿಸಲಾಗಿದೆ. ಕಾರಣ ವಾರ್ಗಿಕಗಳ ಮೂಲಕ ಸಮುದಾಯದ ಅಧ್ಯಯನವನ್ನು ನೋಡುವ ಪ್ರಯತ್ನ ಇಲ್ಲಿದೆ.

ಸ್ಥಳನಾಮಗಳ ವಾರ್ಗಿಕಗಳಿಂದ ಯಾವುದೇ ಸಮುದಾಯವು ನೇರವಾಗಿ ಅಭಿವ್ಯಕ್ತಿಸಲ್ಪಟ್ಟಿಲ್ಲ. ಕೇವಲ ಅವುಗಳ ಪ್ರಾಚೀನತೆಯ ದೃಷ್ಟಿಯಿಂದ, ಅಲ್ಲಿ ನೆಲೆಸಿರಬಹುದಾದ ಜನಾಂಗವನ್ನು ಗುರುತಿಸಬಹುದು. ಆದರೂ ಇದು ಅಷ್ಟು ಸುಲಭದ ಕೆಲಸವಲ್ಲ. ವಾರ್ಗಿಕಗಳಿಂದಲೇ ಸಮುದಾಯವನ್ನು ಗುರುತಿಸಿದರೆ, ಅದು ಸತ್ಯವೆಂದು ಹೇಳಲಾಗದು. ಎಷ್ಟೋಬಾರಿ ಖಚಿತವೂ ಆಗಬಹುದು. ಆ ಕಾರಣದಿಂದ ಈ ಬಗೆಯ ಗುರುತಿಸುವಿಕೆಯಲ್ಲಿ ಸೂಕ್ಷ್ಮತೆಯು ಅಗತ್ಯ. ಆಂಧ್ರ - ಕರ್ನಾಟಕದ ಗಡಿ ಪ್ರದೇಶದಲ್ಲಿಯೂ ಸ್ಥಳನಾಮಗಳ ಪೂರ್ವ ಹಾಗೂ ಉತ್ತರ ಪದಗಳಿಂದ ಸಮುದಾಯ ಅಧ್ಯಯನ ಮಾಡಬಹುದು. ಭೌಗೋಳಿಕವಾಗಿ ಬೆಟ್ಟಗುಡ್ಡಗಳು, ಬಯಲು ಪರಿಸರದಿಂದ ಕೂಡಿದ ಈ ಪ್ರದೇಶದಲ್ಲಿ ವಾಸಿಸುತ್ತಿದ್ದವರ ನೆಲೆಗಳ ಬಗ್ಗೆ ಕೆಲವು ಮಾಹಿತಿಗಳನ್ನು ತಿಳಿಯಬಹುದು.

ಕರ್ನಾಟಕದ ಸಂಸ್ಕೃತಿಯನ್ನು ಮತ್ತು ಕನ್ನಡಿಗರ ನೆಲೆಗಳನ್ನು, ಭೌಗೋಳಿಕ ವ್ಯಾಪ್ತಿಯನ್ನು ಶೋಧಿಸುತ್ತಾ ಹೋದ ಡಾ. ಶಂಬಾ ಜೋಶಿಯವರು ಸ್ಥಳನಾಮಗಳ ಮೂಲಕ ಮಾತ್ರವಲ್ಲದೇ ಕೇವಲ ಶಾಬ್ದಿಕ ಸಂಕೇತಗಳಾದ ವಾರ್ಗಿಕಗಳ ಜಾಡಿನಿಂದಲೇ ಇಲ್ಲಿನ ಮೂಲ ನಿವಾಸಿಗಳನ್ನು ಪತ್ತೆಹಚ್ಚಲು ಮುಂದಾದರು. ಶಂಬಾ ಶೋಧಿಸುತ್ತಾ ಹೋದಂತೆ ಈ ನಾಡವರ ಘನತೆಯನ್ನು ಎತ್ತಿ ಹಿಡಿಯುತ್ತಾ, ಇಲ್ಲಿ ನೆಲೆಸಿದ್ದ ಒಟ್ಟು ಜನಾಂಗದ ಕಲ್ಪನೆಯನ್ನು ನಮಗೆ ನೀಡುತ್ತಾರೆ. ಇದು ಅವರು ಕೇವಲ ವಾರ್ಗಿಕಗಳಂತಹ ಸಂಕೇತಗಳ ಮೂಲಕ ಅನಾವರಣಗೊಳಿಸಿದ್ದು ಅಚ್ಚರಿಯ ಸಂಗತಿ. ಶಂಬಾ ಅವರ ಮಾರ್ಗದಲ್ಲಿಯೇ ಹಾಯುತ್ತಾ ಅಂಥಾ ಒಂದು "ಸ್ಥಳನಾಮ ಮೂಲವನ್ನು

ಕಂಡು ಹುಡುಕುವುದರೊಂದಿಗೆ, ಅಲ್ಲಿ ಮೊತ್ತಮೊದಲು ನೆಲೆಸಿದ್ದಿರಬಹುದಾದ ನಿವಾಸಿಗಳ ಮೂಲವನ್ನು ಅವರ ಸಾಂಸ್ಕೃತಿಕ ನೆಲೆಗಟ್ಟನ್ನು, ಪ್ರಕೃತಿ ಹಾಗೂ ಅವರ ನಡುವಣ ಸಂಬಂಧವು ಹೇಗೆ ಅವರಿಂದ ನಮಗೆ ಅನುಸೂಚಕವಾಗಿ ಹರಿದು ಬಂದಿರುವ ಸಂಸ್ಕೃತಿಯನ್ನು ರೂಪಿಸಿದೆ ಎಂಬುದನ್ನೂ ಪತ್ತೆಹಚ್ಚಬಹುದು."[೧]

ಈ ನಾಡಿನಲ್ಲಿ ನೆಲೆಸಲು ಮೊದಲು ಮಾಡಿದವರು ಯಾರು ಎಂಬ ಪ್ರಶ್ನೆಯಿಂದ ಶಂಬಾ ಅವರು ತಮ್ಮ ವಿಚಾರಸರಣಿಯನ್ನು ಆರಂಭಿಸುತ್ತಾರೆ. ಸ್ಥಳನಾಮಗಳ ತುಲನಾತ್ಮಕ ಅಧ್ಯಯನದ ಅಗತ್ಯವನ್ನು ಎತ್ತಿಹಿಡಿಯುವ ಶಂಬಾ ಅವರು ಆರ್ಯಪೂರ್ವಕಾಲದ, ವಿಶೇಷವಾಗಿ ದಕ್ಷಿಣಭಾರತದ ಜನವಸತಿಗಳು ಊರು, ಬೀಡು, ಬಾಡ: ಬಾಳು: ಪಾಡಿ: ಪಟ್ಟಿ, ಎಂಬ ದ್ರಾವಿಡ ಭಾಷಾ ಮೂಲದ ಶಬ್ದದಿಂದ ಕೂಡಿರುತ್ತವೆ ಎಂದು ಅಭಿಪ್ರಾಯ ಪಡುತ್ತಾರೆ.

ಈ ಎಲ್ಲ ಹಿನ್ನೆಲೆಯೊಂದಿಗೆ ಒಂದೊಂದು ವಾರ್ಗಿಕವನ್ನಿಟ್ಟುಕೊಂಡು ಹೀಗೆ ವಿವರಿಸಿಕೊಳ್ಳಬಹುದು.

೧. ಅಗ್ರಹಾರ : ಇದು ಸಂಸ್ಕೃತ ಮೂಲ ಪದ. ಬ್ರಾಹ್ಮಣರಿಗೆ ಕ್ಷತ್ರಿಯರು ನೀಡಿದ ಉಂಬಳಿ ಅಥವಾ ದತ್ತಿಗ್ರಾಮಗಳು ಇವಾಗಿರುತ್ತಿದ್ದು, ಅಗ್ರಹಾರವು ಬ್ರಾಹ್ಮಣರಿಗೆ (ಅಗ್ರ) ಕೊಟ್ಟ ಕೊಡುಗೆಗಳನ್ನು (ಹಾರ) ಹೇಳುತ್ತವೆ.[೨]

೨. ಕಾಲೋನಿ : ಆಧುನಿಕವಾಗಿ ಬ್ರಿಟಿಷರು ಕಟ್ಟಿಕೊಂಡ ವಸಾಹತು ನೆಲೆಯಾಗಿದ್ದು, ಮುಂದೆ ಆಂಗ್ಲೀಕರಣದಿಂದಾಗಿ ನಮ್ಮ ಭೂಭಾಗದಲ್ಲಿಯೂ ಕಂಡುಬಂದವು. ಮೊದ ಮೊದಲು ಕಾಲೋನಿಗಳಲ್ಲಿ ಬ್ರಿಟಿಷ್ ಅಧಿಕಾರಿಗಳು ವಾಸಿಸುತ್ತಿದ್ದರು.

೩. ಕ್ಯಾಂಪು : ಇದು ಇಂಗ್ಲಿಶ್ ಪದ. ಗುಂಪಾಗಿ ನೆಲೆಸುವುದು ಎಂಬರ್ಥವನ್ನು ನೀಡುತ್ತದೆ. ಗಡಿಭಾಗದಲ್ಲಿ ಆಂಧ್ರದ ಕೆಲವು ಸಮುದಾಯಗಳು ವಲಸೆ ಬಂದು ತಮ್ಮ ನೆಲೆಗಳಿಗೆ ಕ್ಯಾಂಪುಗಳೆಂದು ಕರೆದುಕೊಂಡಿದ್ದಾರೆ.

೪. ಕೇರಿ : ಮೂಲತಃ ಕೇರಿ ಎಂಬ ಪದವು ಬೀದಿ, ಅಂಗಡಿ (ಸಿ.ಅ.ಪು. - ೧೩೪), ಓಣಿ ಎಂಬ ಅರ್ಥವನ್ನು ನೀಡುತ್ತದೆ. ಆಧುನಿಕವಾಗಿ ಅದೂ ಸಾಹಿತ್ಯದ ಘಟ್ಟ ದಲಿತ - ಬಂಡಾಯದ ಉದಯದ ಅವಧಿಯಿಂದ - ಕೇರಿ ಎಂದರೆ ಕೆಳಸಮುದಾಯದ ದಲಿತರು ವಾಸಿಸುವ ಓಣಿ, ಬೀದಿಗಳೆಂಬ ಅರ್ಥವನ್ನು ಹೆಚ್ಚು ಚಾಲ್ತಿಗೆ ತರಲಾಯಿತು. ಈ ದೃಷ್ಟಿಯಿಂದ ಇದನ್ನು ಒಂದು ಸಮುದಾಯಕ್ಕೆ ಸೀಮಿತಪಡಿಸಬಹುದಾದರೂ, ಎಲ್ಲ ವರ್ಗದ ಜನರು ವಾಸಿಸುವ, ಅಥವಾ ಒಂದೊಂದು ಜಾತಿಗಳಿರುವ ಬೀದಿಗಳಿಗೂ ಆಯಾ ಜಾತಿಯ ಕೇರಿ (ಬ್ರಾಹ್ಮಣರ ಕೇರಿ:ಲಿಂಗಾಯತರ ಕೇರಿ:ಕುರುಬರಗೇರಿ ಹೀಗೆ) ಗಳೆಂದು ಕರೆಯುವ ರೂಢಿಯೂ ಇದೆ. ಕಾರಣ ವಾರ್ಗಿಕದ ಅರ್ಥವ್ಯಾಪ್ತಿಯನ್ನು ಕೇವಲ ಒಂದು ಸಮುದಾಯಕ್ಕೆ ಬಳಸಲಾಗದು.

೫. ಕೊಂಡ / ಗೊಂಡ : ಕಂದಮಿಳ ಭಾಷಾವರ್ಗದ ಮೂಲದ 'ಕುದು'ವಿನಿಂದ ಬೆಳೆದ ಗೊಂಡ < ಕೊಂಡ > ಕುಂಡ: ಕುಂತ ಎಲ್ಲವೂ ಅಂಕು ಡೊಂಕಾದ ತಗ್ಗು ಮಿಟ್ಟೆಯ ಪ್ರದೇಶಸೂಚಕ ಪದಗಳು.

ಯಾವುವೂ ಸಂಸ್ಕೃತವಲ್ಲ. ಕುಡು > ಕುಡ > ಕುಟವು ಪರ್ವತವಾಚಿ ಯಾಗಿಯೂ ಅರ್ಥನೀಡುತ್ತದೆ. ಅಂಕು ಡೊಂಕಾದ ತಗ್ಗುಮಿಟ್ಟೆಯ ಪರ್ವತ ಪ್ರದೇಶದಲ್ಲಿ ಮೊದಲು ವಾಸಿಸುತ್ತಿದ್ದವರೇ ಕಂನಾಡ ಮೂಲಿಗರು.[೬೩]

**೬. ಗುಡಿ/ಕುಡಿ :** ಕೊಡು > ಗೂಡು - ಮಾನವ, ವ್ಯಕ್ತಿಯು ಇರುವ ಎಡೆಯ 'ಪ್ರತಿ - ಮಾ' ಗೂಡು. ಇದರಿಂದಲೇ 'ಗುಡಿ' ಬಂದಿರಬೇಕು. ಗೂಡಿನಲ್ಲಿ ವಾಸಿಸಿದವರು ಕುಡಿಯರು, ಒಕ್ಕಲಿಗರು, ಅವರೇ ಆರ್ಯ ಪೂರ್ವ ಜನ. ಆರ್ಯರು ಬರುವ ಮೊದಲು ಈ ಜನ ಗುಡಿ, ಗೂಡುಗಳಲ್ಲಿಯೇ ವಾಸಿಸುತ್ತಿದ್ದರು.[೬೪]

**೭. ತಾಂಡ :** ಕೇವಲ ಲಂಬಾಣಿ ಸಮುದಾಯದ ವಾಸದ ನೆಲೆಗಳೆಂದು ಗುರುತಿಸಲಾಗಿದೆ.

**೮. ದೊಡ್ಡಿ :** ಹಟ್ಟಿ, ಕೊಟ್ಟಿಗೆ, ದನಕಟ್ಟುವ ಜಾಗ ಎಂಬ ಪ್ರಸ್ತುತ ಅರ್ಥವಿದೆ. ಸಾಮಾನ್ಯವಾಗಿ ಈ ವಾರ್ಗಿಕದಿಂದ ಕೊನೆಯಾಗುವ ಊರುಗಳು ಗಡಿಭಾಗದಲ್ಲಿವೆ. ಇಲ್ಲಿ ಹೆಚ್ಚಾಗಿ ಗೊಲ್ಲರು, ಕುರುಬರು ವಾಸವಾಗಿದ್ದಾರೆ.

**೯. ನಾಡು :** ಹಟ್ಟಿಕಾರರು ಅಲ್ಲಲ್ಲಿ ನಟ್ಟುಕೊಂಡು, ನಾಟಿಕೊಂಡು ನೆಲೆಯಾದರಾದ್ದರಿಂದ ನಾಡುಗಳು ಉಂಟಾದವು. ನಾಡಿನ ಜನಗಳು ನಾಡವರಾದರು. ಮನುಸ್ಮೃತಿಯಲ್ಲಿ ನಾಡವರ ಉಲ್ಲೇಖವಿದೆ. ಆದುದರಿಂದ ಆ ವೇಳೆಗೆ ನಮ್ಮ ನಾಡುಗಳು ತಲೆಯೆತ್ತಿದವು. ತಮಿಳಿನಲ್ಲಿ ನಾಟ್ಟವನ್ = ಎಂದರೆ ಒಕ್ಕಲ, ಕುಡುವನೆಂಬ ಅರ್ಥವಿರುವುದರಿಂದ ಕಂನಾಡಿನಲ್ಲಿ ಕುಡುವರು ನಾಡವರೇ ಆದರೆಂದು ತಮಗೆ ಸಿಕ್ಕ ಆಧಾರಗಳಿಂದ ಶಂಬಾ ಹೇಳುವರು.[೬೫] ಈ ಮೂಲಕ ಅವರು ಕನ್ನಡನಾಡಿನ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿದರು.

**೧೦. ಪೊಲಿಲ್/ ಹೊಳಲು:** ಪೊಟಿಲ್ ' ಎಂಬ ಪದವು - ಪಟ್ಟಣ ಎಂಬುದನ್ನು ವಿವರಿಸುತ್ತದೆ. ಆರಂಭಕಾಲದಲ್ಲಿ ವ್ಯಾಪಾರಿಗಳಾಗಿ - ವಣಿಕ' ಸಮುದಾಯವು ವಾಸಿಸುತ್ತಿರಬೇಕು. ಕ್ರಮೇಣ ಬಣಜಿಗ ಅಥವಾ ಪಟ್ಟಣಶೆಟ್ಟಿಗಳೆಂಬ ಸಮುದಾಯಗಳು ಇಲ್ಲಿ ವಾಸಮಾಡಲು ಆರಂಭಿಸಿದ ರೆನ್ನಬಹುದು. ಪಟ್ಟಣ ಶೆಟ್ಟಿಗಳನ್ನು ಶಾಸನಗಳು ಉಲ್ಲೇಖಿಸಿವೆ.

**೧೧. ಬಾಡ-ವಾಡ:** ಬಾಡ' ಎಂಬುದು ಪಟ್ಟಿಯ ಬಳಗಕ್ಕೆ ಸೇರಿದ ಪದವಾಗಿದೆ. ಪಂಪಭಾರತದಲ್ಲಿ ಬರುವ "ಆಯ್ದು ಬಾಡಮಂ ಅವರ್ಗೀವುದು' ಎಂಬ ಮಾತನ್ನು ಶಂಬಾ ಅವರು ಈ ನಾಡಿನ ಪಟ್ಟಿಗಳೇ ಬಾಡ ಎನ್ನುತ್ತಾರೆ. ಗೋವಳರೇ ಇಲ್ಲಿ ವಾಸಿಸುತ್ತಿದ್ದರು. ಗವುಡ > ಗಾವುಂಡ > ಗೌಳ > ಗೌಳಿಗ > ಗೋವಳ ಎಲ್ಲವೂ ಒಂದೇ ಎಂದು ಇವರು ವಾದಿಸುತ್ತಾರೆ. "ಬಾಡ' ಎಂದರೆ ಊರು, ಗ್ರಾಮ ಎಂಬ ಅರ್ಥವಿದೆ. ಬಾಡವ್ಯ ಎಂದರೆ ಬ್ರಾಹ್ಮಣರ

ಗುಂಪು ಎಂಬರ್ಥ."[೬೬] ಪಂಪಕವಿ ಹೇಳುವ 'ಆಯ್ದು ಬಾಡಮಂ ಅವರ್ಗೀವುದು' ಎಂದರೆ ಬ್ರಾಹ್ಮಣರಿಗೆ ದಾನ ನೀಡುವ' ಎಂಬರ್ಥ ವಿರಬಹುದೇ? ಹಾಗಾದಲ್ಲಿ ಇದು ಜನಾಂಗಿಕ ವಾಸವನ್ನು ಸೂಚಿಸುವ ಪದವೇ ಆಗುತ್ತದೆ.

೧೨. ಪೋಡು : ಇದು ವಿಭಜನೆಯಾದ ಜಮೀನನ್ನು ಹೇಳುತ್ತದೆ. ಆದರೂ ಸೋಲಿಗರು ಬೆಟ್ಟದ ಬದಿಯಲ್ಲಿ ಮೈದಾನವಾಗಿರುವ ಸ್ವಲ್ಪ ಪ್ರದೇಶವನ್ನು ಅಚ್ಚುಕಟ್ಟು ಮಾಡಿಕೊಂಡು ಅದರ ಪಕ್ಕದಲ್ಲಿಯೇ ಮನೆಗಳನ್ನು ಕಟ್ಟಿಕೊಂಡು - ಪೋಡು' ಎಂಬ ವಾರ್ಗಿಕ ಪದದಿಂದ ವಾಸ್ತವ್ಯ ಹೂಡಿದ್ದು ದಕ್ಷಿಣ ಕರ್ನಾಟಕದಿಂದ ತಿಳಿಯುತ್ತದೆ.

೧೩. ಮಂಗಲ : ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಗ್ರಾಮಗಳನ್ನು, ಅಗ್ರಹಾರಗಳನ್ನು - ಮಂಗಲ ಎಂದು ಕರೆಯುತ್ತಿದ್ದ ಬಗ್ಗೆ ಶಾಸನೋಲ್ಲೇಖಗಳಿವೆ. ಇದು ಚೋಳರ ಕಾಲದಿಂದ ಆರಂಭವಾಯಿತು. ಹೀಗೆ ಮಂಗಲ'ದಿಂದ ಕೊನೆಯಾಗುವ ಊರುಗಳು ಬ್ರಾಹ್ಮಣ ರಿಗೆ ನೀಡಿದಂತಹ ದತ್ತಿಗ್ರಾಮಗಳೆನ್ನಬಹುದು. ಉದಾ : ಚುರ್ತುವೇದಿ ಮಂಗಲಂ, ಸೋಮಸಮುದ್ರ ಮಂಗಲಾಗ್ರಹಾರಂ ಎಂಬ ಉಲ್ಲೇಖಗಳು ಗಮನೀಯ.

೧೪. ಮೊಹಲ್ಲಾ : ಸಾಮಾನ್ಯವಾಗಿ ಈ ವಾರ್ಗಿಕವನ್ನೊಂದಿದ ಹೆಸರು ಮುಸಲ್ಮಾನ ಸಮುದಾಯ ವಾಸಿಸುವ ನೆಲೆಯಾಗಿರುತ್ತದೆ.

೧೫. ಮೋಳೆ/: ಮಾಳ ಮೋಳೆ ಎಂಬ ಪದವು ಉಪ್ಪಿನರಾಶಿ ಎಂಬ ಅರ್ಥನೀಡುತ್ತದೆ.[೬೭] ಚಾಮರಾಜನಗರ ಪರಿಸರದಲ್ಲಿ ಮೋಳೆಗಳಿಂದ ಕೊನೆಗೊಳ್ಳುವ ಗ್ರಾಮನಾಮಗಳಿವೆ. ಇಲ್ಲಿ ಹೆಚ್ಚಾಗಿ ಉಪ್ಪಲಿಗರು ನೆಲೆ ನಿಂತಿದ್ದಾರೆ. ಎಂದು ಎಂ.ನಂಜಯ್ಯ (ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು - ಪಿಎಚ್.ಡಿ. ಪ್ರಬಂಧ) ಗುರುತಿಸಿದ್ದಾರೆ. ಬಳ್ಳಾರಿ ತಾಲ್ಲೂಕಿನ 'ಸಿಡಿಗಿನಮೊಳ' ಎಂಬ ಗ್ರಾಮನಾಮದ ವಾರ್ಗಿಕಪದ ಬಹುಶಃ ಮೋಳೆ/ ಮಾಳ ಆಗಿರಬಹುದು. ಹಾಗಿದ್ದಲ್ಲಿ ಅದು ಸಮುದಾಯದ ಕುರುಹಾಗಿ ಪರಿಗಣಿತವಾಗುತ್ತದೆ.

೧೬. ಹುಂಡಿ : ಕುರುಬ ಜನಾಂಗಕ್ಕೆ ಸೇರಿದ ಜನರು ತಮ್ಮ ಪ್ರಾಣಿಗಳನ್ನು (ಕುರಿಗಳು) ಸಾಕುವುದಕ್ಕಾಗಿ ಪ್ರತ್ಯೇಕವಾಗಿ ನಿರ್ಮಿಸಿಕೊಂಡ ವಾಸ್ತವ್ಯಸೂಚಿಯೇ ಹುಂಡಿ.[೬೮]

೧೭. ಹಟ್ಟಿ : ಮತ್ತು ಪಾಡಿ ಪಟ್ಟಿ > ಪಾಡಿ - ಪಾಡ - ವಾಡ - ಬಾಡ ಇವೆಲ್ಲ 'ಪುಡು' ಧಾತುವಿನಿಂದ ಉತ್ಪನ್ನಗೊಂಡಂತಹ ಪದಗಳೇ. ಪಟ್ಟಿಯಲ್ಲಿದ್ದವ ಪಟ್ಟಿಲ > ಪಾಟೀಲ: ಗೌಡ > ಗೌಳ - ಗೋವಳ: ವಟ (ಮರ) > ವಡ ವಾಡಿಗಳು.[೬೯] ಎಂದು ಶಂಬಾ ಅವರು ಅಭಿಪ್ರಾಯ ಪಡುತ್ತಾರೆ. ಈ ಮೂಲಕ -ಪಟ್ಟಿ: -ಪಾಡಿ, -ವಾಡ -ಹಟ್ಟಿ ಮೊದಲಾದ ಗ್ರಾಮನಾಮದ ರೂಪಗಳು ಜನಾಂಗಗಳ ವಾಸಸ್ಥಾನ ಸೂಚಕಗಳಾಗಿವೆ. -ಪಟ್ಟಿ ಮತ್ತು

-ಹಟ್ಟಿ ಎಂಬುದು ಹಟ್ಟಿಕಾರ ಇಲ್ಲವೇ ದನಗಾಹಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ.[೮೦] ಎನ್ನುತ್ತಾರೆ ಶಂಬಾ. ಅಂದರೆ ಇವರು ಒಂದು ನಿರ್ದಿಷ್ಟಜನಾಂಗ ಹಟ್ಟಿ ಅಥವಾ ಪಾಡಿಯಲ್ಲಿ ವಾಸಿಸುತ್ತಿತ್ತು ಎಂದು ಖಚಿತಪಡಿಸುವುದಿಲ್ಲ. ಆದರೂ ದನಗಾಹಿಗಳು ಎನ್ನುವ ಗೋವಳಿಗರು ಅಥವಾ ಗೊಲ್ಲರು ಎಂಬುದು ಇದರಿಂದ ವ್ಯಕ್ತವಾದರೆ, ಹಟ್ಟಿಕಾರನೆಂದರೆ ಕುರುಬನೂ ಇರಬಹುದೆಂಬ ಅನುಮಾನ ಬರುತ್ತದೆ. ತನ್ನ ಮೂಲವೃತ್ತಿಯಾದ ಕುರಿಸಾಕಾಣಿಕೆಯಿಂದ ಬೆಟ್ಟ, ಗುಡ್ಡಗಳ ಅಂಚಿನಲ್ಲಿ ಹಟ್ಟಿಯನ್ನು ನಿರ್ಮಿಸಿಕೊಂಡು ನೆಲೆಸಿರಬೇಕು. ಗೊಲ್ಲರೂ ಈ ಬಗೆಯ ಹಟ್ಟಿಗಳನ್ನು ನಿರ್ಮಿಸಿಕೊಂಡಿದ್ದಾರೆ. "ದನಗಳ ದೊಡ್ಡಿಯ ಪಕ್ಕದಲ್ಲಿ ಕಟ್ಟಿಕೊಂಡ ಹಟ್ಟಿಕಾರರ ನೆಲೆಗಳಿಗೆ -ಹಟ್ಟಿ' ಎಂದು ಕರೆಯುತ್ತಾರೆ."[೮೧] ಎಂಬ ಅಭಿಪ್ರಾಯವಿದೆ. ಈ ಹಟ್ಟಿಯ ಕುಲದೇವತೆ "ವೀರದೇವರು, ಬೀರದೇವರು, ಅವನೇ ಹಟ್ಟಿನಾಡಿನ ಹಾಟಕೇಶ್ವರ. ಹಟ್ಟಿನಾಡಿನ ಹಟ್ಟಿಕಾರರೇ ಕಂನಾಡ ವೀರಕ್ಷತ್ರಿಯರು, ಶೈವ ವೀರರು ಎನ್ನುವ ಶಂಬಾ ಅವರು ರುದ್ರ - ಶಿವನ ಅನುಯಾಯಿಗಳಾದ ಒಂದು ಪಂಗಡದ ಹೆಸರು ವೀರಶೈವ ಎಂಬುದಕ್ಕೆ ಕಾರಣಗಳನ್ನು ತಿಳಿಸುತ್ತಾರೆ."[೮೨]

ಕರ್ನಾಟಕದ ಮೂಲ ನಿವಾಸಿಗಳೆಂದು ಭಾವಿಸಿರುವ ಕುರುಂಬರು ಕಾವೇರಿಯಿಂದ ಹಿಡಿದು ಗಂಗೆಯವರಗೂ, ನೀಲಗಿರಿಯಿಂದ, ರಾಜಸ್ಥಾನದವರೆಗೂ ವ್ಯಾಪಿಸಿದ್ದರು. ಈ ಮರವರು (ಜಾಡರು) ಮತ್ತು ಕುರುಂಬರೆಂದು ಪಂಗಡಗಳಲ್ಲಿ ಒಡೆದಿದ್ದ ಹಟ್ಟಿಕಾರ - ದನಗಾರರು ಕಂದಮಿಳ ಜನಾಂಗದವರು. ಇವರು ಕಂನುಡಿ ಶಾಖೆಗೆ ಸೇರಿದವರೆಂದೂ, ಪಟ್ಟಿಕಾರರು, ಹಟಗಾರರೆಂದು, ನೇಕಾರರಿಗೆ ಹೆಸರಿದೆಯೆಂದು ಶಂಬಾ ನೇಕಾರ ಜನಾಂಗದ ಬಗ್ಗೆಯೂ ಹೇಳುತ್ತಾರೆ.

ಗ್ರಾಮ, ಊರು, ಪುರ ಎಂಬುವು ಅಷ್ಟು ಪುರಾತನವಲ್ಲವೆನ್ನುವ ಶಂಬಾ ಅವರು ಮಾನವನು ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಚಯನಕ್ಕಾಗಿ ಅಲೆಮಾರಿಯಾಗಿದ್ದು ಅವನ ವಸತಿ ಸೂಚಕವಾಗಿದ್ದ ಹೆಸರೇ -ಹಟ್ಟಿ ಎಂದು ವಾದಿಸುವರು. ಈ ಶಬ್ದವು ದನಗಾರಿಕೆಯ ಬಾಳಿನ ದ್ಯೋತಕವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಹಟ್ಟಿಗಳೇ ನಮ್ಮ ನಾಡಿನ ಆರಂಭ ಕಾಲದ ವಸತಿಗಳೆಂದು ಶಂಬಾ ಊಹಿಸುತ್ತಾರೆ.

ಅದೇನೇ ಇದ್ದರೂ -ಹಟ್ಟಿಯೆಂಬ ವಾರ್ಗಿಕವನ್ನೊಂದಿದ ಸ್ಥಳನಾಮಗಳು ಬಹುತೇಕ ಪ್ರಾಚೀನವಾಗಿದ್ದು, ಅಲ್ಲಿ ಕುರುಬರು, ಗೊಲ್ಲರು, ನೇಕಾರರು, ಆರಂಭದಲ್ಲಿ ವಾಸಿಸಿದ್ದಿರಬೇಕು. ಕಾಲಕ್ರಮೇಣ ಅನೇಕ ಹಿಂದುಳಿದ ಸಮುದಾಯಗಳು ಈ ಹಟ್ಟಿಗಳನ್ನು ನಿರ್ಮಿಸಿಕೊಂಡಿರಬೇಕೆನ್ನಬಹುದು.

ಮೇಲಿನ ವಾರ್ಗಿಕಗಳಲ್ಲಿ ಹುಂಡಿ, ಮೋಳೆ, ಪೋಡು ಹೊರತುಪಡಿಸಿ ಉಳಿದೆಲ್ಲಾ ವಾರ್ಗಿಕಗಳು ಆಂಧ್ರ - ಕರ್ನಾಟಕ ಗಡಿಪ್ರದೇಶದಲ್ಲಿವೆ. ಹೀಗೆ ಸ್ಥಳನಾಮಗಳ ಅಧ್ಯಯನದ ಮೂಲಕ ಅದರಲ್ಲಿಯೂ ವಾರ್ಗಿಕಗಳಿಂದ ಒಂದು ಭೌಗೋಳಿಕ ಪರಿಸರದ ಜನಾಂಗಿಕ - ಸಾಂಸ್ಕೃತಿಕ ಅಧ್ಯಯನ ಮಾಡಲು ಸಾಧ್ಯವಿದೆ. ಡಾ.ಶಂಬಾಜೋಶಿ

ಯವರು ಈ ಪ್ರಯತ್ನಕ್ಕೆ ಮೊದಲ ಅಧ್ಯಯನಕಾರರಾಗಿ ನಿಂತರು. ಶಂಬಾ ಅವರು ಕೇವಲ ವಾರ್ಗಿಕಗಳಿಂದಲೇ ಕಂನಾಡ ಸಂಸ್ಕೃತಿಯನ್ನು ಪುನಾರಚಿಸಲು ಹೊರಟದ್ದು ಸಾಮಾನ್ಯ ಸಂಗತಿಯಲ್ಲ. ವಿಂಧ್ಯ -ಗೋದಾವರಿ ನಾಡುಗಳಲ್ಲಿಯೂ ಉತ್ತರ ಭಾರತದಲ್ಲಿಯೂ ಕಂನಾಡಿನ ಸುಳಿವನ್ನು ಸ್ಥಳನಾಮಗಳ ಮೂಲಕ ಗುರುತಿಸುವ ಶಂಬಾ ಪ್ರತಿಯೊಂದಕ್ಕೂ ಭಾಷಿಕ, ಭೌಗೋಳಿಕ, ಜನಾಂಗಿಕ ಅಂತಃಪ್ರಮಾಣಗಳನ್ನು ಒದಗಿಸುತ್ತಾರೆ.

ಕೆಲವು ವಾರ್ಗಿಕಗಳ ಮೂಲಕ ಜನಾಂಗಿಕ ಅಂಶವನ್ನೂ, ಕಂನಾಡಿನ ಮೂಲ ನಿವಾಸಿಗಳನ್ನು ಗುರುತಿಸುವಾಗ ಶಂಬಾ ಅವರು ಅನೇಕ ಗೊಂದಲಗಳನ್ನು ಸೃಷ್ಟಿಸುತ್ತಾರೆ. ಹಟ್ಟಿಯಲ್ಲಿ ವಾಸಿಸುವವರನ್ನು ದನಗಾರರೆಂದೂ, ಗೌಳಿಗರು - ಗೌಡರೆಂದೂ - ನೇಕಾರರೆಂದೂ, ಕುರುಂಬರು, ಕಂದಮಿಳರೆಂದೂ ಹೇಳಿಬಿಡುತ್ತಾರೆ. ಇದರಲ್ಲಿ ಯಾರ ನೆಲೆ ಎಂಬ ಬಗೆಗೆ ಖಚಿತವಾಗಿ ಹೇಳುವುದಿಲ್ಲ. ಒಟ್ಟಾರೆ ದನಗಾರರು, ಗೌಳಿಗರು, ನೇಕಾರರು ಎಂಬ ವೃತ್ತಿಯನ್ನು ಸೂಚಿಸುವ ಜನಾಂಗದ ಬಗೆಗೆ ಹೆಚ್ಚು ಮಹತ್ವಕೊಡುತ್ತಾರೆ. ಆ ಮೂಲಕ ಸಮುದಾಯಗಳ ಅಧ್ಯಯನಕ್ಕೆ ಎಳೆಗಳನ್ನು ಸೂಚಿಸುತ್ತಾರೆ.

ಹೀಗೆ ಸ್ಥಳನಾಮ ವಾರ್ಗಿಕಗಳು ಒಂದುನಾಡಿನ, ಒಂದುದೇಶದ ಒಟ್ಟು ಭೌಗೋಳಿಕ ಪರಿಸರದ ಸಾಂಸ್ಕೃತಿಕ, ಜನಾಂಗಿಕ, ನೈಸರ್ಗಿಕ ಅಂಶಗಳನ್ನು ತಿಳಿಯಲು ಆಕರಗಳಾಗಿವೆ. ಸಮುದಾಯದ ಅಧ್ಯಯನದ ಸಂದರ್ಭದಲ್ಲಿ ಇವುಗಳ ಮಹತ್ವ ಗಣನೀಯವಾದದೆನ್ನಬಹುದು.

**೭.೧೨. ಸ್ಥಳನಾಮಗಳ ಭೌಗೋಳಿಕ ಅಂತರ್ ಸಂಬಂಧ : (ಭೌಗೋಳಿಕ ಪ್ರಸಾರ)**

ಅಲೆಮಾರಿಜೀವನದಿಂದ ನಾಗರಿಕ ಜೀವನದವರೆಗಿನ ಮಾನವನ ವಿಕಾಸದ ಹಂತಗಳಲ್ಲಿ ಸ್ಥಳ, ನೆಲೆಯ ವಿವಿಧ ಘಟ್ಟಗಳು ಬಂದು ಹೋಗಿವೆ. ಆರಂಭದಿಂದ ಹೆಸರನ್ನು ಕೊಡುವ ಪದ್ಧತಿ ಇಲ್ಲದಿದ್ದರೂ, ಕಾಲಾಂತರದಲ್ಲಿ ಜನಸಂಖ್ಯೆಯ ಹೆಚ್ಚಳ ಮುಂತಾದ ಕಾರಣಗಳಿಂದ ತಮ್ಮ ವಸತಿಯ ನೆಲೆಗಳಿಗೆ ನಾಮಕರಣ ಮಾಡಿದ್ದು ಪ್ರಥಮಹಂತ. ಮುಖ್ಯವಾಗಿ ಎರಡನೇ ಹಂತ ನಾಗರಿಕ ಜೀವನದ ಹಂತ. ಭೂಮಿಯನ್ನು ಉಳುಮೆ ಮಾಡಿ ಅದರಿಂದ ಹೊಟ್ಟೆಯನ್ನು ತುಂಬಿಕೊಳ್ಳುವ ಸಮಯದಲ್ಲಿ ಕೃಷಿಗೆ ಪೂರಕವಾಗಿ ಅನೇಕರು ಅವಲಂಬಿಗಳಾದರು. ಇಲ್ಲಿ ಬಗೆ ಬಗೆಯ ವೃತ್ತಿಗಳು ಆರಂಭವಾದವು. ಒಂದೊಂದು ವೃತ್ತಿಯವರು ಒಬ್ಬೊಬ್ಬರನ್ನು ಅವಲಂಬಿಸು ವಂತಾಯಿತು. ಅಂತೆಯೇ ಆಯಾ ವೃತ್ತಿಪರ ಸಮುದಾಯ ಒಂದೊಂದು ಕಡೆ ಗುಂಪು ಗುಂಪಾಗಿ ನೆಲೆನಿಂತರು. ತಾವು ಇದ್ದ ನೆಲೆಗಳಿಗೆ ತಮ್ಮ ಸಮುದಾಯದ ಹೆಸರನ್ನೇ ನೀಡಿಕೊಂಡರು. ಸಾಮಾನ್ಯವಾಗಿ ಇದು ಎಲ್ಲ ಭೌಗೋಳಿಕ ಪರಿಸರದಲ್ಲಿಯೂ ನಡೆಯಿತು. ಒಂದು ನಿರ್ದಿಷ್ಟ ಪ್ರದೇಶದಲ್ಲಿ ಅನೇಕ ವೃತ್ತಿ, ಜಾತಿಪರ ಸಮುದಾಯಗಳು ಒಬ್ಬರಿಗೊಬ್ಬರು ಸಹಾಯವಾಗುವಂತೆ ಅಕ್ಕಪಕ್ಕದಲ್ಲಿಯೇ ಊರುಗಳನ್ನು ಕಟ್ಟಿಕೊಂಡಿರುವುದು ಆಶ್ಚರ್ಯದ ಸಂಗತಿಯೇ ಸರಿ. ಏಕೆಂದರೆ ಪ್ರಾಚೀನ ಭಾರತೀಯ ಗ್ರಾಮಸಮಾಜ ತಮ್ಮ ಜೀವನ ಕ್ರಮದಲ್ಲಿ ಕಂಡುಕೊಂಡಂತಹ ಕ್ರಮಬದ್ಧತೆ ಹಾಗೂ ಶಿಸ್ತು ನಮಗೆ ಕಂಡು ಬರುತ್ತದೆ. ಪೂರ್ವಗ್ರಹಿಕೆಯ ಅರಿವಿನಿಂದ ಈ ರೀತಿಯ ಗ್ರಾಮಗಳು ಉದಯವಾಗಿರಬೇಕೆಂದು ಊಹಿಸಬಹುದು. ಅಂತೆಯೇ ದ್ರಾವಿಡ ಪರಿಸರದಲ್ಲಿ ಅದರಲ್ಲಿಯೂ ಆಂಧ್ರ - ಕರ್ನಾಟಕದ ಗಡಿಭಾಗದಲ್ಲಿಯೂ ಒಂದು ನಿರ್ದಿಷ್ಟ ಭೌಗೋಳಿಕ ವಲಯದಲ್ಲಿ ವೃತ್ತಿ - ಜಾತಿಯನ್ನವಲಂಬಿಸಿದ ಸ್ಥಳನಾಮಗಳು ಹಂಚಿಕೆಯಾಗಿವೆ.

ಗಡಿಭಾಗದ ಸ್ಥಳನಾಮಗಳ ಭೌಗೋಳಿಕ ಅಂತರ್ ಸಂಬಂಧ ಅಥವಾ ಭೌಗೋಳಿಕ ಪ್ರಸಾರವನ್ನು ಭೂಪಟ (ನಕ್ಷೆ)ದ ಮೂಲಕ ಗುರುತಿಸಬಹುದು. ಅದು ಹೀಗಿದೆ.

## ನಕ್ಷೆ



ಈ ನಕ್ಷೆಯಲ್ಲಿ ಮುಖ್ಯವಾಗಿ ಜಾತಿ, ವೃತ್ತಿಯನ್ನವಲಂಬಿಸಿದ ಸ್ಥಳನಾಮಗಳು ಒಂದೊಕ್ಕೊಂದು ಭೌಗೋಳಿಕವಾಗಿ ಅಂಟಿಕೊಂಡಿವೆ.

ಅಗ್ರಹಾರ → ಬ್ರಾಹ್ಮಣರ ನೆಲೆ, ಪುರೋಹಿತವರ್ಗ.
↓
ಜಂಗಮರ ಹೊಸಳ್ಳಿ → ಲಿಂಗಾಯತರ ನೆಲೆ, ಕೃಷಿ, ವ್ಯಾಪಾರವರ್ಗ.
↓
ಕಮ್ಮರಚೇಡು → ಲೋಹದ ಕೆಲಸದವರ ನೆಲೆ, ಕೃಷಿಗೆ ಪೂರಕ ಸಾಮಾನು ಒದಗಿಸುವದು.
↓
ಕುರುವಳ್ಳಿ → ಕುರುಬರ ನೆಲೆ, ಕುರಿಸಾಕಾಣಿಕೆಯ ವೃತ್ತಿ.
↓
ಗೊಲ್ಲನಾಗೇನಹಳ್ಳಿ → ಗೊಲ್ಲರ, ದನಗಾಹಿಗಳ ನೆಲೆ, ದನಗಾರಿಕೆಯವೃತ್ತಿ.
↓
ಉಪ್ಪಾರ ಹಳ್ಳಿ → ಉಪ್ಪಾರರನೆಲೆ, ಉಪ್ಪು ತಯಾರಿಕೆಯ ಕೆಲಸ.
↓
ವಡ್ರಟ್ಟಿ: ಕಲ್ಲುಕುಟಿಗನಹಾಳ್ → ಮನೆ, ದೇವಾಲಯ ಇತ್ಯಾದಿ ನಿರ್ಮಿಸುವವರು. ಶಿಲ್ಪಿಗಳೂ ಇಲ್ಲಿ ಕೆಲಸ ಮಾಡುತ್ತಾರೆ.
↓
ಅಗಸನೂರು → ಮಡಿವಾಳರ ನೆಲೆ, ಬಟ್ಟೆ ಶುದ್ಧಿ ಮಾಡುವ ಕಾರ್ಯ
↓
ದೊಂಬಲದಿನ್ನೆ → ಮನರಂಜನೆಯನ್ನು ನೀಡುವ ಕಸರತ್ತು ಕಲೆಗಾರರು.
↓
ನಗರಡೋಣೆ : ಸಂತೇಕೂಡ್ಲೂರು → ಜನತೆಗೆ ಸಂತೆಯನ್ನು ಮಾಡುವ (ವ್ಯಾಪಾರ ಮತ್ತು ವಾಣಿಜ್ಯ) ಕೇಂದ್ರಗಳು.
↓
ತಾಂಡ → ಲಂಬಾಣಿಗರನೆಲೆ ಸುಣ್ಣಸುಡುವುದು, ಕಟ್ಟಿಗೆ ಮಾರುವುದು.
↓
ಕಂಚಿಗನೂರು → ಕಾಂಸಿಗ ವೃತ್ತಿಯವರ ನೆಲೆ ಆಭರಣ ಇತ್ಯಾದಿ ತಯಾರಿಕೆ.
↓
ಹೊನ್ನೂರು:ಇಂಗಳದಹಾಳು:ಬೂದಿಹಾಳು → ಪರಾತತ್ತ್ವ ಪ್ರಾಚೀನ ನೆಲೆಗಳು, ಗಣಿಗಾರಿಕೆ.
↓
ಇಬ್ರಾಹಿಂಪುರ : ಸುಲ್ತಾನಪುರ → ಇಸ್ಲಾಂ ಧರ್ಮದವರ ನೆಲೆಗಳು.
↓
ಕಾತರಕಿ: ಮುಂಡರಗಿ: ಕೊಕ್ಕರಚೇಡು → ವಿಶೇಷ ಜನಾಂಗಗಳು ವಾಸಿಸುವ ನೆಲೆಗಳು.
↓
ದಂಡನಾಯಕಪುರ → ಮೇಲಿನ ಎಲ್ಲರನ್ನು ನಿಯಂತ್ರಿಸುವ ಅಧಿಕಾರಿಯ ನೆಲೆ.
↓
ಬೆಳ್ಳೋಣೆ → ಸಮುದಾಯಗಳಿಗೆ ಅವಶ್ಯವಾದ ನೀರಿನ ನೆಲೆ.

ಹೀಗೆ ಪುರೋಹಿತರಿಂದ ಆರಂಭವಾಗಿ ಎಲ್ಲ ಸಮುದಾಯದ ಸ್ಥಳನಾಮಗಳು ಒಂದೊಂದು ಸಮುದಾಯ ಒಬ್ಬೊಬ್ಬರನ್ನು ಅವಲಂಬಿಸಿ ಬದುಕುವ ಪ್ರಾಚೀನ ಸಾಂಪ್ರದಾಯಿಕ ಗ್ರಾಮ ಸಮಾಜ ವ್ಯವಸ್ಥೆಯು, ಭೌಗೋಳಿಕವಾಗಿಯೂ ಅದೇ ರೀತಿ ಸ್ಥಾಪನೆಗೊಂಡಿರುವುದು, ಸ್ಥಳಗಳ ಹೆಸರುಗಳೂ ಅದೇ ರೀತಿಯಲ್ಲಿ ಹಂಚಿಕೆಯಾಗಿರುವುದು ಕುತೂಹಲಕಾರಿಯಾಗಿದೆ. ಸಮುದಾಯ, ಜನಾಂಗಿಕ ನೆಲೆಗಳಂತೆ, ಇತರ ನೈಸರ್ಗಿಕ ಅಂಶಗಳೂ ಇವರಿಗೆ ಬೇಕು. ನೀರು, ಕಾಡು, ಪ್ರಾಣಿಗಳು, ಬೆಟ್ಟ, ಗುಡ್ಡ: ದಿನ್ನೆ: ಕೆರೆ: ಸಾಗರ: ಹೀಗೆ ಹಲವಾರು ಜೀವನಾವಶ್ಯಕಗಳನ್ನೂ ತಮ್ಮಿಂದ ದೂರ ಉಳಿಸದೇ ಅವುಗಳಿಗೆ ಹೆಸರು ನೀಡಿರುವುದು, ಜೊತೆಗೆ ತಮ್ಮೊಂದಿಗೆ ಗ್ರಾಮಗಳಿಗೆ ಹೆಸರು ನೀಡುವ ಮೂಲಕ ಉಳಿಸಿಕೊಂಡಿರುವುದು ತಿಳಿಯುತ್ತದೆ.

ಈ ದೃಷ್ಟಿಯಿಂದ ಸ್ಥಳನಾಮಗಳ ಭೌಗೋಳಿಕ ಪ್ರಸಾರದ ಅಧ್ಯಯನದಿಂದ ಜನಾಂಗಿಕ, ಸಾಂಸ್ಕೃತಿಕ ಅಧ್ಯಯನದ ಅಂತರ್ ಸಂಬಂಧಗಳು ಎಳೆಎಳೆಯಾಗಿ ತೆರೆದುಕೊಳ್ಳುತ್ತವೆ. ಆ ಮೂಲಕ ಒಂದು ಸಂಸ್ಕೃತಿಯ ಕಟ್ಟುವಿಕೆಯಲ್ಲಿ ಇವುಗಳ ಪಾತ್ರ ಮಹತ್ವವಾಗಿ ತೋರುತ್ತದೆ.

**೭.೧೩. ಕರ್ನಾಟಕದ ಗಡಿಪ್ರದೇಶಕ್ಕೆ ಆಂಧ್ರದ ಸಮುದಾಯಗಳ ವಲಸೆ : ವಾಸ್ತವ್ಯಗಳ ನಾಮಕರಣ**

ಕರ್ನಾಟಕದ ಗಡಿಪ್ರದೇಶಕ್ಕೆ ಆಂಧ್ರದ ಕೆಲವು ಸಮುದಾಯಗಳ ವಲಸೆಯು ನಿರಂತರವಾಗಿ ನಡೆದು ಬರುತ್ತಿದೆ. ಆಂಧ್ರ ಪ್ರದೇಶದ ಗುಂಟೂರು, ತೆಲಂಗಾಣ ಪ್ರದೇಶದಿಂದ ಬಹುತೇಕ ಜನರು ಈ ಗಡಿಭಾಗಕ್ಕೆ ವಲಸೆ ಬರುತ್ತಿದ್ದಾರೆ. ವಲಸೆಗೆ ಮುಖ್ಯ ಕಾರಣಗಳೆಂದರೆ ಅಲ್ಲಿನ ನೈಸರ್ಗಿಕ ಪರಿಸರ ಹಾಗೂ ಆ ಪರಿಸರದ ವೈಪರೀತ್ಯಗಳು. ಅಲ್ಲದೇ ಅಲ್ಲಿನ ಬಡತನ. ಇವುಗಳ ನಿವಾರಣೆಗೆಂದು ಉದ್ಯೋಗವನ್ನು ಅರಸಿಕೊಂಡು, ಇಲ್ಲವೆ ಕೃಷಿಯನ್ನು ಮಾಡಲು ನೀರಾವರಿ ಮತ್ತು ಸುರಕ್ಷಿತ ಭೂಪ್ರದೇಶಗಳ ಕಡೆ ಇಲ್ಲಿನ ಸಮುದಾಯಗಳು ವಲಸೆ ಹೋಗುತ್ತವೆ. ಅದರಂತೆ ಬಹುಪಾಲು ಆಂಧ್ರದ ಜನರು ಕರ್ನಾಟಕದ ಬಳ್ಳಾರಿ ಮತ್ತು ರಾಯಚೂರು ಗಡಿಭಾಗದಲ್ಲಿ ಬಂದು ಕೃಷಿಯನ್ನು ಮಾಡುತ್ತಿದ್ದಾರೆ. ಇನ್ನೂ ಕೆಲವರು ವ್ಯಾಪಾರ ಮುಂತಾದ ಉದ್ಯೋಗಗಳನ್ನು ಕೈಗೊಂಡಿದ್ದಾರೆ. ವಲಸಿಗ ಸಮುದಾಯಗಳಲ್ಲಿ ಕೆಲವರು ಶ್ರೀಮಂತರಾಗಿದ್ದಾರೆ. ಇವರು ತೆಲಂಗಾಣ ಪ್ರದೇಶದ ಕೆಲವು ದಬ್ಬಾಳಿಕೆ, ದೌರ್ಜನ್ಯಗಳಿಂದ ಈ ಕಡೆ ಬಂದವರಾಗಿದ್ದಾರೆಂದು ತಿಳಿಯುತ್ತದೆ. ವಲಸಿಗರಲ್ಲಿ ಹೆಚ್ಚಾಗಿ ರೆಡ್ಡಿ, ಕಮ್ಮಾರೆಡ್ಡಿ, ನಾಯುಡು ಜನಾಂಗವೇ ಬಂದಿರುವುದು ಕಂಡುಬರುತ್ತದೆ. ಕರ್ನಾಟಕದ ಬಳ್ಳಾರಿ - ರಾಯಚೂರು ಗಡಿಯಲ್ಲಿ ತೆಲುಗು ಸಮುದಾಯಗಳು ಬಂದು ನೆಲೆಸಲು ಕೆಲವು ಕಾರಣಗಳಿವೆ. ತುಂಗಭದ್ರಾ ಅಚ್ಚುಕಟ್ಟು ಪ್ರದೇಶದ ಫಲವತ್ತಾದ ನೀರಾವರಿ ಭೂಪ್ರದೇಶ, ಹಾಗೂ ಇಲ್ಲಿ ದೊರೆಯುವ ಕಡಿಮೆ ದರದ ಭೂಮಿ, ಕಡಿಮೆ ದರದಲ್ಲಿ ದೊರೆಯುವ ಕಾರ್ಮಿಕರ ಶ್ರಮ. ಹಾಗೂ ಉತ್ತಮ ವಾತಾವರಣ ಇವರಿಗೆ ಅನುಕೂಲ ಒದಗಿಸಿದೆ. ಬಳ್ಳಾರಿ ಜಿಲ್ಲೆಯ ಸಿರುಗುಪ್ಪ, ಬಳ್ಳಾರಿ ಹೊಸಪೇಟೆ ತಾಲ್ಲೂಕು ಹಾಗೂ ರಾಯಚೂರು ಜಿಲ್ಲೆಯ ಸಿಂಧನೂರು, ಮಾನ್ವಿ ತಾಲ್ಲೂಕುಗಳಲ್ಲಿ ತೆಲುಗು ಸಮುದಾಯಗಳು ನೆಲೆಯೂರಿವೆ.

ಆಂಧ್ರದಿಂದ ವಲಸೆಬಂದ ಸಮುದಾಯಗಳು ಕರ್ನಾಟಕದ ಗಡಿಪ್ರದೇಶದಲ್ಲಿರುವ ಊರುಗಳಿಂದ ಕೊಂಚ ದೂರದಲ್ಲಿ ವಾಸಮಾಡುತ್ತಾರೆ. ಪಟ್ಟಣ, ನಗರಗಳು ಇವರ ನೆಲೆಗಳಿಗೆ ಸಮೀಪ ಇರುತ್ತವೆ. ಅಲ್ಲದೇ ಹೊಲಗಳಲ್ಲಿಯೇ 'ಕ್ಯಾಂಪು'ಗಳನ್ನು ನಿರ್ಮಿಸಿಕೊಂಡು ಕೆಲವರು ಗುಡಿಸಲು ಕಟ್ಟಿಕೊಂಡು ಜೀವನ ನಡೆಸುತ್ತಾರೆ. ನೆಲೆಯೂರಿದ ಕೆಲವೇ ದಿನಗಳಲ್ಲಿ ಕ್ಯಾಂಪುಗಳನ್ನು ಊರಿನ ಮಾದರಿಯಲ್ಲಿ ರಚಿಸಿ, ಆ ಕ್ಯಾಂಪಿಗೆ ನಾಮಕರಣ ಮಾಡುತ್ತಾರೆ. ಕ್ಯಾಂಪುಗಳ ನಾಮಕರಣವನ್ನು ಮುಖ್ಯವಾಗಿ -

೧. ತೆಲುಗು ಮೂಲದ ದೈವಗಳಾದ ತಿರುಪತಿ ವೆಂಕಟೇಶ್ವರ, ಮುತ್ಯಾಲಮ್ಮ, ವಿಜಯವಾಡ ಕನಕದುರ್ಗ ಮುಂತಾದವರ ಹೆಸರುಗಳು.

೨. ವಲಸಿಗ ಸಮುದಾಯದಲ್ಲಿ ಮೊದಲಿಗೆ ಬಂದಂತಹ ವ್ಯಕ್ತಿ, ಅಥವಾ ಹಿರಿಯರ ಹೆಸರುಗಳು.

೩. ಈ ಮುಂಚೆಯೇ ಅಲ್ಲಿರುವ ಗ್ರಾಮಗಳ ಹೆಸರುಗಳೊಂದಿಗೆ - ಕ್ಯಾಂಪ್ ' ಎಂದು ಸೇರಿಸಿ ಇಡುವ ಹೆಸರುಗಳು.

೪. ಸ್ಥಳೀಯ ಕೆಲವು ರಾಜಕಾರಣಿಗಳು, ಪ್ರಭಾವಿ ವ್ಯಕ್ತಿಗಳ ಹೆಸರಿನಲ್ಲಿ ನಿರ್ಮಾಣವಾದ ನೆಲೆಗಳು.

ವಲಸಿಗ ಸಮುದಾಯದ ನೆಲೆಗಳು ಕಂಡುಬರುತ್ತವೆ. ಅಂತಹ ಕೆಲವು ಮಾದರಿಗಳನ್ನು ಇಲ್ಲಿ ನೋಡಬಹುದು.

ಒಂದನೇ ಮಾದರಿ

ಅಲಮೇಲು ಮಂಗಮ್ಮ ಕ್ಯಾಂಪು - BLR
ಕೃಷ್ಣನಗರ ಕ್ಯಾಂಪು - BLR
ಧನಲಕ್ಷ್ಮೀ ಕ್ಯಾಂಪು - SRP
ದೇವೀನಗರ ಕ್ಯಾಂಪು - SRP
ಮಾರೆಪ್ಪ ಕ್ಯಾಂಪು - HPT
ಲಕ್ಷ್ಮೀಪುರ ಕ್ಯಾಂಪು - BLR
ಲಕ್ಷ್ಮೀನಗರ ಕ್ಯಾಂಪು - BLR
ವೆಂಕಟೇಶ್ವರ ಕ್ಯಾಂಪು - ALR
ಶ್ರೀರಾಮನಗರ ಕ್ಯಾಂಪು - ALR
ಸಪ್ತಗಿರಿ ಕ್ಯಾಂಪು - BLR

ಎರಡನೇ ಮಾದರಿ

ಅಪ್ಪಾರಾವ್ ಕ್ಯಾಂಪು - ALR
ಎಂಕಪ್ಪಲಾಲ್ ಕ್ಯಾಂಪು - BLR
ಗಂಗಭವಾನಿ ಕ್ಯಾಂಪು - BLR
ಗೊಂಚಿಕಾರ ರೆಡ್ಡಿ ಕ್ಯಾಂಪು - BLR
ನಾಗರಾಜ ಕ್ಯಾಂಪು - BLR
ಮಂಗಮ್ಮಕ್ಯಾಂಪು - BLR
ರಂಗೀಲಾ ಕ್ಯಾಂಪ್ - BLR
ಸಿದ್ಧಾರೆಡ್ಡಿ ಕ್ಯಾಂಪ್ - ALR
ಸುಬ್ಬಾರಾವು ಕ್ಯಾಂಪ್ - SRP

ಮೂರನೇ ಮಾದರಿ

ಕ್ಯಾದಗಿಹಾಳ ಕ್ಯಾಂಪ್ - BLR
ಬೂದಿಹಾಳು ಕ್ಯಾಂಪ್ - BLR
ಬೆಳಗಲ್ಲು ಕ್ಯಾಂಪ್ - SRP
ವೀರಾಪುರ ಕ್ಯಾಂಪ್ - BLR
ಸಿರವಾರ ಕ್ಯಾಂಪ್ - BLR

ನಾಲ್ಕನೇ ಮಾದರಿ

ಅಲ್ಲಂ ಸುಮಂಗಳಮ್ಮ ಕ್ಯಾಂಪ್ - BLR
ಕೊಂಡಯ್ಯ ಕ್ಯಾಂಪ್ - BLR
ಜೋಗಾಸೇಠ್ ಕ್ಯಾಂಪ್ - BLR

ಇತರೆ

ಕಂಪ್ಲಿಕೊಟ್ಟಾಲ - BLR

ಕದಿರೋಳ್ಳಗಡ್ಡ - ಕೋಲಾರ

ಕುಪ್ಪಂವಾರಿಪಲ್ಲೆ - ಕೋಲಾರ

ಕೊಟ್ಟಾಲುಕ್ಯಾಂಪು - BLR

ಗುಂಟೂರಿ ಕ್ಯಾಂಪು - ADN

ಗೋದಾವರಿ ಕ್ಯಾಂಪ್ - BLR

ಚೌರಿ ಕ್ಯಾಂಪ್ - HPT

ಬೆಂಚ್ ಕೊಟ್ಟಾಲು ಕ್ಯಾಂಪ್ - BLR

ರೆಂಗ್ಯುಲೇಟರ್ ಕ್ಯಾಂಪ್ - HPT

ಎಂಬಂತಹ ಸ್ಥಳನಾಮಗಳು ಗಡಿಭಾಗದಲ್ಲಿ 'ಕ್ಯಾಂಪ್'ಗಳಿಗೆ ಇರುವುದು ತಿಳಿಯುತ್ತದೆ. ಮೇಲಿನ ಮಾದರಿಗಳಲ್ಲಿ ಮುಖ್ಯವಾಗಿ ಆಂಧ್ರದ ಸಮುದಾಯಗಳ ದೈವ, ಮುಖ್ಯವಾದ ವ್ಯಕ್ತಿ ಹಾಗೂ ಸ್ಥಳೀಯ ಗ್ರಾಮನಾಮಗಳು, ಅಲ್ಲದೇ ಕೆಲವು ವಲಸೆಯ ಸಮುದಾಯದ ಮೂಲ ಊರನ್ನು ಸೇರಿಸಿಕೊಂಡು ಒಂದು ಸ್ಥಳಕ್ಕೆ ಹೆಸರಿಸಿರುವುದು ತಿಳಿಯುತ್ತದೆ. ಅಲ್ಲದೇ, ಕದಿರೋಳ್ಳಗಡ್ಡ - ಕದಿರೆ - ಅನಂತಪುರ ಜಿಲ್ಲೆ

ಕುಪ್ಪಂವಾರಿಪಲ್ಲೆ - ಕುಪ್ಪಂ - ಚಿತ್ತೂರು ಜಿಲ್ಲೆ

ಗೋದಾವರಿ ಕ್ಯಾಂಪು - ಗೋದಾವರಿ ಜಿಲ್ಲೆ

ಗುಂಟೂರಿ ಕ್ಯಾಂಪು - ಗುಂಟೂರು ಜಿಲ್ಲೆ ಎಂಬಂತಹ ಸ್ಥಳನಾಮಗಳು, ಮೂಲ ವಲಸಿಗರ ಊರುಗಳಿಂದಲೇ ಗುರುತಿಸುವುದನ್ನು ಕಂಡುಕೊಳ್ಳಬಹುದು. ಇದಕ್ಕೆ ಮುಖ್ಯಕಾರಣ ಆಯಾ ವಲಸೆ ಬಂದ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ಒಂದೇ ಊರಿನಿಂದ ಬಂದು ನೆಲೆನಿಂತಿರುತ್ತದೆ. ಇದರಿಂದಾಗಿ ಸ್ಥಳೀಯ ಸಮುದಾಯಗಳು ಮತ್ತು ವಲಸೆ ಸಮುದಾಯಗಳ ನಡುವೆ ಪರಸ್ಪರ ಸಾಂಸ್ಕೃತಿಕ ಕೊಡು ಪಡೆಯುಂಟಾಗಿ ಸಮುದಾಯಗಳ ವೈಶಿಷ್ಟ್ಯತೆಯು ವಿಭಿನ್ನವಾಗಿ ಕಂಡುಬರುತ್ತದೆ. ಜೊತೆಗೆ ವಲಸಿಗ ತೆಲುಗು ಸಮುದಾಯ ಕೆಲವು ಕಡೆ ಸ್ಥಳೀಯ ಸಮುದಾಯಗಳ ಜೊತೆಗೆ ಸಾಂಸ್ಕೃತಿಕ ಬಾಂಧವ್ಯದಿಂದ ವರ್ತಿಸದೇ ದಬ್ಬಾಳಿಕೆ (Dominate) ಯನ್ನೂ ಮಾಡುತ್ತಿರುವುದು ಕಂಡುಬರುತ್ತಿದೆ. ಅಲ್ಲದೇ ಸ್ಥಳೀಯ ಸಮುದಾಯಗಳ ಆರ್ಥಿಕ, ಸಾಮಾಜಿಕ, ರಾಜಕೀಯ, ಲಿಂಗ ಸಂಬಂಧೀ ಪ್ರಬಲತೆ, ದುರ್ಬಲತೆಯ ಅವಕಾಶಗಳನ್ನು ಬಳಸಿಕೊಳ್ಳುವ ಮೂಲಕ ಸ್ಥಳೀಯ ರಾಜಕಾರಣವನ್ನು ವಲಸೆ ಸಮುದಾಯಗಳು ನಡೆಸುತ್ತಿರುವುದು ತಿಳಿಯುತ್ತದೆ. ಆ ಮೂಲಕ ಸ್ಥಳನಾಮಕರಣದಲ್ಲಿಯೂ ತಮ್ಮ ಪ್ರಬಲತೆಯನ್ನು ತೋರಿಸಿ, ಸ್ಥಳೀಯ ಸಂಸ್ಕೃತಿಯ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿರುವುದನ್ನು ಗುರುತಿಸಬಹುದು.

### ೭.೧೪. ಆಧುನಿಕ ರಾಜಕಾರಣ ಮತ್ತು ಸ್ಥಳನಾಮಗಳು

ಸ್ಥಳನಾಮಗಳ ಮೇಲೆ ಆಧುನಿಕ ರಾಜಕಾರಣ ಬೀರಿರುವ ಪ್ರಭಾವವನ್ನು ಈ ಸಮಕಾಲೀನ ಸಂದರ್ಭದೊಡನೆ ಕೆಲವು ಉದಾಹರಣೆಗಳ ಮೂಲಕ ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಗಡಿ ಆಂಧ್ರ ಪ್ರದೇಶದ ರಾಜಕಾರಣ ಸ್ಥಳಗಳ ಹೆಸರಿಗೆ ಅವಕಾಶ ಪಡೆದಿರುವ ಸಂಗತಿಗಳನ್ನು ಎರಡು ಬಗೆಯಲ್ಲಿ ವಿವರಿಸಬಹುದು. ಒಂದು ನಗರಗಳಲ್ಲಿನ ಬೀದಿಗಳಿಗೆ ರಾಜಕೀಯ ನಾಯಕರ, ಅವರ ಸಂಬಂಧಿಗಳ ಹೆಸರನ್ನು ಇಡುವುದು, ಮತ್ತು ಹೊಸ ವಾಸ್ತವ್ಯಗಳಿಗೆ

ಅವರ ಹೆಸರನ್ನಿಟ್ಟಿರುವುದು ತಿಳಿಯುತ್ತದೆ. ಇದೊಂದು ಮಾದರಿ. ಅಲ್ಲದೇ ಬೀದಿ, ನಗರಗಳಿಗೆ ಕೆಲವು ಅಧಿಕಾರಿಗಳು ಕೈಗಾರಿಕೆಗಳ ಹೆಸರುಗಳನ್ನೂ ನಿರ್ದೇಶಿಸಿರುವುದು ಕಂಡುಬರುತ್ತದೆ.

| | | | |
|---|---|---|---|
| ಕೆ.ವಿ. ಶರತ್ಚಂದ್ರ ಕಾಲನಿ | - BLR | ಬಸವರಾಜೇಶ್ವರಿ ನಗರ | - BLR |
| ಕೆ.ಸಿ. ಕೊಂಡಯ್ಯ ಕಾಲನಿ | - BLR | ಎಂ.ಪಿ. ಪ್ರಕಾಶ ನಗರ | - HPT |
| ಬಳ್ಳಾರಪ್ಪ ಕಾಲನಿ | - BLR | ಮುಂಡ್ಲೂರು ನರಸಿಂಹಪ್ಪ ಕಾಲನಿ | - BLR |
| ಬಲ್ಡೋಟಾ ಕಾಲನಿ | - HPT | ವೆಂಕಟನರಸಮ್ಮ ಕಾಲನಿ | - BLR |

ಇವು ಕೆಲವು ಅಧಿಕಾರಿಗಳು ಹಾಗೂ ರಾಜಕೀಯನಾಯಕರ ಹೆಸರುಗಳಾಗಿದ್ದು, ಹೊಸ ವಾಸ್ತವ್ಯಗಳಿಗೆ (ಅವರದೇ ಆಸ್ತಿ) ನಾಮಕರಣ ಮಾಡಿರುವುದು ಕಂಡುಬರುತ್ತದೆ. ಅಲ್ಲದೇ ಕೈಗಾರಿಕೋದ್ಯಮಿಗಳು ನಡೆಸುವ ಕೈಗಾರಿಕೆಗಳ ಹೆಸರುಗಳೂ ಸ್ಥಳಗಳಿಗೆ ನಿರ್ದೇಶನಗೊಂಡಿವೆ.

| | |
|---|---|
| ಜಿಂದಾಲ್ ನಗರ | - BLR |
| ಬಲ್ಡೋಟಾ ಕಾಲನಿ | - HPT |

ಕೆಲವೊಮ್ಮೆ ಕಾಲನಿ, ನಗರಗಳಿಗೆ ಹೆಸರಿಡುವಾಗ ಪ್ರಬಲ ರಾಜಕಾರಣದ ಪ್ರಭಾವವೂ ತಲೆದೋರಿದ ಉದಾಹರಣೆಗಳಿವೆ. ಜನರ ಇಷ್ಟಾಯಿಷ್ಟಗಳನ್ನು ಗಣಿಸದೇ ಹೆಸರಿಟ್ಟದ್ದೂ ತಿಳಿಯುತ್ತದೆ.

ಎರಡನೇ ಮಾದರಿಯಲ್ಲಿ ಈ ಮುಂಚೆ ಇದ್ದ ಮೂಲ ಸ್ಥಳನಾಮಗಳ ಬದಲಿಗೆ ಸಮಕಾಲೀನ ರಾಜಕಾರಣದ ಪ್ರಭಾವದಿಂದ ಅವರ ಹಾಗೂ ಸಂಬಂಧಿಗಳ ಹೆಸರನ್ನು ಮೂಲಸ್ಥಳನಾಮಗಳಿಗೆ ಪರ್ಯಾಯವಾಗಿ ಇಟ್ಟಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಸಂಡೂರು ತಾಲ್ಲೂಕಿನ ಕೆಲವು ಸ್ಥಳನಾಮಗಳನ್ನು ಉದಾಹರಿಸುವ ಮೂಲಕ ಮಾದರಿಯನ್ನು ತೋರಿಸಲಾಗಿದೆ. ಬಳ್ಳಾರಿ - ಕರ್ನೂಲು ಗಡಿಯಲ್ಲಿ ಈ ರೀತಿಯಾದ ಬದಲಾವಣೆ ಕಾಣಸಲಾರದು. ಕಾರಣ ಸಂಡೂರು ತಾಲ್ಲೂಕನ್ನು ಮಾದರಿಗಾಗಿ ಆಯ್ಕೆಮಾಡಿಕೊಳ್ಳಲಾಗಿದೆ.

**ಸಂಡೂರುತಾಲ್ಲೂಕು, ಬಳ್ಳಾರಿಜಿಲ್ಲೆ**

| ಮೂಲಸ್ಥಳನಾಮಗಳು | ಬದಲಾವಣೆಗೊಂಡ ರೂಪಗಳು |
|---|---|
| ಕಣಿಮೆಹಳ್ಳಿ | ಯಶವಂತಪುರ (ನಗರ) |
| ಕ್ಯಾನಾಪುರ | ದೌಲತ್‌ಪುರ |
| ಎತ್ತಿನಹಟ್ಟಿ | ತಾರಾನಗರ |
| ಚಿಕ್ಕಸೊಂಡೂರು | ಲಕ್ಷ್ಮೀಪುರ |
| ನವಲಹಟ್ಟಿ | ವಿಠಲ್‌ನಗರ |
| ನರಸಾಪುರ | ನರಸಿಂಗಾಪುರ |
| ಬಾವಿಹಳ್ಳಿ | ಸುಶೀಲಾನಗರ |
| ಮ್ಯಾದಾರಹಳ್ಳಿ | ಜಯಸಿಂಗಪುರ |
| ಮುದುಕಲಪೆಂಟೆ | ರಣಜಿತ್ ಪುರ |
| ಹೊಸಹಳ್ಳಿ | ಭುಜಂಗನಗರ |

ಹೀಗೆ ಮೂಲ ಸ್ಥಳನಾಮಗಳನ್ನು ಹೊರತು ಪಡಿಸಿ ಅದಕ್ಕೆ ಪರ್ಯಾಯವಾಗಿ ಸಮಕಾಲೀನ ರಾಜಕಾರಣದ ಹೆಸರುಗಳು ಚಾಲ್ತಿಗೆ ಬಂದಿರುವುದನ್ನು ಗುರುತಿಸಬಹುದು. ಅಲ್ಲದೆ ಬದಲಾವಣೆಗೊಂಡಂತಹ ಹೆಸರುಗಳು ಇಂದು ರೆವಿನ್ಯೂ ದಾಖಲೆಯಾಗಿವೆ. ಐವತ್ತು ವರ್ಷಕ್ಕಿಂತ ಹೆಚ್ಚಿನ ವಯೋಮಾನದವರಲ್ಲಿ ಹಾಗೂ ಕೆಲವು ಗ್ರಾಮೀಣ ಯುವಜನತೆಯು ಆಡುನುಡಿಯಲ್ಲಿ, ದೈನಂದಿನ ವ್ಯವಹಾರಗಳಲ್ಲಿ (ಬಸ್ಸು, ಪರಸ್ಪರ ಮಾತುಕತೆ, ಮಾರ್ಕೆಟ್ಟು ಮುಂತಾದಲ್ಲಿ) ಮೂಲ ಹೆಸರುಗಳನ್ನೇ ಬಳಸುವುದು ಕಂಡುಬರುತ್ತಿದೆ. ಆದರೆ, ರಾಜಕಾರಣದ ಪ್ರಭಾವದಿಂದ ಮೂಲ ಹೆಸರುಗಳೊಂದಿಗೆ ತಳಕುಹಾಕಿಕೊಂಡಿರುವ ಸಾಂಸ್ಕೃತಿಕ ಅಂಶಗಳು ಮರೆಯಾಗುವ ಸಾಧ್ಯತೆಗಳಿವೆ. ಅದರಂತೆ ಸುಬ್ಬರಾಯನಹಳ್ಳಿ, ರಾಧಾನಗರ, ಮುರಾರಿಪುರ, ಕೃಷ್ಣಾನಗರ, ಧರ್ಮಾಪುರ, ರಾಜಪುರ, ವಿಠಲಪುರ, ರಾಮಗಡ, ವೆಂಕಟಗಿರಿ ತಾಂಡ ಮುಂತಾದ ಸ್ಥಳನಾಮಗಳು ಆಧುನಿಕ ರಾಜಕಾರಣದ ಪ್ರಭಾವದಿಂದ ಅವರ ಹೆಸರುಗಳನ್ನೇ ಒಳಗೊಂಡಿರುವುದು ತಿಳಿಯುತ್ತದೆ.

ಅದೇನೇ ಇದ್ದರೂ ಬಹುಮುಖ್ಯವಾಗಿ ಬಂಡವಾಳಶಾಹಿ ಹಾಗೂ ಸಮಕಾಲೀನ ರಾಜಕಾರಣ ಮೂಲ ಹೆಸರುಗಳನ್ನು ಅಳಿಸಿ ತಮ್ಮ ಅಸ್ತಿತ್ವವನ್ನು ಬೆಳೆಸುವುದು ಸಂಸ್ಕೃತಿಯ ಮೂಲವನ್ನು ಅಳಿಸಿದಂತೆಯೇ. ಈ ಬಗೆಯ ಬದಲಾವಣೆಯ ಪ್ರಕ್ರಿಯೆಯು ಜಗತ್ತಿನಾದ್ಯಂತ ನಡೆಯುತ್ತಿದೆ. "ಅಧಿಕಾರಸ್ಥ ಜನತೆ ವಿವೇಕ ಹೀನರಾಗಿ ಸ್ಥಳನಾಮಗಳನ್ನು ಬದಲಾಯಿಸುವ ಪರಿಸ್ಥಿತಿ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಕಾಣಬಹುದು. ಆದರೆ ರಾಜಕೀಯ ಅಧಿಕಾರ ಸೂತ್ರಹಿಡಿದ ಈ ಜನ ದೇಶೀಯವಾದ ಹಳೆಯ ಹೆಸರುಗಳನ್ನು ತೊಡೆದು, ತಮ್ಮ ಹೆಸರುಗಳನ್ನು ಅಂಕಿತಗೊಳಿಸುವುದು ಬರ್ಬರತನವಾಗುತ್ತದೆ."[೮೩] ಎಂಬುದನ್ನು ತಿಳಿಯಬೇಕು. ಅಧಿಕಾರಸ್ಥ ಜನ ಪದಚ್ಯುತರಾದ ನಂತರ ಮತ್ತೆ ಪ್ರಾಚೀನ ಹೆಸರುಗಳೇ ಬಳಕೆಗೆ ಬರುತ್ತದೆಂಬುದಕ್ಕೆ ಚರಿತ್ರೆಯಲ್ಲಿ ಅನೇಕ ಉದಾಹರಣೆ ಇವೆ. ಆದರೆ ರೆವಿನ್ಯೂ ದಾಖಲೆಯಲ್ಲಿಯೇ ಭದ್ರವಾದ, ಬದಲಾದ ಸ್ಥಳನಾಮಗಳು ಹಳೆಯ ಹೆಸರಿಗೆ ಹಿಂದಿರುಗುವ ಸಾಧ್ಯತೆಗಳು ಕಡಿಮೆ. ಜೊತೆಗೆ ಆಧುನಿಕ ಜಗತ್ತಿನಲ್ಲಿ ಬದುಕುತ್ತಿರುವ ಸಮಕಾಲೀನ ಜನಜೀವನವು ಹೊಸದನ್ನು ಫ್ಯಾಶನ್ನಾಗಿ ಸ್ವೀಕರಿಸಿ, ಅದನ್ನು ಬೆಳೆಸುವ ವಕ್ತಾರರಂತೆ ಮುನ್ನುಗ್ಗುವುದರಿಂದ ಸಂಸ್ಕೃತಿಯ, ಪರಂಪರೆಯ ಅರಿವು ಮರೆಯಾಗುತ್ತದೆ. ಆ ಎಚ್ಚರವಿದ್ದಲ್ಲಿ ಜಾಗೃತರಾಗಿ ಪರಂಪರೆಯ ಉಳಿಯುವಿಕೆಗಾಗಿ ಸ್ಥಳೀಯರೇ ಹೊಣೆಯನ್ನು ಹೊರಬೇಕಾಗುತ್ತದೆ. ಇದರೊಂದಿಗೆ ಸರ್ಕಾರವೂ ಬೆಂಬಲ ನೀಡುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಸರ್ಕಾರವು ಈ ಬಗ್ಗೆ ಕಾನೂನನ್ನು ಹೊರಡಿಸಿ, ಯಾವುದೇ ಕಾರಣವಿಲ್ಲದೇ ಗ್ರಾಮನಾಮಗಳ ಅಥವಾ ಸ್ಥಳನಾಮಗಳ ಹೆಸರುಗಳನ್ನು ಬದಲಿಸುವಂತಿಲ್ಲ ಎಂಬ ಸೂಚನೆಯನ್ನು ನೀಡಿದೆ. ಅಂತಹ ಕೆಲವು ನಿಯಮಗಳನ್ನು ಹೀಗೆ ಪಟ್ಟಿಮಾಡಬಹುದು.

ಸ್ಥಳನಾಮಗಳು ಭೂತ, ವರ್ತಮಾನ, ಭವಿಷ್ಯತ್ತುಗಳನ್ನು ಸಂಪರ್ಕಿಸುವ ಸೇತುವೆಗಳೆಂಬುದನ್ನರಿತ ಸ್ವಾತಂತ್ರ್ಯಾನಂತರದ ಭಾರತಸರ್ಕಾರ ಸೂತ್ರ ರೂಪವಾಗಿ ರಾಜ್ಯಗಳಿಗೆ ನಾಮಾಂತರ ನಿಯಂತ್ರಣಕ್ಕಾಗಿ ಆದೇಶಗಳನ್ನು ರವಾನಿಸಿದ್ದು ಯಥೋಚಿತವಾಗಿದೆ.

೧. ವಿಶೇಷ ಕಾರಣವಿಲ್ಲದೆ ಬಳಕೆಯ ಹೆಸರನ್ನು ಬದಲಿಸಕೂಡದು.

೨. ಐತಿಹಾಸಿಕ ಸಂಬಂಧ ಅಥವಾ ಪ್ರಾಮುಖ್ಯವುಳ್ಳ ಗ್ರಾಮನಾಮಗಳನ್ನೂ ವ್ಯತ್ಯಾಸ ಮಾಡಕೂಡದು.

೩. ಸ್ಥಳಾಭಿಮಾನ ಅಥವಾ ಭಾಷಿಕ ಕಾರಣಗಳಿಗಾಗಿ ನಾಮಾಂತರ ಸಲ್ಲದು. ರಾಷ್ಟ್ರನಾಯಕರಿಗೆ ಗೌರವ ಸಲ್ಲಿಸುವ ಅಥವಾ ಸ್ಥಳೀಯ ಜನರ ಭಾವುಕತೆಯನ್ನು ತೃಪ್ತಿಪಡಿಸುವ ಸಲುವಾಗಿ ಹೆಸರು ಬದಲಾವಣೆ ಕೂಡದು.

೪. ಹೊಸ ಹೆಸರನ್ನಾರಿಸುವಾಗ ಒಂದೇ ಹೆಸರಿನ ಊರುಗಳು ಹಲವಾರಾಗಿ ಗೊಂದಲವುಂಟಾಗದಂತೆ ಎಚ್ಚರಿಕೆ ವಹಿಸಬೇಕು.

೫. ಯಾವುದಾದರೂ ಪುರಾತನ ಸ್ಥಳ ಖಿಲವಾಗಿದ್ದು, ಅದನ್ನು ಜೀರ್ಣೋದ್ಧಾರ ಮಾಡಬೇಕಾದ ಸಂದರ್ಭವೊದಗಿದಾಗ, ಅದಕ್ಕೆ ಹಳೆಯ ಹೆಸರನ್ನೇ ಇಡತಕ್ಕದ್ದು.

ಭಾರತ ಸರ್ಕಾರದ ಸುತ್ತೋಲೆಯು ಸುಸ್ಪಷ್ಟವಾಗಿದ್ದರೂ ಸ್ಥಳೀಯ ಆಡಳಿತ ತಮಗೆ ಬೇಕಾದಂತೆ ತಿರುಚುವುದು ಕಂಡುಬರುತ್ತದೆ. ಬ್ರಿಟಿಷರು ಇಟ್ಟಿದ್ದ ಹೆಸರುಗಳನ್ನು ಮಾತ್ರ ಸಕಾರಣವಾಗಿ ತೆಗೆಯಬಹುದೆಂದು ಹೇಳಲಾಯಿತು. ಆದರೂ ಆಡಳಿತವೇ ಅನೇಕ ಬಾರಿ ಇದನ್ನು ಮೀರಿ ವರ್ತಿಸಿರುವುದು ಕಂಡುಬರುತ್ತದೆ. - ಸೂಳೆಕೆರೆ' ಎಂಬ ಪ್ರಸಿದ್ಧ ಕೆರೆಯ ಹೆಸರನ್ನ 'ಶಾಂತಿಸಾಗರ' ಎಂದು ಬದಲಿಸಲು ಹುನ್ನಾರ ನಡೆಸಿದ್ದನ್ನು ನಾಡಿನ ಸಾಹಿತಿಗಳು, ಜನರು ಪ್ರತಿಭಟಿಸಿದ್ದನ್ನು ಗಮನಿಸಬಹುದು. ಈ ದೃಷ್ಟಿಯಿಂದ ಪರಂಪರೆಯ ಹೊಣೆ ಅಂತಿಮವಾಗಿ ಜನರ ಮೇಲೆ ಇರುತ್ತದೆ.

## ೭.೧೫. ಸ್ಥಳನಾಮಗಳ ಬಳಕೆಯ ವಲಯಗಳು : ಸಾಮಾಜಿಕ ವರ್ಗಗಳ ಹಿನ್ನೆಲೆಯಲ್ಲಿ

ಸ್ಥಳನಾಮಗಳ ಬಳಕೆಯು ಸಾಮಾಜಿಕ ವರ್ಗಗಳ ಹಿನ್ನೆಲೆಯಲ್ಲಿ ಭಾಷಿಕ ವರ್ತನೆಗನುಗುಣವಾಗಿ ಉಚ್ಚರಿಸಲ್ಪಡುತ್ತವೆ ಎಂಬುದನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ಆಯಾ ಭಾಷಿಕರು ಉಚ್ಚರಿಸುವ ರೀತಿಯೂ ಕೂಡ ಭಿನ್ನ ಭಿನ್ನವಾಗಿರುವುದು ತಿಳಿಯುತ್ತದೆ. ವಿಶೇಷವಾಗಿ ಗಡಿಭಾಗದ ಸ್ಥಳನಾಮಗಳ ಅಧ್ಯಯನದಲ್ಲಿ ದ್ವಿಭಾಷಿಕ ಪರಿಸರದಲ್ಲಿ ಈ ಪ್ರಕ್ರಿಯೆ ಕುತೂಹಲವಾಗಿರುತ್ತದೆ. ಆಡುಭಾಷೆ ಮತ್ತು ಶಿಷ್ಟ ಭಾಷೆಯ ಮೂಲಕ ಸ್ಥಳನಾಮಗಳ ಉಚ್ಚಾರಣಾ ವ್ಯವಸ್ಥೆ ಮುಂತಾದ ಅಧ್ಯಯನದ ವಿಸ್ತತರೂಪವನ್ನು ಸ್ಥಳನಾಮಗಳ ಭಾಷಿಕ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಕಾರಣದಿಂದ ಇಲ್ಲಿ ಮುಖ್ಯವಾಗಿ ಆಯಾ ಜಾತಿ ಮತ್ತು ವರ್ಗದ ಹಿನ್ನೆಲೆಯನ್ನು ಅನುಲಕ್ಷಿಸಿ ಉಚ್ಚಾರಣಾ ರೀತಿಯನ್ನು ಗಮನಿಸಲಾಗಿದೆ. ಅಲ್ಲದೇ ಇಲ್ಲಿ ರೆವಿನ್ಯೂ ಬರೆಹದ ರೂಪವನ್ನು ಅಧಿಕೃತವಾಗಿ ಪರಿಗಣಿಸಿಕೊಂಡು ಈ ರೂಪವನ್ನು ಔಪಚಾರಿಕವಾಗಿ ಬರೆಯುವ ಪದ್ಧತಿ, ಹಾಗೂ ಅಕ್ಷರಸ್ಥ ಸಮುದಾಯವು ಇದನ್ನು ಉಚ್ಚರಿಸುವ ರೀತಿ, ಅದರಂತೆ ಅನಕ್ಷರಸ್ಥ ಸಮುದಾಯದ ಉಚ್ಚಾರಣಾ ರೀತಿ, ಅದರಲ್ಲಿಯೂ ಅನಕ್ಷರಸ್ಥ ಕೆಳವರ್ಗದ ಜನತೆಯ ಉಚ್ಚಾರಣಾ ರೀತಿಯನ್ನು ಕ್ಷೇತ್ರಮಾಹಿತಿಯಿಂದ ಗಮನಿಸಿ ದಾಖಲಿಸಲಾಗಿದೆ. ಅಲ್ಲದೇ ವಿಶೇಷ ಸಂದರ್ಭಗಳಲ್ಲಿ ಬ್ರಾಹ್ಮಣರು ಸ್ಥಳನಾಮಗಳನ್ನು ಬಳಸುವ ರೀತಿಯನ್ನು ದಾಖಲಿಸಲಾಗಿದೆ. ಒಟ್ಟು ಸ್ಥಳನಾಮಗಳ ಬಳಕೆಯ ಸಂದರ್ಭಗಳನ್ನು ದ್ವಿಭಾಷಿಕ ವಲಯದಲ್ಲಿ ಬರೆಹದ ಸಂದರ್ಭದಲ್ಲಿ ಆಗುವ ವ್ಯತ್ಯಾಸದ ರೂಪಗಳನ್ನು ಗಮನಿಸಲಾಗಿದೆ.

### ಪಟ್ಟಿ : ಬಳಕೆಯ ವಲಯಗಳು ಸಾಮಾಜಿಕ ವರ್ಗಗಳ ಹಿನ್ನೆಲೆಯಲ್ಲಿ

| ಕ್ರ. ಸಂ. | ರವಿನ್ಯೂ ದಾಖಲೆ ಮತ್ತು ಬರಹ | ಔಪಚಾರಿಕ ಬರಹ | ಶಿಷ್ಟರ ಉಚ್ಚಾರಣೆ | ಮೇಲ್ವರ್ಗದ ಅನಕ್ಷರಸ್ಥರ ಉಚ್ಚಾರಣೆ | ಕೆಳವರ್ಗದ ಅನಕ್ಷರಸ್ಥರ ಉಚ್ಚಾರಣೆ | ಬ್ರಾಹ್ಮಣರು ವಿಶೇಷ ಸಂದರ್ಭದಲ್ಲಿ | ದ್ವಿಭಾಷಿಕವಲಯ ಬರೆಹ | |
|---|---|---|---|---|---|---|---|---|
| | | | | | | | ತೆಲುಗು | ಕನ್ನಡ |
| ೧. | ಆದವಾನಿ | ಆದೋನಿ<br>ಆದವಾನಿ | ಆದೋನಿ | ಆದೋನಿ | ಆದಾನಿ<br>ಆದಾನಿ | - | ಆದವಾನಿ<br>ಆದೋನಿ | ಆದವಾನಿ. |
| ೨. | ಗೂಳ್ಯ | ಗೂಳ್ಯಂ | ಗುಳೇವು<br>ಗೂಳ್ಯಂ | ಗುಳೇವು | ಗೂಳ್ಯೇವು | - | ಗೂಳ್ಯಂ<br>ಗೂಳ್ಯಂ | ಗೂಳ್ಯಂ |
| ೩. | ಚಿನ್ನಹ್ಯಾಟಿ | ಚಿನ್ನಹ್ಯಾಟ | ಚಿನ್ನಹ್ಯಾಟಿ<br>ಚಿಗ್ಯಾಟಿ | ಚಿಗಾಟಿ<br>ಸಿಗಾಟಿ<br>ಸಿಗಾಟಿ | ಸಿನ್ಯಾಟಿ<br>ಚಿಗಾಟಿ | - | ಚಿನ್ನಹ್ಯಾಟ | ಚಿಗ್ಯಾಟಿ |
| ೪. | ಪಚ್ಚರಹಳ್ಳಿ | ಪಚ್ಚರಹಳ್ಳಿ | ಪಚ್ಚಾರಳ್ಳಿ | ಪಚ್ಚರಳ್ಳಿ | ಪಚ್ರಳ್ಳಿ<br>ಪಚ್ಚಾರಳ್ಳಿ | - | ಪಚ್ಚರವಾಡು | ಪಚ್ಚರಳ್ಳಿ |
| ೫. | ಬಳ್ಳಾರಿ | ಬಳ್ಳಾರಿ | ಬಳ್ಳಾರಿ<br>ಬೆಲ್ಲಾರಿ | ಬಳಾರಿ/ಬಳ್ಳಾರಿ | ಬೊಳ್ಳಾರಿ<br>ಬಳ್ಳಾರಿ | ಬಳ್ಳಾರಿಪುರ | ಬಳ್ಳಾರಿ<br>ಬೆಲ್ಲಾರಿ<br>ಬಲ್ಲಾರಿ | ಬಳ್ಳಾರಿ |
| ೬. | ಬೇವಿನಮರದ ಸೂಗೂರು | B.M.ಸೂಗೂರು | B.M.ಸೂಗೂರು | B.M.ಸೂಗೂರು | ಬೀಮ್ಸೂಗೂರು<br>ಬೇನಮರ್ದಸೂಗೂರು | - | - | B.M.ಸೂಗೂರು |
| ೭. | ಬೊಮ್ಮಗುಂಡನ ಹಳ್ಳಿ | B.G.ಹಳ್ಳಿ<br>ಬೊಮ್ಮನಹಳ್ಳಿ | B.G.ಹಳ್ಳಿ | ಬೊಂಬಗನಹಳ್ಳಿ<br>ಬೀಜಳ್ಳಿ | ಬೊಂಬಾನಳ್ಳಿ<br>ಬೀಜಾನಳ್ಳಿ<br>ಬಂಬಾನಳ್ಳಿ | ಬ್ರಹ್ಮಗುಂಡನ ಅಗ್ರಹಾರ | ಬೊಮ್ಮಗುಂಡನಪಲ್ಲಿ/<br>B.G.ಪಲ್ಲಿ | ಬೊಮ್ಮನಳ್ಳಿ |
| ೮. | ಮಾರಲು ಮಡಿಕೆ | ಭಟ್ಟರಹಳ್ಳಿ | ಮಾರ್ಲಮಡಕ<br>ಭಟ್ರಳ್ಳಿ | ಮಾರ್ಲುಮಡ್ಕೆ<br>ಭಟ್ರಳ್ಳಿ | ಮಾರ್ಲಾಡ್ಕೆ<br>ಭಟ್ರಳ್ಳಿ | ಭಟ್ಟರಹಳ್ಳಿ | ಮಾರ್ಲಮಡಕ | ಮಾರ್ಲುಮಡಿಕೆ |
| ೯. | ಮೊಲಗಹಳ್ಳಿ<br>ಮೊಗಲಹಳ್ಳಿ | ಮೊಲಗವೇಲಿ | ಮೊಲಗವಲ್ಲಿ | ಮೊಲಗವೇಲಿ | ಮಲಿಗೇಲಿ<br>ಮಗಲ್ಳಿ | - | ಮೊಲಗವೇಲಿ | ಮೊಳಗೋಳಿ |
| ೧೦. | ಯಳ್ಳಾರ್ತಿ | ಯಳ್ಳಾರ್ತಿ<br>ಎಳ್ಳಾರ್ತಿ | ಯಳ್ಳಾರ್ತಿ<br>ಎಳ್ಳಾರ್ತಿ | ಯಳ್ಳಾರುತಿ<br>ಎಳ್ಳೋರ್ತಿ | ಯಳ್ಳಾರ್ತಿ<br>ಯೊಳ್ಳಾರ್ತಿ | ಶಿಲಪುರಿ | ಎಲ್ಲಾರ್ತಿ<br>ಯಲ್ಲಾರ್ತಿ | ಯಳ್ಳಾರ್ತಿ |
| ೧೧. | ಲಿಂಗದಹಳ್ಳಿ | ಲಿಂಗದಹಳ್ಳಿ | ನಿಂಗದಹಳ್ಳಿ | ನಿಂಗದಳ್ಳಿ | ನಿಂಗದಳ್ಳಿ | - | ಲಿಂಗಪಲ್ಲಿ | ಲಿಂಗದಳ್ಳಿ |
| ೧೨. | ವೇಣಿ ವೀರಾಪುರ | V. ವೀರಾಪುರ | V. ವೀರಾಪುರ | ವಿಣಿಈರಾಪುರ | ವಿಣಿಈರಾಪ್ರ<br>ವಿಣಿಈರಾಪುರ | - | - | ವೇಣಿವೀರಾಪುರ |
| ೧೩. | ಸಿರುಗುಪ್ಪ | ಸಿರಿಗುಪ್ಪೆ/<br>ಸಿರುಗುಪ್ಪ | ಸಿರುಗುಪ್ಪ<br>ಸಿರಿಗುಪ್ಪೆ | ಸಿರುಗುಂಪೆ<br>ಸಿರುಗುಂಪ | ಶಿರುಗುಂಪೆ<br>ಸಿರುಗುಂಪೆ | ಶ್ರೀಪುರ<br>ಶ್ರೀಗಿರಿಪಟ್ಟಣ | ಶಿರುಗುಪ್ಪಾ<br>ಶಿರುಗುಂಪಾ | ಸಿರುಗುಪ್ಪ |
| ೧೪. | ಹೊಳಲಗುಂದೆ | ಹೊಳಗುಂದೆ/<br>ಹೊಳಗುಂದ | ಒಳಗುಂದೆ | ಒಳಗುಂದೆ | ವಳಗುಂದೆ | ಪೊಳಲ್‌ಕುಂದ<br>ಪೊಳಲ್‌ಗುಂದೆ | ಹೊಳಲುಗುಂದಾ<br>ಹೊಳಗುಂದಾ | ಹೊಳಗುಂದೆ. |

ಈ ಉಚ್ಚಾರ ಸೌಲಭ್ಯವು ಆಯಾ ಜಾತಿಗಳಲ್ಲಿ ಅಷ್ಟಾಗಿ ವ್ಯತ್ಯಾಸ ಕಂಡು ಬರುವುದಿಲ್ಲ. ಆದರೂ ಕೆಲವು ಕೆಳವರ್ಗಗಳು ಬಳಸುವಾಗಿ ಸ್ಥಳನಾಮವನ್ನು ಸಂಕ್ಷೇಪಿಸಿ ಹೇಳುತ್ತಾರೆ. ಹಾಗೂ ಸ > ಶ; ಚ > ಸ; ಹ > ಅ; ಮುಂತಾಗಿ ಹ್ರಸ್ವ, ದೀರ್ಘವಾಗುವುದು. ದೀರ್ಘಹ್ರಸ್ವವಾಗುವುದು; ಮಹಾಪ್ರಾಣಾಕ್ಷರ ಅಲ್ಪಪ್ರಾಣವಾಗುವುದು, ಈ ಬಗೆಯ ವ್ಯತ್ಯಾಸಗಳು ಕೆಳಸಮುದಾಯಗಳಲ್ಲಿ ಕಂಡು ಬರುತ್ತದೆ. ಮೇಲ್ವರ್ಗದ ಅನಕ್ಷರಸ್ಥರು ಹಾಗೂ ಕೆಳವರ್ಗದ ಅನಕ್ಷರಸ್ಥರು ಸ್ಥಳನಾಮ ಉಚ್ಚರಿಸುವಾಗ ಅಂತಹ ಹೆಚ್ಚಿನ ವ್ಯತ್ಯಾಸ ಕಂಡು ಬರುವುದಿಲ್ಲ. ಕೆಳವರ್ಗದ ಅಕ್ಷರಸ್ಥರು ಹಾಗೂ ಮೇಲ್ವರ್ಗದ ಅಕ್ಷರಸ್ಥರು ಸಮಾನರೀತಿಯಲ್ಲಿ ಉಚ್ಚರಣಾ ನಿಯಮವನ್ನು ಅನುಸರಿಸುವುದು ಕಂಡುಬರುತ್ತದೆ. ಬ್ರಾಹ್ಮಣರು ವಿಶೇಷ ಸಂದರ್ಭಗಳಲ್ಲಿ ಅಂದರೆ ಪುರಾಣ ಪ್ರವಚನ ಹೇಳುವಾಗ; ಅನೇಕ ಸಭೆ - ಕಾರ್ಯಕ್ರಮಗಳಲ್ಲಿ; ಜನರಿಗೆ ಬೋಧನೆ ಮಾಡುವಾಗ ಆಯಾ ಊರನ್ನು ಸಂಸ್ಕೃತೀಕರಿಸಿ ಹೇಳುತ್ತಾರೆ. ಆದರೆ ಬರೆಹ ಇತ್ಯಾದಿ ಆಡಳಿತಾತ್ಮಕ ವ್ಯವಹಾರದಲ್ಲಿ ಗ್ರಾಂಥಿಕ / ಬರೆಹದ ದಾಖಲೆಯ ನಿಯಮದ ಪ್ರಕಾರ ಬರೆಯುತ್ತಾರೆ. ಕೆಳಸಮುದಾಯದ ಜನರು ಹ್ರಸ್ವವನ್ನು ಉಚ್ಚರಿಸುವಾಗ ಉದಾ : B.G.ಹಳ್ಳಿ

B.M.ಸೂಗೂರು ಎಂಬ ಸ್ಥಳನಾಮಗಳನ್ನು

B.G.ಹಳ್ಳಿ > ಬೀಜಿಹಳ್ಳಿ > ಬೀಜಹಳ್ಳಿ

B.M.ಸೂಗೂರು > ಭೀಮಸೂಗೂರು > ಬೀಮನಸೂಗೂರು ಎಂದು ತಪ್ಪಾಗಿ, ಅರಿವಿಲ್ಲದೆಯೇ ಪ್ರಯೋಗಿಸುವುದೂ ಕಂಡುಬರುತ್ತದೆ. ಆದರೆ ಮೂಲ ಸ್ಥಳನಾಮಗಳ ಬಗ್ಗೆ ಅವರಲ್ಲಿ ಸ್ಪಷ್ಟ ಕಲ್ಪನೆಯಿರುತ್ತದೆ ಎಂಬುದು ಮುಖ್ಯ. ಹಸ್ವೀಕರಣ ಅವರ ಉಚ್ಚಾರಣೆಯಲ್ಲಿ ಗೊಂದಲವಾಗಿರುತ್ತದೆ. ದ್ವಿಭಾಷಿಕ ಪರಿಸರದಲ್ಲಿ ಸ್ಥಳನಾಮಗಳ ಉಚ್ಚಾರಣಾ ನಿಯಮವು ಹಲವು ವಿಶೇಷಗಳಿಂದ ಕೂಡಿರುತ್ತದೆ.

ಹಳ್ಳಿ > ಪಲ್ಲಿ - ಪಚ್ಚರಹಳ್ಳಿ > ಪಚ್ಚರಪಲ್ಲಿ

ಹಾಳು > ಪಾಡು - ದೇಗುಲದಹಾಳ್ > ದೇಗುಲಪಾಡು

ಸಣ್ಣ ; ಚಿಕ್ಕ > ಚಿನ್ನ - ಚಿಕ್ಕಹ್ಯಾಟೆ > ಚಿನ್ನಹ್ಯಾಟಿ

ಹಿರೇ, ದೊಡ್ಡ > ಪೆದ್ದ - ಹಿರೇಹ್ಯಾಟೆ > ಪೆದ್ದಹ್ಯಾಟಿ

ಳ > ಲ - ಬಳ್ಳಾರಿ > ಬಲ್ಲಾರಿ > ಬಳ್ಳಾರಿ

ಣ > ನ - ಮಣೇಕುರ್ತಿ > ಮನೇಕುರ್ತಿ

ಸ > ಶ - ಸಿರುಗುಪ್ಪ > ಶಿರುಗುಪ್ಪ

- ಸಿಂಧನೂರು > ಶಿಂಧನೂರು - ಎಂಬುದಾಗಿ ಮಾರ್ಪಾಡಾಗುವುದು ಕಂಡುಬಂದಿದೆ.

ಇದು ನಡೆಯುವುದು ತೆಲುಗು ಮಾತೃ ಭಾಷಿಕರಿಂದ. ಕನ್ನಡ ಮಾತೃಭಾಷಿಕರೂ ಕೂಡ ಅನೇಕ ಸಂದರ್ಭಗಳಲ್ಲಿ ಈ ತೆಲುಗು ಮಾದರಿಯನ್ನು ಅನುಕರಿಸುತ್ತಾರೆ. ಆಲೂರು - ಆದವಾನಿ ತಾಲ್ಲೂಕಿನಲ್ಲಿರುವ ಅನೇಕ ಕನ್ನಡ ಸ್ಥಳನಾಮಗಳು, ತೆಲುಗು ಮಾತೃಭಾಷಿಕರಿಂದ ಬದಲಾವಣೆಗೆ ಒಳಪಡುತ್ತಿವೆ. ಅಲ್ಲದೆ ಸರ್ಕಾರವೂ ಕೂಡ, ಬಸ್ಸಿನ ಬೋರ್ಡುಗಳು, ಊರುಗಳ ನಾಮಫಲಕ: ಕೊನೆಗೆ ಅನೇಕ ಕಛೇರಿಗಳಲ್ಲಿಯೂ ತೆಲುಗು ಭಾಷೆಗೆ ಹೊಂದಿಸುತ್ತಿರುವುದು ಕಂಡು ಬಂದಿದೆ.

ಬಳ್ಳಾರಿ - ಸಿರುಗುಪ್ಪ ಗಡಿಭಾಗದಲ್ಲಿ ಅಷ್ಟಾಗಿ ತೆಲುಗು ಭಾಷೆಯ ಪ್ರಭಾವ ಉಚ್ಚಾರಣೆಯ ಸಂದರ್ಭದಲ್ಲಿ ಸ್ಥಳನಾಮಗಳ ಮೇಲೆ ಆಗಿಲ್ಲವೆನ್ನಬಹುದು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು: ಅನಂತರಪುರ ಜಿಲ್ಲೆಯ ರಾಯದುರ್ಗ: ಮಡಕಶಿರಾ: ಕಲ್ಯಾಣದುರ್ಗ ಪರಿಸರದ ಗಡಿಭಾಗದಲ್ಲಿ ಜಾತಿ ಮತ್ತು ವರ್ಗದ ನೆಲೆಯಲ್ಲಿ ಸ್ಥಳನಾಮಗಳ ಉಚ್ಚಾರಣಾ ನಿಯಮದಲ್ಲಿ ಒಂದು ವಿಶೇಷತೆಯಿದೆ. ಹೆಚ್ಚಾಗಿ ಈ ಪರಿಸರದಲ್ಲಿ ವಾಸಿಸುವುದು ನಾಯಕ (ಬೇಡ) ಮತ್ತು ಗೊಲ್ಲರ ಸಮುದಾಯ. ಇವರು ತಾವು ವಾಸಿಸುವ ನೆಲೆಗಳಿಗೆ ಹೆಚ್ಚಾಗಿ 'ಹಟ್ಟಿ'ಗಳೆಂದು ಕರೆದುಕೊಳ್ಳುತ್ತಾರೆ. ಅವರು ವಾಸಿಸುವ ಊರುಗಳಿಗೆ ಒಂದು ನಿರ್ದಿಷ್ಟವಾದ ಸ್ಥಳನಾಮ ಇದ್ದರೂ, ಅವರು ಅದನ್ನು ತಮ್ಮ ತಮ್ಮ ವ್ಯವಹಾರಗಳಲ್ಲಿ, ಆ ಹೆಸರನ್ನು ಬಳಸುವುದಿಲ್ಲ. ಬದಲಾಗಿ 'ಹಟ್ಟಿ' ಎಂದೇ ಬಳಸುತ್ತಾರೆ.

ಉದಾ : ದೇವರಹಟ್ಟಿ ಎಂಬ ಗ್ರಾಮದಲ್ಲಿ ಹೆಚ್ಚಾಗಿ ಬೇಡರ ಸಮುದಾಯವಿದೆ. ಇದರ ಪಕ್ಕದ ಊರು ಅಪ್ಪೇನಹಳ್ಳಿ. ಇಲ್ಲಿ ವಿವಿಧ ಸಮುದಾಯಗಳಿವೆ. ಅಪ್ಪೇನಹಳ್ಳಿಯ ಮೇಲ್ಭಾಗದಲ್ಲಿರುವುದು ಮ್ಯಾಗಳಹಟ್ಟಿ, ಕೆಳಭಾಗದಲ್ಲಿರುವುದು ಕೆಳಗಿನ ಹಟ್ಟಿಯೆಂದೂ ಕರೆಯುತ್ತಾರೆ. ಮ್ಯಾಗಳಹಟ್ಟಿಯ ಮೂಲ ಹೆಸರು ದೇವರಹಟ್ಟಿ, ಕೆಳಗಿನಹಟ್ಟಿಯ ಮೂಲ ಹೆಸರು ಡೊಂಬರ ಸಿದ್ದಾಪುರ ಎಂಬುದಾಗಿದೆ. ಈ ಎರಡೂ ಊರುಗಳವರನ್ನು ಹೊರಗಿನವರು ಮೂಲ ಸ್ಥಳನಾಮಗಳಿಂದ ಗುರುತಿಸುತ್ತಾರೆ.

ಆಲೂರು ತಾಲ್ಲೂಕಿನ ಬೊಮ್ಮಗುಂಡನಹಳ್ಳಿಯವರು ಚಿಕ್ಕಹ್ಯಾಟೆಯವರನ್ನು 'ಹ್ಯಾಟೇರು', 'ಹ್ಯಾಟ್ಯಾಗ' ಎಂದೂ, ಚಿಕ್ಕಹ್ಯಾಟೆಯವರು ಅವರನ್ನು 'ಹಳ್ಳ್ಯೋರು', 'ಹಳ್ಳ್ಯಾಗ' ಎಂದು ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ. ಇದನ್ನು ಬಳಸುವವರು ಬಹುತೇಕ ಕೆಳ ಸಮುದಾಯವೆಂಬುದು ಗಮನಾರ್ಹ.

ಹೀಗೆ ಸ್ಥಳನಾಮಗಳ ಬಳಕೆಯ ವಲಯಗಳನ್ನು ಆಯಾ ಪ್ರಾದೇಶಿಕ ವೈಲಕ್ಷಣ್ಯಗಳೊಂದಿಗೆ ಅಲ್ಲಿರುವ ಜಾತಿ, ಸಮುದಾಯಗಳ ಬಳಕೆಯ ನಿಯಮಗಳಿಗೆ ತಕ್ಕಂತೆ ಅಧ್ಯಯನ ಮಾಡಬಹುದು. ಆ ಮೂಲಕ ಸಮುದಾಯಗಳ ಮಟ್ಟದಲ್ಲಿ ಸ್ಥಳನಾಮಗಳ ಭಾಷಿಕ ವಿಶ್ಲೇಷಣೆಯೂ ಸಾಧ್ಯವಾಗುತ್ತದೆ.

**೭.೧೬. ನಿರ್ವಸತಿ ಸ್ಥಳನಾಮಗಳು : ಸಾಮಾಜಿಕ ಅಂಶಗಳ ಕುರುಹುಗಳು**

ಈವರೆಗಿನ ಸ್ಥಳನಾಮಗಳ ಅಧ್ಯಯನವು ಗ್ರಾಮನಾಮಗಳ ಅಧ್ಯಯನದ ವ್ಯಾಪ್ತಿಯನ್ನು ದಾಟಿದಂತೆ ಕಾಣಿಸುವುದಿಲ್ಲ. ಅಲ್ಲೊಂದು ಇಲ್ಲೊಂದು ನಿರ್ವಸತಿ ನಾಮಗಳ ಬಗೆಗೆ ಪ್ರಸ್ತಾಪಿಸಿದ್ದು ಕಂಡು ಬರುತ್ತದೆ. ಸಾಂಸ್ಕೃತಿಕ, ಸಾಮಾಜಿಕ ಸಂಗತಿಗಳನ್ನು ತಮ್ಮೊಳಗೆ ಅಡಗಿಸಿಕೊಂಡ ಅನೇಕಾನೇಕ ಪಾಳುಬಿದ್ದ, ನಿರ್ವಸತಿ ಸ್ಥಳನಾಮಗಳೂ ಸಂಸ್ಕೃತಿಯ ಮೂಲಾಧಾರಗಳಾಗಿ ಕಂಡುಬರುತ್ತವೆ. ಈ ರೀತಿಯ ಪ್ರತ್ಯೇಕ ಅಧ್ಯಯನವೂ ಇದಕ್ಕೆ ಅಗತ್ಯವಾಗಿ ಬೇಕಾಗುತ್ತದೆ. ನಿರ್ವಸತಿಯ ಬೇರೆ ಬೇರೆ ಅಧ್ಯಯನಕ್ಕೆ ಬೇರೆ ಬೇರೆ ಹೆಸರನ್ನು ಕೊಡಲಾಗಿದೆ. ವಿದ್ವಾಂಸರು ನೀಡಿದ ಅಂತಹ ಹೆಸರುಗಳು ಹೀಗಿವೆ.

ಅ. ಹೊಲ, ಕಾಡು ಇತ್ಯಾದಿಗಳ ಹೆಸರಿನ ಅಧ್ಯಯನಕ್ಕೆ - Microtoponymy

ಆ. ದಾರಿ, ರಸ್ತೆ ಇತ್ಯಾದಿಗಳ ಹೆಸರಿನ ಅಧ್ಯಯನಕ್ಕೆ - Hodonymy

ಇ. ಕೆರೆ, ಕಾಲುವೆ, ಕೊಳ, ನದಿ ಮುಂತಾದ ಜಲಕ್ಕೆ ಸಂಬಂಧಿಸಿ - Hydronymy

ಈ. ಗುಡ್ಡ, ಬೆಟ್ಟಗಳ ಹೆಸರಿನ ಅಧ್ಯಯನಕ್ಕೆ - Ornymy

ಉ. ಗ್ರಾಮನಾಮಗಳ ಅಧ್ಯಯನಕ್ಕೆ - Toponymy

ಎಂಬಿತ್ಯಾದಿ ಬಗೆಯಲ್ಲಿ ಹೆಸರಿನ ಅಧ್ಯಯನವನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡಲಾಗುತ್ತಿದೆಯಾದರೂ, ಒಟ್ಟಾರೆ ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಸ್ಥಳನಾಮಗಳ ಒಳಗೆ ಸೇರಿ, ಅನೇಕ ಸಾಮಾಜಿಕ ಅಂಶಗಳನ್ನು ಹೇಳುವುದರಿಂದ ಇಲ್ಲಿ ಪ್ರಸ್ತುತವಾಗುತ್ತವೆಂದು ಭಾವಿಸಲಾಗಿದೆ. ಮುಖ್ಯವಾಗಿ ನಿರ್ವಸತಿ ನಾಮಗಳನ್ನು ಸಾಮಾಜಿಕ ಅಧ್ಯಯನದ ಕುರುಹುಗಳೆಂದು ಪರಿಗಣಿಸುವಾಗ ಎರಡು ಬಗೆಯಲ್ಲಿ ತೆಗೆದುಕೊಳ್ಳಬಹುದು. -

೧. ಬೇಚರಾಕ್ ಗ್ರಾಮಗಳು (ಸ್ಥಳಾಂತರವಾದ ಗ್ರಾಮನಾಮಗಳು)

೨. ಜನವಸತಿಯೇ ಇಲ್ಲದ, ಭೌಗೋಳಿಕ ಪರಿಸರದ ನಾಮಗಳು (ನಿರ್ವಸಿತ)

ಈ ಎರಡು ರೀತಿಯ ಸ್ಥಳನಾಮಗಳ ರೂಪಗಳನ್ನು ಹೀಗೆ ವಿಶ್ಲೇಷಿಸಬಹುದು.

**೧. ಆದಿಮೀನಗೊಂದಿ : ALR**

ಇದೀಗ ಬೇಚರಾಕ್ ಗ್ರಾಮ. ಮತ್ಸ್ಯಾಚಲ'ವೆಂದು ಸಂಸ್ಕೃತೀಕರಿಸಿಕೊಂಡು ಇಲ್ಲಿರುವ ಬೆಟ್ಟದ ಆಕಾರ ಮೀನಿನಂತೆ ಇರುವುದರಿಂದ ಈ ಹೆಸರು ಬಂದಿದೆಯನ್ನಲಾಗಿದೆ. 'ಆದಿ' ಎಂಬ ಪದವು, ಈ ಕ್ಷೇತ್ರ ಮೈಲಾರಲಿಂಗನ ಸಂಪ್ರದಾಯದ (ಗೊರವ ಸಂಪ್ರದಾಯ) ಪ್ರಾಚೀನ ಕ್ಷೇತ್ರವೆಂಬುದನ್ನು ತಿಳಿಯಪಡಿಸುತ್ತದೆ. ಗೊರವ ಸಂಪ್ರದಾಯ, ಅಲ್ಲಿನ ಜನಜೀವನದ ಚಿತ್ರವನ್ನು ಇಂದು 'ದೇವರಗುಡ್ಡ' ಎಂದು ಕರೆಯುವ ಈ ಕ್ಷೇತ್ರದಲ್ಲಿನ ದೇವಾಲಯ ಇತ್ಯಾದಿ ಅಂಶಗಳಿಂದ ತಿಳಿಯಬಹುದು.

**೨. ಓಬಳಾಪುರ : ALR**

ಇದು ಇಂದು ಬೇಚರಾಕ್ ಗ್ರಾಮ. ನೈಸರ್ಗಿಕ ವಿಕೋಪಕ್ಕೆ ತುತ್ತಾದ ಜನತೆ ಈ ಸ್ಥಳದಿಂದ ಬೇರೆಸ್ಥಳಕ್ಕೆ ಬಂದು 'ಯಲ್ಲಾರ್ತಿ' ಎಂಬ ಗ್ರಾಮವನ್ನು ಕಟ್ಟಿಕೊಂಡಿದ್ದಾರೆ. ಇಂದು 'ಓಬಳಾಪುರ' ಎಂಬ ಸ್ಥಳದಲ್ಲಿ ಕೆರೆ ನೀರಿನಿಂದಾವೃತವಾಗಿದ್ದು, ಅಲ್ಲಿರುವ 'ಓಬಳ' (ವೆಂಕಟೇಶ್ವರಸ್ವಾಮಿ) ದೇವರಿಂದ ಅನೇಕ ಸಾಮಾಜಿಕ ಅಂಶಗಳನ್ನು ಗುರುತಿಸಬಹುದು. ಓಬಳಾಪುರವನ್ನು ಮೊದಲು 'ಬಿಡಾಲಗುಡ್ಡ'ವೆಂದೂ ಕರೆಯುತ್ತಿದ್ದರು.

**೩. ನಾರಾಯಣದೇವರ ಕೆರೆ: HPT**

ಬೇಚರಾಕ್ ಗ್ರಾಮ. ತುಂಗಭದ್ರಾ ನದಿಯ ಆಣೆಕಟ್ಟು ನಿರ್ಮಾಣಕ್ಕಾಗಿ ಸ್ಥಳಾಂತರಗೊಂಡ ಗ್ರಾಮವಿದು. ಈ ಹೆಸರಿನ ಬಗ್ಗೆ ಅನೇಕ ಐತಿಹ್ಯಗಳಿವೆ. "ಕೆರೆಯಲ್ಲಿ ಬ್ರಾಹ್ಮಣ ಸ್ನಾನಮಾಡುತ್ತಿರಲು ಶ್ರೀಮನ್ನಾರಾಯಣ

ಮೂರ್ತಿಯು ದೊರೆತು, ಅವನೊಂದಿಗೆ ಮಾತನಾಡಿ ನನ್ನನ್ನು ಪ್ರತಿಷ್ಠಾಪಿಸಿ, ಊರು ನಿರ್ಮಿಸುವುದಾಗಿ ಅಪ್ಪಣೆ ನೀಡಿದ್ದರಿಂದ 'ನಾರಾಯಣದೇವರ ಕೆರೆ' ಎಂದಾಯಿತೆಂದು ಹೇಳುತ್ತಾರೆ."[೮] ಜಾನಪದರು ಇದನ್ನು 'ನಾಣಕೆರೆ' ಎಂದು ಕರೆಯುತ್ತಾರೆ.

ಹೀಗೆ ಅನೇಕ ಬೇಚರಾಕ್ ಗ್ರಾಮಗಳು ನಮ್ಮಲ್ಲಿವೆ. ಇವುಗಳ ಅಧ್ಯಯನದಿಂದ ನಮ್ಮ ಸಾಮಾಜಿಕ ಜೀವನ ವಿಧಾನವನ್ನು ಒಂದಲ್ಲ ಒಂದು ಬಗೆಯಲ್ಲಿ ವಿಶ್ಲೇಷಿಸಲು ಸಾಧ್ಯವಿದೆಯೆನ್ನಬಹುದು.

ಎರಡನೆಯದಾಗಿ 'ನಿರ್ವಸಿತ' ಸ್ಥಳನಾಮಗಳು. ಇವು ಬೇಚರಾಕ್ ಗ್ರಾಮಗಳಿಗಿಂತ ತುಂಬಾ ಭಿನ್ನವಾಗಿರುತ್ತವೆ. ಬೇಚರಾಕ್ ಗ್ರಾಮಗಳಂತೆ ಇಲ್ಲಿ ಯಾವುದೇ ಜನರ ವಸತಿಯಿಲ್ಲ, ಸ್ಥಳಾಂತರವೂ ಆಗಿರುವುದಿಲ್ಲ. ಗ್ರಾಮಸಮಾಜದ ವ್ಯವಸ್ಥೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ತನ್ನ ಸುತ್ತಣ ಭೌಗೋಳಿಕ ಪರಿಸರದೊಂದಿಗೆ ಬೆಸೆದುಕೊಂಡ ಸಂಬಂಧದಿಂದ, ಆ ಭೌಗೋಳಿಕ ಪರಿಸರವನ್ನು, ಅಲ್ಲಿನ ಬೆಟ್ಟ, ನದಿ, ಕಣಿವೆ, ಕಲ್ಲು, ಕೊಳ್ಳ, ಹಳ್ಳ, ಗಿಡ ಮರ, ಕಾಡು ಇತ್ಯಾದಿಯನ್ನು ತನ್ನನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆ ನಡೆದಿರುತ್ತದೆ. ಈ ಹೆಸರುಗಳು ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿ, ಸಾರ್ವತ್ರಿಕವಾಗಿಯೂ ಒಪ್ಪಿತವಾಗಿರುತ್ತವೆ. ನಮ್ಮ ಗ್ರಾಮಸಮಾಜ ಪ್ರತಿಯೊಂದು ವಸ್ತುವಿಗೂ, ಘಟನೆಗೂ ತನ್ನ ಅರಿವಿನ ವ್ಯಾಪ್ತಿಯಲ್ಲಿ ಕಥೆ, ಐತಿಹ್ಯ: ಒಗಟು, ಚರಿತ್ರೆ: ಸತ್ಯಸಂಗತಿ ಮುಂತಾದ ಘಟನೆಯೊಂದಿಗೆ ಹೆಸರನ್ನು ನೀಡಿದ್ದು ತಿಳಿದುಬರುತ್ತದೆ. ಆ ಮೂಲಕ ಒಂದು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ, ಒಂದೊಂದು ಕಾಲದಲ್ಲಿ ಘಟಿಸಿದ, ನಡೆದ ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಸಂಗತಿಗಳು, ಬದುಕಿನ ಸ್ಥಿತ್ಯಂತರಗಳು ನಮ್ಮ ಮುಂದೆ ತಂದು ನಿಲ್ಲಿಸುತ್ತವೆ. ಇದರಿಂದ ಒಂದು ಸಮಾಜದ ಸಂಸ್ಕೃತಿಯ ಚಾರಿತ್ರಿಕ ಅಧ್ಯಯನ ಸಂದರ್ಭದಲ್ಲಿ 'ನಿರ್ವಸಿತ' ನಾಮಗಳ ಮಹತ್ವ ಬಹಳಷ್ಟಿದೆ. ಹೆಚ್ಚಾಗಿ ಈ ನಿರ್ವಸಿತ ಸ್ಥಳನಾಮಗಳಿಗೆ ಐತಿಹ್ಯಗಳು ರೂಪುಗೊಂಡಿರುವುದು ತಿಳಿಯುತ್ತದೆ. ಮೌಖಿಕ ಪರಂಪರೆಯ ಆಸ್ತಿಯೆನ್ನಬಹುದಾದ ನಿರ್ವಸಿತ ನಾಮಗಳು ಐತಿಹ್ಯದ ಮೂಲಕ ಸತ್ಯವನ್ನು ಹೊರಗೆಡಹಬಲ್ಲವು.

ನಿರ್ವಸಿತ ಕೆಲವು ಸ್ಥಳನಾಮಗಳನ್ನು ಈ ರೀತಿ ವಿವರಿಸಿಕೊಳ್ಳಬಹುದಾಗಿದೆ.

ಅ. **ಅಕ್ಷರದ ಗುಂಡು:** ಚಿನ್ನ ಹಗರಿಯ ಬಲದಡದ ಬ್ರಹ್ಮಗಿರಿಯ ತಪ್ಪಲಲ್ಲಿರುವ ಬಂಡೆ ಶಾಸನವು ಪ್ರಾಚೀನ ಕಾಲದಿಂದಲೂ 'ಅಕ್ಷರದ ಗುಂಡು' ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಈ ಬಂಡೆಯ ಮೇಲಿರುವ ಅಕ್ಷರಗಳನ್ನು ನೀರಿನಿಂದ ತೊಳೆದು, ಆ ತೀರ್ಥವನ್ನು ಸೇವಿಸಿದರೆ ಮಾನವರ ಮತ್ತು ಪ್ರಾಣಿಗಳ ಕಾಯಿಲೆಗಳು ಗುಣವಾಗುವುದೆಂಬ ನಂಬಿಕೆ ಸುತ್ತಮುತ್ತಲಿನ ಜನರಿಗಿದೆ.

ಆ. **ಏಕಾಂತ ತೀರ್ಥ :** ಗಡಿಭಾಗದಲ್ಲಿರುವ ಜಟ್ಟಿಂಗಿ ರಾಮೇಶ್ವರ ಬೆಟ್ಟದ ಮೇಲೆ ಗುಡಿಯ ಉತ್ತರಭಾಗದಲ್ಲಿ ಬಂಡೆಗಳ ಕೆಳಗೆ ಇರುವ ತಣ್ಣೀರು ದೊಣೆಯನ್ನು 'ಏಕಾಂತತೀರ್ಥ' ಎಂದು ಕರೆಯುವರು. ಈ ದೊಣೆಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿದ ನಂತರ ಕೆಲವು ದಿವಸಗಳ ಕಾಲ ಏಕಾಂತವಾಗಿ ವಾಸವಾಗಿದ್ದುದರಿಂದ ಆ ಹೆಸರು ಬಂತೆಂದು ಸ್ಥಳದ ಐತಿಹ್ಯ. "ಆದಿ ಬುದ್ಧನಿಗೆ ಏಕನಾಥ ಎಂದೂ, ಬೌದ್ಧಮತಕ್ಕೆ

ಏಕನಾಥಮತ ಎಂದೂ ಹೆಸರಿದೆ.[೮೫] ಏಕಾಂತ ತೀರ್ಥವು ಬೌದ್ಧರ ಒಂದು ಪುಣ್ಯ ತೀರ್ಥವಾಗಿರುವಂತೆ ತೋರುತ್ತದೆ. ಬೌದ್ಧ ಮತವು ನಶಿಸಿದ ಮೇಲೆ ವೇದ ಮತೀಯರು ಶ್ರೀರಾಮನ 'ಏಕಾಂತ'ದ ತೀರ್ಥ ಎಂದು ಹೆಸರಿಸಿದಂತೆ ತೋರುತ್ತದೆ.

**ಇ. ಕೋತಿಗುಂಡು :** ಯಳ್ಳಾರ್ತಿಯ ಬೆಟ್ಟದ ಒಂದು ದೊಡ್ಡ ಗುಂಡೊಂದರ ಮೇಲೆ ಕೋತಿಗಳು ಗುಂಪು ಗುಂಪಾಗಿ ವಾಸಿಸುವುದರಿಂದ ಇದನ್ನು ಕೋತಿಗುಂಡು ಎಂದು ಕರೆಯುತ್ತಾರೆ. ವಿಶೇಷವೆಂದರೆ ಬೇರೆ ಕಡೆ ಮಂಗಗಳು ವಾಸಿಸದೇ ಇದೇ ಗುಂಡಿನ ಮೇಲೆ ಕುಳಿತುಕೊಳ್ಳುತ್ತವೆ.

**ಈ. ಕುಂದುರೋ ಬಂಡೆ :** ಮೀನಗೊಂದಿ ಮಲ್ಲಯ್ಯನ ಜಾತ್ರೆಗೆ ಹೋಗುವಾಗ ಸುತ್ತಮುತ್ತಲಿನ ಊರಿನ ಜನರು ನಡೆದುಕೊಂಡೇ ಹೋಗುತ್ತಾರೆ. ದಾರಿಯ ಮಧ್ಯದಲ್ಲಿ ಒಂದು ವಿಶಾಲವಾದ ಬಂಡೆಯಿದೆ. ಆ ಬಂಡೆಯ ಮೇಲೆ ವಿಶ್ರಾಂತಿ ತೆಗೆದುಕೊಂಡು ಹೋಗುತ್ತಾರೆ. ಕಾರಣ ಇದಕ್ಕೆ ಆ ಹೆಸರು ಬಂದಿದೆ.

**ಉ. ತಿಕ್ಕಸ್ವಾಮಿ ಮಟ್ಟೆ :** ಯಳ್ಳಾರ್ತಿಯ ಬೆಟ್ಟವೊಂದರ ಮೇಲೆ ಮುಸ್ಲಿಂರ ದರ್ಗಾ ಇದೆ. ಇಲ್ಲಿ ಒಬ್ಬ ಮುಸ್ಲಿಂ ವ್ಯಕ್ತಿಯು ತನ್ನ ಹುಚ್ಚುತನದಿಂದಲೇ ಕೆಲವು ಪವಾಡಗಳನ್ನು ತೋರಿಸುತ್ತಿದ್ದ. ಇವನ ಮರಣದ ಬಳಿಕ ಒಂದು ದರ್ಗಾವನ್ನು ನಿರ್ಮಿಸಲಾಗಿದೆ. ಅನೇಕ ಭಕ್ತಾದಿಗಳು ಆ ವ್ಯಕ್ತಿಯನ್ನು ಪೂಜಿಸುತ್ತಾರೆ. ಇದನ್ನು ಜನರು 'ತಿಕ್ಕಸ್ವಾಮಿಮಟ್ಟೆ' ಎಂದು ಕರೆಯುತ್ತಾರೆ.

**ಊ. ಬಳೆಗಾರರ ಗುಂಡು :** ಜಿನಗಿಹಳ್ಳದ ಎಡದಡದಲ್ಲಿರುವ ಜಟ್ಟಂಗಿ ಗಿರಿಯ ಮೇಲೆ ಅಶೋಕನ ಮೂರನೆಯ ಶಾಸನವಿದೆ. ಇದನ್ನು ಬಳೆಗಾರರ ಗುಂಡು ಎಂದು ಕರೆಯುತ್ತಾರೆ. ರಾಮೇಶ್ವರ ದೇವರ ಉತ್ಸವ ಕಾಲದಲ್ಲಿ ಬಳೆಗಾರರು ಈ ಬಂಡೆಯ ಮೇಲೆ ಕುಳಿತು ಬಳೆಗಳನ್ನು ಮಾರುತ್ತಿದ್ದರಂತೆ.

**ಋ. ಮಾದಿಗನಕೊಳ್ಳ :** ಯಳ್ಳಾರ್ತಿಯ ಬೆಟ್ಟವೊಂದರಲ್ಲಿ ಒಂದುದೊಡ್ಡ ಕೊಳ್ಳ (ಕೊರಕಲು)ವಿದೆ. ಇಲ್ಲಿ ಮಾದಿಗ ಸಮುದಾಯದ ಒಬ್ಬ ವ್ಯಕ್ತಿ ದನಗಳನ್ನು ಕಾಯುತ್ತಾ ಅಲ್ಲಿಯೇ ವಾಸವಾಗಿದ್ದು, ದೇವರ ಉನ್ಮಾದದಿಂದ ಅಲ್ಲಿಯೇ ತೀರಿಹೋದ. ಇದರಿಂದ ಆ ಕೊಳ್ಳವನ್ನು 'ಮಾದಿಗನಕೊಳ್ಳ' ಎಂದು ಕರೆಯಲಾಗುತ್ತದೆ.

**ೠ. ಯಮ್ಮೆತಮ್ಮನ ಗುಂಡು :** ಅಶೋಕನ ಅಕ್ಷರದಗುಂಡು ಎಂಬ ಹೆಸರಿನ ಬಂಡೆ ಶಾಸನದ ಪಶ್ಚಿಮಕ್ಕೆ ಸುಮಾರು ಒಂದು ಮೈಲುದೂರದಲ್ಲಿ ಒಂದು ಶಿಲಾಶಾಸನವಿದೆ. ಇದರ ಅಕ್ಷರಗಳು ಬಹಳ ಸವೆದಿವೆ. ಇದನ್ನು ಯಮ್ಮೆತಮ್ಮನಗುಂಡು ಎಂದು ಕರೆಯುತ್ತಾರೆ. ಎಮ್ಮೆ ಕಾಯುವ ವ್ಯಕ್ತಿಯೊಬ್ಬ ಪ್ರತಿನಿತ್ಯ ಈ ಬಂಡೆಯ ಮೇಲೆ ಕುಳಿತು ಧ್ಯಾನಸ್ಥನಾಗುತ್ತಿದ್ದನಂತೆ.

ಹೀಗೆ ಪ್ರತಿಯೊಂದು ಗ್ರಾಮದಲ್ಲಿಯೂ ಈ ಬಗೆಯ ನಿರ್ವಸಿತ ಸ್ಥಳನಾಮಗಳು ಸಾವಿರಾರು ಹುಟ್ಟಿಕೊಂಡಿವೆ. ತೋಪಿನಹೊಲ: ಕ್ವಾಂಟರಹೊಲ: ಎರಡುತಗ್ಗು: ಭೀಮನ ಬಂಡೆ - ಸೀತೆಸೆರಗು - ಅಕ್ಕತಂಗೇರಗುಂಡು - ಮದ್ದಿನಮನೆ - ಪಾದದಕಟ್ಟೆ - ರಾಕ್ಷಸಪಡೆ - ವಕ್ರಾಣಿ - ಬಾರೇಕಾಯಿ ಬಯಲು - ಏಳುಕುಂಟೆ - ಇಲಿಚೆಪ್ಪನ ದೊಣೆ - ವಯ್ಯಾಲಗುಂಡು - ಮೋಟುಂಚೆತೆಗ್ಗು - ಜೋಳದರಾಶಿಗುಡ್ಡ - ಹನುಮನಮರಡಿ - ಹೊನ್ನಮ್ಮನ

ಬಯಲು - ರೆಡ್ಡಿಬಯಲು - ರುದ್ರಪ್ಪನ ಬಂಡೆ - ಬಿಡಾಲಗುಡ್ಡ - ತಿರ್ಲಾಕಿನಗುಡ್ಡ - ರಾಗಿಡಿನೆಲ - ಜೀಯನಮೂಲೆ - ಅಚ್ಚಮ್ಮನ ಬೀಳು - ಅಗಸರತೆಗ್ಗು - ಸಿದ್ದಲಿಂಗಪ್ಪನ ಮಡುಗು ಇದರಂತೆ ಪ್ರತಿಯೊಂದು ನಿರ್ವಸಿತ ಸ್ಥಳಗಳಿಗೂ ನಮ್ಮವರು ಹೆಸರನ್ನು ನೀಡಿದ್ದಾರೆ. ಆ ಮೂಲಕ ಪ್ರಾದೇಶಿಕ ಸಂಸ್ಕೃತಿ ಹಾಗೂ ಜನರ ಮನೋಭೂಮಿಕೆಯನ್ನು ತಿಳಿಯಬಹುದು.

## ೭.೧೭. ಸ್ಥಳನಾಮಗಳು - ವಸತಿ ; ನಿರ್ವಸತಿ ; ನಿರ್ವಸಿತ - ಲಕ್ಷಣಗಳು

ಈ ಲಕ್ಷಣಗಳು ಮೇಲ್ನೋಟಕ್ಕೆ ಯಾವುದೇ ವಿಶೇಷತೆಯನ್ನು ಹೇಳುವುದಿಲ್ಲ ಎಂದೆನಿಸಿದರೂ ಕೂಡ ಈ ಮೂರು ರೀತಿಯ ಸ್ಥಳನಾಮಗಳ ಕೆಲವು ಲಕ್ಷಣ ಮತ್ತು ಸ್ಥಿತ್ಯಂತರಗಳನ್ನು ಸಂಕ್ಷಿಪ್ತವಾಗಿ ತಿಳಿಯಬಹುದು.

ವಸತಿ'ಯ ನೆಲೆಗಳಲ್ಲಿ ಜನರುವಾಸಿಸುತ್ತಾರೆ. ಈ ವಾಸದ ನೆಲೆಗಳಿಗೆ ಹೆಸರನ್ನು ಕೊಟ್ಟ ಜನತೆಯು, ಆ ಹೆಸರಿನೊಂದಿಗೆ ಯಾವಾಗಲೂ ಆತ್ಮೀಯ ಸಂಬಂಧವನ್ನು ಹೊಂದಿರುತ್ತಾರೆ. ಜೊತೆಗೆ ಆ ಹೆಸರುಗಳು ಪಂಡಿತರಂಥ ವರಿಂದ ಸಂಸ್ಕೃತೀಕರಣ, ಹಾಗೂ ಇನ್ನಿತರ ಅನೇಕ ಪ್ರಭಾವಗಳಿಗೆ ಒಳಗಾಗಿ ಬದಲಾವಣೆಯ ಕ್ರಿಯೆಯು ಜರುಗುತ್ತದೆ. ಕಾಲಾಂತರದಲ್ಲಿ ಮೂಲದಲ್ಲಿಟ್ಟಿದ್ದ ಹೆಸರು ಸಂಪೂರ್ಣ ಕಾಣದಾಗಬಹುದು. ವಸತಿಯನ್ನೊಂದಿದ ಸ್ಥಳನಾಮಗಳು ಇನ್ನಿತರ ಸ್ಥಳನಾಮಗಳಿಗಿಂತ ಚಲನಶೀಲ ಗುಣವನ್ನು ಹೊಂದಿ, ಹೆಚ್ಚು ಜೀವಂತವೆನಿಸಿ, ಸಂಸ್ಕೃತಿಯ ಅಧ್ಯಯನದಲ್ಲಿ ಹೆಚ್ಚು ಮಹತ್ವವನ್ನೊಂದುತ್ತವೆ.

ನಿರ್ವಸತಿ - ಸ್ಥಳನಾಮಗಳು, ಈ ಮುಂಚೆ ಇಲ್ಲಿ ಜನವಸತಿಯಿದ್ದು, ನೆರೆಹಾವಳಿ - ಕೈಗಾರಿಕೆ, ಅಣೆಕಟ್ಟು ಇತ್ಯಾದಿಗಳ ನಿರ್ಮಾಣ - ರೋಗ - ರುಜಿನಗಳ ತೊಂದರೆ ಮುಂತಾದ ಕಾರಣಗಳಿಂದ ಜನರು ವಾಸಿಸದೇ ಸ್ಥಳಾಂತರಗೊಂಡಂತಹ ಬೇಚರಾಕ್ ಗ್ರಾಮಗಳಾಗಿವೆ. ಇವು ಜನರು ಇರುವವರೆಗೂ ಅನೇಕ ಸ್ಥಿತ್ಯಂತರಗಳಿಗೆ ಒಳಪಟ್ಟುದು, ಮುಂದೆ ನಿರ್ವಸತಿಯಾದಾಗ ಯಾವುದೇ ಬದಲಾವಣೆಯ ಕ್ರಿಯೆಗೆ ಒಳಗಾಗುವುದಿಲ್ಲ. ಒಂದು ಹಂತದವರೆಗೆ ಚಲನಶೀಲವಾಗಿದ್ದ ಈ ಸ್ಥಳನಾಮಗಳೂ ಕೂಡ ಸಂಸ್ಕೃತಿಯ ಕುರುಹುಗಳೆಂಬುದನ್ನು ಮರೆಯುವ ಹಾಗಿಲ್ಲ. ಜನರು ಇಂತಹ ನಾಮಗಳ ಬಗ್ಗೆ ಅಷ್ಟಾಗಿ ಗಮನಹರಿಸಲಾರರು.

ನಿರ್ವಸಿತ ಎಂದರೆ ಭೌಗೋಳಿಕ ಪರಿಸರದಲ್ಲಿರುವ ಯಾವುದೇ ವಸ್ತುವಿಗೆ ಇಟ್ಟ ಹೆಸರು. ಬಹುಮುಖ್ಯವಾಗಿ ಇಂತಹ ನಾಮಗಳಿಗೆ ಹೆಚ್ಚು ಆಸಕ್ತಿ ವಹಿಸುವವರು ಹಾಗೂ ಅವುಗಳಿಗೆ ಐತಿಹ್ಯ - ಕಥೆಯಂತಹ ಕಥನವನ್ನು ಕಟ್ಟುವುದು ಗ್ರಾಮೀಣ ಜನತೆಯೆನ್ನಬಹುದು. ಭೂಮಿಯ ಮೇಲಿರುವ ಪ್ರತಿ ವಸ್ತುವನ್ನು ಅವರು ತಮ್ಮ ಐಡೆಂಟಿಟಿ (ಗುರುತು)ಗಾಗಿ ಒಂದಲ್ಲ ಒಂದು ಬಗೆಯ ಹೆಸರನ್ನು ಹೇಳುತ್ತಾರೆ. ಈ ಹೆಸರು ಹೆಚ್ಚಾಗಿ ರಾಮಾಯಣ - ಮಹಾಭಾರತ ಮುಂತಾದ ಕಾವ್ಯ, ಪುರಾಣಗಳಿಂದ ಪ್ರೇರಿತವಾಗಿರುತ್ತವೆ. ಇಂತಹ ಕಥನಗಳಿಂದಲೇ ಒಂದು ಆಕೃತಿಯನ್ನು ಕಟ್ಟಿಕೊಡುವ ಮೂಲಕ ಸಂಸ್ಕೃತಿಯ ಬಿಂಬಕಗಳಂತೆಯೇ ಅವುಗಳನ್ನು ಸ್ವೀಕರಿಸುತ್ತಾರೆ. ಜೊತೆಗೆ ಆ ಹೆಸರುಗಳನ್ನು ಸಾರ್ವತ್ರಿಕವಾಗಿ ಪ್ರಸಾರ ಮಾಡುತ್ತಾರೆ. ಮುಖ್ಯವಾಗಿ ಸಂಸ್ಕೃತೀಕರಣ - ಇಂಗ್ಲೀಷೀಕರಣಗಳಂತಹ (ಕೆಲವು ಅಕ್ಷರಸ್ಥ ಸಮುದಾಯ) ಗಳಿಂದ ಇಂದು ಬದಲಾವಣೆಯ ಗೋಜಿಗೆ ಇವು ಒಳಗಾಗಿಲ್ಲ. ಆದರೂ

ಕೆಲವು ನಿರ್ವಸಿತ ಸ್ಥಳನಾಮಗಳೂ ಕೂಡ ಸಂಸ್ಕೃತೀಕರಣ ಆಗುತ್ತಿರುವುದು ಕಂಡುಬರುತ್ತಿದೆ. ಕೆಲವೇ ಸಂದರ್ಭಗಳಲ್ಲಿ ಈ ಕ್ರಿಯೆ ನಡೆಯುತ್ತದೆ. ಸಾಂಸ್ಕೃತಿಕ ಚರಿತ್ರೆಯಲ್ಲಿ ಇವೂ ಕೂಡ ತಮ್ಮ ಮಟ್ಟಿನ ಆಧಾರಗಳಾಗಿ ನಿಲ್ಲುತ್ತವೆ. ಈ ಮೂರು ರೀತಿಯ ಸ್ಥಳನಾಮಗಳೂ ಪ್ರತ್ಯೇಕ, ಪ್ರತ್ಯೇಕ ಅಧ್ಯಯನವನ್ನು ಬಯಸುತ್ತವೆ.

ಹೀಗೆ "ಸ್ಥಳನಾಮಗಳು ನಮ್ಮ ಸಂಸ್ಕೃತಿಯ ಪಳಯುಳಿಕೆಯಂಥ ಅವಶೇಷಗಳಾಗಿರುವುದರಿಂದ, ಅವು ಪರೋಕ್ಷವಾಗಿಯಾದರೂ, ಜನತೆ ಮತ್ತು ನಿರ್ದಿಷ್ಟಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ."[೨೬] ಈ ಕಾರಣವಾಗಿ ಸ್ಥಳನಾಮಗಳ ಸಾಮಾಜಿಕ ಅಧ್ಯಯನ ಒಂದು ಪ್ರತ್ಯೇಕ ಸಂಶೋಧನಾಧ್ಯಯನವನ್ನು ಬಯಸುತ್ತದೆ. ಅಂತಹ ಕೆಲವು ಸೂಚನೆಗಳನ್ನು ಮೇಲಿನ ಒಟ್ಟು ಆಕೃತಿಯು ತಿಳಿಯಪಡಿಸುತ್ತದೆನ್ನಬಹುದು.

**ಅಡಿಟಿಪ್ಪಣಿಗಳು**

೧. ಕೆಮ್ತೂರು ರಘುಪತಿ ಭಟ್ಟ, ತುಳುನಾಡಿನ ಸ್ಥಳನಾಮಗಳು, ಪು. ೩
೨. ದೇಜಗೌ, ಸ್ಥಳನಾಮವ್ಯಾಸಂಗ, ಪು. ೨೩
೩. ಆರ್ಕೆ ಮಣಿಪಾಲ, ಹೆಸರಲ್ಲೇನಿದೆ?, ಪು. ೧೫
೪. ಡಾ. ವಿಶ್ವನಾಥ, ಸಕಲೇಶಪುರ ಪರಿಸರದ ಸ್ಥಳನಾಮಗಳು, ಪು. ೪೯
೫. ಎಂ.ಎಂ.ಕಲ್ಬುರ್ಗಿ, ನಾಮವಿಜ್ಞಾನ, ಪು. ೫೯
೬. ಎಂ.ಚಿದಾನಂದಮೂರ್ತಿ, SIPN, ಪು. ೫೯
೭. ವಿ.ಗೋಪಾಲಕೃಷ್ಣ, ಸ್ಥಳನಾಮ ಅಧ್ಯಯನಗಳು, ಪು. ೬೦
೮. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೩೦
೯. ಎಚ್.ಎಸ್.ಬ್ರಹ್ಮಾನಂದಂ, Village names with place names of cast and Tribes- SIPN, Vol.10, p.84
೧೦. ದುಗ್ಗಿಪಾಟಿ ವೆಂಕಟಸುಬ್ಬಾರಾವು, ಕರ್ನೂಲು ಜಿಲ್ಲಾ ಸಂಪದಂ, ಪು. ೬೩, ೧೯೪೮
೧೧. ಎ.ಸಿ.ಲಲಿತ, ಕಾಡುಕುರುಬರು ಮತ್ತು ಜೇನುಕುರುಬರ ಸಂಸ್ಕೃತಿ, ಪು. ೯
೧೨. ಅದೇ, ಪು. ೧೩
೧೩. ಮಲ್ಲೇಪುರಂ ಜಿ. ವೆಂಕಟೇಶ, (ಸಂ), ಶಂಬಾಕೃತಿ ಸಮೀಕ್ಷೆ, ಪು. ೮೧
೧೪. ಅದೇ, ಪು. ೮೧
೧೫. ಇಂಡಿಯನ್ ಆಂಟಿಕ್ವರಿ, Vol, XIX, Page 273
೧೬. ಎ.ವಿ.ನರಸಿಂಹಮೂರ್ತಿ, SIPN, Vol. p.23
೧೭. ಪುರುಷೋತ್ತಮ ಬಿಳಿಮಲೆ, ಕೊರಗರ ಸಂಸ್ಕೃತಿ, ಪು. ೨೬
೧೮. ಎನ್.ಚಂದ್ರಪ್ಪ, ಮೊಂಡರಸಂಸ್ಕೃತಿ, ಪು. ೨೦೩, ೨೦೪
೧೯. ಚಕ್ಕೆರೆ ಶಿವಶಂಕರ, ಗೊರವರ ಸಂಸ್ಕೃತಿ, ಪು. ೧೫
೨೦. E.C. VIII, No. 63, C, 1062 A.D.
೨೧. ಚಕ್ಕೆರೆ ಶಿವಶಂಕರ, ಗೊರವರ ಸಂಸ್ಕೃತಿ, ಪು. ೧೬
೨೨. SII, Vol, IX, Part II, p.587
೨೩. ಹೊಸೂರು ಮುನಿಸ್ವಾಮಪ್ಪ, ನಟುವರ ಸಂಸ್ಕೃತಿ, ಪು. ೪೪
೨೪. SII, Vol, IX, Part I, 297, 1177, June 26, ಕುರುಗೋಡು
೨೫. ಚನ್ನಕ್ಕ ಎಲಿಗಾರು, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು. ೬೭
೨೬. ಡಾ.ದೇವರಕೊಂಡಾರೆಡ್ಡಿ, ಸ್ಥಳನಾಮಗಳಲ್ಲಿ ಸೂಳೆ ಮತ್ತು ಎಡೆ: ದಿನಮಾತು ಕಾರ್ಯಕ್ರಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯.೯.೨೦೦೧

೨೭. ಸೂರ್ಯದೇವರ ಅಪ್ಪಾರಾವು, ವಯಸ್ಸು, ೭೩, ಸಂದರ್ಶನ, ೨೪.೦೩.೨೦೦೨, ಬಳ್ಳಾರಿ
೨೮. ಪಿ.ಕೆ.ಖಂಡೋಬಾ, ಲಂಬಾಣಿ ಸಂಸ್ಕೃತಿ, ಪು. ೫೫
೨೯. ಪಿ.ಕೆ.ಖಂಡೋಬಾ, ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು. ೨೨
೩೦. ಎಂ.ಚಿದಾನಂದಮೂರ್ತಿ, ಕರ್ನಾಟಕ ಜಾನಪದ, ಪು. ೨೯೫
೩೧. ಎಚ್.ಎಸ್.ಬ್ರಹ್ಮಾನಂದಂ, SIPN, Vol.10, p. 50
೩೨. ಡಾ.ಜೋಗನ್ ಶಂಕರ್, ಗ್ರಾಮಸಮಾಜ, ಪು. ೪೫
೩೩. ದೇವೇಂದ್ರಕುಮಾರ್ ಹಕಾರಿ, ಡೊಂಬರಸಂಸ್ಕೃತಿ, ಪು. ೩
೩೪. ನರಸಿಂಹರಾವು, ೮೦ ವಯಸ್ಸು, ಸಂದರ್ಶನ, ೨೩.೧೦.೨೦೦೦, ಆದವಾನಿ
೩೫. SII, Vol. 15, No. 675, ಬಿಜಾಪುರ ಜಿಲ್ಲೆಯ ಹೊನ್ನಿಹಾಳ, ೧೫ನೇ ಶತಮಾನ
೩೬. Gloyer quoted in cast and Tribes of southren India Edgar Thurstan, Vol. II, p.179, 1975
೩೭. ಹರಿಲಾಲ್ ಕೆ.ಪವಾರ್, ಹೆಳವರ ಸಂಸ್ಕೃತಿ, ಪು. ೭೪
೩೮. ಪಿ.ಕೆ. ಖಂಡೋಬಾ, ಸುಡುಗಾಡು ಸಿದ್ಧರು, ಪು. ೦೭
೩೯. ಗಿರಿಮಲ್ಲನಗೌಡ, ವಯಸ್ಸು ೫೭, ಸಂದರ್ಶನ, ೨೯.೧೦.೨೦೦೦
೪೦. ಯಳನಾಡು ಆಂಜನಪ್ಪ, ಹಗಲುವೇಷದವರ ಸಂಸ್ಕೃತಿ, ಪು. ೨೫
೪೧. ಅದೇ, ಪು. ೨೭
೪೨. ಬಿ.ರಾಮರಾಜು, ತೆಲುಗು ಜಾನಪದ ಗೇಯಸಾಹಿತ್ಯಂ, ಪು. ೮೦೫
೪೩. ಡಾ.ಜೋಗನ್ ಶಂಕರ್, ಗ್ರಾಮಸಮಾಜ, ಪು. ೪೫, ೪೬
೪೪. ಡಾ.ಎಂ.ಎಂ.ಕಲ್ಬುರ್ಗಿ, ನಾಮವಿಜ್ಞಾನ, ಪು. ೫೯
೪೫. ಅದೇ, ಪು. ೫೯, ೬೦
೪೬. ಕೆ.ಬಸಪ್ಪ, ಮುಖ್ಯೋಪಾಧ್ಯಾಯರು, ಸಂದರ್ಶನ, ೨೭.೧೦.೨೦೦೦, ವಯಸ್ಸು ೫೮, ಬಳ್ಳಾರಿ
೪೭. SIPN, Vol. XI, Page 21
೪೮. ಎಚ್.ಡಿ. ಪ್ರಶಾಂತ, (ಸಂ), ಕರ್ನಾಟಕ ರಾಜ್ಯಕೋಶ, ೮, ಜನಸಮುದಾಯ ಸಂಪುಟ, ಪು. ೭೮
೪೯. SIPN, Vol. XI, Page 20
೫೦. SIPN, Vol. 12, A.V.D. Sharma, Page 44
೫೧. ಡಾ. ವಿಶ್ವನಾಥ, ಸಕಲೇಶಪುರ ಪರಿಸರದ ಸ್ಥಳನಾಮಗಳು, ಪು. ೫೩
೫೨. ಪ್ರೊ. ಎಸ್.ನಾಗರಾಜ, ಪುರಾತತ್ವ ಮತ್ತು ದೇಸಿ ಸಂಸ್ಕೃತಿ' ವಿಚಾರ ಸಂಕಿರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೧.೦೨.೨೦೦೨
೫೩., ಕಾ.ವೆಂ. ಶ್ರೀನಿವಾಸಮೂರ್ತಿ, ಕನ್ನಡಪರ ಚಿಂತನೆ ಮತ್ತು ಪರಂಪರೆ, ಪು. ೨೭
೫೪. SII, IX, II, p. 662, No. 670
೫೫. ಎಂ. ಚಿದಾನಂದಮೂರ್ತಿ, ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೫೭, (ಕಾವ್ಯಾವಲೋಕನದಿಂದ)
೫೬. ಆರ್. ಶಾಮಾಶಾಸ್ತ್ರಿ, (ಸಂ), ಧರ್ಮಾಮೃತಂ, (೭ - ೪೭)
೫೭. ಪಂಪಭಾರತ, (೧೨ - ೩)
೫೮. ಟಿ.ಚಂದ್ರಶೇಖರ, (ಸಂ), ಲೋಕೋಪಕಾರ, ಪು. ೪೫
೫೯. ಆರ್ಕೈ ಮಣಿಪಾಲ, ಹೆಸರಲ್ಲೇನಿದೆ? ಪು. ೦೭
೬೦. ಎಂ.ಚಿದಾನಂದಮೂರ್ತಿ, ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೭೩
೬೧. ಜಿ.ಆರ್.ಕುಪ್ಪುಸ್ವಾಮಿ, ಎಕನಾಮಿಕ್ ಕಂಡೀಷನ್ ಇನ್ ಕರ್ನಾಟಕ, ಪು. ೧೭೬ - ೧೭೮
೬೨. SII, Vol. IX, Part II
೬೩. ಪ್ರೊ. ಎಸ್.ನಾಗರಾಜ, ಪುರಾತತ್ವ ಮತ್ತು ದೇಸೀ ಸಂಸ್ಕೃತಿ ವಿಚಾರಸಂಕಿರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೧.೦೨.೨೦೦೨
೬೪. ಅದೇ
೬೫. E.C. IX, ಹೊಸಕೋಟೆ, ೮೭
೬೬. SII, IX (ii), p. 697, No. 711, 1418, ಹಿಂದೂಪುರ

೬೭. ಕೆಮ್ಮೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪು. ೨೬
೬೮. ಎಂ.ಎಂ. ಕಲ್ಬುರ್ಗಿ, ನಾಮವಿಜ್ಞಾನ, ಪು. ೫೪
೬೯. ಮಠದ ಜಗದೀಶ, ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು, ಪು. ೨೬
೭೦. ಕೆಮ್ಮೂರು ರಘುಪತಿಭಟ್ಟ, ಹೆಸರಲ್ಲೇನಿದೆ? ಪು. ೦೨
೭೧. ಕೆಮ್ಮೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪು. ೧೦
೭೨. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೧೭೦
೭೩. ಮಲ್ಲೇಪುರಂ ಜಿ.ವೆಂಕಟೇಶ, (ಸಂ), ಶಂಬಾಕೃತಿ ಸಮೀಕ್ಷೆ, ಪು. ೬೬
೭೪. ಅದೇ, ಪು. ೬೭
೭೫. ಅದೇ, ಪು. ೮೫
೭೬. ಶಿವರಾಮ ಕಾರಂತ, ಸಿರಿಗನ್ನಡ ಅರ್ಥಕೋಶ, ಪು. ೩೭೬
೭೭. ಶಿವರಾಮಕಾರಂತ, ಸಿರಿಗನ್ನಡ ಅರ್ಥಕೋಶ, ಪು. ೪೪೪
೭೮. ಎಂ.ನಂಜಯ್ಯ, ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು, ಪು. ೧೬೧
೭೯. ಮಲ್ಲೇಪುರಂ ಜಿ.ವೆಂಕಟೇಶ, ಶಂಬಾಕೃತಿ ಸಮೀಕ್ಷೆ, ಪು. ೭೫
೮೦. ಅದೇ, ಪು. ೪೭
೮೧. ಎಂ.ನಂಜಯ್ಯ, ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು, ಪು. ೧೬೧
೮೨. ಮಲ್ಲೇಪುರಂ ಜಿ.ವೆಂಕಟೇಶ, (ಸಂ), ಶಂಬಾಕೃತಿ ಸಮೀಕ್ಷೆ, ಪು. ೬೩
೮೩. ದೇಜಗೌ, ಸ್ಥಳನಾಮ ವ್ಯಾಸಂಗ, ಪು. ೮೯
೮೪. ಪ್ರಹ್ಲಾದಾಚಾರ್ಯ, ಅರ್ಚಕ, ವಯಸ್ಸು ೪೫, ಸಂದರ್ಶನ, ೧೧.೦೬.೨೦೦೧, ಹೊಸಪೇಟೆ
೮೫. Qurterly Journal of Mythic Society, p. 325, 1940
೮೬. ಆರ್ಕೆ ಮಣಿಪಾಲ, ಹೆಸರಲ್ಲೇನಿದೆ?, ಪು. ೧೫

❑❑

# ೮

# ಸಮಾರೋಪ

## ೮. ಅಧ್ಯಯನದ ಒಟ್ಟುನೋಟ

ವೈಜ್ಞಾನಿಕ ಹಾಗೂ ಶಾಸ್ತ್ರೀಯವಾಗಿ ಅಧ್ಯಯನ ಮಾಡಬೇಕಾದ ವಿಷಯಗಳಲ್ಲಿ ನಾಮಾಧ್ಯಯನವೂ ಮುಖ್ಯವಾದುದು. ಸ್ಥಳನಾಮಗಳಂತಹ ಸಾಂಸ್ಕೃತಿಕ ಪಳೆಯುಳಿಕೆಗಳು ಒಂದು ಭೌಗೋಳಿಕ ಪರಿಸರದ ಸಂಸ್ಕೃತಿಯ ನಿರ್ವಚನದಲ್ಲಿ ಅಗತ್ಯವಾಗಿ ಬಳಸಿಕೊಳ್ಳಬೇಕಾದ ಸಾಮಗ್ರಿಗಳೆಂಬುದನ್ನು ಇಲ್ಲಿಯವರೆಗಿನ ಅಧ್ಯಯನಗಳಿಂದ ಎತ್ತಿತೋರಿಸಲಾಗಿದೆ.

ಮನುಷ್ಯರು ಅಲೆಮಾರಿ ಜೀವನದಿಂದ ಸ್ಥಿರವಾಸಿ ಜೀವನದೆಡೆಗೆ ನಡೆದಂದಿನಿಂದ ತಾವು ವಾಸಿಸುತ್ತಿದ್ದ ಭೌಗೋಳಿಕ ಪ್ರದೇಶಕ್ಕೆ ಒಂದು ಹೆಸರನ್ನು ಕರೆಯುವ ಪ್ರಯತ್ನ ಮಾಡಿದರು. ಇದು ಆಗತಾನೆ ಬೇರು ಬಿಡುತ್ತಿದ್ದ ನೆಲೆಯೂರಿಕೆಯ ಪ್ರತೀಕವಾಗಿದೆ. ತಮ್ಮ ಭದ್ರ ನೆಲೆಯೂರಿಕೆಯ ನಂತರ ಇಟ್ಟ ಹೆಸರುಗಳು ಬೆಟ್ಟ, ಗುಡ್ಡ, ಸರೋವರ, ಕಣಿವೆ, ಕಂದರ ಹೀಗೆ ಪ್ರಾಕೃತಿಕ ಸಂಬಂಧವನ್ನು ಗಾಢವಾಗಿ ಬೆಸೆದಿವೆ. ಪ್ರಕೃತಿಯ ಒಂದೊಂದು ವಸ್ತುವು ಸ್ಥಳನಾಮಗಳಿಗೆ ಪ್ರೇರಣೆ ನೀಡಿರುವುದನ್ನು ಗಮನಿಸಬಹುದು. ಆಯಾ ಭೌಗೋಳಿಕ ವಲಯಕ್ಕೆ ತಕ್ಕಂತೆ ಭಿನ್ನತೆಗಳೂ ಕಾಣಿಸುತ್ತವೆ. ಅಂದರೆ ಕನ್ನಡ ಮಾತನಾಡುವ ಭೌಗೋಳಿಕ ಪ್ರದೇಶದಲ್ಲಿಯೇ ದಕ್ಷಿಣ ಕರ್ನಾಟಕದಲ್ಲಿ ಅಲ್ಲಿನ ಭೌಗೋಳಿಕ ಪರಿಸರಕ್ಕನುಗುಣವಾಗಿ ನಾಮನಿರ್ದೇಶನ ಆಗಿದ್ದರೆ, ಉತ್ತರ ಕರ್ನಾಟಕದಲ್ಲಿ ಇಲ್ಲಿನ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಇರುತ್ತವೆ. ಹೆಚ್ಚಾಗಿ ಜಲ, ನೆಲ, ಬೆಟ್ಟ, ಗಿಡಮರಗಳು ನಾಮನಿರ್ದೇಶನಕ್ಕೆ ಒಳಗಾಗಿವೆ. ಆಂಧ್ರ ಕರ್ನಾಟಕ ಗಡಿ ಪ್ರದೇಶವೂ ಈ ಬಗೆಯ ವೈವಿಧ್ಯತೆಗಳನ್ನು ಹೊಂದಿದೆ. ಇಲ್ಲಿ ಹೆಚ್ಚಾಗಿ ಒಣಹವೆಯಿಂದ ಕೂಡಿದ ಬಯಲು ಭೂಮಿಯಿದ್ದರೂ, ಸಾಗರ, ಸಮುದ್ರದಿಂದ ಕೊನೆಗೊಳ್ಳುವ ಗ್ರಾಮನಾಮಗಳಿವೆ. ಇದು ಈ ಪ್ರದೇಶದ ಸಂಸ್ಕೃತಿಯು ಕಂಡುಕೊಂಡ ವಿಭಿನ್ನ ನೆಲೆಯೆಂದು ಗುರುತಿಸಬಹುದು.

ಒಟ್ಟು ಸ್ಥಳನಾಮಗಳ ಪ್ರಾದೇಶಿಕವಾರು ಅಧ್ಯಯನದಿಂದ ಭೂಗೋಳಶಾಸ್ತ್ರದ ಕೆಲವು ಪ್ರಶ್ನೆಗಳಿಗೆ ಉತ್ತರ ದೊರೆಯಬಹುದಾದ ಸಾಧ್ಯತೆಗಳಿವೆ. ಭೂಗೋಳಶಾಸ್ತ್ರಜ್ಞರು ಸ್ಥಳನಾಮಗಳಂತಹ ಆಕರಗಳನ್ನು ತಮ್ಮ ಅಧ್ಯಯನಗಳಿಗೆ ಪೂರಕ ಸಾಮಗ್ರಿಯಾಗಿ ತೆಗೆದುಕೊಂಡು ವಿಶ್ಲೇಷಿಸುವ ಅಗತ್ಯವಿದೆಯೆನ್ನಬಹುದು. ಕೇವಲ ಹೆಸರುಗಳ ರೂಪದಿಂದಲೇ ಒಂದು ಪ್ರದೇಶದ ಭೌಗೋಳಿಕ ವಿವರವನ್ನು (Outline) ನೀಡಬಹುದು. ಕಾರಣ ಭೌಗೋಳಿಕ ಇತಿಹಾಸದ ಅಧ್ಯಯನಕ್ಕೆ ಗ್ರಾಮನಾಮಗಳ ಪಾತ್ರವೂ ಮಹತ್ವದ್ದಾಗಬಹುದಾಗಿದೆ.

ಒಂದು ಸಂಸ್ಕೃತಿಯಲ್ಲಿ ವ್ಯಕ್ತಿ, ದೈವ, ವೃತ್ತಿ, ಜಾತಿ, ಪಟ್ಟಣ, ನಗರ, ಗ್ರಾಮ, ಪ್ರಾಣಿ, ಪಕ್ಷಿ, ದೇವಾಲಯಗಳು ಮುಂತಾದವು ಮುಖ್ಯವಾಗುತ್ತವೆ. ಈ ಎಲ್ಲ ಸಂಗತಿಗಳಿಂದ ಚಲಿಸುವ ಸಾಮಾಜಿಕ ಓಘವೇ ಸಂಸ್ಕೃತಿ. ಸ್ಥಳನಾಮಗಳು ಆರಂಭದ ಭೌಗೋಳಿಕತೆಯ ಪ್ರೇರಣೆಯಿಂದ ನಾಗರಿಕತೆ ಬೆಳೆದಂತೆ ಸಂಸ್ಕೃತೀ ಮುಖಿಯಾಗಿ ನಿರ್ದೇಶನಕ್ಕೊಳಪಟ್ಟವು.

ವ್ಯಕ್ತಿ ಕುಟುಂಬದ ಅತಿಮುಖ್ಯ ಘಟಕ. ಇಂತಹ ವ್ಯಕ್ತಿ ಕೇಂದ್ರಿತ ಕುಟುಂಬಗಳು ಸೇರಿ ಒಂದು ಊರಾಗುತ್ತದೆ. ವಿಶೇಷವಾದ ನಡೆ, ನುಡಿ, ವ್ಯಕ್ತಿತ್ವವನ್ನು ಹೊಂದಿರುವವರ ಹೆಸರುಗಳೂ ಸ್ಥಳಗಳಿಗೆ ನಿರ್ದೇಶನಗೊಂಡಿವೆ. ಅಲ್ಲದೇ ಊರಿಗೆ ಬಂದ ಆಪತ್ತನ್ನು ಕಳೆಯಲು ಮುಂದಾದ ಕಾರಣಕ್ಕಾಗಿ ಆ ವ್ಯಕ್ತಿಯ ಹೆಸರನ್ನೇ ತಮ್ಮ ನೆಲೆಗಳಿಗೆ ಇಟ್ಟುಕೊಂಡದ್ದು ತಿಳಿಯುತ್ತದೆ. ಅದರಂತೆ ಗ್ರಾಮಸಮಾಜಗಳು ದೇವರು ಧರ್ಮವನ್ನು ತಮ್ಮ ಅವಿಭಾಜ್ಯ ಅಂಗವೆಂದು ನಂಬಿವೆ. ಭಕ್ತಿ ಮತ್ತು ಭಯದ ನೆಲೆಯಲ್ಲಿ ತಮ್ಮ ವಾಸಸ್ಥಾನಗಳಿಗೆ ದೈವಗಳ ಹೆಸರನ್ನು ಕರೆದುಕೊಂಡ ಬಗೆಗೆ ಮಾಹಿತಿಯಿದೆ. ಇದರಿಂದ ಶುಭವಾಗುತ್ತದೆಯೆಂಬ ನಂಬಿಕೆಯೂ ಗ್ರಾಮ ಸಮಾಜದಲ್ಲಿದೆ.

ಸ್ಥಿರವಾಸಿ ಮನುಷ್ಯರು ವ್ಯವಸಾಯ ಮತ್ತು ಪಶುಪಾಲನೆಯನ್ನು ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡರು. ಇದರಿಂದ ವ್ಯವಸಾಯವೇ ಪ್ರಧಾನವಾದಂತಹ ಆ ದಿನಮಾನದಲ್ಲಿ ಅದಕ್ಕೆ ಪೂರಕವಾಗಿ ಬೇಕಾದಂತಹ ವ್ಯವಸಾಯದ ಉಪಕರಣಗಳನ್ನು ಒದಗಿಸುವ ಒಂದು ಸಮುದಾಯವಿತ್ತು. ಹೀಗೆ ಕಸುಬುದಾರರು ತಮ್ಮದೇ ಆದ ನಿರ್ದಿಷ್ಟ ಭೂಪ್ರದೇಶವನ್ನು ಗುರುತಿಸಿಕೊಂಡು ನೆಲೆಯೂರಿದರು. ವ್ಯವಸಾಯಕ್ಕೆ ಬೇಕಾಗುವ ಸಾಮಗ್ರಿಗಾಗಿ ಕಮ್ಮಾರರು, ಚಮ್ಮಾರರು, ಬಡಿಗೇರರು ಮುಂತಾದವರು ತಮ್ಮ ವೃತ್ತಿಯಿಂದಲೇ ತಾವು ವಾಸಿಸುತ್ತಿದ್ದ ಸ್ಥಳಗಳಿಗೆ ನಾಮಕರಣ ಮಾಡಿ ಗುರುತಿಸಿಕೊಂಡರು. ಅದರಂತೆ ಅವರು ಜೀವನ ನಡೆಸಲು ಪರಸ್ಪರ ಸಹಕರಿಸುವುದು ಅನಿವಾರ್ಯವಾಯಿತು. ಕಾರಣ ಉಪ್ಪಾರರು, ಕುಂಬಾರರು, ವಡ್ಡರು, ಕಲ್ಲುಕುಟಿಗರು, ಮಾದಿಗರು, ಕೃಷಿಕರು, ಅಗಸರು, ಪುರೋಹಿತರು, ಜೊತೆಯಾಗಿ ವಾಸಿಸುತ್ತಿದ್ದಾಗ ಊರುಗಳಾದವು. ಇವರಲ್ಲಿ ಆರ್ಥಿಕ, ಸಮಾಜೋಧಾರ್ಮಿಕ ವಿಷಯಗಳಲ್ಲಿ ಹಿಡಿತವನ್ನು ಸಾಧಿಸಿದ್ದ ವರ್ಗಗಳು ಕೆಲವೊಮ್ಮೆ ಪ್ರತ್ಯೇಕವಾಗಿ ವಾಸಿಸುತ್ತಿದ್ದರು. ಅಗ್ರಹಾರಗಳು ಪ್ರತ್ಯೇಕ ಊರುಗಳಲ್ಲವಾದರೂ, ಗ್ರಾಮಗಳ ಪಕ್ಕದಲ್ಲಿ ಇರುತ್ತಿದ್ದು ಉಳಿದ ಸಮುದಾಯಗಳ ಕೆಲಸ ಕಾರ್ಯಗಳನ್ನು ಅವಲಂಬಿಸಿಯೇ ಬದುಕುತ್ತಿದ್ದ ಸಮುದಾಯದವರು ಇಲ್ಲಿ ನೆಲೆಸುತ್ತಿದ್ದರು. ಹೀಗೆ ಸಮುದಾಯಗಳ ಜೀವನ ವಿಧಾನವು ಪೂರಕವಾಗಿಯೇ ಇರುತ್ತಿದ್ದು, ಅವರಿಂದ ಇವರು ಇವರಿಂದ ಅವರು ಪರಸ್ಪರ ಕೊಡು ಪಡೆಯುತ್ತಿದ್ದರು. ವ್ಯವಸಾಯದಂತೆ ಕೈಗಾರಿಕೆಯೂ ಪ್ರಾಚೀನ ಕಾಲದಲ್ಲಿ ಇದ್ದ ಬಗೆಗೆ ಸ್ಥಳನಾಮಗಳಿಂದ ವ್ಯಕ್ತವಾಗುತ್ತದೆ. ಕಬ್ಬಿಣ,

ತಾಮ್ರ, ಚಿನ್ನ ಮುಂತಾದ ಲೋಹಗಳನ್ನು ಕರಗಿಸುವ, ಅದರಿಂದ ಯುದ್ಧೋಪಕರಣಗಳು, ದಿನೋಪಯೋಗಿ ವಸ್ತು, ಮೂರ್ತಿಶಿಲ್ಪಗಳು, ಆಭರಣ ತಯಾರಿಸುತ್ತಿದ್ದರು. ಕಬ್ಬಿಣವನ್ನು ಒಡಿದು ಉಪಕರಣ ತಯಾರಿಸಲು ಕಮ್ಮಾರರು ಕೈಗಾರಿಕೆಯನ್ನು ಸ್ಥಾಪಿಸಿದ ಬಗ್ಗೆ 'ಕಮ್ಮಾರಚೇಡು' ಎಂಬಂತಹ ಗ್ರಾಮನಾಮಗಳು ತಿಳಿಸುತ್ತವೆ. 'ಹೊನ್ನೂರು', 'ತಾಂಬ್ರಹಳ್ಳಿ' ಮುಂತಾದ ಗ್ರಾಮನಾಮಗಳಿಂದ ಚಿನ್ನ ಮತ್ತು ತಾಮ್ರದ ನಿಕ್ಷೇಪಗಳಿರಬಹುದೆಂದು ಊಹಿಸಬಹುದು. ಅಥವಾ ಆಮದು ಮಾಡಿಕೊಂಡು ಈ ಲೋಹಗಳಿಂದ ಕೈಗಾರಿಕೆಯನ್ನು ನಿರ್ಮಿಸಿಕೊಂಡು ಒಂದೆಡೆ ವಾಸಿಸುತ್ತಿರಬಹುದೆಂದು ಊಹಿಸಬಹುದು. 'ಇಂಗಳದಹಾಳ್' ಎಂಬಂತಹ ಗ್ರಾಮನಾಮಗಳು ಮತ್ತು 'ಬೂದಿಹಾಳು' ಎಂಬಂತಹ ಊರುಗಳಿಂದ ಕೈಗಾರಿಕೆಗಳ ನೆಲೆಯನ್ನು ಗುರುತಿಸಲು ಸಾಧ್ಯವಿದೆ. ಅಲ್ಲದೇ 'ಬೂದಿಹಾಳು' ಎಂಬಂತಹ ಹೆಸರಿನ ಗ್ರಾಮನಾಮಗಳು ಪ್ರಾಚೀನ ಐತಿಹಾಸಿಕ ಚಹರೆಗಳಾಗಿ ಪುರಾತತ್ವ ಪರಿಸರವನ್ನು ಪ್ರತಿನಿಧಿಸುತ್ತವೆ. ಬೂದಿ'ಯಿಂದ ಆರಂಭವಾಗುವ ಸ್ಥಳನಾಮಗಳು ಆದಿ, ಮಧ್ಯಶಿಲಾಯುಗದ ಮಾನವನ ನೆಲೆಗಳೆಂದು ಗುರುತಿಸಲು ಆಂಧ್ರ ಕರ್ನಾಟಕ ಗಡಿಭಾಗದ ಭೌಗೋಳಿಕ ಪರಿಸರದಲ್ಲಿ ಹಲವಾರು ಕುರುಹುಗಳಿವೆ.

ವರ್ಣಾಶ್ರಮ ಪದ್ಧತಿಯ ನಂತರ ಕಸುಬಿನ ಹಿನ್ನೆಲೆಯಲ್ಲಿ ಜಾತಿಪದ್ಧತಿ ಹುಟ್ಟಿತು. ಆದರೂ ಅದು ಮುಂದುವರೆದು ಕಸುಬನ್ನು ಮೀರಿ ತನ್ನ ಬೆಳವಣಿಗೆಯನ್ನು ಕಂಡುಕೊಂಡಿತು. ಅಂದರೆ ಕುಂಬಾರರು, ಕಂಬಾರರು, ಮಾದಿಗರು, ಚಮ್ಮಾರರು, ಉಪ್ಪಾರರು, ಬಡಿಗೇರರು, ಮ್ಯಾದಾರರು, ಜಂಗಮರು, ಗೌಡರು, ಪುರೋಹಿತರು ಹೀಗೆ ಮುಂತಾದ ವೃತ್ತಿಗಳು ಕ್ರಮೇಣ ಜಾತಿಗಳಾಗಿ ಮಾರ್ಪಾಡಾದವು. ಅವರಿಗೆ ಕುಂಬಾರಹಳ್ಳಿ, ಕಮ್ಮರಚೇಡು, ಮಾದಿಗಗೇರಿ, ಉಪ್ಪಾರಹಳ್ಳಿ, ಮ್ಯಾದಾರಹಳ್ಳಿ, ಜಂಗಮರಹಳ್ಳಿ, ಗೌಡಗೇರಿ, ಅಗ್ರಹಾರ, ವಡ್ಡರಹಟ್ಟಿ ಹೀಗೆ ಸ್ಥಳನಾಮಗಳೂ ಇವೆ. ವೃತ್ತಿಯಿಂದ ನೆಗೆದು ಜಾತಿಯ ನೆಲೆಯಲ್ಲಿ ಸಮುದಾಯಗಳು ತಮ್ಮ ನೆಲೆಗಳನ್ನು ಕಟ್ಟಿಕೊಂಡು ಹೆಸರು ನೀಡಿಕೊಂಡರು. ಆದರೂ ಪರಸ್ಪರ ಪೂರಕವಾದ ಜೀವನ ಮಾತ್ರ ಮುಂದುವರೆಯಿತು. ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಜಂಗಮರು, ಉಪ್ಪಾರರು, ಗೌಡರು, ಕುರುಬರು, ಕಮ್ಮಾರರು, ವಡ್ಡರು, ಬ್ರಾಹ್ಮಣರು, ಮಾದಿಗರು ಮುಂತಾದ ಸಮುದಾಯದವರನ್ನು ಹೆಸರಿಸುವ ಸ್ಥಳನಾಮಗಳು ಒಂದಾದ ನಂತರ ಒಂದು ಇರುವುದು ಕಂಡುಬರುತ್ತದೆ. ಅಂದರೆ ಸಮುದಾಯಗಳ ಅವಲಂಬಿತ ಜೀವನ ಪದ್ಧತಿಯನ್ನು ಸ್ಥಳನಾಮಗಳು ಭೌಗೋಳಿಕ ಅಂತರ್ ಸಂಬಂಧದ ಮೂಲಕ ತಿಳಿಸುತ್ತವೆ. ಆರಂಭಕಾಲದಲ್ಲಿ ಆಯಾ ಸಮುದಾಯಗಳೇ ವಾಸಿಸುತ್ತಿದ್ದ, ಅದೇ ಸಮುದಾಯದ ಹೆಸರಿನ ಗ್ರಾಮನಾಮಗಳಿದ್ದವು. ಆದರೆ ಇಂದು ಸ್ಥಿತ್ಯಂತರಗೊಂಡ ಜನಜೀವನ ವಿಧಾನದಿಂದ ಎಲ್ಲ ಜಾತಿ ಜನಾಂಗ ಈ ನೆಲೆಗಳಲ್ಲಿ ವಾಸಿಸುತ್ತಿರುವುದು ತಿಳಿಯುತ್ತದೆ. ಅಗ್ರಹಾರಗಳಲ್ಲಿ ಬ್ರಾಹ್ಮಣರಿಗೆ ಮಾತ್ರ ವಾಸಿಸಲು ಅವಕಾಶವಿತ್ತು. ಅದರೆ ಇಂದು ಈ ಅಗ್ರಹಾರ ಹೆಸರಿನ ಊರುಗಳಲ್ಲಿ ಬ್ರಾಹ್ಮಣರೇ ಇಲ್ಲದೇ ಇರಬಹುದು.

ಹೀಗೆ ವೃತ್ತಿ ಮತ್ತು ಜಾತಿಯಿಂದ ಸ್ಥಳನಾಮಗಳು ನಿರ್ದೇಶಿಸಲ್ಪಟ್ಟಿವೆ. ಇದರಿಂದ ನಮ್ಮ ನಾಡಿನ ಪ್ರಾಚೀನ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಇಂತಹ ಗ್ರಾಮನಾಮಗಳು ಪೂರಕ ಮಾಹಿತಿಯನ್ನು ನೀಡುತ್ತವೆ. ಅಲ್ಲದೇ ಆಂಧ್ರ ಕರ್ನಾಟಕ ಗಡಿ ಪ್ರದೇಶದಲ್ಲಿ ಇಂದು ಕಂಡುಬರುವ -ಕಾತರಕಿ, -ಮುಂಡರಗಿ, -ಕಾರ್ಕಲ ತೋಟ,

-ಗೊಗ್ಗರಹಟ್ಟಿ ಮುಂತಾದ ಗ್ರಾಮನಾಮಗಳಿಂದ -ಕಾತರು, ಮುಂಡರು, ಕಾಕರು, ಗೊಗ್ಗರು ಎಂಬಂತಹ ಜನಾಂಗಗಳು ಈ ಭಾಗದಲ್ಲಿ ಪ್ರಾಚೀನಕಾಲದಲ್ಲಿ ನೆಲೆಸಿರಬೇಕು ಎಂಬಂತಹ ಸುಳಿವುಗಳನ್ನು ಈ ಹೆಸರುಗಳು ನೀಡುತ್ತವೆ. ಆದರೆ ಈ ಜನಾಂಗಗಳು ಅಸ್ತಿತ್ವದಲ್ಲಿದ್ದ ಬಗೆಗೆ ಇನ್ನೂ ಕೆಲವು ಅನುಮಾನಗಳಿವೆ. ಅದೇನಿದ್ದರೂ ಇಂತಹ ಜನಾಂಗಿಕ ಅಧ್ಯಯನದಲ್ಲಿ ಸ್ಥಳನಾಮಗಳು ಉಪಯುಕ್ತ ಮಾರ್ಗೋಪಾಯಗಳನ್ನು ಸೂಚಿಸಬಲ್ಲವು.

ಗ್ರಾಮಸಮಾಜಗಳು ಬೆಳೆದು ಪಟ್ಟಣ, ನಗರಗಳಾದವು. ಈ ಪಟ್ಟಣ ನಗರಗಳಲ್ಲಿ ಆಳುವ ಪ್ರಭುಗಳು ವಾಸಿಸತೊಡಗಿದರು. ಇಡೀ ರಾಜ್ಯವನ್ನು ತಮ್ಮ ಅಧಿಪತ್ಯದಲ್ಲಿ ಇಟ್ಟುಕೊಂಡು ಆಳುತ್ತಿದ್ದಂತಹ ರಾಜ, ಮಂತ್ರಿಗಳು, ಸಾಮಂತರು ಮತ್ತು ರಾಜಪರಿವಾರದವರು ಸ್ಥಳನಾಮಗಳಿಗೆ ಹೆಸರಾಗಿರುವುದನ್ನೂ ಕಾಣಬಹುದು. ಅಲ್ಲದೇ ರಾಜರು ಯುದ್ಧದ ಸಂದರ್ಭದಲ್ಲಿ ವಿಜಯಿಗಳಾದಾಗ ಒಂದೊಂದು ಹೊಸಗ್ರಾಮವನ್ನೂ ನಿರ್ಮಿಸಿರುವ ಉದಾಹರಣೆಗಳಿವೆ (ನಾಗಲಾಪುರ, ಹೊಸಪೇಟೆ). ಅಲ್ಲದೇ ಅನೇಕ ಗ್ರಾಮಗಳಿಗೆ ದತ್ತಿಯನ್ನು ನೀಡುವ ಮೂಲಕ, ಇಲ್ಲವೇ ಯಾವುದಾದರೂ ಲೋಕೋಪಯೋಗಿ ಕಾರ್ಯಗಳನ್ನು ಮಾಡಿ ಆ ಮುಂಚೆ ಇದ್ದ ಹೆಸರನ್ನು ಅಳಿಸಿ ತಮ್ಮ ಹೆಸರುಗಳನ್ನು ಪ್ರತಿನಾಮಕರಣಗೊಳಿಸಿರುವುದು ಚರಿತ್ರೆಯುದ್ದಕ್ಕೂ ಕಂಡುಬರುತ್ತದೆ. ರಾಜವಂಶಗಳನ್ನು ಹೆಸರಿಸುವ ಸ್ಥಳನಾಮಗಳೂ ನಮ್ಮ ನಾಡಿನಲ್ಲಿವೆ. ಅಲ್ಲದೇ ಒಂದು ಭೌಗೋಳಿಕ ಎಲ್ಲೆಯನ್ನು ಹೊಂದಿರುತ್ತಿದ್ದ ರಾಜ್ಯಗಳು ಒಂದೊಂದು ಹೆಸರನ್ನು ಹೊಂದಿರುತ್ತಿದ್ದವು. ರಾಜ್ಯವನ್ನು ನಾಡು, ವಿಷಯ, ಗ್ರಾಮ, ಪಟ್ಟಣ ಹೀಗೆ ವಿಭಾಗಿಸಿ, ಅವುಗಳಿಗೆ ಇಂತಿಷ್ಟು ಗ್ರಾಮಗಳನ್ನೂ ಆಡಳಿತಕ್ಕೆ ಒಳಪಡಿಸಲಾಗಿತ್ತು. ಅಂತಹ ಗ್ರಾಮನಾಮಗಳು ಅನೇಕ ಚಾರಿತ್ರಿಕ ಸಂದರ್ಭಗಳನ್ನು ತಿಳಿಸುತ್ತವೆ. ನಾಡಿಗಾಗಿ ಪ್ರಾಣಾರ್ಪಣೆ ಮಾಡುತ್ತಿದ್ದ ವೀರರು, ಅವರನ್ನು ನೆನಪಿಸುವ ಸ್ಥಳನಾಮಗಳು ನಮ್ಮಲ್ಲಿವೆ. ಅಂತೆಯೇ ವೀರನ ಮರಣದೊಂದಿಗೆ ಸತೀ ಹೋಗುತ್ತಿದ್ದ ಸ್ತ್ರೀಯ ನೆನಪಿಗಾಗಿಯೂ ನಾಡಿನಾದ್ಯಂತ ಅಲ್ಲಲ್ಲಿ ಗ್ರಾಮನಾಮಗಳಿವೆ. ಗಡಿ ಆಂಧ್ರ ಕರ್ನಾಟಕ ಪ್ರದೇಶದಲ್ಲಿಯೂ ಚರಿತ್ರೆಯು ತನ್ನದೇ ಆದಂತಹ ಕೆಲವು ವೈಶಿಷ್ಟ್ಯಗಳೊಂದಿಗೆ ತೆಲುಗು - ಕನ್ನಡ ಭಾಷಾ ಚರಿತ್ರೆಯೊಂದಿಗೆ ಬೆಸೆದುಕೊಂಡು ಸ್ಥಳನಾಮಗಳ ಮೇಲೆ ಗಾಢ ಸಂಬಂಧ ಬೀರಿರುವುದನ್ನು ತಿಳಿಯಬಹುದು. ಇಲ್ಲಿ ದೊರೆಯುವ ಶಾಸನಗಳು ಸ್ಥಳನಾಮಗಳನ್ನು ಉಲ್ಲೇಖಿಸುತ್ತವೆ. ಇದರಿಂದ ಶಾಸನೋಕ್ತ ಸ್ಥಳನಾಮಗಳಿಂದ ಪ್ರಾಚೀನ ಕರ್ನಾಟಕದ ಐತಿಹಾಸಕ ಸಂಗತಿಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಕಾರಣ ಶಾಸನೋಕ್ತ ಗ್ರಾಮನಾಮಗಳು ಐತಿಹಾಸಿಕ ಕೋಶವನ್ನು ನೇಯುತ್ತವೆ. ಅಲ್ಲದೇ ನಾಡಿನಲ್ಲಿ ದೊರೆಯುವ ಕೈಫಿಯತ್ತುಗಳು, ಸ್ಥಳಪುರಾಣಗಳೂ ಪ್ರಾದೇಶಿಕ ಚರಿತ್ರೆಯನ್ನೂ ಸ್ಥಳನಾಮಗಳ ಮುಖೇನ ಉಲ್ಲೇಖಿಸುತ್ತವೆ. ಚರಿತ್ರೆ ಮತ್ತು ಸ್ಥಳನಾಮಗಳು ಹೀಗೆ ತಮ್ಮ ಒಳಗಣ ಅಪಾರ ಮಾಹಿತಿಯನ್ನು ನೀಡಿ ನಾಡಿನ ಚರಿತ್ರೆಯ ನಿರ್ವಚನಕ್ಕೆ ವಿಪುಲವಾದ ಸಂಪತ್ತನ್ನು ಒದಗಿಸುತ್ತವೆ.

ನಾಡಿನಲ್ಲಿ ದೊರೆಯುವ ಮೌಖಿಕ ಸಾಹಿತ್ಯ, ಸಂಸ್ಕೃತಿಯ ಅನನ್ಯತೆಯನ್ನು ಸಾರುತ್ತದೆ. ಈ ನೆಲದ ಸಮುದಾಯಗಳ ಚರಿತ್ರೆಯನ್ನು ಪದರು ಪದರಾಗಿ ಬಿಚ್ಚಿಕೊಡುತ್ತದೆ. ದೇಸೀಯ ಸತ್ವವನ್ನು ಗ್ರಾಮ ಸಮಾಜ ಒಳಗೊಂಡಿದೆ. ಈ ಗ್ರಾಮ ಸಮಾಜದೊಳಗೆ ಬದುಕುವ ಸಮುದಾಯಗಳು ಹೇಳುವ ಕಥೆ, ಹಾಡು, ಗಾದೆ, ಒಗಟು, ಒಡಬು, ಒಡಪುಗಳಲ್ಲಿ ಒಂದೊಂದು ಪ್ರಾದೇಶಿಕ ಸಂಸ್ಕೃತಿಯೇ ಅಡಗಿದೆ. ಸಾಂದರ್ಭಿಕವಾಗಿಯೆಂಬಂತೆ

ಈ ಜಾನಪದ ಪ್ರಕಾರಗಳಲ್ಲಿ ಅದೆಷ್ಟೋ ಸ್ಥಳನಾಮಗಳು ಉಲ್ಲೇಖಗೊಂಡಿವೆ. ಇವು ಮೂಲ ಭಾಷೆಯು ಮುಕ್ಕಾಗದಂತೆ ದಾಖಲೆಗೊಂಡು ಸಾಧ್ಯವಾದಷ್ಟು ಮೂಲ ಹೆಸರನ್ನು ಆಡುನುಡಿಯಲ್ಲಿ ಸಂರಕ್ಷಿಸಿರುವುದು ತಿಳಿಯುತ್ತದೆ. ಜೊತೆಗೆ ಒಂದೊಂದು ಹೆಸರಿಗೂ ಐತಿಹ್ಯ, ಪುರಾಣಗಳು ಹೆಣೆದುಕೊಂಡಿರುತ್ತವೆ. ಐತಿಹ್ಯ ಮತ್ತು ಪುರಾಣಗಳು ಈ ನಾಡವರ ಕಥೆಯನ್ನು ಹೇಳುವ ಸಂಗತಿಗಳೇ ಆಗಿವೆ. ಅವು ಕೇವಲ ಕಥೆಗಳಲ್ಲ ಬದಲಾಗಿ ಅದೊಂದು ಜೀವನ, ಸಂಸ್ಕೃತಿ ಎಂದು ಭಾವಿಸಿದ ಜಾನಪದರು ತಮ್ಮ ಸ್ಥಳಗಳೊಂದಿಗೆ ನೇರವಾಗಿ ಪೌರಾಣಿಕ ನಾಯಕರ, ವ್ಯಕ್ತಿಗಳ ಹೆಸರನ್ನು ಇಡುತ್ತಾರೆ. ಅಲ್ಲದೇ ಪೌರಾಣಿಕ, ಸಾಮಾಜಿಕ ನಿಷ್ಠವಾದಂತಹ ಕೆಲವು ಕಥೆಗಳನ್ನು ಸ್ಥಳನಾಮಗಳಿಗೆ ಹೇಳುತ್ತಾರೆ. ಇವೆಲ್ಲವೂ ಸತ್ಯಸಂಗತಿಗಳೆಂದು ಭಾವಿಸದಿದ್ದರೂ, ಕೆಲವು ಚಾರಿತ್ರಿಕ ಸತ್ಯಗಳನ್ನು ಒಳಗೊಂಡಿವೆ. ನಮ್ಮ ರಾಜ್ಯ ಹಾಗೂ ರಾಷ್ಟ್ರದಾದ್ಯಂತ ಕಂಡುಬರುವ ಎಷ್ಟೋ ಸ್ಥಳನಾಮಗಳ ಹಿಂದೆ ಜನಪದರ ನಂಬಿಕೆ ಮತ್ತು ಕಥೆಗಳಿವೆ. ಗ್ರಾಮದ ಒಳಿತಿಗಾಗಿ ತ್ಯಾಗ ಬಲಿದಾನ ಮಾಡಿದವರು ತಾವು ನಂಬಿದ ದೈವಗಳ, ಚಾರಿತ್ರಿಕ ವ್ಯಕ್ತಿಗಳ ಬಗೆಗೆ ಅವರಿಗೆ ಅಪಾರ ಗೌರವ. ಈ ಕಾರಣಕ್ಕಾಗಿ ಅವರು ಒಂದೊಂದು ಸ್ಥಳಕ್ಕೆ ಅಂತವರ ಹೆಸರು ನೀಡುತ್ತಾರೆ. ಕಥೆ ಹೇಳುತ್ತಾರೆ. ಸಂಸ್ಕೃತಿಯ ಅಧ್ಯಯನದಲ್ಲಿ ಈ ಬಗೆಯ ಮೂಲಾಧಾರಗಳು ಇಂದು ಬಹುಮುಖ್ಯವೆನಿಸಿವೆ.

ಕುಟುಂಬಕೇಂದ್ರಿತ ಸಮುದಾಯಗಳು ತಮ್ಮೊಂದಿಗೆ ಜೀವಿಸುವ ಪಶು, ಪಕ್ಷಿ, ಪ್ರಾಣಿಗಳನ್ನು ತಮ್ಮ ಜೀವನದ ಭಾಗವನ್ನಾಗಿ ತೆಗೆದುಕೊಂಡಿದ್ದಾರೆ. ಈ ಕಾರಣದಿಂದಲೇ ತಮಗೆ ಮುಖ್ಯವೆನಿಸಿದ ಕೋತಿ, ಹದ್ದು, ಹುಲಿ, ಚಿರತೆ, ನವಿಲು, ಗುಬ್ಬಿ, ನಂದಿ (ಎತ್ತು), ಹಂದಿ, ಹಾವು ಮುಂತಾದವು ಅವರ ನೆಲೆಗಳಿಗೆ ಹೆಸರುಗಳಾಗಿ ಬಂದಿರುವುದನ್ನು ಗಮನಿಸಬಹುದು. ಹಂದಿಯಂತಹ ಪ್ರಾಣಿ ಅವರಿಗೆ ಕೀಳಾಗಿ ಕಾಣದೆ, ವರಾಹ ರೂಪದ ದೈವವಾಗಿ ಕಾಣುತ್ತದೆ. ಇಂತಹ ಅನೇಕ ಭಯ, ಭಕ್ತಿ, ನಂಬಿಕೆಯ ಹಿನ್ನೆಲೆಯಲ್ಲಿ ಈ ಬಗೆಯ ಗ್ರಾಮನಾಮಗಳು ಜನಿಸಿವೆಯೆನ್ನಬಹುದು.

ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಭಾಷಿಕ ಘಟಕಗಳೆಂದು ಅಧ್ಯಯನಮಾಡುವುದು ಮುಖ್ಯವಾಗಿದೆ. ಸ್ಥಳನಾಮಗಳಿಂದ ಅನೇಕ ಭಾಷಿಕ ಚಹರೆಗಳು ತಿಳಿಯುತ್ತವೆ. ಭಾಷೆ ಒಂದು ಸಂಸ್ಕೃತಿಯ ಮಹತ್ವದ ವಾಹಕ. ಇಂತಹ ಅಂಶಗಳಿಂದ ಸಮಾಜದ ಅಧ್ಯಯನವನ್ನು, ಭೌಗೋಳಿಕ ಅಧ್ಯಯನವನ್ನು ಮಾಡಲು ಸಾಧ್ಯ. ಶಂಬಾ ಜೋಶಿಯವರು ಸ್ಥಳನಾಮಗಳ ಭಾಷಿಕ ಅಂಶಗಳಿಂದಲೇ ಕನ್ನಡನಾಡಿನ ಭೌಗೋಳಿಕ ಮೇರೆಗಳನ್ನು ಭಾರತದಾದ್ಯಂತ ಅನ್ವೇಷಿಸುತ್ತಾರೆ. ಆ ಮೂಲಕ ಕನ್ನಡ ಸಂಸ್ಕೃತಿಯ ಹುಡುಕಾಟವನ್ನು ಎಡೆಗಳ ಮುಖಾಂತರ ವಿವರಿಸುತ್ತಾರೆ. ಕನ್ನಡ ಸ್ಥಳನಾಮಗಳು ಅನೇಕ ಅನ್ಯಭಾಷೆಗಳ ಪ್ರಭಾವಕ್ಕೆ ಒಳಗಾಗಿರುವುದಿದೆ. ಆಂಧ್ರ - ಕರ್ನಾಟಕದ ಗಡಿಭಾಗವು ಸಾಂಸ್ಕೃತಿಕ ಕಾರಣಗಳಿಂದಾಗಿ ಏಕತೆಯನ್ನು ಪಡೆದುಕೊಂಡಿದೆಯೆನ್ನಬಹುದು. ಅದರಂತೆ ಸಹಜವಾಗಿ ಕನ್ನಡ ಮತ್ತು ತೆಲುಗು ಭಾಷೆಗಳು ಪರಸ್ಪರ ಕೊಡು ಪಡೆದಿವೆ. ಇದು ಸ್ಥಳನಾಮಗಳ ಮೇಲೂ ಪ್ರಭಾವ ಬೀರಿದೆ. ತೆಲುಗು ಮಾತೃ ಭಾಷಿಕರ ಉಚ್ಚಾರಣಾ ನಿಯಮಗಳು ಹಾಗೆಯೇ ಕನ್ನಡಿಗರ ಉಚ್ಚಾರಣಾ ಸಂದರ್ಭಗಳು ಇಂತಹ ಪ್ರಭಾವವನ್ನೂ ಭಾಷಿಕ ನೆಲೆಯಲ್ಲಿ ಅಧ್ಯಯನ ಮಾಡಲು ಪ್ರೇರೇಪಿಸಿವೆ.

ಕನ್ನಡ ಸ್ಥಳನಾಮಗಳ ಮೇಲೆ ಮುಸ್ಲಿಂ ಮತ್ತು ಆಂಗ್ಲ ಆಡಳಿತದ ಪ್ರಭಾವಗಳಾಗಿವೆ. ಮುಸ್ಲಿಂ ಅರಸರು ರಾಜ್ಯಭಾರ ವಹಿಸಿಕೊಂಡ ಅವಧಿಯಲ್ಲಿ ನಮ್ಮ ದೇಶದಲ್ಲಿನ ಗ್ರಾಮಗಳು ತಮ್ಮ ಸ್ವಾತಂತ್ರ್ಯ ಹಾಗು ಸ್ವಾಯತ್ತತೆಗಳನ್ನು ಹೆಸರಿನ ಮೂಲಕ ಕಾಪಾಡಿಕೊಂಡಿದ್ದವು. ಇವರ ಆಕ್ರಮಣಗಳಿಂದ ಸ್ಥಳನಾಮಗಳ ಮೇಲಾದ ಬದಲಾವಣೆಯ ಪ್ರಕ್ರಿಯೆಯು ಅತ್ಯಲ್ಪ. ಅದರಲ್ಲಿಯೂ ಹಳ್ಳಿಗಳ ಮೇಲಾದದ್ದು ಕಡಿಮೆ. ಮುಸ್ಲಿಂ ರಾಜ್ಯ ಸಿಂಹಾಸನ ಮತ್ತು ರಾಜಧಾನಿಗಳ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ್ದರಿಂದ ನಗರ - ಪಟ್ಟಣಗಳಲ್ಲಿ ಹೆಚ್ಚಾಗಿ ಹೆಸರಿನ ಬದಲಾವಣೆಯು ನಡೆಯಿತು. ಇದು ಗಡಿಭಾಗದಲ್ಲಾದ ಮುಸ್ಲಿಂರ ಪ್ರೇರಣೆ. ಅದರಂತೆ ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಗ್ರಾಮ ಸಮುದಾಯಗಳ ಜನ ಜೀವನದಲ್ಲಿ ಅನೇಕ ಬದಲಾವಣೆಗಳು ಕಂಡುಬಂದವು. ಬ್ರಿಟಿಷರು ಭಾರತದ ಹಳ್ಳಿಗಳ ವಿಶಿಷ್ಟ ಗುಣಗಳಾದ ಸ್ಥಿತಿಸ್ಥಾಪಕತ್ವವನ್ನು ತಮ್ಮ ಭಾಷಾ ಮಾಧ್ಯಮದಿಂದ ಪ್ರಭಾವಿತಗೊಳಿಸಿದರು. ಈ ಮೂಲಕ ಭಾರತೀಯ ಸಮಾಜ ಆ ಭಾಷೆಯ ಮೋಜಿಗೆ ಒಳಗಾಯಿತು. ಜೀವನ ಕ್ರಮದಲ್ಲಿ ಹೇಗೆ ಬದಲಾವಣೆಯು ನಡೆಯಿತೋ, ಸ್ಥಳನಾಮಗಳ ಮೇಲೆಯೂ ದಟ್ಟವಾದ ಪ್ರಭಾವವು ಉಂಟಾಯಿತು.

ಸ್ವಾತಂತ್ರ್ಯಾನಂತರದಲ್ಲಿ ದೇಶೀಯ ನೆಲೆಯಲ್ಲಿ ಆಧುನಿಕತೆ, ಜಾಗತೀಕರಣ, ಕೈಗಾರಿಕೀಕರಣಗಳು ಜನಜೀವನದ ಮೇಲೆ ಅತ್ಯಂತ ಪರಿಣಾಮ ಬೀರಿದವು. ಅದರಂತೆ ಸ್ಥಳನಾಮಗಳ ಮೇಲೂ ಇದರ ಪ್ರಭಾವವನ್ನು ಗುರುತಿಸಬಹುದು. ದೇಶೀಯ ಸಮಕಾಲೀನ ರಾಜಕಾರಣವೂ ಸ್ಥಳನಾಮಗಳ ಮೇಲೆ ಪ್ರಭಾವವನ್ನು ಬೀರಿದೆ. ಸ್ವಾತಂತ್ರ ಪೂರ್ವದಲ್ಲಿ ಬ್ರಿಟಿಷರೊಂದಿಗೆ ದೇಶೀಯ ಪಂಡಿತರು, ವಿದ್ವಾಂಸರು ಗ್ರಾಮಸಮುದಾಯಗಳ ಅಧ್ಯಯನಕ್ಕೆ ಮುಂದಾದ ನೆಪದಲ್ಲಿಯೇ ಕೈಫಿಯತ್ತು, ಬಖೈರು, ಸ್ಥಳಚರಿತ್ರೆ ಬರೆಯಿಸಿದರು. ಈ ಸಂದರ್ಭದಲ್ಲಿ ಬ್ರಿಟಿಷರಿಂದ ಲಾಭಪಡೆಯುವ ಉದ್ದೇಶದಿಂದ ಹೆಸರುಗಳು ಸಂಸ್ಕೃತೀಕರಣ, ಇಂಗ್ಲೀಷೀಕರಣಗೊಂಡದ್ದನ್ನು ಗುರುತಿಸಬಹುದು. ಅದರಂತೆ ಬಂಡವಾಳಶಾಹಿ ಮತ್ತು ಸಮಕಾಲೀನ ರಾಜಕಾರಣ ತಮ್ಮ ಶಕ್ತಿಯ ಪ್ರದರ್ಶನದಿಂದ ಆಡಳಿತದ ಚುಕ್ಕಾಣಿ ಹಿಡಿದ ಬ್ರಿಟಿಷರೊಂದಿಗೆ ರಾಜಿಗಿಳಿದು ತಮ್ಮ ಕುಟುಂಬದ ವ್ಯಕ್ತಿ ಸಮೂಹದ ಹೆಸರುಗಳನ್ನು ಪ್ರಾದೇಶಿಕ ಪ್ರಾಬಲ್ಯದಿಂದ ಸ್ಥಳನಾಮಗಳಿಗೆ ಆರೋಪಿಸಿ ಶಾಶ್ವತಗೊಳಿಸಲು ಮುಂದಾದರು. ಇಂತಹ ಸ್ಥಿತಿಯು ಗಡಿಭಾಗದಲ್ಲಿರುವುದು ಗಮನಿಸಬಹುದು. ನಂತರ ಕೈಗಾರಿಕೆಗಳ ಪ್ರಭಾವದಿಂದ ಅನೇಕ ಪಾರಂಪರಿಕ ಹೆಸರುಗಳನ್ನು ಅಳಿಸಿ, ಹೊಸ ಹೆಸರುಗಳು ಉದ್ಭವವಾಗುತ್ತಿರುವುದನ್ನೂ ಭಾರತದಾದ್ಯಂತ ನೋಡಬಹುದು. ಇದರಿಂದ ಮೂಲ ಹೆಸರುಗಳು ಮರೆಯಾಗಿ, ಪರಂಪರೆಯ ಮೂಲ ಆಕರಗಳು ನಶಿಸಿಹೋಗುತ್ತವೆ.

### ೮.೧. ಈ ಅಧ್ಯಯನದ ಮುಖ್ಯ ಫಲಿತಗಳು

೧. ಈವರೆಗೆ ಕನ್ನಡದಲ್ಲಿ ನಡೆದ ಸ್ಥಳನಾಮ ಅಧ್ಯಯನಗಳನ್ನು (ಉಪಲಬ್ಧ) ಸಮೀಕ್ಷಿಸಲಾಗಿದೆ. ಜೊತೆಗೆ ತೆಲುಗು ಮತ್ತು ಇಂಗ್ಲಿಶ್‌ನ ಕೆಲವು ಕೃತಿಗಳನ್ನು ಗಮನಿಸಲಾಗಿದೆ. ಇವುಗಳ ಕೂಲಂಕುಶ ಅಧ್ಯಯನದಿಂದ ಪ್ರಕೃತ ನಿಬಂಧಕ್ಕೆ ಅಳವಡಿಸಬಹುದಾದ ಮಾದರಿಯೊಂದನ್ನು ಕಂಡುಕೊಳ್ಳಲಾಗಿದೆ. ಹಿಂದಿನ ಅಧ್ಯಯನಗಳು ಬಹುತೇಕ ಭಾಷಾಶಾಸ್ತ್ರದ ನೆಲೆಯಲ್ಲಿ ವರ್ಣನಾತ್ಮಕ ಮಾದರಿಯಿಂದ

ಸಿದ್ಧಗೊಂಡು ಪರಂಪರೆಯಂತೆ ಮುಂದುವರೆದವು. ಇದನ್ನು ಗಮನದಲ್ಲಿಟ್ಟುಕೊಂಡು ಕೆಲವು ಹೊಸ ಅಂಶಗಳನ್ನು ಪ್ರಕೃತ ನಿಬಂಧಕ್ಕೆ ಅಳವಡಿಸಲು ಪ್ರಯತ್ನಿಸಲಾಗಿದೆ. (ಉದಾ: ಸಾಮಾಜಿಕ ಅಧ್ಯಯನ)

೨. ಸ್ಥಳನಾಮಗಳನ್ನು ವರ್ಗೀಕರಿಸುವ ಮೂಲಕ ಆಂಧ್ರ - ಕರ್ನಾಟಕ ಗಡಿಪ್ರದೇಶವಾದ ಕರ್ನೂಲು ಮತ್ತು ಬಳ್ಳಾರಿ ಜಿಲ್ಲೆಯ ಭೌಗೋಳಿಕ ಚಹರೆಯನ್ನು ಮತ್ತು ಅಲ್ಲಿನ ಭಾಷಿಕ ಸ್ವರೂಪ, ಸಾಂಸ್ಕೃತಿಕ ಸ್ವರೂಪ ಮತ್ತು ಗ್ರಾಮಗಳ ವಾಸ್ತು ಸ್ವರೂಪವನ್ನು ಗುರುತಿಸಲಾಗಿದೆ. ಗಡಿಭಾಗದಲ್ಲಿ ಜಲವಾಚಿ, ಶಿಲಾವಾಚಿ, ಕ್ಷೇತ್ರವಾಚಿ, ಸಸ್ಯವಾಚಿ, ಲೋಹವಾಚಿ ಮುಂತಾದ ಪ್ರಾಕೃತಿಕ ಮೂಲ ಸ್ಥಳನಾಮ ಗಳೊಂದಿಗೆ, ಜಾತಿ, ವರ್ಗ, ವೃತ್ತಿ, ದೈವ, ವ್ಯಕ್ತಿ, ಪ್ರಾಣಿ, ಪಕ್ಷಿ ಮುಂತಾದ ಸಾಂಸ್ಕೃತಿಕ ಅಂಶಗಳನ್ನು ಪ್ರತಿನಿಧಿಸುವ ಸ್ಥಳನಾಮಗಳಿರುವುದನ್ನು ಗುರುತಿಸಲಾಗಿದೆ.

ನೈಸರ್ಗಿಕವಾಗಿ ಒಣಭೂಮಿಯಿಂದ ಕೂಡಿದ ಗಡಿಭಾಗದಲ್ಲಿ - ಸಮುದ್ರ, -ಸಾಗರ ಎಂಬ ವಾರ್ಗಿಕಗಳನ್ನೊಂದಿದ ಗ್ರಾಮನಾಮಗಳಿರುವುದು ವಿಶೇಷ. ಇದು ಈ ಭಾಗದ ಜನರ ಜೀವನ ಧೋರಣೆ ಹಾಗೂ ಪ್ರಕೃತಿ ಪ್ರೀತಿಯನ್ನು ತೋರುತ್ತದೆಂಬುದನ್ನು ಗುರುತಿಸಲಾಗಿದೆ. ಅಲ್ಲದೇ ಅನೇಕ ಪ್ರಾಚೀನ ಗ್ರಾಮಗಳು ಮತ್ತು ಕೆಲವು ಅರ್ವಾಚೀನ ಗ್ರಾಮಗಳಿವೆ. ಮಹತ್ವವನ್ನೊಂದಿದ ಸ್ಥಳನಾಮಗಳೂ ಇಲ್ಲಿವೆ. ಗಡಿಭಾಗದ ಸ್ಥಳನಾಮ ವರ್ಗೀಕರಣವನ್ನು ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಎಂಬ ಎರಡು ಭಾಗದಲ್ಲಿ ವಿಂಗಡಿಸಲಾಗಿದ್ದು, ಅತಿವ್ಯಾಪ್ತಿದೋಷದಿಂದ ಆದಷ್ಟು ಮುಕ್ತಗೊಳಿಸಲು ಪ್ರಯತ್ನಿಸಲಾಗಿದೆ.

ಮುಖ್ಯವಾಗಿ ಕೆಲವು ಸ್ಥಳನಾಮಗಳು ಎರಡೆರೆಡು ಅರ್ಥವನ್ನು ನೀಡುತ್ತವೆಂಬುದನ್ನು ತೋರಿಸಲಾಗಿದೆ. ಕೇವಲ ಒಂದು ನಿಷ್ಪತ್ತಿಯನ್ನು ಸ್ಥಾಪಿಸುವುದು ಸಾಧ್ಯವಾಗದು. ನಿಘಂಟು ಮತ್ತು ಕ್ಷೇತ್ರಮಾಹಿತಿಯಿಂದ ನಿಷ್ಪತ್ತಿ ಹೇಳುವಾಗ ಈ ಬಗೆಯ ದ್ವಂದ್ವಗಳು ಎದುರಾಗಿವೆ. ನಿಘಂಟನ್ನು ಆಧರಿಸಿ ನಿಷ್ಪತ್ತಿ ಹೇಳ ಹೊರಟಲ್ಲಿ ಒಂದು ಗ್ರಾಮನಾಮಕ್ಕೆ ಹಲವಾರು ಅರ್ಥಗಳು ಸಿಗುತ್ತವೆ. ಆದ್ದರಿಂದ ಕ್ಷೇತ್ರಮಾಹಿತಿ ಯೊಂದಿಗೆ ಹೆಚ್ಚು ಪ್ರಾದೇಶಿಕ ನಿಷ್ಪತ್ತಿಗೆ ಇಲ್ಲಿ ಮಹತ್ವ ನೀಡಿ ವರ್ಗೀಕರಣವನ್ನು ಅನುಸರಿಸಲಾಗಿದೆ. ಒಟ್ಟಾರೆ ಗಡಿಭಾಗದ ಸ್ಥಳನಾಮಗಳ ವರ್ಗೀಕರಣದಿಂದ ಸ್ಥಳೀಯ ಸಂಸ್ಕೃತಿ ಮತ್ತು ಭೌಗೋಳಿಕ ಅಂಶಗಳನ್ನೇ ಒಳಗೊಂಡು ಇಲ್ಲಿನ ಸ್ಥಳಗಳು ಹೆಸರನ್ನು ಪಡೆದಿವೆ, ಆ ಮೂಲಕ ಪ್ರಾದೇಶಿಕ ಸಂಸ್ಕೃತಿಯ ಪ್ರತಿನಿಧಿಗಳಾಗಿವೆಯೆಂಬುದನ್ನು ಗುರುತಿಸಲಾಗಿದೆ.

೩. ಸ್ಥಳನಾಮಗಳ ಭಾಷಿಕ ಅಧ್ಯಯನದಿಂದ ಮುಖ್ಯವಾಗಿ ದ್ವಿಭಾಷಿಕ ವಲಯದ ಭಾಷಿಕ, ಸಾಂಸ್ಕೃತಿಕ ಅಂಶಗಳು ಗ್ರಾಮನಾಮಗಳ ಮೇಲೆ ಉಂಟುಮಾಡಿದ ಪ್ರಭಾವವನ್ನು ಗುರುತಿಸಲಾಗಿದೆ. ಭಾಷಾವಾರು ಪ್ರಾಂತ್ಯ ರಚನೆಯ ಪೂರ್ವದಲ್ಲಿ ಕರ್ನೂಲು ಜಿಲ್ಲೆಯ ಆಲೂರು, ಆದವಾನಿ ತಾಲ್ಲೂಕುಗಳಲ್ಲಿನ ಗ್ರಾಮನಾಮಗಳು ಕನ್ನಡ ರಚನೆಗಳಾಗಿದ್ದವು. ಭಾಷಾವಾರು ಪ್ರಾಂತ್ಯ ರಚನೋತ್ತರ ಅವಧಿಯಲ್ಲಿ ರಾಜಕೀಯವಾಗಿ ತೆಲುಗು ಆಡಳಿತಕ್ಕೊಳಪಟ್ಟು ಇಲ್ಲಿನ ಸ್ಥಳನಾಮಗಳು ತೆಲುಗು ಭಾಷೆಯಿಂದ

ಪ್ರೇರಣೆಗೊಂಡಿವೆಯೆಂಬುದನ್ನು ಕಂಡುಕೊಳ್ಳಲಾಗಿದೆ. ದ್ವಿಭಾಷಿಕ ವಲಯದಲ್ಲಿರುವ ತೆಲುಗು ಮತ್ತು ಕನ್ನಡಿಗರು ಒಂದೇ ಸ್ಥಳನಾಮವನ್ನು ಎರಡು ಭಾಷೆಯಲ್ಲಿ ಉಚ್ಚರಿಸುವ ಬಗೆಯನ್ನು ಕಂಡುಕೊಳ್ಳಲಾಗಿದೆ. ಅಲ್ಲದೇ ಶಾಸನೋಕ್ತ ಗ್ರಾಮನಾಮಗಳಲ್ಲಿಯೂ ಕೆಲವೊಮ್ಮೆ ತೆಲುಗಿನ ಪ್ರಭಾವ ಹೊಂದಿದ ಸ್ಥಳನಾಮಗಳಿರುವುದನ್ನು ಕಾಣಿಸಲಾಗಿದೆ. ಸ್ಥಳನಾಮಗಳ ಬರೆಹ ಮತ್ತು ಬಳಕೆಯು ಇಂಗ್ಲಿಶ್ ಮತ್ತು ತೆಲುಗು ಭಾಷೆಯಿಂದ ಪಡೆದುಕೊಂಡ ಬದಲಾವಣೆಯು ಇಂತಹ ದ್ವಿಭಾಷಿಕ ಪರಿಸರದಲ್ಲಿ ಸಹಜವೇ ಎಂಬುದನ್ನು ಕಂಡುಕೊಳ್ಳಲಾಗಿದೆ. ಕರ್ನಾಟಕದ ಬಳ್ಳಾರಿ ಗಡಿಭಾಗಕ್ಕೆ ತೆಲುಗಿನ ದಟ್ಟವಾದ ಪ್ರಭಾವವು ಗ್ರಾಮನಾಮಗಳ ಮೇಲೆ ಆಗಿಲ್ಲ ಎಂಬುದನ್ನು ಗುರುತಿಸಲಾಗಿದೆ.

ಆಲೂರು - ಆದವಾನಿ ತಾಲ್ಲೂಕುಗಳಲ್ಲಿನ ಕನ್ನಡ ಸ್ಥಳನಾಮಗಳು ಅಲ್ಲಿನ ರಾಜಕೀಯ ಮತ್ತು ಭಾಷಿಕ ಒತ್ತಡಗಳಿಂದ ತೆಲುಗೀಕರಣಗೊಳ್ಳುತ್ತವೆ ಮತ್ತು ಒಂದೇ ಸ್ಥಳನಾಮವನ್ನು ತೆಲುಗು, ಕನ್ನಡ ಮಾತೃಭಾಷಿಕರು ತಮ್ಮ ತಮ್ಮ ಭಾಷೆಯಲ್ಲಿ ಪ್ರತ್ಯೇಕವಾಗಿ ಗುರುತಿಸುತ್ತಾರೆ ಎಂಬುದು ಅತ್ಯಂತ ಮುಖ್ಯ ಸಂಗತಿ.

೪. ಮೌಖಿಕ ಪರಂಪರೆಯ ಐತಿಹ್ಯ - ಪುರಾಣ, ಗಾದೆ, ಒಗಟು, ಒಡಪು, ಕಥೆ, ಹಾಡು ಮುಂತಾದ ಪ್ರಕಾರಗಳ ಮೂಲಕ ಸ್ಥಳನಾಮಗಳ ಅಧ್ಯಯನದ ಹೊಸ ಮಾದರಿಯನ್ನು ರೂಪಿಸಲಾಗಿದೆ. ಗಾದೆ, ಒಗಟು, ಒಡಪು, ಕಥೆ, ಹಾಡುಗಳಲ್ಲಿ ಆಡುಭಾಷೆಯ ಚಹರೆಗಳನ್ನು ಸಂಗೋಪಿಸಿಕೊಂಡು ಸ್ಥಳನಾಮಗಳು ಉಲ್ಲೇಖಗೊಂಡಿವೆ. ಬಹುತೇಕ ಅವು ಮೂಲ ಹೆಸರನ್ನು ದಾಖಲಿಸಿಕೊಂಡಿವೆ ಎಂಬುದನ್ನು ಗಮನಿಸಲಾಗಿದೆ. ಅಲ್ಲದೇ ಬಯಲಾಟದ ಮುದ್ರಿಕೆಗಳಲ್ಲಿರುವ ಗ್ರಾಮನಾಮ ಮಾಹಿತಿಯನ್ನು ದ್ವಿಭಾಷಿಕ ಸಂದರ್ಭದೊಂದಿಗೆ ಚರ್ಚಿಸಿದಾಗ ತೆಲುಗು ಪ್ರೇರಣೆಯಿಂದ ಕನ್ನಡ ಸ್ಥಳನಾಮಗಳ ಮೇಲಾದ ಪ್ರಭಾವವನ್ನು ಗುರುತಿಸಲಾಗಿದೆ.

ಸ್ಥಳನಾಮಗಳ ಅಧ್ಯಯನದಲ್ಲಿ ಗಾದೆ, ಒಗಟು, ಒಡಪು, ಒಡಬು, ಕಥೆ, ಹಾಡು ಮುಂತಾದ ಜನಪದ ಪ್ರಕಾರಗಳು ಮುಖ್ಯವೆಂಬುದು ತಿಳಿದುಬಂದಿದೆ.

೫. ಸ್ಥಳನಾಮಗಳನ್ನು ವಿಶಿಷ್ಟ ಐತಿಹಾಸಿಕ ಆಕರಗಳೆಂದು ಪರಿಗಣಿಸಲಾಗಿದೆ. ಈ ಚಾರಿತ್ರಿಕ ಸಂಗತಿಗಳಿಂದ ಹೆಸರುಗಳ ವಿವಿಧ ಆಯಾಮಗಳು ತಿಳಿದು ಬಂದಿವೆ. ಗಡಿಭಾಗದಲ್ಲಿ ಪ್ರಾಚೀನ ಕಾಲದಿಂದಲೂ ಆಳಿದ ರಾಜಮನೆತನಗಳಿಗೆ ಸಂಬಂಧಿಸಿದ ಸ್ಥಳನಾಮಗಳಿವೆ. ಅಲ್ಲದೇ ರಾಜ ಪರಿವಾರದವರ ಹೆಸರಿನ ಗ್ರಾಮನಾಮಗಳಿವೆ. ಇನ್ನೂ ಕೆಲವು ಹಳೇ ಗ್ರಾಮಗಳಿಗೆ ಪ್ರತಿನಾಮಕರಣವನ್ನು ಮಾಡಲಾಗಿದೆ.

ಗಡಿಭಾಗದಲ್ಲಿರುವ ಶಾಸನೋಕ್ತ ಸ್ಥಳನಾಮಗಳ ಮೂಲಕ ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಕಂಡುಕೊಳ್ಳಲಾಗಿದೆ. ೯ನೇ ಶತಮಾನದಿಂದ ೧೫ನೇ ಶತಮಾನದವರೆಗಿನ ಶಾಸನೋಕ್ತ ಸ್ಥಳನಾಮಗಳಲ್ಲಿ ೞ, ೞ, ಸಬಿಂದುಕ, ಅಬಿಂದುಕ, ಚವರ್ಗದ ಪಂಚಮಾಕ್ಷರ ಞ ಬಳಕೆಯಾಗಿರುವುದು ಕಂಡುಬಂದಿದೆ. ಇದೊಂದು ಹೊಸಮಾದರಿಯ ಅಧ್ಯಯನವಾಗಿದೆ.

ಕೈಫಿಯತ್ತುಗಳಲ್ಲಿ ದಾಖಲಾದ ಸ್ಥಳನಾಮಗಳೊಂದಿಗೆ ಭಾಷಿಕ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಅಲ್ಲದೆ ಸಂಸ್ಕೃತೀಕರಣ, ಐತಿಹ್ಯ, ಪುರಾಣ ಸ್ಥಳಗಳೊಂದಿಗೆ ಬೆಸೆದದ್ದು ಕಂಡುಬಂದಿದೆ.

ವೀರ, ಮಾಸ್ತಿಗಲ್ಲುಗಳ ಹೆಸರುಗಳೂ ಸ್ಥಳಗಳಿಗೆ ಆರೋಪಿತವಾಗಿವೆ. ಆ ಮೂಲಕ ಸಂಸ್ಕೃತಿಯ ಚರಿತ್ರೆಯನ್ನು ಅನಾವರಣಗೊಳಿಸುತ್ತವೆಂಬುದು ತಿಳಿದು ಬಂದಿದೆ. ಅಲ್ಲದೇ ದ್ವಿಭಾಷಿಕ ವಲಯದ ರಾಜಕೀಯ ಗಡಿಯನ್ನು ಮೀರಿದ ಅಂದಿನ ಭೌಗೋಳಿಕ ಎಲ್ಲೆಯೊಂದಿಗೆ ಸ್ಥಳನಾಮಗಳು ಪ್ರಾದೇಶಿಕ ಚರಿತ್ರೆಯನ್ನು ಕಟ್ಟಿಕೊಡುವ ಮುಖ್ಯ ಆಕರಗಳಾಗುತ್ತವೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಚರಿತ್ರೆ ಮತ್ತು ಸ್ಥಳನಾಮಗಳ ಮೂಲಕ ಸಂಸ್ಕೃತಿ, ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ತೋರಿಸುವ ಹೊಸ ಅಧ್ಯಯನದ ಮಾದರಿಯನ್ನು ಇಲ್ಲಿ ರೂಪಿಸಲಾಗಿದೆ.

೬. ಗಡಿಭಾಗದ ಸ್ಥಳನಾಮಗಳ ಸಾಮಾಜಿಕ ಅಧ್ಯಯನದಿಂದ ದ್ವಿಭಾಷಿಕ ವಲಯದ ಸಾಮಾಜಿಕ ಜೀವನವನ್ನು ತೆಲುಗು ಮತ್ತು ಕನ್ನಡ ಮಿಶ್ರಿತ ಸಾಂಸ್ಕೃತಿಕ ಜೀವನವೆಂಬುದನ್ನು ಕಂಡುಕೊಳ್ಳಲಾಗಿದೆ. ಇಲ್ಲಿ ವಾಸಿಸುವ ಜನರು ಎರಡೂ ಭಾಷೆಯನ್ನು ಬಲ್ಲವರಾಗಿದ್ದು, ಸ್ಥಳನಾಮವನ್ನು ಉಚ್ಚರಿಸುವ ಬಗೆಯನ್ನು ಕಂಡುಕೊಳ್ಳಲಾಗಿದೆ. ಈ ಭಾಗದ ಅಕ್ಷರಸ್ಥ ಮೇಲ್ವರ್ಗ ಮತ್ತು ಅಕ್ಷರಸ್ಥ ಕೆಳವರ್ಗದವರು ಸ್ಥಳನಾಮವನ್ನು ಉಚ್ಚರಿಸುವ ರೀತಿಯಲ್ಲಿ ಅಷ್ಟಾಗಿ ವ್ಯತ್ಯಾಸವಿಲ್ಲ. ಅಂತೆಯೇ ಅನಕ್ಷರಸ್ಥ ಮೇಲ್ವರ್ಗ ಮತ್ತು ಕೆಳವರ್ಗದವರು ಸ್ಥಳನಾಮಗಳನ್ನು ಉಚ್ಚರಿಸುವಲ್ಲಿ ಸಾಕಷ್ಟು ವ್ಯತ್ಯಾಸವಿರುವುದನ್ನೂ ಕಂಡುಕೊಳ್ಳಲಾಗಿದೆ. ಇತ್ತೀಚೆಗೆ ಕೆಳಸಮುದಾಯಗಳು ಇಂಗ್ಲೀಶೀಕರಣಗೊಂಡ ಮತ್ತು ಹ್ರಸ್ವೀಕರಣಗೊಂಡ ಸ್ಥಳನಾಮಗಳನ್ನು ಉಚ್ಚರಿಸುವಂತೆ ಪ್ರೇರಣೆಗೊಂಡಿರುವುದೂ ಅಲ್ಲಲ್ಲಿ ಕಂಡುಬರುತ್ತದೆ.

ಬಹುಮುಖ್ಯವಾಗಿ, ಆಂಧ್ರದಿಂದ ವಲಸೆಬಂದಂತಹ ಸಮುದಾಯಗಳು ಕರ್ನಾಟಕದ ಗಡಿಗುಂಟ ಕ್ಯಾಂಪುಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ಕ್ಯಾಂಪುಗಳಿಗೆ ಅವರು ತೆಲುಗು ಮೂಲದ ಹೆಸರುಗಳನ್ನು ಕರೆದುಕೊಂಡಿದ್ದಾರೆ. ಅಲ್ಲದೇ ಕನ್ನಡ ಸ್ಥಳನಾಮಗಳನ್ನೂ ತೆಲುಗು ಪದ ರಚನೆಯ ನಿಯಮದಂತೆ ಉಚ್ಚರಿಸುತ್ತಾರೆಂಬುದು ತಿಳಿದುಬಂದಿದೆ.

ನಿರ್ವಸಿತ ಸ್ಥಳನಾಮಗಳ ಮೂಲಕವೂ ಸಂಸ್ಕೃತಿಯ ಅಂಶಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಅಲ್ಲದೇ ಗ್ರಾಮನಾಮಗಳ ಉತ್ತರ ಪದಗಳು ಸಮುದಾಯಗಳ ನೆಲೆಸುವಿಕೆಯ ಮತ್ತು ಅವರ ಸಂಸ್ಕೃತಿಯ ಕೆಲವು ಅಂಶಗಳನ್ನು ನೀಡುತ್ತವೆ ಎಂಬುದನ್ನು ಇಲ್ಲಿ ಪ್ರಮುಖವಾಗಿ ಗಮನಿಸಲಾಗಿದೆ.

ಕರ್ನಾಟಕದ ಉಳಿದ ಪ್ರದೇಶಗಳಂತೆ ಗಡಿಭಾಗದಲ್ಲಿಯೂ ಅನೇಕ ಸ್ಥಳನಾಮಗಳು ಸಂಸ್ಕೃತೀಕರಣಗೊಂಡಿವೆ. ಅಂತೆಯೇ ದೇಶ್ಯೀಕರಣಕ್ಕೆ ಬಂದಿವೆ. ಸಂಸ್ಕೃತ ಭಾಷೆಯು ಗಡಿಭಾಗದ ಗ್ರಾಮಗಳಲ್ಲಿ ಹೆಚ್ಚು ಪ್ರಭಾವ ಬೀರಿದೆಯೆಂಬುದು ತಿಳಿದುಬಂದಿದೆ.

ಉರ್ದು ಮತ್ತು ಇಂಗ್ಲಿಶ್ ಭಾಷೆಯ ಪ್ರಭಾವ ಬಳ್ಳಾರಿ - ಕರ್ನೂಲು ಗಡಿಭಾಗದಲ್ಲಿ ಹೆಚ್ಚಾಗಿ ಆಗಿಲ್ಲದಿರುವುದು ಕಂಡುಬಂದಿದೆ. ಇದರ ಪ್ರಮಾಣ ಕಡಿಮೆ. ಆದರೆ ಸಮಕಾಲೀನ ರಾಜಕಾರಣದ ವ್ಯಕ್ತಿನಾಮಗಳು ಸ್ಥಳನಾಮಗಳಿಗೆ ನಿರ್ದೇಶನಗೊಳ್ಳುತ್ತಿರುವುದು ಇತ್ತೀಚೆಗೆ ಕಂಡುಬರುತ್ತಿದೆ.

ಆಧುನಿತೆಯ ಪ್ರಭಾವದಿಂದ ಸ್ಥಳಗಳಿಗೆ ಇಡುವ ಹೆಸರುಗಳು ಇತ್ತೀಚೆಗೆ ಬದಲಾಗುತ್ತಿವೆ. ಕೈಗಾರಿಕೀಕರಣ, ಜಾಗತೀಕರಣ, ಸಮಕಾಲೀನ ರಾಜಕಾರಣದ ಪ್ರಭಾವ ಈ ಬದಲಾವಣೆಗೆ ಪ್ರೇರಣೆಯಾಗಿರುವುದು ಕಂಡು ಬಂದಿದೆ.

ಇವು ಈ ಅಧ್ಯಯನದ ಮುಖ್ಯ ಫಲಿತಗಳಾಗಿವೆ.

**೮.೩. ಅಧ್ಯಯನದ ಸಫಲತೆ ಮತ್ತು ಮಿತಿಗಳು**

೧. ಆಂಧ್ರ ಕರ್ನಾಟಕ ಗಡಿಭಾಗದ ಸ್ಥಳನಾಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಬಳ್ಳಾರಿ, ಸಿರುಗುಪ್ಪ, ಆಲೂರು, ಆದವಾನಿ ನಾಲ್ಕು ತಾಲ್ಲೂಕುಗಳನ್ನಿಟ್ಟುಕೊಂಡು ಸಾಧ್ಯವಾದಷ್ಟು ಉದ್ದೇಶಗಳಿಗನುಗುಣವಾಗಿ ಅಧ್ಯಯನವನ್ನು ಮಾಡಿದ್ದೇನೆ. ಇದು ಸಮಗ್ರವಲ್ಲ ಎಂಬುದೂ ತಿಳಿದಿದೆ. ಬೀದರ್‌ನಿಂದ ಚಿತ್ರದುರ್ಗದವರೆಗಿನ ಗಡಿಭಾಗವನ್ನು ಅಧ್ಯಯನದ ಭಾಗವನ್ನಾಗಿ ಎತ್ತಿಕೊಂಡಿಲ್ಲ. ಈ ವಿಸ್ತೃತ ಗಡಿಭಾಗದಿಂದ ಗುಲ್ಬರ್ಗಾ ಜಿಲ್ಲೆಯ ಗಡಿಭಾಗದಲ್ಲಿ ಉರ್ದು - ತೆಲುಗು ಪ್ರಭಾವ, ಬೀದರ್ ಗಡಿಯಲ್ಲಿ ಮರಾಠಿ - ಉರ್ದು - ತೆಲುಗು ಪ್ರಭಾವವನ್ನೂ ಗುರುತಿಸಲು ಸಾಧ್ಯವಿದೆ.

೨. ಕರ್ನಾಟಕದ ವ್ಯಾಪಕ ಸ್ಥಳನಾಮಗಳ ಅಧ್ಯಯನ ಕೈಗೊಂಡಲ್ಲಿ ಮೌಖಿಕ ಪರಂಪರೆಯ ಹಾಗೂ ಸಾಮಾಜಿಕ ಆಯಾಮಗಳ ಕಡೆಗೆ ಮತ್ತಷ್ಟೂ ಸೂಕ್ಷ್ಮ ಅಧ್ಯಯನವನ್ನು ಮಾಡಬಹುದು.

೩. ಸಾಮಾಜಿಕ ಅಧ್ಯಯನದಲ್ಲಿ ವಾರ್ಗಿಕಗಳ ಮುಖೇನ ಸ್ಥಳನಾಮಗಳ ಸಾಮಾಜಿಕ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಸಂಕ್ಷಿಪ್ತ ಚರ್ಚೆ ಮಾಡಿದ್ದೇನೆ. ಅಧ್ಯಯನ ಕ್ಷೇತ್ರ ಸೀಮಿತವಾಗಿದ್ದರಿಂದ ಈ ಮಿತಿ ಒದಗಿದೆ. ಕರ್ನಾಟಕದಾದ್ಯಂತ ದೊರೆಯುವ ಸ್ಥಳನಾಮ ವಾರ್ಗಿಕಗಳಿಂದ ವ್ಯಾಪಕ ಅಧ್ಯಯನ ಮಾಡಿದರೆ ವಿಸ್ತೃತ ಚರ್ಚೆ ಮಾಡಲು ಅನುಕೂಲವಾಗುತ್ತದೆ.

೪. ಸ್ಥಳನಾಮಗಳನ್ನು ಚರಿತ್ರೆಯೊಂದಿಗೆ ಚರ್ಚಿಸುವಾಗ ಸಾಧ್ಯವಾದಷ್ಟು ಹೊಸ ಮಾದರಿಯನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಅಂತೆಯೇ ಮೌಖಿಕ ಪರಂಪರೆ, ಸಾಮಾಜಿಕ ಅಧ್ಯಯನದಲ್ಲಿಯೂ ಅನೇಕ ಹೊಸ ಮಾದರಿಯನ್ನು ಅನುಸರಿಸಲಾಗಿದೆ. ಈ ಹೊಸ ಮಾದರಿಯು ಈವರೆಗಿನ ಅಧ್ಯಯನಗಳಿಗಿಂತ ಭಿನ್ನವಾಗಿದೆ. ಅಲ್ಲದೇ ಇದು ಕನ್ನಡಕ್ಕೆ ಹೊಸದೆಂದು ಭಾವಿಸುತ್ತೇನೆ.

೫. ಈ ನಿಬಂಧದಲ್ಲಿ ಮುಖ್ಯವಾಗಿ ಸ್ಥಳನಾಮ ನಿಘಂಟನ್ನು ಪ್ರಜ್ಞಾಪೂರ್ವಕವಾಗಿಯೇ ದಾಖಲಿಸಿಲ್ಲ. ಇದು ಈಗಾಗಲೇ ದಾಖಲಾಗಿರುವ ನಿಘಂಟುಗಳಿಗಿಂತ ಭಿನ್ನವಾಗಿರದು ಅನಿಸಿದ ಕಾರಣ ಅಗತ್ಯವೆನಿಸಿದ ಕಡೆ ಆಯಾ ಅಧ್ಯಾಯಗಳಲ್ಲಿ ಸಂಬಂಧಿಸಿದ ಸ್ಥಳನಾಮ ನಿಷ್ಪತ್ತಿಯನ್ನು ಚರ್ಚಿಸುವ ಪ್ರಯತ್ನವನ್ನು ಮಾಡಿದ್ದೇನೆ.

೬. ಈ ನಿಬಂಧದಲ್ಲಿ ರೂಪಿಸಿದ ಕೆಲವು ಹೊಸ ಮಾದರಿಗಳು ಪಾರಂಪರಿಕ ಅಧ್ಯಯನದಿಂದ ಭಿನ್ನವಾಗಿ ತೋರಿಬಂದರೂ, ಒಂದಲ್ಲ ಒಂದು ಬಗೆಯಲ್ಲಿ ಸಂಬಂಧವಿರುವಂತೆ ನೋಡಲಾಗಿದೆ. ಅಲ್ಲದೇ ಸಾಧ್ಯವಾದಷ್ಟೂ ಹೊಸ ಮಾದರಿಗಳಿಗೆ ವ್ಯಾಪಕ ಚರ್ಚೆಯನ್ನು ಮಾಡಲು ಪ್ರಯತ್ನಿಸಿದ್ದೇನೆ. ಈ ಚರ್ಚೆ ಸಮಗ್ರವಲ್ಲ. ಮುಂದಿನ ಅಧ್ಯಯನಕಾರರಿಗೆ ಈ ಮಾದರಿಗಳು ಸಮಗ್ರ ಅಧ್ಯಯನಕ್ಕೆ ದಾರಿಮಾಡುತ್ತವೆಂಬುದು ನನ್ನ ಅಭಿಪ್ರಾಯ.

**೮.೩. ಮುಂದಿನ ಅಧ್ಯಯನದ ಸುಳಿವುಗಳು**

೧. ಆಂಧ್ರ - ಕರ್ನಾಟಕದ ಸಮಗ್ರ ಗಡಿಯನ್ನು ಅನುಲಕ್ಷಿಸಿ ಸ್ಥಳನಾಮಗಳ ಅಧ್ಯಯನ ಮಾಡಬಹುದು. ಅಂತೆಯೇ ಮರಾಠಿ, ಉರ್ದು, ತುಳು, ತಮಿಳು ಗಡಿಭಾಗಗಳೊಂದಿಗೆ ಅಧ್ಯಯನ ಮಾಡುವ ಅಗತ್ಯವಿದೆ.

೨. ಮೌಖಿಕ ಪರಂಪರೆ ಮತ್ತು ಸ್ಥಳನಾಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಒಂದು ಪ್ರತ್ಯೇಕ ಅಧ್ಯಯನ ಮಾಡಬಹುದು. ಅಲ್ಲದೇ ಅಖಂಡ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಮೌಖಿಕ ಆಕರಗಳಾದ ಒಡಪು, ಒಗಟು, ಗಾದೆ, ಕಥೆ, ಹಾಡು, ಒಡಬು, ಐತಿಹ್ಯ, ಪುರಾಣ, ಜಾನಪದ ರಂಗಭೂಮಿಗಳ ಮೂಲಕ ಒಂದೊಂದು ಪ್ರಕಾರವನ್ನೇ ಇಟ್ಟುಕೊಂಡು ಪ್ರತ್ಯೇಕ ಅಧ್ಯಯನ ಮಾಡಬಹುದು.

೩. ಚರಿತ್ರೆ ಮತ್ತು ಸ್ಥಳನಾಮಗಳೊಂದಿಗೆ ಭಾಷೆಯ ಅವಸ್ಥಾಂತರದ ಕುರುಹುಗಳು' ಎಂಬ ಪ್ರತ್ಯೇಕ ಅಧ್ಯಯನ ಮಾಡಬಹುದು. ಅಲ್ಲದೇ ಕರ್ನಾಟಕದ ಶಾಸನೋಕ್ತ ಸ್ಥಳನಾಮಗಳಲ್ಲಿ ಭಾಷೆಯ ಚಾರಿತ್ರಿಕ ಬೆಳೆವಣಿಗೆ, ಕರ್ನಾಟಕದ ಸ್ಥಳನಾಮಗಳ ಪ್ರತಿನಾಮಕರಣ, ಕರ್ನಾಟಕದ ಕೈಫಿಯತ್ತುಗಳು ಮತ್ತು ಸ್ಥಳನಾಮಗಳು, ಮಾಸ್ತಿ, ವೀರಗಲ್ಲುಗಳು ಮತ್ತು ಸ್ಥಳನಾಮಗಳು ಹೀಗೆ ಪ್ರತ್ಯೇಕ ಅಧ್ಯಯನವನ್ನು ಮಾಡಲು ಅವಕಾಶವಿದೆ.

೪. ಸ್ಥಳನಾಮಗಳ ಸಾಮಾಜಿಕ ಅಧ್ಯಯನ' ಎಂಬ ಪ್ರತ್ಯೇಕ ಅಧ್ಯಯನ ಮಾಡಬಹುದು. ಅಲ್ಲದೇ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು, ಸಂಸ್ಕೃತೀಕರಣ, ದೇಶ್ಯೀಕರಣ, ವ್ಯಕ್ತಿಯಾಧಾರಿತ, ವಲಸೆ, ಅರೆಶಾಶ್ವತ, ಅಲೆಮಾರಿ ಸ್ಥಳನಾಮಗಳು, ಸ್ಥಳನಾಮ ವಾರ್ಗಿಕ, ನಿರ್ದಿಷ್ಟಗಳು ಸಮುದಾಯ ಅಧ್ಯಯನದ ಕುರುಹು, ಅಖಂಡ ಕನ್ನಡನಾಡಿನ ನಿರ್ವಸತಿ, ನಿರ್ವಸಿತ ಸ್ಥಳನಾಮಗಳು ಹೀಗೆ ಒಂದೊಂದು ಅಂಶವನ್ನಿಟ್ಟುಕೊಂಡು ಪ್ರತ್ಯೇಕ ಅಧ್ಯಯನವನ್ನು ಮಾಡಲು ಅವಕಾಶವಿದೆ.

೫. ಈ ನಿಬಂಧದಲ್ಲಿರುವ ಮೌಖಿಕ ಪರಂಪರೆ, ಚರಿತ್ರೆ, ಸಾಮಾಜಿಕ ಅಧ್ಯಯನಗಳ ಒಂದೊಂದು ಉಪ ಶೀರ್ಷಿಕೆಗಳಿಂದ ಪ್ರತ್ಯೇಕ ಅಧ್ಯಯನ ಮಾಡಲು ಸಾಧ್ಯವಿದೆ. ಆದರೆ ಅಧ್ಯಯನ ಯಾವುದೇ ಒಂದು ಭೂಭಾಗಕ್ಕೆ ಸೀಮಿತ ಮಾಡಿಕೊಳ್ಳಬಾರದು. ಸಮಗ್ರ ಕರ್ನಾಟಕ, ಸಮಗ್ರ ಗಡಿ ಪ್ರದೇಶವನ್ನಿಟ್ಟುಕೊಂಡು ಮಾಡಿದರೆ ಅಧ್ಯಯನ ವ್ಯಾಪಕ ಚರ್ಚೆಗೆ ಒಳಗಾಗುತ್ತದೆ.

# ಅನುಬಂಧ

* ಪ್ರಶ್ನಾವಳಿ
* ಆಂಧ್ರ - ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳ ಅಕಾರಾದಿಸೂಚಿ
    ೧. ಆಲೂರು ತಾಲ್ಲೂಕು - ALR
    ೨. ಆದವಾನಿ ತಾಲ್ಲೂಕು - ADN
    ೩. ಬಳ್ಳಾರಿ ತಾಲ್ಲೂಕು - BLR
    ೪. ಸಿರುಗುಪ್ಪ ತಾಲ್ಲೂಕು - SRP
* ವಕ್ತೃಗಳ ಅಕಾರಾದಿಸೂಚಿ
* ಗ್ರಂಥಸೂಚಿ
    ೧. ಕನ್ನಡ
    ೨. ತೆಲುಗು
    ೩. ಇಂಗ್ಲಿಷ್
* ನಿಘಂಟುಗಳು
* ಶಾಸನ ಸಂಪುಟಗಳು
* ಪತ್ರಿಕೆಗಳು

# ಪ್ರಶ್ನಾವಳಿ

**ಮಾಹಿತಿದಾರರ ವಿವರ**

೧. ಹೆಸರು: ೨. ವಯಸ್ಸು: ೩. ಕೆಲಸ:

೪. ಸದ್ಯ ವಾಸವಿರುವ ಸ್ಥಳ:

೫. ಹುಟ್ಟೂರು:

೬. ಹುಟ್ಟೂರಿನಲ್ಲಿ ಕಳೆದ ಅವಧಿ:

೭. ಸಂಪರ್ಕ ವಿಳಾಸ:

**ಊರಿನ ಮಾಹಿತಿ**

೧. ಊರಿನ ಹೆಸರು: ೨. ತಾಲ್ಲೂಕು: ಜಿಲ್ಲೆ:

೩. ಊರಿನ ಅಧಿಕೃತ ಹೆಸರು:

೪. ಇತರ ರೂಪಗಳು:

೫. ಹ್ರಸ್ವ ರೂಪಗಳು: (ಇದ್ದರೆ)

೬. ಹಳೆಯ ಹೆಸರುಗಳು:

೭. ಗ್ರಾಮದೇವತೆ:

೮. ಪ್ರಾಕೃತಿಕ ಪರಿಸರ:

೯. ಊರಿನ ಮುಖ್ಯ ಹಬ್ಬಗಳು:

೧೦. ಊರಿಗೆ ಆ ಹೆಸರು ಬಂದದ್ದಕ್ಕೆ ಇರುವ ಕಥೆ:

೧೧. ಊರಿನ ಇತಿಹಾಸ:

೧೨. ಊರಿನ ಹೆಸರೊಡನೆ ಬೆರೆತ ಗಾದೆ, ನುಡಿಗಟ್ಟುಗಳು, ಒಗಟು, ಒಡಪು ಇತ್ಯಾದಿ:

**ಸೂಚನೆಗಳು :**

೧. ಅಧಿಕೃತ ರೂಪ ಎಂದರೆ ಕಛೇರಿ, ಶಾಲೆ, ಬ್ಯಾಂಕು, ಫಲಕಗಳಲ್ಲಿ ಬಳಕೆಯಾಗುವ ರೂಪ.

೨. ಇತರ ರೂಪಗಳು: ಉಚ್ಚಾರಣೆಯಲ್ಲಿರುವ ಇತರ ರೂಪಗಳು. ಉದಾ: ದಾವಣಗೆರೆ, ಡಾವಣಗೆರೆ, ದಾವಣಗೇರಿ, ಗುಲಬರ್ಗಾ, ಕಲಬುರ್ಗಿ, ಕಲ್ಬುರ್ಗಿ

೩. ಹ್ರಸ್ವರೂಪ: ಹೆಗ್ಗಡದೇವನ ಕೋಟೆಗೆ ಹೆಚ್ .ಡಿ.ಕೋಟೆ, ಕೃಷ್ಣರಾಜ ಪೇಟೆಗೆ ಕೆ.ಆರ್ .ಪೇಟೆ ಎನ್ನುವುದು.

೪. ಹಳೆಯ ಹೆಸರು: ಶಾಂತಿನಗರ ಎಂದು ಈಗ ಹೆಸರಿರುವ ಊರಿನ ಹಳೆಯ ಹೆಸರು ಸೂಳೆಕೆರೆ. ನ್ಯಾಮತಿಯ ಹಳೆಯ ಹೆಸರು ನೆಲಪತ್ರಿ.

೫. ಪ್ರಾಕೃತಿಕ ಪರಿಸರ: ಊರಿನ ಸುತ್ತ ಇರುವ ನದಿ, ಕೆರೆ, ದೇವಸ್ಥಾನ, ಕೋಟೆ, ಕಣಿವೆ, ಮುಖ್ಯ ಬೆಳೆ ಇವುಗಳ ವಿವರ.

---

ದಯವಿಟ್ಟು ವಿವರಗಳನ್ನು ಬರೆಯಲು ಜಾಗ ಸಾಲದಿದ್ದರೆ ಬೇರೆ ಹಾಳೆ ಬಳಸಿ

## ಆಲೂರು ತಾಲ್ಲೂಕು - ALR

೧. ಅಂಗಸಕಲ್ಲು
೨. ಅಮೃತಾಪುರ
೩. ಅರಿಕೇರಿ
೪. ಆಲೂರು
೫. ಆಸ್ಪರಿ
೬. ಇಂಗಳದಹಾಳ್
೭. ಉಪ್ಪಾರಹಾಳ್ (ಬೇ.ಗ್ರಾ)
೮. ಎಲ್ಲಾರ್ತಿ
೯. ಏರೂರು
೧೦. ಓಬಳಾಪುರ (ಬೇ.ಗ್ರಾ)
೧೧. ಕಮ್ಮರಚೇಡು
೧೨. ಕರಡಿಗುಡ್ಡಂ
೧೩. ಕಾತರಕಿ
೧೪. ಕಾಜಿಪುರಂ
೧೫. ಕಾಮನಹಾಳ್
೧೬. ಕುಂಡನಗುರ್ತಿ
೧೭. ಕುರುಕುಂದೆ
೧೮. ಕುರುವಳ್ಳಿ
೧೯. ಕುರುಳೇಹಳ್ಳಿ
೨೦. ಕೊಕ್ಕರಚೇಡು
೨೧. ಕೋಗಿಲತೋಟ
೨೨. ಗುಮ್ಮನೂರು
೨೩. ಗೂಳ್ಯಂ
೨೪. ಗಜ್ಜೆಹಳ್ಳಿ
೨೫. ಗೊನೆಹಾಳ್
೨೬. ಚಾಗಿ
೨೭. ಚಿಂತಕುಂಟೆ
೨೮. ಚಿಗಳಿ
೨೯. ಚಿನ್ನಗೊನೆಹಾಳ್
೩೦. ಚಿನ್ನಹರಿವಾಣ
೩೧. ಚಿನ್ನಹ್ಯಾಟ
೩೨. ಚಿನ್ನಹೋತೂರು
೩೩. ಚಿಪ್ಪಗಿರಿ
೩೪. ಚಿರುಮನದೊಡ್ಡಿ
೩೫. ಚೊಕ್ಕನಹಳ್ಳಿ
೩೬. ಛತ್ರಗುಡಿ (ಬೇ.ಗ್ರಾ)
೩೭. ಜಂಗಮರಹೊಸಹಳ್ಳಿ
೩೮. ಜೋಹರಾಪುರಂ
೩೯. ಧಣಾಪುರಂ
೪೦. ತಂಗರಡೋಣೆ
೪೧. ತ್ಸಾಕಿಬಂಡ
೪೨. ತಿಮ್ಮಾಪುರಂ
೪೩. ತುಂಬಳಬೀಡು
೪೪. ತುರ್ವಗಲ್ಲು
೪೫. ದೇಗುಲದಹಾಳ್
೪೬. ದೌಲತಾಪುರ
೪೭. ನಗರಡೋಣೆ
೪೮. ನಗರೂರು
೪೯. ನಾಂಚರ್ಲ
೫೦. ನಾಗನಾಥನ ಹಳ್ಳಿ
೫೧. ನಾರಾಯಣಪುರ
೫೨. ನಿಟ್ರವಟ್ಟಿ
೫೩. ನೆರಣಿಕಿ
೫೪. ನೇಮಕಲ್ಲು
೫೫. ಪಚ್ಚರಹಳ್ಳಿ
೫೬. ಪೆದ್ದಗೊನೆಹಾಳ್
೫೭. ಪೆದ್ದಹ್ಯಾಟ
೫೮. ಪೆದ್ದ ಹೋತೂರು
೫೯. ಬಂಟನಹಾಳ್
೬೦. ಬಂತುಕುಂಟೆ (ನಿರ್ವಸಿತ)
೬೧. ಬಲ್ಲೂರು
೬೨. ಬಾಪುರಂ
೬೩. ಬಿಣಗೇರಿ
೬೪. ಬಿಡಾಲಗುಡ್ಡ (ಬೇ.ಗ್ರಾ)
೬೫. ಬಿಳೇಹಾಳ್
೬೬. ಬೊಳುಗೋಟಿ
೬೭. ಬೊಮ್ಮಗುಂಡನಹಳ್ಳಿ
೬೮. ಮಡ್ಡಿಲಿಂಗದಹಳ್ಳಿ
೬೯. ಮಣೇಕುರ್ತಿ
೭೦. ಮರಕಟ್ಟು
೭೧. ಮಲ್ಲಿಕಾರ್ಜುನಹಳ್ಳಿ
೭೨. ಮಾಚನೂರು
೭೩. ಮಾರಲುಮಡಿಕೆ
೭೪. ಮೀನಗೊಂದಿ (ಬೇ.ಗ್ರಾ)
೭೫. ಮುಗುಮನಗೊಂದಿ
೭೬. ಮೂಸಾನಹಳ್ಳಿ

೭೭. ಮದೆಹಾಳ್
೭೮. ಮೊಲಗಹಳ್ಳಿ
೭೯. ರಾಮದುರ್ಗ
೮೦. ಲಿಂಗದಹಳ್ಳಿ
೮೧. ವಂದವಾಗಿಲಿ
೮೨. ವಿರುಪಾಪುರಂ
೮೩. ಶಂಕರಬಂಡೆ
೮೪. ಶ್ರೀರಾಮನಗರ
೮೫. ಸಮ್ಮತಗೇರಿ
೮೬. ಸಿದ್ಧರಹಾಳ್
೮೭. ಸಿದ್ದಾಪುರ
೮೮. ಸಿರಿಗಾಪುರ
೮೯. ಸುಳುವಾಯಿ
೯೦. ಹರ್ದಗೇರಿ
೯೧. ಹಲಿಗೇರಿ
೯೨. ಹತ್ತಿ ಬೆಳಗಲ್ಲು
೯೩. ಹಾಲಹರಿವಿ
೯೪. ಹುಳೇಬೀಡು
೯೫. ಹೆಬ್ಬಟಂ
೯೬. ಹೊನ್ನೂರು
೯೭. ಹೊಳಲಗುಂದ
೯೮. ಹೊಸಪೇಟೆ
೯೯. ಹೊಸಪೇಟೆ ತಾಂಡ
೧೦೦. ಹೊನ್ನೂರು ಕ್ಯಾಂಪು

## ಆದವಾನಿ ತಾಲ್ಲೂಕು - ADN

೧. ಅಗಸನೂರು
೨. ಅಗಸಲದಿನ್ನೆ
೩. ಅರೇಕಲ್ಲು
೪. ಅರ್ಲೇಬಂಡೆ
೫. ಆದೋನಿ
೬. ಇಸ್ವಿ
೭. ಈರನಗಲ್ಲು
೮. ಈಚಲಹಾಳ್
೯. ಉಪ್ಪಾರಹಾಳ್
೧೦. ಉರುಕುಂದೆ
೧೧. ಎಂಡಪಲ್ಲಿ
೧೨. ಎಡವಳ್ಳಿ
೧೩. ಎರಿಗೇರಿ
೧೪. ಕಗ್ಗಲ್ಲು
೧೫. ಕಂದಕೂರು
೧೬. ಕಡಿದೊಡ್ಡಿ
೧೭. ಕಡೆತೋಟ
೧೮. ಕಲ್ಲುಬಾವಿ
೧೯. ಕಲ್ಲುಕುಂಟೆ
೨೦. ಕಳವಲಗುಂಡು
೨೧. ಕಪತಿ
೨೨. ಕರಣಿ
೨೩. ಕಾಚಾಪುರ
೨೪. ಕಾತರಕಿ
೨೫. ಕಾರ್ಟೇದೊಡ್ಡಿ
೨೬. ಕಾಮವರಂ
೨೭. ಕಾಮನದೊಡ್ಡಿ
೨೮. ಕುಂಟನಹಾಳ್
೨೯. ಕುಂಬಲನೂರು
೩೦. ಕುಪ್ಪಗಲ್ಲು
೩೧. ಕೊಂಡಾಪುರ. ಎಸ್.
೩೨. ಕೊಂಡಾಪುರಂ. ಕೆ.
೩೩. ಕೌತಾಳಂ
೩೪. ಕೌತಾಳಂ ರೌಡೂರು
೩೫. ಗಣೇಕಲ್ಲು
೩೬. ಗವಿಗಟ್ಟು
೩೭. ಗುಡಿಕಂಬಾಲಿ
೩೮. ಗುರ್ರಲದೊಡ್ಡಿ
೩೯. ಗೋನಬಾವಿ
೪೦. ಗೋತುಲದೊಡ್ಡಿ
೪೧. ಗೌಡಗಲ್ಲು
೪೨. ಚಿಂತಕುಂಟೆ
೪೩. ಚಿನ್ನಕಡಬೂರು
೪೪. ಚಿನ್ನತುಂಬಳಂ
೪೫. ಚಿರ್ತನಪಲ್ಲೆ
೪೬. ಚಿರ್ತಪಲ್ಲೆ
೪೭. ಚೂಡಿ
೪೮. ಜರ್ನಲದಿನ್ನೆ
೪೯. ಜಂಪಾಪುರಂ
೫೦. ಜಾಲಿಬೆಂಚಿ
೫೧. ತಾರಾಪುರಂ
೫೨. ತಿಪ್ಪಲದೊಡ್ಡಿ
೫೩. ತುಂಬಿಗನೂರು
೫೪. ಥೋವಿ
೫೫. ದಯ್ಯಾಲಗುಡ್ಡ
೫೬. ದಿಬ್ಬನದೊಡ್ಡಿ
೫೭. ದಿಬ್ಬನಕಲ್ಲು
೫೮. ದೇವರಬೆಟ್ಟ
೫೯. ದೊಂಬಲದಿನ್ನೆ
೬೦. ದೊಡ್ಡನಕೇರಿ
೬೧. ನದಿಚ್ಯಾಗಿ
೬೨. ನವಿಲಕಲ್ಲು
೬೩. ನಾರಾಯಣಪುರ
೬೪. ನೆಟ್ಟೆಕಲ್ಲು
೬೫. ನೆಲಕೋಸಿಗೆ
೬೬. ಪಲ್ಲಿಪಾಡು
೬೭. ಪರ್ವತಾಪುರಂ
೬೮. ಪದಲಕುಂಟ
೬೯. ಪಾಂಡವಗಲ್ಲು
೭೦. ಪೀಕಲಬೆಟ್ಟ
೭೧. ಪೀಸಲಬಂಡ
೭೨. ಪುಟ್ಟಕುಂಟ
೭೩. ಪೆಂಡೆಕಲ್ಲು
೭೪. ಪೆದ್ದತುಂಬಳಂ
೭೫. ಪೆದ್ದಹರಿವಾಣಂ
೭೬. ಪೆದ್ದಕಡಬೂರು
೭೭. ಬಂಟಕುಂಟೆ
೭೮. ಬದನೆಹಾಳ್

೭೯. ಬಲ್ಲೇಕಲ್ಲು
೮೦. ಬಸಲದೊಡ್ಡಿ
೮೧. ಬಸಾಪುರಂ - ೧
೮೨. ಬಸಾಪುರಂ - ೨
೮೩. ಬಸರಕೋಡು
೮೪. ಬಳದೂರು
೮೫. ಬಾಪುರಂ
೮೬. ಬಾಪುಲದೊಡ್ಡಿ
೮೭. ಬೆಳಗಲ್ಲು
೮೮. ಬೈಚಿಗೇರಿ
೮೯. ಬೊಮ್ಮಪಲ್ಲೆ
೯೦. ಭಟ್ಟಲಬೊಮ್ಮಲಪುರಂ
೯೧. ಮದಿರೆ - ೧
೯೨. ಮದಿರೆ -೨
೯೩. ಮಲ್ಲನಹಟ್ಟಿ
೯೪. ಮಂಡಗಿರಿ
೯೫. ಮಂತ್ರಿಕಿ
೯೬. ಮುಚ್ಚಗಿರಿ
೯೭. ಮೈಕಡೋಣೆ
೯೮. ಮೈಲಿಂಗನೂರು
೯೯. ರಂಗಾಪುರಂ
೧೦೦. ರಾಮಾಪುರಂ
೧೦೧. ಲಿಂಗನದಿನ್ನೆ
೧೦೨. ವಂದಗಲ್ಲು
೧೦೩. ವಲ್ಲೂರು
೧೦೪. ವೀರಲದಿನ್ನೆ
೧೦೫. ವಿರುಪಾಪುರಂ
೧೦೬. ವೆಂಗಲಾಪುರಂ
೧೦೭. ಸಜ್ಜಲಗುಡ್ಡ
೧೦೮. ಸಲಕಲಕೊಂಡ
೧೦೯. ಸಂತೇಕೂಡ್ಲೂರು
೧೧೦. ಸಾಂತನೂರು
೧೧೧. ಸಾಂಬಗಲ್ಲು
೧೧೨. ಸುಲ್ತಾನಪುರ
೧೧೩. ಸೂಳೆಕೆರೆ
೧೧೪. ಹನವಾಳ್
೧೧೫. ಹಾಲ್ವಿ
೧೧೬. ಹುಲಿಕಣವೆ
೧೧೭. ಹೂವನೂರು
೧೧೮. ಹೊಸಳ್ಳಿ. ಜಿ.

## ಬಳ್ಳಾರಿ ತಾಲ್ಲೂಕು - BLR

೧. ಅಮರಾಪುರ
೨. ಅಲ್ಲಿಪುರ
೩. ಅಸುಂಡಿ
೪. ಅಂದ್ರಾಳ
೫. ಇಬ್ರಾಹಿಮಪುರ
೬. ಏಳುಬೆಂಚಿ
೭. ಒರುವಾಯಿ
೮. ಕಕ್ಕಬೇವೇನಹಳ್ಳಿ
೯. ಕಪ್ಪಗಲ್ಲು
೧೦. ಕಮ್ಮಾರಚೇಡು
೧೧. ಕರಿಚೇಡು
೧೨. ಕರೇಕಲ್ಲು
೧೩. ಕರೇಕಲ್ಲು ವೀರಾಪುರ
೧೪. ಕಲ್ಲುಕಂಬ
೧೫. ಕಲ್ಲುಕುಟಿಗನಹಾಳ
೧೬. ಕಾರ್ಕಲ್‌ತೋಟ
೧೭. ಕ್ಯಾದಿಗಿಹಾಳ
೧೮. ಕುಡುತಿನಿ
೧೯. ಕುಂತನಹಳ್ಳಿ
೨೦. ಕುರುಗೋಡು
೨೧. ಕೆರೆಕೇರಿ
೨೨. ಕೊರ್ಲಗುಂಡಿ
೨೩. ಕೋಳೂರು
೨೪. ಕೊಳಗಲ್ಲು
೨೫. ಗುತ್ತಿನೂರು
೨೬. ಗುಡದೂರು
೨೭. ಗುಗ್ಗರಹಟ್ಟಿ
೨೮. ಗೆನಕಿಹಾಳ
೨೯. ಗೋಟೂರು
೩೦. ಗೊಲ್ಲನಾಗೇನಹಳ್ಳಿ
೩೧. ಗೋಡೆಹಾಳು
೩೨. ಚಗನೂರು
೩೩. ಚನಹಾಳು
೩೪. ಚೆಲ್ಲೆಗುರ್ಕಿ
೩೫. ಚಂದೂರು
೩೬. ಚಿಟಿಗನಹಾಳು
೩೭. ಜಾನಿಕುಂಟ
೩೮. ಜಾಲಿಹಾಳ
೩೯. ಜಾಲಿಬೆಂಚಿ
೪೦. ಜೋಳದರಾಶಿ
೪೧. ತಾಂಬ್ರಹಳ್ಳಿ
೪೨. ತಿಮ್ಮಲಾಪುರ
೪೩. ತೆಗ್ಗಿನಬೂದಿಹಾಳ (ತೆಂಗಿನಬೂದಿಹಾಳ)
೪೪. ತೊಲಮಾಮಿಡಿ (ತೊಲಮಂಡಿ)
೪೫. ದಮ್ಮೂರು
೪೬. ದಮ್ಮೂರುಕಗ್ಗಲ್ಲು
೪೭. ದಾಸರನಾಗೇನಹಳ್ಳಿ
೪೮. ನೆಲ್ಲುಡಿ
೪೯. ಪಟ್ಟಣಸೆರುಗು
೫೦. ಪತ್ರಬೂದಿಹಾಳು
೫೧. ಪರಮದೇವನಹಳ್ಳಿ
೫೨. ಬದನಹಟ್ಟಿ
೫೩. ಬಸರಕೋಡು
೫೪. ಬಳ್ಳಾರಿ
೫೫. ಬಳ್ಳಾರಿ ಗೊನೆಹಳ್ಳಿ (ಬಳ್ಳಾರಿ ಗೋನಾಳ)
೫೬. ಬಾಣಾಪುರ
೫೭. ಬೀಸಳ್ಳಿ (ಬಿಸಲಹಳ್ಳಿ)
೫೮. ಬುರ್ರನಾಯಕನಹಳ್ಳಿ
೫೯. ಬೆಣ್ಣಕಲ್ಲು
೬೦. ಬೆಳಕಲ್ಲು
೬೧. ಬೆಳಗಲ್ಲು
೬೨. ಬೇವಿನಹಳ್ಳಿ
೬೩. ಬೊಮ್ಮನಹಾಳ
೬೪. ಬೊಬ್ಬಕುಂಟ
೬೫. ಬ್ಯಾಲಚಿಂತೆ
೬೬. ಬೈಲೂರು
೬೭. ಭೈರದೇವನಹಳ್ಳಿ
೬೮. ಮಲ್ಲಾಪುರಂ ಎಸ್.
೬೯. ಮುಸ್ತಗಟ್ಟ
೭೦. ಮುಸುಡಿಪುರ
೭೧. ಮಿಂಚೇರಿ
೭೨. ಮೀನಹಳ್ಳಿ
೭೩. ಮುಂಡರಗಿ
೭೪. ಮೋಕಾ
೭೫. ಮೋಕಾಗೊನೆಹಾಳ
೭೬. ಯರಿಂಗಳಗಿ
೭೭. ಯಳಪಿ
೭೮. ಯಳಪಿಕಗ್ಗಲ್ಲು

೭೯. ಯಮ್ಮಿಗನೂರು
೮೦. ಯತ್ತಿನಬೂದಿಹಾಳ
೮೧. ಯರ್ರಗುಡಿ
೮೨. ರಾಯಪುರಂ
೮೩. ರೂಪಿನಗುಡಿ
೮೪. ಲಕ್ಷ್ಮೀಪುರ
೮೫. ಲಿಂಗದೇವನಹಳ್ಳಿ
೮೬. ವಡ್ಡರಹಟ್ಟಿ (ವಡ್ಡಟ್ಟಿ)
೮೭. ವೀರಾಪುರ ಎಚ್.
೮೮. ವೆಣಸೂರು
೮೯. ವೇಣಿವೀರಾಪುರ
೯೦. ಶ್ರೀವಾರ (ಸಿರಿವಾರ)
೯೧. ಶಂಕರಬಂಡ
೯೨. ಸಂಗನಕಲ್ಲು
೯೩. ಸಂಜೀವರಾಯನಕೋಟೆ
೯೪. ಸಿದ್ದಮ್ಮನಹಳ್ಳಿ
೯೫. ಸಿದಿಗನಮೊಲ
೯೬. ಸಿದ್ದರಗುಡ್ಡ
೯೭. ಸಿಂಗದೇವನಹಳ್ಳಿ
೯೮. ಸಿಂದಗೇರಿ
೯೯. ಸಿಂದವಲ
೧೦೦. ಸೋಮಲಾಪುರ
೧೦೧. ಸೋಮಸಮುದ್ರ
೧೦೨. ಹದ್ದಿನಗುಂಡು
೧೦೩. ಹರಗಿನದೋಣ
೧೦೪. ಹಳಕುಂದಿ
೧೦೫. ಹಂದಿಹಾಳ
೧೦೬. ಹಿರೇಹದಳಗಿ
೧೦೭. ಹೊನ್ನಹಳ್ಳಿ

## ಸಿರುಗುಪ್ಪ ತಾಲ್ಲೂಕು - SRP

೧. ಅಕ್ಕತಂಗೇರಹಾಳ (ಎ.ಕೆ.ಹಳ್ಳಿ)
೨. ಅಗಸನೂರು
೩. ಅರಳಿಗನೂರು
೪. ಅಲಬನೂರು
೫. ಇಟ್ಟಿಗಿಹಾಳ
೬. ಇಬ್ರಾಹಿಮಪುರ
೭. ಉತ್ತನಪುರ
೮. ಉದೆಗೊಳಂ
೯. ಉಪ್ಪಾರಹೊಸಹಳ್ಳಿ
೧೦. ಊಳೂರು
೧೧. ಕಲ್ಲುಕುಟಿಗನಹಳ್ಳಿ
೧೨. ಕರ್ಚಿಗನೂರು
೧೩. ಕರೂರು
೧೪. ಕುಡುದ್ರಹಾಳ
೧೫. ಕುರುವಳ್ಳಿ
೧೬. ಕುರಿಗನೂರು
೧೭. ಕೆಸರಕೊಂಡಿ
೧೮. ಕೆಂಚಗಾರ ಬೆಳಗಲ್ಲು (ಕೆ.ಬೆಳಗಲ್ಲು)
೧೯. ಕೆಂಚನಗುಡ್ಡ (ಕೆಂಚನಗಡ್ಡೆ)
೨೦. ಕೊಟ್ಟಲಚಿಂತ
೨೧. ಕೋಟಿಹಾಳು
೨೨. ಕೋಟಿಹಾಳುಸೂಗೂರು (ಕೆ.ಸೂಗೂರು)
೨೩. ಕೊಂಚಿಗೇರಿ
೨೪. ಗಜ್ಜಿಗಿನಹಾಳು
೨೫. ಗುಂಡಿಗನೂರು
೨೬. ಗುಬ್ಬಿಹಾಳು
೨೭. ಗೊಸಬಾಳು
೨೮. ಚಿಕ್ಕಬಳ್ಳಾರಿ
೨೯. ಚನಕನೂರು
೩೦. ತಸಲಕೂಡ್ಲೂರು
೩೧. ತಾಳೂರು
೩೨. ತೆಕ್ಕಲಕೋಟ
೩೩. ತೊಂಡೆಹಾಳು
೩೪. ದರೂರು
೩೫. ದಾಸಪುರ
೩೬. ದೇವಲಾಪುರ
೩೭. ದೇಸನೂರು
೩೮. ನಡವಿ
೩೯. ನಾಗರಹಾಳು
೪೦. ನಾಗಲಾಪುರ
೪೧. ನಾಡಂಗ
೪೨. ನಿಟ್ಟೂರು
೪೩. ಪೊಪ್ಪನಹಾಳು
೪೪. ಬಸರಹಳ್ಳಿ
೪೫. ಬಳಕುಂದಿ
೪೬. ಬಂದ್ರಹಾಳು
೪೭. ಬಾಗವಾಡಿ
೪೮. ಬ್ಯಾಗರಾಮದಿನ್ನೆ (ದಿನ್ನೆ ಬಿ.ಜಿ)
೪೯. ಬೀರಳ್ಳಿ
೫೦. ಬೂದಿಗುಪ್ಪ
೫೧. ಬೇವಿನವುರದ ಸೂಗೂರು (ಸೂಗೂರು ಬಿ.ಎಮ್)
೫೨. ಬೊಗ್ಗೂರು
೫೩. ಬೊಮ್ಮಲಾಪುರ
೫೪. ಭೈರಾಪುರ
೫೫. ಮಂಜನಹಾಳು
೫೬. ಮಾಟೂರು
೫೭. ಮಾನೂರು
೫೮. ಮಾನೂರುಸೂಗೂರು
೫೯. ಮಾಳಾಪುರ
೬೦. ಮಿಟ್ಟೆಸೂಗೂರು
೬೧. ಮುದನೂರು
೬೨. ಮೈಲಾಪುರ
೬೩. ಮೋಟರದಿನ್ನೆ
೬೪. ರವಿಹಾಳು
೬೫. ರಾಮಪುರ ಟಿ.
೬೬. ರಾರವಿ
೬೭. ವತ್ತುಮುರವಣಿ
೬೮. ವೆಂಕಟಾಪುರ
೬೯. ಸನವಾಸಪುರ
೭೦. ಸಾಲಿಗನೂರು
೭೧. ಸಿದರಗಡ್ಡೆ
೭೨. ಸಿದ್ದರಾಮಪುರ
೭೩. ಸಿರುಗುಪ್ಪ
೭೪. ಸಿರಿಗೇರಿ
೭೫. ಹಗಲೂರು
೭೬. ಹಚ್ಚೊಳ್ಳಿ
೭೭. ಹಳೆತೋಟ (ತೆ.ಹೋ.)
೭೮. ಹಳೆತೋಟ (ಸಿ.ಹೋ.)
೭೯. ಹಗಲೂರುಹೊಸಹಳ್ಳಿ (ಎಚ್.ಎಚ್.ಹಳ್ಳಿ)
೮೦. ಹಾವಿನಹಾಳು
೮೧. ಹಾಳುಮುರುವಳ್ಳಿ
೮೨. ಹಿರೇಹಾಳು
೮೩. ಹುಡತನೂರು
೮೪. ಹಿರೇಕಲ್ಲು
೮೫. ಹೊನ್ನರಳ್ಳಿ (ಹೊನ್ನರಹಳ್ಳಿ)

## ವಕ್ತೃಗಳ ಅಕಾರಾದಿಸೂಚಿ

| ಕ್ರ.ಸಂ. | ಹೆಸರು | ವಯಸ್ಸು | ಊರು | ವೃತ್ತಿ | ಸಂದರ್ಶನ ದಿನಾಂಕ |
|---|---|---|---|---|---|
| ೧. | ಕುಮಾರಸ್ವಾಮಿ ಬಿ. | ೨೯ | ನರಸಾಪುರ | ಸಂಶೋಧಕ | ೧೦.೦೩.೨೦೦೨ |
| ೨. | ಖಾಜಾಸಾಬು | ೨೯ | ಬೂದಿಗುಪ್ಪ | ವಿದ್ಯಾರ್ಥಿ | ೧೭.೦೨.೨೦೦೨ |
| ೩. | ಗಂಗಪ್ಪ | ೪೮ | ಅಮರಾಪುರ | ಕೂಲಿ | ೦೮.೦೪.೨೦೦೧ |
| ೪. | ಗಿರಿಮಲ್ಲನಗೌಡ | ೫೭ | ಸಿದ್ದಾಪುರ | ವ್ಯವಸಾಯ | ೨೯.೧೦.೨೦೦೦ |
| ೫. | ಗುಂಡೂರು ಶೇಷಗಿರಿಯಪ್ಪ | ೭೦ | ಯಳ್ಳಾರ್ತಿ | ಪಂಡಿತ | ೧೪.೦೯.೨೦೦೦ |
| ೬. | ಚಂದ್ರಶೇಖರಗೌಡ | ೪೬ | ಗುಗ್ಗರಹಟ್ಟಿ | - | ೧೧.೦೬.೨೦೦೧ |
| ೭. | ಚಂದ್ರಪ್ಪ ಉಪ್ಪಾರ | ೨೯ | ಸಂಡೂರು | ಸಂಶೋಧಕ | ೦೭.೦೩.೨೦೦೨ |
| ೮. | ಜಾಜಿ ಉದ್ದಾನಮ್ಮ | ೬೦ | ಮೊಲಗಹಳ್ಳಿ | ವ್ಯವಸಾಯ | ೦೧.೦೫.೨೦೦೧ |
| ೯. | ಜಾಜಿ ನೀಲಮ್ಮ | ೪೨ | ಯಳ್ಳಾರ್ತಿ | ಗೃಹಿಣಿ | ೦೮.೦೪.೨೦೦೧ |
| ೧೦. | ಜಾರಿಗುಡಿ ಭೀಮಪ್ಪ | ೬೮ | ಚಿನ್ನಹೋತೂರು | - | ೧೭.೦೯.೨೦೦೦ |
| ೧೧. | ದತ್ತಾತ್ರೇಯ | ೪೫ | ಕವಿತಾಳ | ವೈದ್ಯರು | ೧೮.೦೯.೨೦೦೦ |
| ೧೨. | ನರಸಿಂಹರಾವು | ೮೦ | ಆದವಾನಿ | - | ೨೩.೧೦.೨೦೦೦ |
| ೧೩. | ನರಸಪ್ಪ | ೫೨ | ಸಿರುಗುಪ್ಪ | ವ್ಯವಸಾಯ | ೧೨.೯.೨೦೦೦ |
| ೧೪. | ನರಸಿಂಹ | ೪೯ | ಮಿಂಚೇರಿ | ಹಮಾಲಿ | ೦೮.೦೬.೨೦೦೨ |
| ೧೫. | ಪಾರ್ವತಮ್ಮ ಶರಭಣ್ಣ | ೪೬ | ಯಳ್ಳಾರ್ತಿ | ಗೃಹಿಣಿ | ೧೭.೦೨.೨೦೦೨ |
| ೧೬. | ಪೊಂಪಯ್ಯ ಜೆ. | ೪೯ | ಬೊಮ್ಮಗುಂಡನಹಳ್ಳಿ | ಶಿಕ್ಷಕ | ೧೨.೦೯.೨೦೦೦ |
| ೧೭. | ಪ್ರಹ್ಲಾದಾಚಾರ್ಯ | ೪೫ | ಹೊಸಪೇಟೆ | ಅರ್ಚಕ | ೧೧.೦೬.೨೦೦೧ |
| ೧೮. | ಬಸವರಾಜ | ೨೮ | ಊಳೂರು | ಸಂಶೋಧಕ | ೨೨.೦೯.೨೦೦೨ |
| ೧೯. | ಬಸಪ್ಪ ಕೆ. | ೫೮ | ಬಳ್ಳಾರಿ | ಮುಖ್ಯೋಪಾಧ್ಯಾಯರು | ೨೭.೧೦.೨೦೦೦ |
| ೨೦. | ಬೋಯ ಈರನ್ನ | ೪೩ | ಸಮ್ಮತಗೇರಿ | ವ್ಯವಸಾಯ | ೧೬.೦೯.೨೦೦೦ |
| ೨೧. | ಭೋಗನಗೌಡ | ೬೦ | ಚಿಪ್ಪಗಿರಿ | ವ್ಯವಸಾಯ | ೦೧.೦೫.೨೦೦೧ |
| ೨೨. | ಮಲ್ಲಪ್ಪ ಒಡೆಯರ್ | ೫೫ | ದೇವರಗುಡ್ಡ | ಪೂಜಾರಿ | ೨೬.೧೦.೨೦೦೧ |
| ೨೩. | ಮರಿರುದ್ರಗೌಡ | ೬೬ | ಬಸರಕೋಡು | ವ್ಯವಸಾಯ | ೧೭.೦೨.೨೦೦೨ |
| ೨೪. | ಮಸ್ತಾನ್ ಸಾಬ್ | ೪೮ | ಆಲೂರು | ಉಪಾಧ್ಯಾಯ | ೧೭.೦೯.೨೦೦೦ |
| ೨೫. | ಮಲ್ಲಿಕಾರ್ಜುನರೆಡ್ಡಿ | ೪೯ | ನೆರಣಿಕೆ | ವ್ಯವಸಾಯ | ೧೪.೦೯.೨೦೦೦ |
| ೨೬. | ಮಲ್ಲಿಕಾರ್ಜುನಗೌಡ | ೪೦ | ಕೆಂಚಗಾರ ಬೆಳಗಲ್ಲು | ವ್ಯವಸಾಯ | ೧೧.೦೬.೨೦೦೧ |
| ೨೭. | ಮಹೇಶ ಕೆ. | ೨೮ | ಸಿರುಗುಪ್ಪ | ಸಂಶೋಧಕ | ೦೮.೦೨.೨೦೦೨ |
| ೨೮. | ಮಲ್ಲಿಕಾರ್ಜುನಾಚಾರ್ಯ | ೬೦ | ಯಳ್ಳಾರ್ತಿ | ಅಕ್ಕಸಾಲಿಗ | ೧೪.೦೯.೨೦೦೦ |
| ೨೯. | ಮುದಿಮಲ್ಲನಗೌಡ | ೪೮ | ಚಿಂತಕುಂಟೆ | ಗ್ರಾಮಸರ್ಪಂಚು | ೧೮.೦೯.೨೦೦೦ |
| ೩೦. | ರಾಚಪ್ಪ | ೪೨ | ಸಿಡಿಗನಮೊಳ | ವ್ಯವಸಾಯ | ೧೨.೧೧.೨೦೦೧ |
| ೩೧. | ರಾಮದಾಸು ಡಿ. | ೩೯ | ಸಿರಿಗೇರಿ | ವ್ಯವಸಾಯ | ೧೪.೦೯.೨೦೦೦ |
| ೩೨. | ರಾಮಾಂಜನೇಯ | ೨೯ | ಹರಗಿನಡೋಣಿ | ನಿರುದ್ಯೋಗಿ | ೧೩.೧೧.೨೦೦೧ |
| ೩೩. | ಲಕ್ಷ್ಮೀಕಾಂತರೆಡ್ಡಿ | ೬೦ | ಕುರುಗೋಡು | ವ್ಯವಸಾಯ | ೧೩.೦೯.೨೦೦೦ |
| ೩೪. | ಲಿಂಗಯ್ಯಸ್ವಾಮಿ | ೬೮ | ಬಲ್ಲೂರು | ಪೂಜಾರಿ | ೧೭.೦೯.೨೦೦೦ |
| ೩೫. | ಲಕ್ಷ್ಮಮ್ಮ | ೬೨ | ಯಳ್ಳಾರ್ತಿ | ಕೂಲಿ | ೦೧.೦೫.೨೦೦೧ |
| ೩೬. | ಲಿಂಗಾರೆಡ್ಡಿ | ೬೦ | ಮುದ್ದನಗೇರಿ | ವ್ಯವಸಾಯ | ೨೭.೦೧.೨೦೦೨ |
| ೩೭. | ವಿರೂಪಾಕ್ಷಗೌಡ | ೪೫ | ಸಿಂದಿಗೇರಿ | ವ್ಯವಸಾಯ | ೧೪.೦೯.೨೦೦೦ |
| ೩೮. | ವೀರಭದ್ರಯ್ಯ ಎಂ. | ೬೦ | ಹೊಳಲಗುಂದೆ | ಕನ್ನಡಶಿಕ್ಷಕ | ೧೨.೦೯.೨೦೦೦ |

| | | | | | |
|---|---|---|---|---|---|
| ೩೯. | ವೀರಭದ್ರಯ್ಯ ಎಚ್.ಎಂ | ೬೫ | ಯಳ್ಳಾರ್ತಿ | ಬಯಲಾಟ ಮಾಸ್ತರು | ೧೦.೧೨.೨೦೦೦ |
| ೪೦. | ವೆಂಕಟರಾಜ ಪುರೋಹಿತ | ೬೬ | ಕೆಂಚನಗುಡ್ಡ | ಅರ್ಚಕ | ೧೨.೦೧.೨೦೦೦ |
| ೪೧. | ಶರಣಬಸಪ್ಪ | ೬೦ | ಹೊಸಪೇಟೆ | ವ್ಯಾಪಾರಿ | ೨೨.೦೯.೨೦೦೨ |
| ೪೨. | ಶಿವರಾಜ ಡಿ. | ೨೮ | ಜಾಲಿಬೆಂಚಿ | ವೈದ್ಯರು | ೨೦.೦೯.೨೦೦೦ |
| ೪೩. | ಶ್ರೀನಿವಾಸುಲು | ೫೬ | ಆದವಾನಿ | ವೈದ್ಯರು | ೧೯.೦೯.೨೦೦೦ |
| ೪೪. | ಶ್ರೀಶೈಲಾಚಾರಿ | ೬೦ | ಕುರುಕುಂದೆ | ವ್ಯವಸಾಯ | ೧೪.೦೯.೨೦೦೦ |
| ೪೫. | ಶ್ರೀವಲ್ಲಭ | ೫೮ | ಹೊಳಲಗುಂದ | ಮುಖ್ಯೋಪಾಧ್ಯಾಯ | ೧೨.೦೯.೨೦೦೦ |
| ೪೬. | ಶೇಕ್ ಸಾಬ್ | ೬೩ | ಹುಳೇಬೀಡು | ಹಾರ್ಮೋನಿಯಂ ಮಾಸ್ತರು | ೧೪.೦೯.೨೦೦೦ |
| ೪೭. | ಸೀತಾರಾಮರೆಡ್ಡಿ | ೫೦ | ಚಿಪ್ಪಗಿರಿ | ವ್ಯವಸಾಯ | ೧೬.೦೯.೨೦೦೦ |
| ೪೮. | ಸೂರ್ಯದೇವರ ಅಪ್ಪಾರಾವು | ೭೩ | ಬಳ್ಳಾರಿ | - | ೨೪.೦೩.೨೦೦೨ |
| ೪೯. | ಹುಸೇನಪ್ಪ | ೪೮ | ತೆಕ್ಕಲಕೋಟೆ | ವ್ಯವಸಾಯ | ೧೨.೦೯.೨೦೦೦ |
| ೫೦. | ಹುಣಸೇಮರದ ತಿಮ್ಮಪ್ಪ | ೪೬ | ಬಾಣಾಪುರ | ವ್ಯಾಪಾರಿ | ೧೨.೧೦.೨೦೦೧ |

# ಗ್ರಂಥಸೂಚಿ


೧. ಅಂಗಡಿ ಎಸ್.ಎಸ್, ಮಿಶನರಿಗಳ ದ್ವಿಭಾಷಿಕ ನಿಘಂಟುಗಳ ತೌಲನಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಅ.ಪ್ರ. ಪಿಎಚ್.ಡಿ.

೨. ಅಂಜನಪ್ಪ ಯಳನಾಡು, ಹಗಲುವೇಷದವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೩. ಅರುಣಾದೇವಿ ಎಂ. ಹಾಸನ ತಾಲ್ಲೂಕಿನ ಸ್ಥಳನಾಮಗಳು, ಪಿಎಚ್.ಡಿ. ಮೈಸೂರು ವಿಶ್ವವಿದ್ಯಾಲಯ, ೧೯೯೬, ಅ.ಪ್ರ.

೪. ಉಪಾಧ್ಯ ಜಿ.ಎನ್, ಗೋದಾವರಿವರಂ ಇರ್ದ ಕನ್ನಡನಾಡು, ಮುಂಬೈ ವಿಶ್ವವಿದ್ಯಾಲಯ, ೨೦೦೨

೫. ಕಲಬುರ್ಗಿ ಎಂ.ಎಂ, ಮಹಾರಾಷ್ಟ್ರದ ಕನ್ನಡ ಶಾಸನಗಳು, ಮುಂಬಯಿ ವಿಶ್ವವಿದ್ಯಾಲಯ, ೧೯೮೭

೬. ಕಲಬುರ್ಗಿ ಎಂ.ಎಂ, ಮಾರ್ಗ ಸಂಪುಟ, ೧-೨-೩, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೮

೭. ಕಲಬುರ್ಗಿ ಎಂ.ಎಂ, ಕನ್ನಡ ನಾಮವಿಜ್ಞಾನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೯

೮. ಕಲಬುರ್ಗಿ ಎಂ.ಎಂ, ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೯. ಕರ್ನಾಟಕದ ಗ್ರಾಮಸೂಚಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

೧೦. ಕೃಷ್ಣಪರಮೇಶ್ವರಭಟ್ಟ, ಕೋಲಾರ ಜಿಲ್ಲೆಯ ಕನ್ನಡ - ತೆಲುಗು ದ್ವಿಭಾಷಿಕ ಪರಿಸರ ಒಂದು ಅಧ್ಯಯನ, ಪಿಎಚ್.ಡಿ. ಮೈಸೂರು ವಿಶ್ವವಿದ್ಯಾಲಯ, ೧೯೯೬

೧೧. ಕೃಷ್ಣಭಟ್ಟ ಸೇಡಿಯಾಪು, ಕೆಲವು ದೇಶನಾಮಗಳು, ಸಾಹಿತ್ಯ ಸಂಘ, ಮಣಿಪಾಲ, ೧೯೭೫

೧೨. ಕಾಂತರಾಜ, ಅರಸೀಕೆರೆ ತಾಲ್ಲೂಕಿನ ಸ್ಥಳನಾಮಗಳು, ಪಿಎಚ್ .ಡಿ. ಅ.ಪ್ರ.

೧೩. ಕುಮಾರಸ್ವಾಮಿ ಕೆ.ಎಸ್, ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರ್ಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

೧೪. ಕೊಪ್ಪಾ ಎಸ್.ಕೆ, ತರ್ದವಾಡಿನಾಡು ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦

೧೫. ಖಂಡೋಬ ಪಿ.ಕೆ, ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್ .ಡಿ. ತೇಜಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ೧೯೯೧

೧೬. ಗಂಗಾಧರಯ್ಯ ಎಸ್.ಎಂ, ಶಂಬಾ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಪಿಎಚ್ .ಡಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಅ.ಪ್ರ.

೧೭. ಗುರುಲಿಂಗ ಕಾಪಸೆ, (ಸಂ), ಶತಮಾನದ ಲಲಿತ ಪ್ರಬಂಧಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

೧೮. ಗೋಪಾಲಕೃಷ್ಣ ವಿ. ಸ್ಥಳನಾಮ ಅಧ್ಯಯನಗಳು, ವಿದ್ಯಾಗಿರಿ ಪ್ರಕಾಶನ, ಕೋಲಾರ, ೧೯೮೭

೧೯. ಗೋಪಾಲಕೃಷ್ಣ ವಿ. ಕೋಲಾರ ಜಿಲ್ಲೆಯ ಸ್ಥಳನಾಮಗಳ ಸಮಾಜೋ ಭಾಷಿಕ ಅಧ್ಯಯನ, ಪಿಎಚ್.ಡಿ. ಬೆಂಗಳೂರು ವಿಶ್ವವಿದ್ಯಾಲಯ, ೧೯೮೯, ಅ.ಪ್ರ.

೨೦. ಚಂದ್ರಪ್ಪ ಎನ್. ಮೊಂಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨೧. ಚನ್ನಬಸಪ್ಪ ಗೊ.ರು. (ಸಂ), ಗ್ರಾಮಜ್ಯೋತಿ, ಕೆ.ಆರ್.ಲಿಂಗಪ್ಪ ಅವರ ಅಭಿನಂದನ ಗ್ರಂಥ, ಬೆಂಗಳೂರು, ೧೯೭೯

೨೨. ಚಿದಾನಂದಮೂರ್ತಿ ಎಂ. ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

೨೩. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೬

೨೪. ಚಿದಾನಂದಮೂರ್ತಿ ಎಂ. ವಾಗರ್ಥ, ಬಾಪ್ಕೊ ಪ್ರಕಾಶನ, ಬೆಂಗಳೂರು, ೧೯೮೧

೨೫. ಚಿದಾನಂದಮೂರ್ತಿ ಎಂ. ಸಂಶೋಧನಾ ತರಂಗ -೨, ಬೆಂಗಳೂರು ವಿಶ್ವವಿದ್ಯಾಲಯ, ೧೯೭೦

೨೬. ಚಿದಾನಂದಮೂರ್ತಿ ಎಂ. ಭಾಷಾವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೮೬

೨೭. ಚೆನ್ನಕ್ಕ ಎಲಿಗಾರು, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೯೦

೨೮. ಚೆನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂಧರು ಒಂದು ಅಧ್ಯಯನ, ಸಂಗಣ್ಣನವರ ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, ೧೯೯೫

೨೯. ಜವರೇಗೌಡ ದೇ. ಚೆರಕೆಸೊಪ್ಪು, ಸುರುಚಿ ಪ್ರಕಾಶನ, ಮೈಸೂರು, ೧೯೭೧

೩೦. ಜಗದೀಶ ಮಠದ, ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು, (ಎಂ.ಫಿಲ್ ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫, ಅ.ಪ್ರ.

೩೧. ಜವರೇಗೌಡ ದೇ. ಸ್ಥಳನಾಮವ್ಯಾಸಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦

೩೨. ಜಾರ್ಜ್ ಕೆ.ಎಂ, ಬೀದರ್ ಜಿಲ್ಲೆಯ ಸ್ಥಳನಾಮಗಳು, ಪಿಎಚ್.ಡಿ. ಅ.ಪ್ರ.
೩೩. ಜಿ.ವಿ.ಡಿ, ಕನ್ನಡ ಐತಿಹ್ಯಗಳು, ತೇಜಸ್ವಿನಿ ಪ್ರಕಾಶನ, ಮೈಸೂರು, ೧೯೭೮
೩೪. ಜ್ಯೋತಿ ಹೊಸೂರು, ಹೆಸರಹೇಳತೀನಿ ಒಡಪಕಟ್ಟಿ, ೧೯೭೩
೩೫. ದುರ್ಗಾದಾಸ ಕೆ.ಆರ್, ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಸಮತಾ ಪ್ರಕಾಶನ, ಬೆಳಗಾವಿ, ೧೯೬೬
೩೬. ದೇವೇಂದ್ರಕುಮಾರ ಸಿ. ಹಕಾರಿ, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೩೭. ನಂಜಯ್ಯ ಎಂ. ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು, ಪಿಎಚ್.ಡಿ. ಮೈಸೂರು ವಿಶ್ವವಿದ್ಯಾಲಯ, ೨೦೦೦, ಅ.ಪ್ರ.
೩೮. ನಾಗಭೂಷಣ ಸಿ, ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ೨೦೦೧
೩೯. ನಾಗಯ್ಯ ಜೆ.ಎಂ, ಬಳ್ಳಾರಿ ಜಿಲ್ಲೆಯ ಶಾಸನಗಳು, ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೨
೪೦. ನಾಗರತ್ನ ಟಿ.ಎನ್, ಕನಕದಾಸ, ಸಾಹಿತ್ಯ ಅಕಾಡೆಮಿ, ೨೦೦೦
೪೧. ನಾಗರಾಜಯ್ಯ ಹಂಪ, ದ್ರಾವಿಡ ಭಾಷಾವಿಜ್ಞಾನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೧
೪೨. ನಾಗರಾಜಯ್ಯ ಹಂಪ, ಚಂದ್ರಕೊಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
೪೩. ನಾರಾಯಣ ಕೆ.ವಿ, ದ್ವಿಭಾಷಿಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೪೪. ನಾರಾಯಣ ಕೆ.ವಿ, (ಸಂ), ಭಾಷೆ ವಿಶ್ವಕೋಶ - ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೪೫. ನಾರಾಯಣ ಕೆ.ವಿ, (ಸಂ), ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೪೬. ನೇಗಿನಹಾಳ್ ಎಂ.ಬಿ, ನೇಗಿನಹಾಳ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೪೭. ಪ್ರಶಾಂತ ಎಚ್.ಡಿ, ಕರ್ನಾಟಕ ರಾಜ್ಯಕೋಶ - ೪, ಜನಸಮುದಾಯ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೪೮. ಪಾಂಡುರಂಗಬಾಬು ಡಿ. ಆದಿಜಾಂಬವರ ಕನ್ನಡ, ಪಿಎಚ್.ಡಿ. ಮೈಸೂರು ವಿಶ್ವವಿದ್ಯಾಲಯ, ೧೯೯೫, ಅ.ಪ್ರ.
೪೯. ಪಾಟೀಲ ಎಸ್.ಸಿ, (ಸಂ), ಶಿಕ್ಷಣ ಸಂಪದ, ಪ್ರೊ. ವಿ.ಜಿ.ಮಾರಿಹಾಳ ಅಭಿನಂದನ ಗ್ರಂಥ, ಮಾರಿಹಾಳ ಸತ್ಕಾರ ಸಮಿತಿ, ವಿದ್ಯಾಗಿರಿ, ಧಾರವಾಡ, ೧೯೯೨
೫೦. ಪಾಟೀಲ ಎಸ್.ಸಿ, (ಸಂ), ಶಿಕ್ಷಣ ಸಂಪದ, ಪ್ರೊ. ವಿ.ಜಿ.ಮಾರಿಹಾಳ ಅಭಿನಂದನ ಗ್ರಂಥ, ಮಾರಿಹಾಳ ಸತ್ಕಾರ ಸಮಿತಿ, ವಿದ್ಯಾಗಿರಿ, ಧಾರವಾಡ, ೧೯೯೨
೫೧. ಪುರುಷೋತ್ತಮ ಬಿಳಿಮಲೆ, ಕೊರಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೫೨. ಪುರುಷೋತ್ತಮ ಬಿಳಿಮಲೆ, ಮೆಕೆಂಜಿ ಕೈಫಿಯತ್ತುಗಳು, ಮಂಗಳೂರು ವಿಶ್ವವಿದ್ಯಾಲಯ, ೧೯೮೫
೫೩. ಬಸವರಾಜ ಮಲಶೆಟ್ಟಿ, ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫
೫೪. ಬೊಮ್ಮೇಗೌಡ, ಚನ್ನಪಟ್ಟಣ ತಾಲ್ಲೂಕಿನ ಸ್ಥಳನಾಮಗಳು, ಎಂ.ಫಿಲ್. ಬೆಂಗಳೂರು ವಿಶ್ವವಿದ್ಯಾಲಯ, ೧೯೯೮
೫೫. ಭಾಗ್ಯಲಕ್ಷ್ಮಿ ಎಂ. ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ - ಸಮಾಜೋಭಾಷಿಕ ಅಧ್ಯಯನ, ಪಿಎಚ್ .ಡಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಅ.ಪ್ರ.
೫೬. ಮಹಾದೇವಯ್ಯ ಪಿ. ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೫೭. ಮಲ್ಲಿಕಾರ್ಜುನಗೌಡ, ಕರ್ನಾಟಕಾಂಧ್ರ ಗಡಿಭಾಗದಲ್ಲಿನ ಹಿಂದೂ ಮುಸ್ಲಿಂ ಬಾಂಧವ್ಯ, ಪಿಎಚ್.ಡಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಅ.ಪ್ರ.
೫೮. ಮಲ್ಲೇಪುರಂ ಜಿ. ವೆಂಕಟೇಶ, (ಸಂ), ಶಂಬಾಕೃತಿ ಸಮೀಕ್ಷೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೨
೫೯. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾಜೋಷಿ, ಭಾರತೀಯ ಸಾಹಿತ್ಯ ಅಕಾಡೆಮಿ, ೨೦೦೧
೬೦. ಮುನಿಶಾಮಪ್ಪ ಹೊಸೂರು, ನಟುವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೬೧. ರಘುಪತಿಭಟ್ಟ ಕೆಮ್ತೂರು, ತುಳುನಾಡಿನ ಸ್ಥಳನಾಮಗಳು, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧
೬೨. ರಘುಪತಿಭಟ್ಟ ಕೆಮ್ತೂರು, ಹೆಸರಲ್ಲೇನಿದೆ, ಚೇತನಾ ಪ್ರಿಂಟರ್ಸ್, ಬೆಂಗಳೂರು, ೧೯೮೯
೬೩. ರಮೇಶ ಬೇ.ಗೊ, ಜನಪ್ರಿಯ ಮುನ್ನೂರು ಸ್ಥಳನಾಮಗಳು, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೧೯೯೫
೬೪. ರಹಮತ್ ತರೀಕೆರೆ, ಬಹುಭಾಷಿಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೬೫. ರಾಜಣ್ಣ ಜಿ.ವಿ, ಕನ್ನಡ ಸಂಸ್ಕೃತಿ: ಶಂಬಾ ಅವರ ಆಲೋಚನೆಗಳು, ಎಂ.ಫಿಲ್. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಅ.ಪ್ರ.
೬೬. ಲಕ್ಕಪ್ಪಗೌಡ ಎಚ್.ಜೆ, ಮಲೆನಾಡು ಜಾನಪದ, ಮೈಸೂರು ವಿಶ್ವವಿದ್ಯಾಲಯ, ೧೯೮೩

೬೭. ಲಕ್ಕಪ್ಪಗೌಡ ಎಚ್.ಜೆ. (ಪ್ರ.ಸಂ), ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭
೬೮. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನಗಳು, ೧೯೭೬
೬೯. ಲಕ್ಷ್ಮಣ್ ತೆಲಗಾವಿ, (ಸಂ), ಹರಿತಿಯ ಸಿರಿ, ಹೆಚ್.ವಿ. ವೀರನಾಯಕರ ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭
೭೦. ಲಕ್ಷ್ಮಣ್ ತೆಲಗಾವಿ, (ಸಂ), ಸಂಶೋಧನ, ಚಿ.ಮೂ. ಗೌರವ ಸಂಪುಟ, ಬೆಂಗಳೂರು, ೧೯೯೧
೭೧. ಲಲಿತ ಎ.ಸಿ, ಕಾಡುಕುರುಬರ ಮತ್ತು ಜೇನು ಕುರುಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೭೨. ವಸಂತಕುಮಾರ ಪೆರ್ಲ, ಅಭ್ಯಾಸ, ಸಾಹಿತ್ಯಸಂಘ, ಬದಿಯಡ್ಕ, ಕೇರಳ, ೧೯೯೯
೭೩. ವಿಶ್ವನಾಥ, ಸಕಲೇಶಪುರ ಪರಿಸರದ ಸ್ಥಳನಾಮಗಳು, ದೇವಿ ಪ್ರಕಾಶನ, ಮೈಸೂರು, ೧೯೯೬
೭೪. ವಿಶ್ವನಾಥ, ಸ್ಥಳನಾಮಗಳು, ಸಂವಹನ ಪ್ರಕಾಶನ, ಮೈಸೂರು, ೧೯೯೫
೭೫. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ದೇವಿ ಪ್ರಕಾಶನ, ಮೈಸೂರು, ೨೦೦೦
೭೬. ವಿನಾಯಕ ಜೋಶಿ, ಗುಲಬರ್ಗಾ ಜಿಲ್ಲೆಯ ಸ್ಥಳನಾಮಗಳು, ಪಿಎಚ್.ಡಿ. ಮುಂಬೈ ವಿಶ್ವವಿದ್ಯಾಲಯ
೭೭. ವೀರಭದ್ರಶರ್ಮ ಕೆ.ಎಂ, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಪಿಎಚ್.ಡಿ. ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೬, ಅ.ಪ್ರ.
೭೮. ವೆಂಕಟೇಶ ಸಿ. ತೆಲುಗು ದಾಕ್ಷಿಣಾತ್ಯ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೭೯. ವೆಂಕಟೇಶ ಅಯ್ಯಂಗಾರ್ ಮಾಸ್ತಿ, ಜನತೆಯ ಸಂಸ್ಕೃತಿ, ಜೀವನ ಕಾರ್ಯಾಲಯ, ಬೆಂಗಳೂರು, ೧೯೫೭
೮೦. ವೈಜನಾಥ ಭಂಡೆ, ಬೀದರ್ ಜಿಲ್ಲೆಯ ಸ್ಥಳನಾಮಗಳು, ಪಿಎಚ್ .ಡಿ. ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೦, ಅ.ಪ್ರ.
೮೧. ಶಂಕರ್ ಜೋಗನ್, ಗ್ರಾಮಸಮಾಜ, ಜೀವಪ್ರಕಾಶನ, ಮೈಸೂರು, ೧೯೯೫
೮೨. ಶಂಬಾಜೋಷಿ, ಕಣ್ಮರೆಯಾದ ಕನ್ನಡ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೩೩
೮೩. ಶಂಬಾಜೋಷಿ, ಎಡೆಗಳು ಹೇಳುವ ಕಂನಾಡ ಕಥೆ, ಮಾಧವ ಬಲ್ಲಾಳ ಬಂಧುಗಳು, ಧಾರವಾಡ, ೧೯೪೭
೮೪. ಶಂಬಾಜೋಷಿ, ಕಂನುಡಿಯ ಜೀವಾಳ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೩
೮೫. ಶಿರೂರು ಬಿ.ವಿ, ಶ್ರವಣಬೆಳ್ಗೊಳ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬
೮೬. ಶಿವರಾಮಕಾರಂತ, ಸಿರಿಗನ್ನಡ ಅರ್ಥಕೋಶ, ಹರ್ಷ ಪ್ರಕಟಣಾಲಯ, ಪುತ್ತೂರು, ೧೯೭೧
೮೭. ಶಿವಶಂಕರ ಚಕ್ಕೆರೆ, ಗೊರವರಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೮೮. ಶಿವಾನಂದ ವಿ. ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨
೮೯. ಶೀಲಾಕಾಂತ ಪತ್ತಾರ, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೯೦. ಶ್ರೀನಿವಾಸಮೂರ್ತಿ ಕಾ.ವೆಂ, ಕನ್ನಡಪರ ಚಿಂತನೆ ಮತ್ತು ಪರಂಪರೆ, ಅಲ್ಲಮಪ್ರಭು ಜನ ಕಲ್ಯಾಣ ಸಂಸ್ಥೆ, ಬೆಳಗಾವಿ, ೨೦೦೦
೯೧. ಶೇಷಾದ್ರಿ ಬಿ. (ಸಂ), ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮
೯೨. ಶೇಷಶಾಸ್ತ್ರಿ ಆರ್. ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨
೯೩. ಶೆಟ್ಟರ ಬಿ.ಎಸ್, ಕರ್ನಾಟಕದಲ್ಲಿ ಸತಿಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೧
೯೪. ಸಂಗಮೇಶ ಸವದತ್ತಿಮಠ, ದ್ರಾವಿಡ ಭಾಷಾವಿಜ್ಞಾನ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೦
೯೫. ಸಂಗಮೇಶ ಸವದತ್ತಿಮಠ, ಭಾಷಾಲೇಖ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೯
೯೬. ಸುಂದರಂ ಆರ್ವೀಯಸ್, ಆಂಧ್ರಪ್ರದೇಶದ ಜಾನಪದ, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನ್ಯೂಡೆಲ್ಲಿ, ೧೯೭೮
೯೭. ಸುಂದರ ಅ. (ಸಂ), ಕರ್ನಾಟಕದ ಚರಿತ್ರೆ ಸಂ - ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ
೯೮. ಸುಬ್ಬಣ್ಣ ರೈ.ಎ, ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮುಂಬಯಿ, ೧೯೯೪
೯೯. ಸೋಮಶೇಖರ ಇಮ್ರಾಪೂರ, ಜನಪದ ಒಗಟುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯
೧೦೦. ಸೋಮಶೇಖರಗೌಡ, ಭಾಷೆರಚನೆ ಮತ್ತು ಬಳಕೆ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೦
೧೦೧. ಹರಿಲಾಲ್ ಕೆ.ಪವಾರ್, ಹೆಳವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೦೨. ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ), ಚಿತ್ರದುರ್ಗದ ಬಖೈರು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಚಿತ್ರದುರ್ಗ, ೧೯೬೮
೧೦೩. ಹೆರಂಜೆ ಗೋಪಾಲಕೃಷ್ಣ, (ಸಂ), ಗೋವಿಂದ ಪೈ ಸಂಶೋಧನ ಸಂಪುಟ, ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೫

ತೆಲುಗು

೧. ಗೋವಿಂದಸ್ವಾಮಿನಾಯುಡು ಎಂ. ಅನಂತಪುರಂ ಜಿಲ್ಲಾ ಗ್ರಾಮನಾಮಾಲು, ಭಾಷಾ ಸಾಮಾಜಿಕ ಪರಿಶೀಲನ, ಪಿಎಚ್.ಡಿ. ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯಂ, ತಿರುಪತಿ, ೧೯೮೨, ಆ.ಪ್ರ.
೨. ಚಂದ್ರಶೇಖರರೆಡ್ಡಿ ವಿ. ನೆಲ್ಲೂರು ಜಿಲ್ಲಾ ಸ್ಥಲನಾಮಮುಲು, ಸಾಂಘಿಕ ಭಾಷಾಶಾಸ್ತ್ರ ಅಧ್ಯಯನಂ, ಪಿಎಚ್. ಡಿ. ವೆಂಕಟೇಶ್ವರ ವಿಶ್ವವಿದ್ಯಾಲಯ, ತಿರುಪತಿ
೩. ಚೆಂಗಾರೆಡ್ಡಿ ಡಿ. ಚಿತ್ತೂರು ಜಿಲ್ಲಾ ಗ್ರಾಮನಾಮಾಲು: ಭಾಷಾ ಸಾಮಾಜಿಕ ಪರಿಶೀಲನ, ಪಿಎಚ್ .ಡಿ. ಶ್ರೀ ವೆಂಕಟೇಶ್ವರ ವಿದ್ಯಾಲಯಂ, ತಿರುಪತಿ, ೧೯೮೧
೪. ಬಾಲಗಂಗಾಧರ ವೈ. ಅನಂತಪುರಂ ಜಿಲ್ಲಾ ಗ್ರಾಮನಾಮಾಲು, ಪಿಎಚ್.ಡಿ. ನಾಗಾರ್ಜುನ ವಿಶ್ವವಿದ್ಯಾಲಯ, ವಾಲ್ತೇರ್, ೧೯೮೧
೫. ಬಾಲಗಂಗಾಧರರಾವು ಯಾರ್ಲಗಡ್ಡ, ಒಕ ಊರಿ ಕಥ, ನಾಗಾರ್ಜುನಕೊಂಡ, ೨೦೦೦
೬. ಬೂದರಾಜು ರಾಧಾಕೃಷ್ಣ (ಸಂ), ತೆಲುಗು ಮಾಂಡಲಿಕಾಲು, ಕರ್ನೂಲು ಜಿಲ್ಲಾ, ತೆಲುಗು ಅಕಾಡೆಮಿ, ಹೈದರಾಬಾದು, ೧೯೮೪
೭. ಬೂದರಾಜು ರಾಧಾಕೃಷ್ಣ (ಸಂ), ತೆಲುಗು ಮಾಂಡಲಿಕಾಲು, ಅನಂತಪುರ ಜಿಲ್ಲಾ, ತೆಲುಗು ಅಕಾಡೆಮಿ, ಹೈದರಾಬಾದು, ೧೯೮೪
೮. ಬ್ರೌನ್ ಸಿ.ಪಿ, ಬ್ರೌಣ್ಯ ನಿಘಂಟು, ಆಸಿಯನ್ ಎಜುಕೇಷನಲ್ ಸರ್ವೀಸ್ ನ್ಯೂಡೆಲ್ಲಿ, ಮದ್ರಾಸ್, ೨೦೦೨
೯. ರಾಮಚಂದ್ರಮೂರ್ತಿ ಎಸ್.ಎಸ್, ಶಾಸನಾಲ್ಲೋನಿ ಸ್ಥಲನಾಮಾಲು, ಪಿಎಚ್.ಡಿ. ಆಂಧ್ರ ವಿಶ್ವವಿದ್ಯಾಲಯ, ೧೯೭೫
೧೦. ವಿಶ್ವನಾಥರೆಡ್ಡಿ ಕೇತು, ಕಡಪಊರ್ಲ ಪೇರ್ಲು, ಪಿಎಚ್.ಡಿ. ವೆಂಕಟೇಶ್ವರ ವಿಶ್ವವಿದ್ಯಾಲಯ, ತಿರುಪತಿ, ೧೯೭೫, ಆ.ಪ್ರ.
೧೧. ಹನುಮಂತಪ್ಪ ಆದವಾನಿ, ತೆಲುಗು ಮೀದ ಕನ್ನಡ ಭಾಷಾ ಪ್ರಭಾವಂ, ಪಿಎಚ್.ಡಿ. ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಅನಂತಪುರ, ೧೯೮೫

ಇಂಗ್ಲೀಷ್

1. Bellary district, Gazetteer, Mysore state, Govt press, Banglore, 1972
2. Burrow T. and M.B.Emeneau, A Dravidian etymological Dictionary, Clarendon press, Oxford, 1968
3. Gardinar allen H. The theory proper names a controversial essay, Oxford university press, 1940
4. Hockett C.F . Mans place in nature, united state of America, 1973
5. Javaregouda D. A study of village námes of Mysore district, Dajagow treest, Mysore
6. Kalburgi M.M, Kannada onamastics, The place name society of India, Mysore, 1997
7. Mishra B.D. Socio linguistics analysis of place names of sagar district abstract, Osmania University, 1972
8. Mohan K.R. Toponomy of the inscription of southern Karnataka (From the earliest to 1336 A.D.) Ph.D. Mysore university, 1991
9. Peter trudgill, Sociolinguistics, An introduction penguin books LTD, England, 1974
10. Raghupathi Kempthur, A Glossary of placename elements in tulu and Kannada, Janavadi prakashana, Gundmi, 1989
11. Ramachandramurthy S.S. A study of telugu place names (Based on inscription from the erliest to 13th century), Agamkala prakashana, 1985
12. Reddy G.N, A study of Telugu sementics, Venkateswara University press, Tirupati, 1966
13. Studies in Indian place names, place name socity of India Mysore, 1978- 2001, Vol, 1 to 13 and 20, 21
14. Thurson Edger, Caste and tribes of south India, 7 Volumes, Madras, 1909
15. Wain wright F .T. Archology and place names and history, Routledge and kegon paul, London, 1962

## ನಿಘಂಟುಗಳು


ಕನ್ನಡ ಕನ್ನಡ ಇಂಗ್ಲಿಷ್ ನಿಘಂಟು
ಕನ್ನಡ ರತ್ನಕೋಶ
ಕನ್ನಡ ಕನ್ನಡ ಕೋಶ
ಕನ್ನಡ ನಿಘಂಟುಗಳು - ಎಂಟು ಸಂಪುಟಗಳು
ಸಂಕ್ಷಿಪ್ತ ಕನ್ನಡ ನಿಘಂಟು
ಸಿರಿಗನ್ನಡ ಅರ್ಥಕೋಶ
Dravidian etymological dectionary.


## ಶಾಸನ ಸಂಪುಟಗಳು


ಆಂಧ್ರಪ್ರದೇಶದ ಕನ್ನಡಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ
Epigraphia Inaia ಎಲ್ಲ ಸಂಪುಟಗಳು
Epigraphia carnatica ಎಲ್ಲ ಸಂಪುಟಗಳು
Indian antiquari, Vol, XIX
South Indian inscriptions, IX, Part II


## ಪತ್ರಿಕೆಗಳು


ಇತಿಹಾಸದರ್ಶನ - ವಾರ್ಷಿಕ
ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು
ಕರ್ನಾಟಕ ಭಾರತಿ, ಕನ್ನಡ ತ್ರೈಮಾಸಿಕ, ಧಾರವಾಡ
ಕಲಾದರ್ಶನ, ಮಾಸಿಕ, ಮಂಗಳೂರು
ಕಲಾಗಂಗ (ಗುಲಬರ್ಗಾ)
ಜಾನಪದ ಜಗತ್ತು
ಜೀವನ
ನಮ್ಮ ಕನ್ನಡ (ಹಂಪೆ)
ಪ್ರಭಾತ
ಬಸವಪಥ
ಭಾರತಿ, ತೆಲುಗು ಮಾಸಿಕ
ಮಾನವಿಕ ಕರ್ನಾಟಕ, ಕನ್ನಡ ಮಾಸಿಕ, ಧಾರವಾಡ
ಯುಗಪುರುಷ, ಮಾಸಿಕ, ಮಂಗಳೂರು
ರುಜುವಾತು, ಮಾಸಿಕ, ಬೆಂಗಳೂರು
ಶೂದ್ರ, ಮಾಸಿಕ, ಬೆಂಗಳೂರು
ಸತ್ಯಶುದ್ಧ ನಾಯಕ
ಸ್ವದೇಶಾಭಿಮಾನಿ
ಸಾಕ್ಷಿ, ಮಾಸಿಕ, ಬೆಂಗಳೂರು
ಸಾಧನೆ, ಕನ್ನಡ ತ್ರೈಮಾಸಿಕ, ಬೆಂಗಳೂರು

Bulletion of the deccan collage reaserch institute, Poona
Indian linguistics, Poona
Journal of the Indian history
Journal of the Andhra Historical society
Quarterly journal of the mythic society, Banglore
Studies in Indian place names, Mysore

